ಸಮಾಜಕಾರ್ಯ ವಿಷಯದಲ್ಲಿ ಪಿಎಚ್.ಡಿ ಪದವಿಗಾಗಿ ಕನ್ನಡ
ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ

# ಕುಂಬ್ರಿ ಮರಾಠಿಗರ ಸಾಮಾಜಿಕ ಸಂಕಥನ

(ಉತ್ತರ ಕನ್ನಡ ಜಿಲ್ಲೆಯನ್ನು ಪರಿಗಣಿಸಿ)


ಸಂಶೋಧನಾ ವಿದ್ಯಾರ್ಥಿ
ನಾಯ್ಕ ವೆಂಕಟೇಶ ಲಂಬೋದರ

ಮಾರ್ಗದರ್ಶಕರು
ಡಾ. ಎ.ಎಸ್.ಪ್ರಭಾಕರ
ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ 583 276
2018

# ಕುಂಬ್ರಿ ಮರಾಠಿಗರ ಸಾಮಾಜಿಕ ಸಂಕಥನ

(ಉತ್ತರ ಕನ್ನಡ ಜಿಲ್ಲೆಯನ್ನು ಪರಿಗಣಿಸಿ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧನಾ ವಿದ್ಯಾರ್ಥಿ

**ನಾಯ್ಕ ವೆಂಕಟೇಶ ಲಂಬೋದರ**

ಮಾರ್ಗದರ್ಶಕರು

**ಡಾ.ಎ.ಎಸ್.ಪ್ರಭಾಕರ**

ಪ್ರಾಧ್ಯಾಪಕರು





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

ನಾಯ್ಕ ವೆಂಕಟೇಶ ಲಂಬೋದರ ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನ ದಲ್ಲಿ ಸಿದ್ಧಪಡಿಸಿದ **ಕುಂಬ್ರಿ ಮರಾಠಿಗರ ಸಾಮಾಜಿಕ ಸಂಕಥನ(ಉತ್ತರ ಕನ್ನಡ ಜಿಲ್ಲೆಯನ್ನು ಪರಿಗಣಿಸಿ)**ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಬುಡಕಟ್ಟು ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ.ಎ.ಎಸ್.ಪ್ರಭಾಕರ**
ಪ್ರಾಧ್ಯಾಪಕರು
**ಬುಡಕಟ್ಟು ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ:** ವಿದ್ಯಾರಣ್ಯ
**ದಿನಾಂಕ:**

# ಸಂಶೋಧಕರ ಘೋಷಣಾ ಪತ್ರ

**ಕುಂಬ್ರಿ ಮರಾಠಿಗರ ಸಾಮಾಜಿಕ ಸಂಕಥನ(ಉತ್ತರ ಕನ್ನಡ ಜಿಲ್ಲೆಯನ್ನು ಪರಿಗಣಿಸಿ)** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದ ಪ್ರಾಧ್ಯಾಪಕ ರಾದ **ಡಾ.ಎ.ಎಸ್.ಪ್ರಭಾಕರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

**ನಾಯ್ಕ ವೆಂಕಟೇಶ ಲಂಬೋದರ**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
**ಬುಡಕಟ್ಟು ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ:** ವಿದ್ಯಾರಣ್ಯ
**ದಿನಾಂಕ:**

# ಪರಿವಿಡಿ

# ಅಧ್ಯಾಯ: ಒಂದು

## ಪೀಠಿಕೆ

1. ಅಧ್ಯಯನದ ಉದ್ದೇಶಗಳು
2. ಅಧ್ಯಯನದ ತಾತ್ವಿಕತೆ
3. ಅಧ್ಯಯನದ ವಿಧಾನ, ವ್ಯಾಪ್ತಿ
4. ಪ್ರಬಂಧದ ಅಧ್ಯಾಯಗಳು

# ಅಧ್ಯಾಯ: ಒಂದು

## ಪೀಠಿಕೆ

ಕರ್ನಾಟಕದಲ್ಲಿ ಉತ್ತರಕನ್ನಡ ಜಿಲ್ಲೆ ಅತ್ಯಂತ ಅಪರೂಪದ ಭೂಭಾಗ. ಉತ್ತರಕನ್ನಡ ಜಿಲ್ಲೆ ಕರ್ನಾಟಕದ ಪಶ್ಚಿಮ ಘಟ್ಟದ ಮೊದಲ ತುದಿ. ಅದ್ದರಿಂದಲೇ ಈ ಜಿಲ್ಲೆಯು ಹಲವು ನೈಸರ್ಗಿಕ ಕೌತುಕಗಳ ತವರೂ ಹೌದು. ಅಪಾರ ಪ್ರಮಾಣದ ನಿಸರ್ಗ ಸಂಪತ್ತು, ಕರ್ನಾಟಕಕ್ಕೇ ವಿಶಿಷ್ಟವೆನ್ನಿಸುವ ಮಾನವ ವೈವಿಧ್ಯತೆಯನ್ನು ಉತ್ತರಕನ್ನಡ ಜಿಲ್ಲೆಯಲ್ಲಿ ಕಾಣಬಹುದು. ಕರ್ನಾಟಕ ರಾಜ್ಯದಲ್ಲಿಯೇ ಅತ್ಯಂತ ವೈವಿಧ್ಯಮಯ ಜನಸಮುದಾಯಗಳು ಮತ್ತು ಆದಿವಾಸಿ ಸಮುದಾಯಗಳು ಉತ್ತರಕನ್ನಡ ಜಿಲ್ಲೆಯಲ್ಲಿ ವಾಸಿಸುತ್ತಿವೆ. ಕರ್ನಾಟಕದ ವಾಯುವ್ಯ ಭಾಗದಲ್ಲಿ ಬರುವ ಈ ಜಿಲ್ಲೆಯಲ್ಲಿ ನೆರೆಯ ಗೋವ, ಮಹಾರಾಷ್ಟ್ರ, ಗುಜರಾತ್, ರಾಜಸ್ಥಾನ, ಮಧ್ಯಪ್ರದೇಶ ಮತ್ತು ಆಫ್ರಿಕಾದ ಜಾಂಜಿಬಾರ್ ದ್ವೀಪ ಪ್ರದೇಶದಿಂದ ವಲಸೆ ಬಂದ ಸಮುದಾಯಗಳು ಇಲ್ಲಿ ಬದುಕು ಕಟ್ಟಿಕೊಂಡಿವೆ. ಅತ್ಯಂತ ಆದಿಮ ಕುಂಮ್ರಿ ಕೃಷಿ ಪದ್ಧತಿ ಜೀವಂತವಿರುವ ಮತ್ತು ಅತ್ಯಾಧುನಿಕ ತಂತ್ರಜ್ಞಾನದಿಂದ ಉಸಿರಾಡುತ್ತಿರುವ ಅಪರೂಪದ ಜಿಲ್ಲೆ ಉತ್ತರಕನ್ನಡವಾಗಿದೆ. ಉತ್ತರಕನ್ನಡ ಜಿಲ್ಲೆ ಇಲ್ಲಿನ ಮೂಲ ನಿವಾಸಿಗಳ ಜೊತೆ, ಚರಿತ್ರೆಯ ಅನೇಕ ಸಂದರ್ಭಗಳಲ್ಲಿ ಇಲ್ಲಿಗೆ ವಲಸೆ ಬಂದಿರಬಹುದಾದ ಅಪರೂಪದ ಸಮುದಾಯಗಳ ತವರಾಗಿದೆ. ಆದಿವಾಸಿಗಳು, ಅಲೆಮಾರಿಗಳು, ಕುಶಲಕರ್ಮಿಗಳು, ಮೀನುಗಾರರು, ಪಶುಪಾಲಕರು, ಆಹಾರ ಸಂಗ್ರಾಹಕರು, ಬೇಟೆಗಾರರು, ಕೃಷಿಕರು ಮುಂತಾದ ಸಮುದಾಯಗಳು ಉತ್ತರಕನ್ನಡ ಜಿಲ್ಲೆಯ ಜನವೈವಿಧ್ಯವನ್ನು ಹೆಚ್ಚಿಸಿವೆ. ಉತ್ತರಕನ್ನಡದ ಪ್ರಾಕೃತಿಕ ಹಾಗೂ ಭೌಗೋಳಿಕ ಸನ್ನಿವೇಶಗಳು ಬುಡಕಟ್ಟು ಸಮುದಾಯಗಳ ಬದುಕಿಗೆ ಪೂರಕ ವಾತಾವರಣವಿರುವ ಕಾರಣ ಈ ಜಿಲ್ಲೆಯಲ್ಲಿ ರಾಜ್ಯದಲ್ಲಿಯೇ ಅತಿ ಹೆಚ್ಚು ಹಾಗೂ ವೈವಿಧ್ಯಮಯ ಬುಡಕಟ್ಟು ಸಮುದಾಯಗಳು ವಲಸೆ ಬಂದು ನೆಲೆ ನಿಂತಿವೆ. ಹಸಲರು, ಅಗೇರ, ಗೊಂಡ, ಕರೇಒಕ್ಕಲು, ಮೇದ, ದೀವರು, ಕೋಮಾರಪಂತ, ಸಿದ್ದಿಯರು, ಮುಕ್ರಿಯರು, ಹಾಲಕ್ಕಿ ಒಕ್ಕಲಿಗರು, ಕುರುಬರು, ಲಂಬಾಣಿಗಳು, ಬೇಡ ವಾಲ್ಮೀಕಿ,

ಕುಣಬಿಯರು ಮುಂತಾದ ಸಮುದಾಯಗಳು ಇಲ್ಲಿ ವಾಸಿಸುತ್ತಿವೆ. ಈ ಸಮುದಾಯಗಳ ಕುರಿತು ವಿವಿಧ ಶೈಕ್ಷಣಿಕ ಸಂಸ್ಥೆಗಳು, ಅಧ್ಯಯನಕಾರರು ಅಧ್ಯಯನ ನಡೆಸಿರುವುದು ಕಂಡು ಬರುತ್ತದೆ. ಹೀಗಿದ್ದರೂ ಸಹ ಅನಾದಿಕಾಲದಿಂದ ಈ ಎಲ್ಲ ಸಮುದಾಯಗಳ ನಡುವೆ ಇದ್ದೂ ಇಲ್ಲದಂತೆ ಬದುಕುತ್ತಾ ತನ್ನದೇ ಆದ ಪ್ರತ್ಯೇಕ ವಿಶಿಷ್ಟ ಜೀವನ ಶೈಲಿಯನ್ನು ಹೊಂದಿರುವ ಕುಂಬ್ರಿ ಮರಾಠಿ ಸಮುದಾಯವನ್ನು ಇಲ್ಲಿಯವರೆಗೂ ಯಾರೂ ಅಧ್ಯಯನಕ್ಕೊಳಪಡಿಸಿಲ್ಲ. ಪ್ರಸ್ತುತ ಮಹಾಪ್ರಬಂಧದಲ್ಲಿ ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಕುಂಬ್ರಿ ಮರಾಠಿಗರು ಚರಿತ್ರೆಯ ಯಾವುದೋ ಕಾಲಘಟ್ಟದಲ್ಲಿ ಕರ್ನಾಟಕಕ್ಕೆ ವಲಸೆ ಬಂದಿರಬಹುದಾದ ಒಂದು ಕೃಷಿಕ ಸಮುದಾಯ. ಆದರೆ ಪಶುಪಾಲನೆ ಮತ್ತು ಆಹಾರ ಸಂಗ್ರಹಣೆಗಳೂ ಸಹ ಈ ಸಮುದಾಯದ ಪ್ರಧಾನ ಆರ್ಥಿಕ ಅವಲಂಬನೆಗಳಾಗಿವೆ. ಆದರೆ ಕುಂಬ್ರಿ ಮರಾಠಿಗರು ಕಾಡಿನ ಕಣಿವೆಗಳಲ್ಲಿ ಆದಿಮ ಕೃಷಿ ಪದ್ಧತಿಯನ್ನು ಪ್ರಧಾನವಾಗಿ ಅವಲಂಬಿಸಿದ್ದ ಸಮುದಾಯವಾಗಿದೆ. ಕೆತ್ತು ಬೇಸಾಯ, ಕುಮೇರು ಕೃಷಿ, ಸ್ಥಳಾಂತರಿತ ವ್ಯವಸಾಯಗಳಂತಹ ಲಘು ವ್ಯವಸಾಯ ಪದ್ಧತಿಗಳನ್ನು ಅವಲಂಬಿಸಿಕೊಂಡು ಬದುಕಿ ಬಂದ ಸಮುದಾಯಗಳಲ್ಲಿ ಕುಂಬ್ರಿ ಮರಾಠಿ ಸಮುದಾಯವೂ ಒಂದು. 'ಕುಂಬ್ರಿ' ಮರಾಠಿ' ಎಂಬ ಜೋಡಿ ಪದವೇ ಈ ಸಮುದಾಯದ ಆದಿಮತನವನ್ನು ಹೇಳುತ್ತದೆ. 'ಕುಂಬ್ರಿ' ಎಂದರೆ ಆದಿಮ 'ಕುಮ್ರಿ' ಬೇಸಾಯ ಕ್ರಮವನ್ನು ಸೂಚಿಸಿದರೆ, 'ಮರಾಠಿ'ಯು ಈ ಸಮುದಾಯದ ಭಾಷಿಕ ಅನನ್ಯತೆಯನ್ನು ಸೂಚಿಸುತ್ತದೆ. ಅಂದರೆ ಕುಂಬ್ರಿ ಮರಾಠಿಗರು, ಮರಾಠಿ ಭಾಷಿಕ ಪ್ರದೇಶದ ಆದಿಮ ಕೃಷಿಕರಾಗಿದ್ದಿರಬಹುದು ಎಂಬುದಕ್ಕೆ ಹಲವು ಸಾಕ್ಷ್ಯಾಧಾರಗಳು ಸಿಗುತ್ತವೆ.[1]

1. ಆದರೆ, ಮರಾಠ ಎಂಬ ಶಬ್ದವು ಯಾವ ಸಮುದಾಯವನ್ನೂ ಸೂಚಿಸುತ್ತಿಲ್ಲ. 'ಮರಾಠಿಯ ಚಾರಿತ್ರಿಕ ದಾಖಲೆಗಳಲ್ಲಿ 'ಮರಾಠ' ಎಂಬ ಶಬ್ದ ಯಾವ ಜಾತಿ ಸಮುದಾಯವನ್ನೂ ಸೂಚಿಸಲು ಬಳಕೆಯಾಗಿಲ್ಲ, ಬದಲಿಗೆ ಮಹಾರಾಷ್ಟ್ರದ ಜನರನ್ನು ಮರಾಠಿ ಭಾಷೆಯನ್ನು ಮಾತಾಡುವವರನ್ನು ಮರಾಠ ಎಂದು ಕರೆಯಲಾಗುತ್ತದೆ. ಕ್ರಿ.ಪೂ 100ರಲ್ಲಿ 'ಮರಾಠ' ಶಬ್ದ ಬಳಕೆಯಲ್ಲಿತ್ತು ಎಂಬುದನ್ನು ನಾನೇಘಾಟ್ ಶಿಲಾಶಾಸನದಿಂದ[2] ನಾವು ಕಂಡುಕೊಳ್ಳ ಬಹುದು.

2. ಆದರೆ ಮುಂಬೈ ಪ್ರಾಂತ್ಯ ಮತ್ತು ಭಾರತದ ಮಧ್ಯ ಪ್ರಾಂತ್ಯಗಳನ್ನು ಅಧ್ಯಯನ ಮಾಡಿರುವ ಅನೇಕ ವಸಾಹತುಕಾಲೀನ ಅಧ್ಯಯನಕಾರರು[3] 'ಮರಾಠ ಮತ್ತು 'ಕುಮ್ರಿ' ಶಬ್ದಗಳ ನಿಷ್ಪತ್ತಿಯನ್ನು ಬೇರೆ ಬೇರೆ ರೀತಿಯಲ್ಲಿ ವಿವರಿಸಿದ್ದಾರೆ. ಮರಾಠಿ, ಕೊಂಕಣಿ, ಕನ್ನಡ

ಮಿಶ್ರಿತ ಮರಾಠಿ ಮಾತನಾಡುವ ಇವರು ಜೀವನಾಧಾರಕ್ಕಾಗಿ 'ಕುಮರಿ' ಬೇಸಾಯವನ್ನು, ಪಶುಪಾಲನೆಯುನ್ನು ಹಾಗೂ ಅರಣ್ಯದ ಕಿರುಉತ್ಪನ್ನಗಳ ಸಂಗ್ರಹಣೆಯುನ್ನು ಅವಲಂಬಿಸಿಕೊಂಡು ಬಂದಿದ್ದಾರೆ. ತೀರಾ ಇತ್ತೀಚೆಗೆ ಅಂದರೆ, ಜಾಗತೀಕರಣ, ಆಧುನೀಕರಣ, ಕೈಗಾರಿಕೀಕರಣದ ಪರಿಣಾಮವಾಗಿ ಜಿಲ್ಲೆಗೆ ದಾಳಿ ಇಟ್ಟ ವಿವಿಧ ಯೋಜನೆಗಳು ಹಾಗೂ ಅರಣ್ಯ ಕಾಯ್ದೆಗಳು ಕುಂಬ್ರಿ ಮರಾಠಿಗರ ಮೇಲೆ ಪರಿಣಾಮ ಬೀರಿದ್ದರಿಂದ ಜೀವನ ನಿರ್ವಹಣೆಗೆ ಕೃಷಿ, ಪಶುಪಾಲನೆ, ಅರಣ್ಯೇತರ ಸಣ್ಣಪುಟ್ಟ ವ್ಯಾಪಾರ, ಕೂಲಿ ಇತ್ಯಾದಿಗಳನ್ನು ಈ ಸಮುದಾಯ ಅವಲಂಬಿಸಿದೆ. ವಿಶೇಷವಾಗಿ ಕುಂಬ್ರಿ ಮರಾಠಿಗರು ಪ್ರಕೃತಿ ಆರಾಧಕರಾಗಿದ್ದು ಇವರ ಭಾಷೆ, ದೈವಾರಾಧನೆ, ಆಹಾರಕ್ರಮ, ಉಡುಗೆ ತೊಡುಗೆಗಳು, ಜೀವನ ಶೈಲಿಯನ್ನು ಗಮನಿಸಿದಾಗ ಇವರು ಗೋವಾ, ಮಹಾರಾಷ್ಟ್ರ, ಗುಜರಾತ ಪ್ರದೇಶಗಳಿಂದ ರಕ್ಷಣೆ ಮತ್ತು ಆಹಾರವನ್ನು ಹುಡುಕಿಕೊಂಡು ಕರ್ನಾಟಕದ ಕರಾವಳಿ ಹಾಗೂ ಪಶ್ಚಿಮ ಘಟ್ಟಗಳ ಕಡೆ ವಲಸೆ ಬಂದಂತೆ ಕಾಣುತ್ತದೆ.

3. ಏಕೆಂದರೆ ಈ ಸಮುದಾಯಗಳಲ್ಲಿ ಕರ್ನಾಟಕ ಹಾಗೂ ರತ್ನಗಿರಿ ಮರಾಠಿಗರ ನಡುವೆ ವೈವಾಹಿಕ ಸಂಬಂಧಗಳು ನಡೆದಿರುವ ಉದಾಹರಣೆಗಳಿವೆ. ಇದು ಕೇವಲ ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸಂರಚನೆ ಮಾತ್ರವಲ್ಲ. ಇದೆ ಬಗೆಯ ಸಾಮಾಜಿಕ ಸ್ಥಿತಿಗತಿಗಳುಳ್ಳ ಅನೇಕ ಸಮುದಾಯಗಳು ಉತ್ತರಕನ್ನಡ ಜಿಲ್ಲೆಯಲ್ಲಿವೆ. ಕೊಂಕಣಿ, ಮರಾಠಿ ಮತ್ತು ಕನ್ನಡ ಭಾಷೆಗಳನ್ನು ಬಳಸುವ ಈ ಗಡಿಭಾಗದ ಸಮುದಾಯಗಳ ಜನಾಂಗೀಯ ಲಕ್ಷಣಗಳು ಸೂಕ್ಷ್ಮವಾಗಿ ಒಂದೇ ಆಗಿವೆ. 1954ರಲ್ಲಿ ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿಭಾಗದ ಜನಾಂಗ ಮತ್ತು ಸಮುದಾಯಗಳ ಆಂತ್ರೊಪಮೆಟ್ರಿಕ್ ಸರ್ವೆ[4] ಮಾಡಿರುವ ಇರಾವತಿ ಕರ್ವೆ ಅವರು ಮರಾಠಿ ಮತ್ತು ಕೊಂಕಣಿ ಮಾತಾಡುವ ಕರ್ನಾಟಕದಲ್ಲಿನ ಸಮುದಾಯಗಳು ಸದಾ ವಲಸಿಗ ಪ್ರವೃತ್ತಿಯುಳ್ಳವು ಎನ್ನುತ್ತಾರೆ. ಜೊತೆಗೆ ಈ ಎರಡೂ ರಾಜ್ಯಗಳ ಗಡಿಭಾಗದ ಸಮುದಾಯಗಳ ಜನಾಂಗೀಯ ಲಕ್ಷಣಗಳು ಒಂದೇ ಆಗಿವೆ ಎನ್ನುತ್ತಾರೆ.

4. ಇದಲ್ಲದೆ ಈ ಮರಾಠಿ ಕೊಂಕಣಿ ಮೂಲದ ಈ ಸಮುದಾಯಗಳ ಪ್ರಾಚೀನತೆಯ ಕುರಿತು ಅನೇಕ ವ್ಯಾಖ್ಯಾನಗಳೂ ಇವೆ. ಕರ್ನಾಟಕದಲ್ಲಿ ನೆಲೆನಿಂತಿರುವ ಕುಣಬಿ, ಕುಡುಬಿ ಮರಾಠಿ ನಾಯ್ಕ ಮತ್ತು ಕುಂಬ್ರಿ ಮರಾಠಿ ಸಮುದಾಯಗಳು ಒಂದೇ ಮೂಲದವು ಎಂದು ಹಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[5]

5. ಕುಣಬಿ, ಕುಡುಬಿ ಮರಾಠಿ ನಾಯ್ಕ ಮತ್ತು ಕುಂಬ್ರಿ ಮರಾಠಿ ಸಮುದಾಯಗಳು ಜನಾಂಗಿಕವಾಗಿ, ಭಾಷಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಒಂದೇ ಆಗಿರುವುದರಿಂದ ಇವರ ಮೂಲ ಕೊಂಕಣಿ ಮತ್ತು ಮರಾಠಿ ಭಾಷಿಕ ಪ್ರದೇಶವೇ ಆಗಿದೆ.[6]

6. ಕೆ ಎಸ್ ಸಿಂಗ್ ಅವರ ಪ್ರಕಾರ 'ಮರಾಠ ಮತ್ತು ಕುಣಬಿಯರು ಮಹಾರಾಷ್ಟ್ರದ ಆದಿಮ ಕೃಷಿಕ ಸಮುದಾಯಗಳು. ಮಹಾರಾಷ್ಟ್ರದಲ್ಲಿ ಜನಸಂಖ್ಯೆಯ ದೃಷ್ಟಿಯಿಂದ ಈ ಎರಡೂ ಸಮುದಾಯಗಳು ಬಹುಸಂಖ್ಯಾತ ಸಮುದಾಯಗಳೇ ಆಗಿವೆ. 'ಮರಾಠ' ಸಮುದಾಯದವರು ಮೂಲತಃ ಯೋಧರು. ಇವರು ಕುಣಬಿಯರಿಗಿಂತ ತಾವು ಶ್ರೇಷ್ಠರು ಎಂದು ತಲ ತಲಾಂತರದಿಂದ ನಂಬಿಕೊಂಡು ಬಂದಿದ್ದಾರೆ. 1931 ಜನಗಣತಿಯ ಪ್ರಕಾರ ಈ ಎರಡೂ ಸಮುದಾಯಗಳು ಜನಸಂಖ್ಯೆ 77,12,030 ಅಂದರೆ ಮಹಾರಾಷ್ಟ್ರದ ಜನಸಂಖ್ಯೆಯಲ್ಲಿ ಇವರು ಶೇ 23.63% ರಷ್ಟಿದ್ದಾರೆ. ಮರಾಠ ಮತ್ತು ಕುಣಬಿಗಳನ್ನು ಎರಡು ಪ್ರತ್ಯೇಕಿತ ಸಮುದಾಯಗಳನ್ನಾಗಿ ನೋಡಲಾಗುತ್ತದೆ. ಆದರೆ ಈ ಎರಡೂ ಒಂದೇ ಮೂಲದ ಎರಡು ಉಪಪಂಗಡಗಳೇ ಆಗಿವೆ ಎನ್ನುತ್ತಾರೆ.[7]

7. ಆದರೆ, ಕುಣಬಿ, ಕುಂಬ್ರಿ ಮರಾಠಿ ಮತ್ತು ಕುಡುಬಿಗಳನ್ನು ತೌಲನಿಕವಾಗಿ ಅಧ್ಯಯನ ಮಾಡದೆ ನಾವು ಯಾವ ತೀರ್ಮಾನಕ್ಕೂ ಬರಲು ಸಾಧ್ಯವಿಲ್ಲ. ಆದರೆ ಈ ಸಮುದಾಯಗಳ ಜನಾಂಗಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಹರೆಗಳು ಒಂದೇ ರೂಪದಲ್ಲಿವೆ. ಇದರ ಜೊತೆಗೆ ಈ ಸಮುದಾಯಗಳ ದುಡಿಮೆಯ ಮಾದರಿಗಳೂ ಆದಿಮವೂ ಆಗಿವೆ. ಪಶುಪಾಲಕ, ಆಹಾರ ಸಂಗ್ರಾಹಕ ಮತ್ತು ಆದಿಮ ಕುಮ್ರಿ ಬೇಸಾಯ ಕ್ರಮಗಳನ್ನು ಅವಲಂಬಿಸಿದ್ದ ಈ ಸಮುದಾಯಗಳು ಶತಮಾನಗಳಿಂದ ವಲಸೆ ಮತ್ತು ಅಲೆಮಾರಿತ್ವವನ್ನು ಅವಲಂಬಿಸಿಕೊಂಡು ಬಂದಿವೆ. ಗಡಿಗಳ ಮತ್ತು ಭಾಷಿಕ ಎಲ್ಲೆಗಳ ಮಿತಿಗಳನ್ನು ಮೀರಿ ಈ ಸಮುದಾಯಗಳು ವಾಸಯೋಗ್ಯ ಪ್ರದೇಶಗಳನ್ನು ಹುಡುಕಿಕೊಂಡು ಕನ್ನಡ, ಕೊಂಕಣಿ ಮತ್ತು ಮರಾಠಿ ಭಾಷಿಕ ಪ್ರದೇಶಗಳಲ್ಲಿ ಅಲೆದಾಡಿವೆ. ಕೆಲವೆಡೆ ಈ ರೀತಿಯ ಎಲ್ಲಾ ಗಡಿ ಹಂಗುಗಳನ್ನು ಮೀರಿ ನೆಲೆನಿಂತಿವೆ. ಮುಖ್ಯವಾಗಿ ಕುಣಬಿ, ಕುಡುಬಿ, ಹಾಲಕ್ಕಿ ಒಕ್ಕಲು, ಕರೆ ಒಕ್ಕಲು ಮತ್ತು ಕುಂಬ್ರಿ ಮರಾಠಿಗರು ಹೀಗೆ ಗಡಿಗಳ ಹಂಗು ಇಲ್ಲದೆ ಈ ಮಿಶ್ರಭಾಷಾ ಪ್ರದೇಶಗಳಲ್ಲಿ ನೆಲೆನಿಂತಿವೆ.[8]

ಕುಂಬ್ರಿ ಮರಾಠಿಗರ ಭಾಷೆ, ಆಹಾರ ಕ್ರಮ, ಕಸುಬು, ಉಡುಗೆ-ತೊಡುಗೆ, ಆಚಾರ-ವಿಚಾರಗಳು, ನಂಬಿಕೆಗಳು, ಆಚರಣೆಗಳು, ವಾಸಸ್ಥಾನ, ಒಳಾಡಳಿತ ವ್ಯವಸ್ಥೆ, ಕುಟುಂಬದ ರಚನೆ, ಜ್ಞಾನ, ದೇಹಾಕೃತಿ, ಇವುಗಳೆಲ್ಲವೂ ಬುಡಕಟ್ಟು ಸಮುದಾಯದ ಲಕ್ಷಣಗಳನ್ನು

ಹೋಲುತ್ತವೆ. ಆದರೂ ಈವರೆಗೂ ಇವರನ್ನು ಬುಡಕಟ್ಟುಗಳ ಗುಂಪಿಗೆ ಸೇರಿಸಲಾಗಿಲ್ಲ. ಈ ನಿಟ್ಟಿನಲ್ಲಿ ಕುಂಬ್ರಿ ಮರಾಠಿ ಸಮುದಾಯ ನಡೆಸಿದ ಯಾವ ಪ್ರಯತ್ನಗಳೂ ಸಹ ಸಫಲಗೊಂಡಿಲ್ಲ. 2010ನೇ ಇಸವಿವರೆಗೂ ಈ ಸಮುದಾಯಕ್ಕೆ ಜಾತಿ ಪ್ರಮಾಣ ಪತ್ರವನ್ನು ಸಹ ನೀಡುತ್ತಿರಲಿಲ್ಲ. 2000ನೇ ಇಸವಿಗಿಂತ ಪೂರ್ವದಲ್ಲಿ ದಟ್ಟ ಕಾಡುಗಳ ನಡುವೆ ಇರುವ ಇವರು ಕೆಲವೇ ಸಂಖ್ಯೆಯಲ್ಲಿದ್ದುದರಿಂದ ಹಾಗೂ ಈ ಸಮುದಾಯದಲ್ಲಿ ಅಕ್ಷರಸ್ಥರ ಸಂಖ್ಯೆಯೂ ಕಡಿಮೆ ಇದ್ದುದರಿಂದ ಸರಕಾರಿ ಸೌಲಭ್ಯ ಪಡೆಯುವಲ್ಲಿ ಜಾತಿ ಪ್ರಮಾಣಪತ್ರದ ಕುರಿತು ಅರಿವಿರಲಿಲ್ಲ. ಅಲ್ಲದೇ ಜಾತಿ ಪ್ರಮಾಣಪತ್ರವನ್ನು ಪಡೆಯುವ ಬಗ್ಗೆ ಈ ಸಮುದಾಯದಲ್ಲಿ ಯಾವುದೇ ರೀತಿಯ ಪ್ರಯತ್ನಗಳೂ ಸಹ ನಡೆದಿದ್ದು ಕಾಣುವುದಿಲ್ಲ. ಅಲ್ಲಿ ಇಲ್ಲಿ ಬೆರಳಣಿಕೆಯ ಕುಟುಂಬಗಳು ತಮ್ಮ ಮಕ್ಕಳ ವಿದ್ಯಾಭ್ಯಾಸದ ಕುರಿತು ಹಾಗೂ ಸಣ್ಣಪುಟ್ಟ ನೌಕರಿಗಳಿಗೆ ಅರ್ಜಿ ಸಲ್ಲಿಸುವ ಸಂದರ್ಭದಲ್ಲಿ ಜಾತಿ ಪ್ರಮಾಣ ಪತ್ರವನ್ನು ಪಡೆಯಲು ಪ್ರಯತ್ನಿಸಲಾಗಿ 'ಮರಾಠಾ' ಸಮುದಾಯಕ್ಕೆ ನೀಡುತ್ತಿದ್ದ 'ಸಾಮಾನ್ಯ' ವರ್ಗದ ವಿಭಾಗದಲ್ಲಿಯೇ ಜಾತಿ ಪ್ರಮಾಣ ಪತ್ರ ನೀಡಲಾಗುತ್ತಿತ್ತು. ಈ ಎಲ್ಲಾ ಅಂಶಗಳನ್ನು ಗಮನಿಸಿದ ಈ ಸಮುದಾಯ ಹಂತ ಹಂತದ ಜಾಗೃತಿಯೊಡನೆ 2000 ರ ಹೊತ್ತಿಗೆ ಅಲ್ಲಲ್ಲಿ ಗುಂಪು ಸೇರಿ ಒಗ್ಗಟ್ಟು ಪ್ರದರ್ಶಿಸಲು ಪ್ರಯತ್ನ ನಡೆಸಿತು. ಇಡೀ ಸಮುದಾಯ ಎದುರಿಸುತ್ತಿರುವ ಸಾಮಾಜಿಕ ಸಮಸ್ಯೆ, ಸವಾಲುಗಳ ಬಗ್ಗೆ ಎಚ್ಚೆತ್ತುಕೊಳ್ಳುತ್ತಾ ನಿರಂತರ ಹೋರಾಟ, ಮನವಿ ಸಲ್ಲಿಕೆ ಮುಂದುವರೆಸಿತು. ಈ ಪ್ರಯತ್ನಗಳ ಫಲವಾಗಿ 2002 ರಲ್ಲಿ ಹಿಂದುಳಿದ ವರ್ಗಗಳ ಆಯೋಗದ ಶಿಫಾರಸ್ಸಿನಂತೆ ಸರಕಾರವು ತನ್ನ ಆದೇಶ ಸಂಖ್ಯೆ: ಸಕಇ225ಬಿಸಿಎ 2000 ಬೆಂಗಳೂರು ದಿನಾಂಕ: 20.02.2002ರ ಪ್ರಕಾರ ಹೊರಡಿಸಿದ ಆದೇಶಾನುಸಾರ ಕುಂಬ್ರಿ ಮರಾಠಿ ಸಮುದಾಯವನ್ನು (ಉತ್ತರ ಕನ್ನಡ ಜಿಲ್ಲೆಯನ್ನು ಪ್ರಸ್ತಾಪಿಸಿ) ಅನುಬಂಧ–1 ಪ್ರವರ್ಗ–1 ಕ್ಕೆ ಸೇರಿಸಲಾಯಿತು.

ಸರಕಾರ ಹೊರಡಿಸಿದ ಈ ಆದೇಶದಿಂದ ಕುಂಬ್ರಿ ಮರಾಠಿ ಸಮುದಾಯಕ್ಕೆ ವಿಭಿನ್ನ ರೀತಿಯಲ್ಲಿ ಹೊರ ಪ್ರಪಂಚಕ್ಕೆ ತೆರೆದುಕೊಳ್ಳಲು ಸಾಧ್ಯವಾಯಿತಲ್ಲದೇ, ಮರಾಠಿ ಮಾತನಾಡುತ್ತಾರೆ ಎಂಬ ಒಂದೇ ಕಾರಣದಿಂದ ಸಾಮಾನ್ಯ ವರ್ಗವೆಂದು ಪರಿಗಣಿಸಲಾಗುತ್ತಿದ್ದ ಇವರನ್ನು ಪ್ರವರ್ಗ–1 ಕ್ಕೆ ಸೇರಿಸಿದ್ದರಿಂದ ಶಿಕ್ಷಣ ಹಾಗೂ ಸರಕಾರಿ ಉದ್ಯೋಗ ಪಡೆಯುವಲ್ಲಿ ಕೆಲವು ಮಟ್ಟಿಗೆ ಅನುಕೂಲವಾಯಿತು. ಜೊತೆಗೆ ಪ್ರಾಥಮಿಕ ಶಿಕ್ಷಣದ ನಂತರದ ಹಂತದಲ್ಲಿ ಸಾಕಷ್ಟು ಮಕ್ಕಳು ಪ್ರೌಢಶಿಕ್ಷಣ, ಕಾಲೇಜು, ಹಾಗೂ ಉನ್ನತ ಶಿಕ್ಷಣ ಪಡೆಯುವಲ್ಲಿ ಸಹಕಾರಿಯಾಯಿತು. ಬೆರಳಣಿಕೆಯ ಜನ ಸರಕಾರಿ ಉದ್ಯೋಗಕ್ಕೆ ಸೇರಿದ್ದಾರೆ ಎಂಬುದಕ್ಕೆ ಕ್ಷೇತ್ರ ಭೇಟಿ ಸಂದರ್ಭದಲ್ಲಿ ಅಲ್ಲಲ್ಲಿ ಉದಾಹರಣೆಗಳು ಸಿಕ್ಕಿದವು. ತಮ್ಮ ಅಸ್ತಿತ್ವಕ್ಕಾಗಿ, ಹಕ್ಕಿಗಾಗಿ, ರಕ್ಷಣೆಗಾಗಿ ಒಗ್ಗಟ್ಟಾಗಿ

ದುಡಿಯಬೇಕೆಂಬ ನಿರ್ಧಾರ ಕೈಗೊಂಡ ಕುಂಬ್ರಿ ಮರಾಠಿ ಸಮುದಾಯ ತಮ್ಮ ಭೂಹಕ್ಕಿಗಾಗಿ, ರಾಜಕೀಯ ಪ್ರಾತಿನಿಧ್ಯಕ್ಕಾಗಿ ಪ್ರಯತ್ನ ನಡೆಸಿರುವುದೂ ಸಹ ಕಂಡು ಬರುತ್ತದೆ. ಹಲವಾರು ವರ್ಷಗಳಿಂದ ಕಾಡಿನೊಡನೆ ಅವಿನಾಭಾವ ಸಂಬಂಧ ಬೆಸೆದುಕೊಂಡು ಬದುಕುತ್ತಾ ಅಲ್ಲಲ್ಲಿ ಬೇಸಾಯ, ಪಶು ಸಂಗೋಪನೆಯಂತಹ ಕಸುಬನ್ನು ರೂಢಿಸಿಕೊಂಡು ಬಂದ ಸಮುದಾಯವನ್ನು ಅರಣ್ಯ ಕಾಯಿದೆಗಳ ಅನುಷ್ಠಾನದ ಹೆಸರಿನಲ್ಲಿ ಒಕ್ಕಲೆಬ್ಬಿಸಲಾಗುತ್ತಿದೆ ಎಂಬ ಅಂಶ ಇಡೀ ಸಮುದಾಯವನ್ನು ಕೆರಳಿಸಿದ್ದೂ ಸಹ ಕಂಡು ಬರುತ್ತದೆ. ಭೂ ಒಡೆತನದ ದಾಖಲೆಗಳಿಲ್ಲ ಎಂಬ ಕಾರಣಕ್ಕಾಗಿ ಅವರ ಅನ್ನದ ಮೂಲವಾದ ಭೂಮಿಯನ್ನೇ ಕಸಿದುಕೊಳ್ಳುವ ಪ್ರಯತ್ನ ನಡೆದಿರುವ ಬಗ್ಗೆ ಜಾಗೃತರಾದ ಈ ಸಮುದಾಯ ಭೂಮಿ ಹಕ್ಕಿಗಾಗಿ ಹೋರಾಟ ನಡೆಸಿದೆ. ಉತ್ತರಕನ್ನಡದಲ್ಲಿ ಹಾಲಕ್ಕಿ ಒಕ್ಕಲು, ಕುಣಬಿ, ಕರೆಒಕ್ಕಲು, ಅಗೇರ ಮುಂತಾದ ಸಮುದಾಯಗಳು ಇಂತಹ ಹೋರಾಟಗಳಲ್ಲಿ ದಶಕಗಳಿಂದ ತೊಡಗಿಕೊಂಡಿವೆ. ಆದರೆ ಈ ಸಮುದಾಯಗಳು ತಮ್ಮ ಹೋರಾಟಗಳಲ್ಲಿ ಯಶಸ್ಸನ್ನು ಕಂಡಿಲ್ಲ.

ಆದರೆ ಕುಂಬ್ರಿ ಮರಾಠಿ ಸಮುದಾಯವನ್ನು ಒಳಗೊಂಡಂತೆ ಮೇಲ್ಕಾಣಿಸಿದ ಈ ಸಮುದಾಯಗಳು ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿ ಜಾಗ ಪಡೆದಿಲ್ಲ. ಈ ಸಮುದಾಯಗಳನ್ನು ಪರಿಶಿಷ್ಟ ಪಂಗಡಗಳೆಂದು ಘೋಷಿಸಲು ಬೇಕಾದ ಎಲ್ಲ ಲಕ್ಷಣಗಳೂ ಈ ಸಮುದಾಯಗಳಿಗಿವೆ. ಸಾಮಾನ್ಯವಾಗಿ ಪರಿಶಿಷ್ಟ ಪಂಗಡ ಅಥವಾ ಬುಡಕಟ್ಟು ಎಂದು ಘೋಷಿಸಲು ಕೆಲವು ಲಕ್ಷಣಗಳನ್ನು ಕೇಂದ್ರ ಸರ್ಕಾರ ನಿಗದಿ ಮಾಡಿದೆ. ಭಾರತದಲ್ಲಿ ಆದಿಮ ಸಮುದಾಯಗಳನ್ನು ಪರಿಶಿಷ್ಟ ಪಂಗಡಗಳೆಂದು ಪರಿಗಣಿಸಿಲು 1953ರ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ಆಯೋಗವು ಬುಡಕಟ್ಟುಗಳ ಎಂಟು ಲಕ್ಷಣಗಳನ್ನು ಪಟ್ಟಿ ಮಾಡಿದೆ.

1. ನಾಗರಿಕ ಸಮುದಾಯದಿಂದ ದೂರವಿದ್ದು ಕಾಡು ಮತ್ತು ಬೆಟ್ಟಗಳಲ್ಲಿ ಬದುಕುವವರು.
2. ನಿಗ್ರೋಯಿಡ್, ಅಸ್ಟ್ರೋಲಾಯಿಡ್, ಮಂಗೋಲಾಯಿಡ್ ಮತ್ತು ಕೊಕೊಸೈಡ್ ಈ ನಾಲ್ಕು ಜನಾಂಗಗಳಲ್ಲಿ ಯಾವುದಾದರೂ ಒಂದಕ್ಕೆ ಸೇರಿರಬೇಕು.
3. ಬುಡಕಟ್ಟುಗಳು ಪ್ರತ್ಯೇಕವಾದ ಭಾಷೆಯನ್ನು ಹೊಂದಿರಬೇಕು.
4. ಪಿತೃಪೂಜೆ, ದೆವ್ವಗಳ ಆರಾಧನೆಯನ್ನು ಮಾಡುವ ಪ್ರಾಚೀನ ಆಚರಣೆಯನ್ನು ಹೊಂದಿರಬೇಕು.
5. ಪ್ರಾಚೀನ ವೃತ್ತಿಗಳಾದ ಬೇಟೆ, ಬೇಸಾಯ ಮತ್ತು ಕಾಡುತ್ಪತ್ತಿಯನ್ನು ಸಂಗ್ರಹಿಸುವ ವೃತ್ತಿಗಳನ್ನು ಮಾಡುವವರಾಗಿರಬೇಕು.
6. ಮಾಂಸ ಸೇವನೆಯನ್ನು ಮಾಡುವವರಿರಬೇಕು.

7. ಬುಡಕಟ್ಟುಗಳು ಸಾಮಾನ್ಯವಾಗಿ ಅರೆಬೆತ್ತಲೆ, ಬೆತ್ತಲೆಯಾಗಿದ್ದು, ಮರದ ತೊಗಟೆ, ಎಲೆಗಳನ್ನು ಬಳಸುವವರಾಗಿರಬೇಕು.

8. ವಲಸೆ ಸಂಸ್ಕೃತಿಯನ್ನು ಹೊಂದಿದ್ದು ಕುಣಿತ, ಕುಡಿತಗಳಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿರಬೇಕು.

ಈ ಮೇಲಿನ ಎಂಟು ಲಕ್ಷಣಗಳನ್ನು ನೋಡಿದಾಗ ಕುಂಬ್ರಿ ಮರಾಠಿಗರು ಇದರಲ್ಲಿ ಆರು ಲಕ್ಷಣಗಳನ್ನು ಹೊಂದಿದ್ದಾರೆ ಎಂಬುದನ್ನು ಗಮನಿಸಲಾಗಿದೆ. 'ಒಂದು ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸುವ ಅಥವಾ ಅದನ್ನು ತನ್ನದೆಂದು ಹೇಳಿಕೊಳ್ಳುವಂತಹ ರಾಜಕೀಯವಾಗಿ ಅಥವಾ ಸಾಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸ್ವಯಂ ಆಡಳಿತವುಳ್ಳ ಗುಂಪೇ ಬುಡಕಟ್ಟು ಎಂದು 'ಲಂಡನ್ ರಾಯಲ್ ಆಂಥ್ರೋಪೊಲಾಜಿಕಲ್ ಇನ್‌ಸ್ಟಿಟ್ಯೂಟ್' ವ್ಯಾಖ್ಯಾನಿಸಿದೆ. ಪರಿಶಿಷ್ಟ ಪಂಗಡ, ಬುಡಕಟ್ಟು ಅಥವಾ ಟ್ರೈಬ್ ಎಂದು ಪರಿಗಣಿಸಲ್ಪಡಲು ಇರುವ ಶೈಕ್ಷಣಿಕ ಅಥವಾ ಸರಕಾರಿ ಮಾನದಂಡಗಳೇನೇ ಇದ್ದರೂ ಸಹ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿ, ಹಾಲಕ್ಕಿಗಳು, ಗೌಳಿ, ಕುಣಬಿ, ಕರೆ ಒಕ್ಕಲು, ಹಳ್ಳೇರು, ಶುದ್ಧಾಂಗವಾಗಿ ಈ ದೇಶದ ಆದಿವಾಸಿ ಸಮುದಾಯಗಳಿಗೆ ಇರಬಹುದಾದ ಎಲ್ಲ ಆದಿಮ ಲಕ್ಷಣಗಳನ್ನು ಸಾಂಕೇತಿಕವಾಗಿ ಮಾತ್ರವಲ್ಲದೆ ಆಚರಣೆಗಳಲ್ಲಿ ಮತ್ತು ನಿತ್ಯದ ಲೌಕಿಕದ ವ್ಯವಹಾರಗಳಲ್ಲಿ ಇನ್ನು ಜೀವಂತವಾಗಿ ಇಟ್ಟುಕೊಂಡಿದ್ದಾರೆ. ಈ ಕಾರಣದಿಂದ ಸರಕಾರದ ಘೋಷಿತ ಪರಿಶಿಷ್ಟ ಪಂಗಡದ ಪಟ್ಟಿಯನ್ನು ಪಕ್ಕಕ್ಕಿಟ್ಟು ಆದಿವಾಸಿ ಲಕ್ಷಣಗಳಿರುವ ಮೇಲ್ಕಾಣಿಸಿದ ಸಮುದಾಯಗಳನ್ನು ಬುಡಕಟ್ಟುಗಳೆಂದು ಪರಿಗಣಿಸಬಹುದಾಗಿದೆ.

ಪಶ್ಚಿಮ ಘಟ್ಟಗಳ ಸಾಲಿನ ಉತ್ತರ ಕನ್ನಡ ಜಿಲ್ಲೆಯ ದಟ್ಟ ಕಾಡುಗಳ ನಡುವೆ ಹಲವಾರು ವರ್ಷಗಳಿಂದ ಇತರ ಸಮುದಾಯಗಳ ನಡುವೆ ಇದ್ದೂ ಇಲ್ಲದಂತೆ ಬದುಕುತ್ತಿರುವ, ತಮ್ಮ ಅಸ್ತಿತ್ವವನ್ನು ಪ್ರತಿಪಾದಿಸಲು ಸಾಧ್ಯವಾಗದೇ ಧ್ವನಿ ಕಳೆದುಕೊಂಡ ಕುಂಬ್ರಿ ಮರಾಠಿಗರು ತಮ್ಮದೇ ಆದಂತಹ ರೂಢಿ ಸಂಪ್ರದಾಯಗಳು, ಆಚಾರ–ವಿಚಾರ, ನಿರ್ದಿಷ್ಟ ವಾಸಸ್ಥಾನ, ಕುಲ–ಕಸುಬು, ನ್ಯಾಯಪದ್ಧತಿ, ಭಾಷೆ ವೇಷಭೂಷಣಗಳಲ್ಲದೇ ಎಲ್ಲಾ ಬುಡಕಟ್ಟು ಲಕ್ಷಣಗಳನ್ನು ಹೊಂದುವ ಮೂಲಕ ಕಾಡಿನೊಂದಿಗೆ ಬದುಕು ಕಟ್ಟಿಕೊಂಡು ಬಾಳುತ್ತಿರುವ ಸಮುದಾಯ ವಾಗಿರುತ್ತದೆ. ನೈಸರ್ಗಿಕವಾಗಿ ಶ್ರೀಮಂತವಾಗಿರುವ ಉತ್ತರ ಕನ್ನಡಜಿಲ್ಲೆಯು ತನ್ನ ಮಡಿಲಲ್ಲಿ ಇತರ ಸಮುದಾಯಗಳಾದ ಸಿದ್ದಿ, ಗೌಳಿ, ಕುಣಬಿ, ಲಂಬಾಣಿ, ಗೊಂಡ, ಬೇಡವಾಲ್ಮೀಕಿ, ಮೇದಾರರು, ಅಗೇರರು, ಹಾಲಕ್ಕಿ–ಒಕ್ಕಲು, ಹಕ್ಕಿ ಪಿಕ್ಕಿ, ಹಸಲರು, ಕುರುಬರು, ಮುಂತಾದ ಸಮುದಾಯಗಳಂತೆ ಕುಂಬ್ರಿ ಮರಾಠಿಗರಿಗೂ ಆಸರೆ ಹಾಗೂ ರಕ್ಷಣೆ ನೀಡುತ್ತ ಬಂದಿದೆ.

ಬುಡಕಟ್ಟುಗಳ ಸ್ವತಂತ್ರ ಬದುಕಿಗೆ ಪೂರಕವಾದ ವಾತಾವರಣ ಇಲ್ಲಿರುವುದರಿಂದ ಉತ್ತರಕನ್ನಡ ಜಿಲ್ಲೆಯಲ್ಲಿ ವೈವಿಧ್ಯಮಯ ಬುಡಕಟ್ಟು ಸಮುದಾಯಗಳನ್ನು ನೋಡಬಹುದಾಗಿದೆ. ದುರಂತವೆಂದರೆ ಬುಡಕಟ್ಟುಗಳ ಎಲ್ಲ ರೀತಿಯ ಲಕ್ಷಣವನ್ನು ಹೊಂದಿದ್ದರೂ ಸಹ ಕುಂಬ್ರಿ ಮರಾಠಿಗರನ್ನು ಬುಡಕಟ್ಟು ಸಮುದಾಯಕ್ಕೆ ಸೇರಿಸಲಾಗಿಲ್ಲ.

ಪಶ್ಚಿಮ ಘಟ್ಟಗಳ ದಟ್ಟಾರಣ್ಯದ ಕಡಿದಾದ ಕೊಳ್ಳಗಳು ಹಾಗೂ ಇಳಿಜಾರು ಪ್ರದೇಶಗಳಲ್ಲಿ ನೆಲೆ ನಿಂತು ಬೇಸಾಯ, ಪಶು ಸಂಗೋಪನೆ, ಅರಣ್ಯ ಉತ್ಪನ್ನಗಳ ಸಂಗ್ರಹದೊಡನೆ ಬದುಕು ಕಟ್ಟಿಕೊಂಡ ಕುಂಬ್ರಿ ಮರಾಠಿ ಸಮುದಾಯ ನಾಗರಿಕ ಸಮಾಜದಿಂದ ದೂರವೇ ಇರಲು ಕಾರಣಗಳೇನು? ದಟ್ಟ ಕಾಡುಗಳ ಮಧ್ಯೆ ಯಾಕೆ ನೆಲೆ ನಿಂತರು? ಪಶ್ಚಿಮ ಘಟ್ಟ ಕಾಡುಗಳಲ್ಲಿ ಮಾತ್ರ ಈ ಸಮುದಾಯ ನೆಲೆ ನಿಲ್ಲಲು ಕಾರಣಗಳೇನು? ಹಲವಾರು ಸಮುದಾಯಗಳು ಆಧುನಿಕತೆಯ ಪ್ರಭಾವಕ್ಕೊಳಗಾಗಿ ತಮ್ಮ ಮೂಲ ಚರ್ಯೆಯನ್ನು ಬದಲಿಸಿಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಕುಂಬ್ರಿ ಮರಾಠಿಗರು ಏಕೆ ಇನ್ನೂ ಕಾಡು ವಾಸವನ್ನೇ ಅವಲಂಬಿಸಿದ್ದಾರೆ? ಈ ಸಮುದಾಯಕ್ಕೆ ಏನಾದರೂ ಅಪಾಯವಿತ್ತೇ? ಹೆದರಿ ಬಂದವರೇ? ಅಲೆಮಾರಿಗಳೇ? ಅಥವಾ ಇಲ್ಲಿಯ ಮೂಲ ನಿವಾಸಿಗಳೇ? ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರ ಹುಡುಕುತ್ತಾ ಉತ್ತರಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ ಕಾಣಸಿಗುವ ಈ ಸಮುದಾಯದ ಸ್ಥಿತಿಗತಿಗಳನ್ನು ಅರ್ಥೈಸುವ ಅವರ ಸಾಮಾಜಿಕ ಸಂಕಥನವನ್ನು ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಈ ಸಮುದಾಯವು ತನ್ನದೇ ಆದ ಪ್ರತ್ಯೇಕ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ವ್ಯವಸ್ಥೆಯನ್ನು ಹೊಂದಿದ್ದು ವಿವಿಧ ಬುಡಕಟ್ಟು ಸಮುದಾಯಗಳಲ್ಲಿರುವಂತೆ ಒಳಾಡಳಿತ ವ್ಯವಸ್ಥೆಯನ್ನು ಹೊಂದಿರುವ, ಕಾಡುಗಳ ಮಧ್ಯೆ ಉಳಿದು ಬದುಕನ್ನು ನಡೆಸುತ್ತಿರುವ ಸಮುದಾಯವಾಗಿರುತ್ತದೆ.

ಈ ಅಂಶವನ್ನೇ ಗಮನದಲ್ಲಿಟ್ಟುಕೊಂಡು ಇಡೀ ಸಮುದಾಯವನ್ನು ನೋಡುವ ಪ್ರಯತ್ನ ಮಾಡಲಾಗಿದೆ. ಉತ್ತರಕನ್ನಡ ಜಿಲ್ಲೆಯಲ್ಲಿ ಅತೀ ಕಡಿಮೆ ಸಂಖ್ಯೆಯಲ್ಲಿರುವ ಕುಂಬ್ರಿ ಮರಾಠಿಗರು ಪಶ್ಚಿಮ ಘಟ್ಟಗಳ ಕಾಡಿನ ಕಡಿದಾದ ಕಣಿವೆ ಪ್ರದೇಶಗಳಲ್ಲಿ ಚದುರಿದಂತೆ ವಾಸವಾಗಿದ್ದು ಆರಂಭದಲ್ಲಿ ಸ್ಥಳಾಂತರ ಕೃಷಿ ಪದ್ಧತಿಯನ್ನು ಅನುಸರಿಸುತ್ತಾ, ಇತ್ತಿತ್ತಲಾಗಿ ಒಂದೊಂದು ಕಡೆ ನೆಲೆ ನಿಂತಿರುವಂತೆ ಕಂಡುಬರುತ್ತಾರೆ. ಕಡಿದಾದ ಕಾಡುಗಳ ನಡುವೆ ಹರಿದು ಹಂಚಿಹೋದಂತೆ ಸುಲಭವಾಗಿ ಒಬ್ಬರನ್ನೊಬ್ಬರು ಸಂಪರ್ಕಿಸಲು ಅಸಾಧ್ಯವಾದ ರೀತಿಯಲ್ಲಿ ವಾಸವಾಗಿರುವ ಸಮುದಾಯದ ಬಗ್ಗೆ ಯಾರೂ ಸಹ ಗಮನಿಸಲು ಸಾಧ್ಯವಾಗಿಲ್ಲ. ಆ ಕಾರಣಕ್ಕಾಗಿಯೇ ಈ ಸಮುದಾಯವನ್ನು ಇಲ್ಲಿಯವರೆಗೆ ಯಾರೂ ಸಮಗ್ರ ಅಧ್ಯಯನಕ್ಕೆ ಒಳಪಡಿಸಲಾಗಿಲ್ಲ. ಹೀಗಾಗಿ ಕುಂಬ್ರಿ ಮರಾಠಿಗರ ಬುಡಕಟ್ಟು ಸಂಸ್ಕೃತಿಯ ಅಸ್ತಿತ್ವವನ್ನು ಉಳಿಸಲು ಹಾಗೂ ಕೇವಲ

ಜಾತಿಗಳಾಗಿ ಬಿಡಬಹುದಾದ ಅಪಾಯದಿಂದ ಹೊರತರಲು ಅವರ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಪಾರಂಪರಿಕ ಜೀವನ ಶೈಲಿಗಳನ್ನಾಧರಿಸಿದ ಅಧ್ಯಯನ ನಡೆಸುವ ಉದ್ಧೇಶದಿಂದ 'ಕುಂಬ್ರಿ ಮರಾಠಿಗರ ಸಾಮಾಜಿಕ ಸಂಕಥನ' ಎಂಬ ಶೀರ್ಷಿಕೆಯಡಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಅಧ್ಯಯನದ ಉದ್ದೇಶ

ಇದು ಆದಿವಾಸಿ ಸಮುದಾಯವೊಂದರ ಸಾಮಾಜಿಕ ಚರಿತ್ರೆ ಮತ್ತು ವರ್ತಮಾನದ ಸಾಮಾಜಿಕ ಸ್ಥಿತಿಗತಿಗಳ ಕುರಿತ ಅಧ್ಯಯನವಾಗಿದೆ. ಉತ್ತರಕನ್ನಡ ಜಿಲ್ಲೆಯಲ್ಲಷ್ಟೇ ಅಲ್ಲ, ಇಡೀ ದಕ್ಷಿಣ ಭಾರತದಲ್ಲಿಯೇ ಅತ್ಯಂತ ವಿಶಿಷ್ಟವೆನಿಸುವ ಕುಂಬ್ರಿ ಮರಾಠಿ ಸಮುದಾಯವನ್ನು ಈ ಮಹಾಪ್ರಬಂಧದಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ. ಕರ್ನಾಟಕದಲ್ಲಿ ಉತ್ತರಕನ್ನಡ ಜಿಲ್ಲೆ ಅತ್ಯಂತ ವಿಶಿಷ್ಟವಾದ ಭೂಪ್ರದೇಶ. ಸಂಪದ್ಭರಿತ ಅರಣ್ಯ ತುಂಬಿ ಹರಿಯುವ ನದಿಗಳು, ಧುಮ್ಮಿಕ್ಕುವ ಜಲಪಾತಗಳು, ಮೋಹಕ ಕಣಿವೆಗಳು ಮತ್ತು ಅಪಾರ ಸಮುದಾಯ ವೈವಿಧ್ಯವಿರುವ ಜಿಲ್ಲೆ. ಪ್ರಾಯಶಃ ಕರ್ನಾಟಕದಲ್ಲಿ ಅತ್ಯಂತ ಹೆಚ್ಚು ವೈವಿಧ್ಯಮಯ ಸಮುದಾಯಗಳು ಬದುಕುತ್ತಿರುವುದು ಉತ್ತರಕನ್ನಡ ಜಿಲ್ಲೆಯಲ್ಲಿ. ಸಿದ್ದಿಯರು, ಗೌಳಿಗರು, ಕುಣಬಿಯರು, ಮುಕ್ರಿಯರು, ಹಳ್ಳೇರು, ಹರಿಕಾಂತರು, ಕರೆಒಕ್ಕಲು, ಗಾಮೊಕ್ಕಲು, ಹಾಲಕ್ಕಿ ಒಕ್ಕಲು, ಆಗೆರ, ಮೇದ, ಡುಂಗ್ರಿ, ಗರಾಸಿಯಾ, ಗೊಂಡರು, ಹಸಲರು, ಮುಂತಾದ ವಿಶಿಷ್ಟ ಸಮುದಾಯಗಳು ಉತ್ತರಕನ್ನಡ ಜಿಲ್ಲೆಯಲ್ಲಿವೆ. ಮೇಲೆ ಉಲ್ಲೇಖಿಸಿರುವ ಎಲ್ಲ ಸಮುದಾಯಗಳಿಗೆ ಬುಡಕಟ್ಟು ಲಕ್ಷಣಗಳಿದ್ದು, ಅದರಲ್ಲಿ ಮೇದ, ಡುಂಗ್ರಿ, ಗರಾಸಿಯಾ, ಸಿದ್ಧಿ, ಗೊಂಡಿ ಮತ್ತು ಹಸಲರು ಮಾತ್ರ ಸರಕಾರದ ಘೋಷಿತ ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿದ್ದಾರೆ. ಉಳಿದಂತೆ ಯಾವ ಸಮುದಾಯಗಳು ಪರಿಶಿಷ್ಟ ಪಂಗಡಗಳೆಂದು ಪರಿಗಣಿಸಲ್ಪಟ್ಟಿಲ್ಲ. ಆದರೆ ಮೇಲೆ ಉಲ್ಲೇಖಿಸಲ್ಪಟ್ಟಿರುವ ಸಮುದಾಯಗಳು ಮೇಲ್ನೋಟಕ್ಕೇನೆ ಬುಡಕಟ್ಟುಗಳೆಂದು ಪರಿಗಣಿಸಲ್ಪಡುವಷ್ಟು ದಟ್ಟ ಬುಡಕಟ್ಟು ಲಕ್ಷಣಗಳನ್ನು ಹೊಂದಿವೆ. ಜೊತೆಗೆ ಮಾನವಶಾಸ್ತ್ರೀಯ ಮಾನದಂಡಗಳ ಮೂಲಕ ಅಧ್ಯಯನಕ್ಕೊಳಪಡಿಸಿದರೂ ಸಹ ಈ ಸಮುದಾಯಗಳು ಆದಿವಾಸಿ ಸಮುದಾಯಗಳೆಂದು ಸುಲಭವಾಗಿ ಪರಿಗಣಿಸಲ್ಪಡ ಬಹುದು.

ಕುಂಬ್ರಿ ಮರಾಠಿಗರು ಕೇವಲ ತಮ್ಮ ಉಡಿಗೆ, ತೊಡುಗೆ, ಭಾಷೆ, ಸಂಸ್ಕೃತಿ ಮತ್ತು ಸಾಮಾಜಿಕ ಪದ್ಧತಿಗಳಿಂದ ಭಿನ್ನವಾಗಿಲ್ಲ. ಕುಂಬ್ರಿ ಮರಾಠಿಗರ ನಿತ್ಯದ ಬದುಕು ಮತ್ತು ಪ್ರಾಚೀನ ಸಾಂಸ್ಕೃತಿಕ ಕುರುಹುಗಳಿಂದಲೂ ಇವರು ಇತರೆ ಸಮುದಾಯಗಳಿಗಿಂತ ಭಿನ್ನರಾಗಿದ್ದಾರೆ. ಕುಂಬ್ರಿ ಮರಾಠಿ ಸಮುದಾಯವು ಪರಿಶಿಷ್ಟ ವರ್ಗಕ್ಕೆ ಸೇರದ ಬುಡಕಟ್ಟು ಸಮುದಾಯವಾಗಿದ್ದು

ಹೆಚ್ಚಾಗಿ ಉತ್ತರಕನ್ನಡ ಜಿಲ್ಲೆಯ ಯಲ್ಲಾಪುರ, ಶಿರಸಿ, ಕುಮಟಾ, ಅಂಕೋಲಾ, ಸಿದ್ದಾಪುರ, ಹೊನ್ನಾವರ ಹಾಗೂ ಭಟ್ಕಳ ತಾಲೂಕುಗಳಲ್ಲಿ ನೆಲೆಸಿದೆ. ಕುಂಬ್ರಿ ಮರಾಠಿ ಸಮುದಾಯವು ಸಹ ದಕ್ಷಿಣ ಭಾರತದ ಪ್ರಮುಖ ಬುಡಕಟ್ಟು ಸಮುದಾಯಗಳಲ್ಲಿ ಒಂದು. ಆದರೆ, ಸಾಮಾಜಿಕವಾಗಿ ಹಿಂದುಳಿದವರಾಗಿ. ಶಿಕ್ಷಣ ಮತ್ತು ಆರ್ಥಿಕವಾಗಿ ಬಡವರಾಗಿ ಮತ್ತು ರಾಜಕೀಯದಲ್ಲಿ ಅಸಂಘಟತರಾಗಿ ತೋರುತ್ತಾರೆ.

ಇನ್ನೊಂದು ಮಹತ್ವದ ಸಂಗತಿಯೆಂದರೆ ಇದುವರೆಗೆ ಕುಂಬ್ರಿ ಮರಾಠಿ ಸಮುದಾಯದ ಕುರಿತು ಪೂರ್ಣಪ್ರಮಾಣದ ಅಧ್ಯಯನ ನಡೆದಿಲ್ಲ. ಅಲ್ಲದೇ ಕುಂಬ್ರಿ ಮರಾಠಿ ಸಮುದಾಯದ ಜೀವನ ಮತ್ತು ಅವರ ಸಮಸ್ಯೆಗಳ ಬಗೆಗೆ ಸಮಗ್ರ ಪ್ರೌಢ ಅಧ್ಯಯನ ಕೂಡ ಆಗಿಲ್ಲ. ಆದರೂ ಅಲ್ಲಲ್ಲಿ ಕೆಲವು ಲೇಖನಗಳು, ವರದಿಗಳು ಪ್ರಾದೇಶಿಕ ದಿನಪತ್ರಿಕೆಯಲ್ಲಿ ಸಚಿತ್ರ ಲೇಖನಗಳು, ಜಿಲ್ಲಾ ಗೆಜೆಟೀಯರ್‌ನಲ್ಲಿ ಅಂಕಿಅಂಶ ಸಹಿತ ವರದಿ, ರಾಜ್ಯ ಪರಿಪತ್ರ ಸಮೀಕ್ಷೆಗಳು ಕುಂಬಿ ಮರಾಠಿ ಸಮುದಾಯದ ಬಗ್ಗೆ ತಜ್ಞರ, ಸಂಶೋಧಕರ ಗಮನ ಸೆಳೆಯುವಲ್ಲಿ ಸಫಲವಾಗಿವೆ. ಈ ದಿಸೆಯಲ್ಲಿ ಕೆಲವೊಂದು ನಿಚ್ಚಳ ಸಂಗತಿ ಹಾಗೂ ಸಮಸ್ಯೆಗಳು ಕುಂಬ್ರಿ ಮರಾಠಿ ಸಮುದಾಯದ ಅಧ್ಯಯನಕ್ಕೆ ಪ್ರೇರಕವಾಗಿವೆ.

ಇಂದಿಗೂ ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳಲ್ಲಿ ಯಾವ ಬದಲಾವಣೆಗಳಾಗಿಲ್ಲ. ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಇನ್ನೂ ಹೀನಾಯ ಸ್ಥಿತಿಯಲ್ಲಿರುವ ಇಂದಿಗೂ ಅವಮಾನಿತ ಬದುಕನ್ನೇ ನಡೆಸುತ್ತಿರುವುದನ್ನು ಕಾಣಬಹುದು. ಸಮುದಾಯದ ಸಾಮಾಜಿಕ ಚರಿತ್ರೆಯಲ್ಲಿ ಕುಂಬ್ರಿ ಮರಾಠಿ ಸಮುದಾಯಕ್ಕೆ ಯಾವ ಅಧಿಕಾರ ವಲಯದಲ್ಲೂ ಕಿಂಚಿತ್ ಸ್ಥಾನಮಾನಗಳು ಲಭ್ಯವಾಗಿಲ್ಲದಿರುವುದು ಕಂಡುಬರುತ್ತದೆ. ಇಂತಹ ಕುಂಬ್ರಿ ಮರಾಠಿ ಸಮುದಾಯವು ಮಲೆನಾಡಿನ ಕಣಿವೆ ಪ್ರದೇಶಗಳಲ್ಲಿ ಚದುರಿದಂತೆ ಬದುಕುತ್ತಿದೆ. ಇವರು ವಾಸಿಸುವ ಪ್ರದೇಶವು ದುರ್ಗಮವಾದದ್ದು. ಸಂಘಟನೆಯ ಕೊರತೆ, ಸುಲಭವಾಗಿ ಸಂಪರ್ಕಿಸಲು ಸಾಧ್ಯವಾಗದೇ ಇರುವುದೇ ಇವರ ಅಧ್ಯಯನಕ್ಕೆ ಸವಾಲಾಗಿ ಪರಿಣಮಿಸಿರುವ ಸಾಧ್ಯತೆಗಳಿವೆ. ಹಾಗಾಗಿ ಉತ್ತರಕನ್ನಡ ಜಿಲ್ಲೆಯ ಪಶ್ಚಿಮ ಘಟ್ಟದ ಕಾಡುಗಳಲ್ಲಿ ವಾಸಿಸುತ್ತಿರುವ ಕುಮರಿ ಮರಾಠಿಗಳ ಕುರಿತು ಕಾಡು ಕೊಳ್ಳಗಳನ್ನು ಹತ್ತಿಳಿದು, ಗಿರಿ ಕಂದರಗಳನ್ನು ದಾಟಿ, ಇಡೀ ಸಮುದಾಯದ 'ಒಳಗಿನವನಾಗಿ' ಅಭ್ಯಸಿಸಬೇಕಾದ ಸವಾಲುಗಳಿವೆ. ಕುಣಬಿ, ಗೌಳಿ, ಸಿದ್ದಿ, ಗೊಂಡ ಸಮುದಾಯಗಳಂತೆ ಕುಮರಿ ಮರಾಠಿಗರ ಪರಂಪರೆಯ ಜಾಡು ಹಿಡಿದು ಮೂಲವನ್ನು ಹುಡುಕಬೇಕಾದ ಅವಶ್ಯಕತೆಗಳಿವೆ. ಇವುಗಳೊಡನೆ ಕುಮರಿ ಮರಾಠಿಗರು ಎದುರಿಸುತ್ತಿರುವ ಆರ್ಥಿಕ ಸಂಕಷ್ಟ ಹಾಗೂ ಅಭದ್ರತೆಗೆ ಕಾರಣಗಳು

ಹಾಗೂ ಆಧುನಿಕ ಸಮಕಾಲೀನ ಸವಾಲುಗಳನ್ನು ಎದುರಿಸಬೇಕಾದ ಅನಿವಾರ್ಯತೆಗಳಿಗೊಳಗಾದ ಈ ಸಮುದಾಯವನ್ನು ಸಮಗ್ರವಾಗಿ ಅಧ್ಯಯನ ನಡುಸುವುದು ನನ್ನ ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

## ಅಧ್ಯಯನದ ಉದ್ದೇಶಗಳು

1. ಕುಂಬ್ರಿ ಮರಾಠಿ ಸಮುದಾಯದ ಮೂಲ, ವಲಸೆಯ ಕಾರಣಗಳು ಮತ್ತು ಪ್ರಾದೇಶಿಕ ಚದುರುವಿಕೆಗೆ ಇರುವ ಕಾರಣಗಳನ್ನು ಹುಡುಕುವುದು.
2. ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸ್ಥಾನಮಾನಗಳನ್ನು ವಿವರಿಸುವುದು. ಈ ಸಮುದಾಯದ ಸಾಮಾಜಿಕ ಸಂರಚನೆ, ಲಿಂಗಸಂಬಂಧಗಳು ಮತ್ತು ಅನ್ಯ ಸಮುದಾಯಗಳ ಜೊತೆ ಈ ಸಮುದಾಯಕ್ಕಿರುವ ಸಾಮಾಜಿಕ ಕೊಡುಕೊಳುವಿಕೆಗಳನ್ನು ವಿಶ್ಲೇಷಿಸುವುದು.
3. ಕುಂಬ್ರಿ ಮರಾಠಿ ಸಮುದಾಯದ ಆರ್ಥಿಕ ಸ್ಥಾನಮಾನಗಳನ್ನು ವಿವರಿಸುವುದು. ಪಾರಂಪರಿಕ ಆರ್ಥಿಕ ಮೂಲಗಳು, ಅವಲಂಬಿಸಿದ್ದ ಕಸಬುಗಳು, ವಲಸೆ ಮತ್ತು ವರ್ತಮಾನದ ಆರ್ಥಿಕ ಅವಲಂಬನೆಗಳನ್ನು ವಿಶ್ಲೇಷಿಸುವುದು.
4. ಕುಂಬ್ರಿ ಮರಾಠಿ ಸಮುದಾಯದ ಸಾಂಸ್ಕೃತಿಕ ನೆಲೆಗಳನ್ನು ವಿವರಿಸುವುದು. ವರ್ತಮಾನದಲ್ಲಿ ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸಂಕಥನವನ್ನು ವಿಶ್ಲೇಷಿಸುವುದು.

ಹೀಗೆ ವಿವಿಧ ಕಾಲ, ಪ್ರದೇಶ, ಹಂತಗಳಲ್ಲಿ ವಿಷಯ ವಿಶ್ಲೇಷಣೆ ಹಾಗೂ ಮಾಹಿತಿ ಸಂಗ್ರಹಿಸುವುದರೊಡನೆ ಕುಂಬ್ರಿ ಮರಾಠಿ ಸಮುದಾಯ ಸಂಘ ಸಂಸ್ಥೆಗಳು, ಸರಕಾರ ಹಾಗೂ ವಿವಿಧ ಮುಖಂಡರು, ಹೊರಾಟಗಾರರ ಮೂಲಕ ಈವರೆಗಾದ ಪ್ರಯತ್ನಗಳು, ಇದರಿಂದಾದ ಸ್ಥಿತಿಗತಿಗಳ ಕುರಿತು ಸಮಗ್ರ ಅಧ್ಯಯನ ನಡೆಸುವ ಉದ್ದೇಶವನ್ನು ಹೊಂದಲಾಗಿದೆ.

## ಅಧ್ಯಯನದ ವ್ಯಾಪ್ತಿ

ಇದು ಉತ್ತರಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿ ಸಮುದಾಯದ ಅಧ್ಯಯನವಾಗಿದೆ. ಈ ಅಧ್ಯಯನಕ್ಕೆ ಉತ್ತರಕನ್ನಡ ಜಿಲ್ಲೆಯನ್ನು ಕೇಂದ್ರವಾಗಿರಿಸಿಕೊಂಡು ಯಲ್ಲಾಪುರ, ಶಿರಸಿ, ಕುಮಟಾ, ಅಂಕೋಲಾ, ಸಿದ್ದಾಪುರ, ಹೊನ್ನಾವರ ಹಾಗೂ ಭಟ್ಕಳ ತಾಲೂಕುಗಳಲ್ಲಿ ಅಧ್ಯಯನ ನಡೆಸಲಾಗಿದೆ. ಹಾಗೂ ಈ ಸಮುದಾಯದ ನೆಲೆಗಳನ್ನು ಗುರುತಿಸಿ ಕ್ಷೇತ್ರಕಾರ್ಯದ ಮೂಲಕ ಸಮಗ್ರ ವಿವರ ಸಂಗ್ರಹಣೆ ಹಾಗೂ ವಿಶ್ಲೇಷಣೆ ನಡೆಸಲಾಗಿದೆ. ಮುಖ್ಯವಾಗಿ ಉತ್ತರಕನ್ನಡ ಜಿಲ್ಲೆಯ ಯಲ್ಲಾಪುರ, ಶಿರಸಿ, ಕುಮಟಾ, ಅಂಕೋಲಾ, ಸಿದ್ದಾಪುರ, ಹೊನ್ನಾವರ ಹಾಗೂ

ಭಟ್ಕಳ ತಾಲೂಕುಗಳಲ್ಲಿ ಪ್ರಸ್ತುತ ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯ ಮಾಡಲಾಗಿದೆ. ಜಿಲ್ಲೆಯ ಉಳಿದ ಭಾಗಗಳಿಗೆ ಭೇಟಿ ನೀಡಿದ್ದೇನಾದರೂ ಅಂಕಿಅಂಶ ಇತ್ಯಾದಿ ಮಾಹಿತಿಗಳಿಗೆ ಈ ಆರೂ ತಾಲೂಕಿನ ಕುಂಬ್ರಿ ಮರಾಠಿ ಸಮುದಾಯದ ವಾಸಸ್ಥಳಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಈ ತಾಲೂಕುಗಳನ್ನೇ ಆಯ್ಕೆ ಮಾಡಿಕೊಳ್ಳಲು ಕಾರಣಗಳು ಹೀಗಿವೆ

1. ಶಿರಸಿ, ಕುಮುಟಾ, ಅಂಕೋಲ, ಹೊನ್ನಾವರ, ಭಟ್ಕಳ ಮತ್ತು ಸಿದ್ದಾಪುರ ತಾಲೂಕುಗಳಲ್ಲಿ ಕುಂಬ್ರಿ ಮರಾಠಿ ಸಮುದಾಯದ ಜನಸಂಖ್ಯೆ ಹೆಚ್ಚಿದೆ. ಈ ತಾಲೂಕುಗಳಿಗೆ ಹೊರತಾಗಿ ಕುಂಬ್ರಿ ಮರಾಠಿಗರು ವಾಸಿಸುತ್ತಿಲ್ಲ.
2. ಉತ್ತರ ಕನ್ನಡ ಜಿಲ್ಲೆಯ ಈ ತಾಲೂಕುಗಳಲ್ಲಿ ಕುಮ್ರಿ ಬೇಸಾಯದ ವ್ಯಾಪಕತೆ ಹೆಚ್ಚು.
3. ಇದಲ್ಲದೆ, ಕುಣಬಿ ಮತ್ತು ಕುಂಬ್ರಿ ಮರಾಠಿ ಸಮುದಾಯಗಳು ಈ ತಾಲೂಕುಗಳಿಗೆ ಪದೇ ಪದೇ ವಲಸೆ ಬಂದಿರುವ ಕುರುಹುಗಳು ಲಭ್ಯವಾಗಿವೆ.

ಈ ಎಲ್ಲಾ ಅಂಶಗಳು ಒಂದು ಸಮುದಾಯದ ಜೀವನ ವಿಧಾನವನ್ನು ರೂಪಿಸುವ ಹಾಗೂ ಸ್ಥಿತ್ಯಂತರಗಳಿಗೆ ಒಳಪಡಿಸುವ ಅಂಶಗಳಾಗಿದ್ದು ಅಧ್ಯಯನಕ್ಕೆ ಸೂಕ್ತವಾದ ಪ್ರದೇಶ ವಾಗಿದೆ. ಆದ್ದರಿಂದ ಕುಂಬ್ರಿ ಮರಾಠಿಗರನ್ನು ಅಧ್ಯಯನ ಮಾಡಲು ಮೇಲ್ಕಂಡ ತಾಲೂಕುಗಳಿಗೆ ನನ್ನ ಅಧ್ಯಯನ ವ್ಯಾಪ್ತಿಯನ್ನು ಸೀಮಿತಗೊಳಿಸಿದ್ದೇನೆ. ಹಿಂದೆ ಕಾನಡಾ, ಕೆನರಾ ಎಂಬ ಹೆಸರಿನಿಂದ ಗುರುತಿಸಿಕೊಂಡ ಜಿಲ್ಲೆಯನ್ನು ಈಗ ಉತ್ತರ ಕನ್ನಡ ಎಂಬ ಹೆಸರಿನಿಂದ ಗುರುತಿಸಲಾಗುತ್ತಿದೆ. 12 ತಾಲೂಕುಗಳನ್ನು ಹೊಂದಿರುವ ಈ ಜಿಲ್ಲೆ ಒಟ್ಟು 10,291 ಚದರ ಕಿ.ಮೀ ಕ್ಷೇತ್ರವನ್ನು ಹೊಂದಿದ್ದು ಕರಾವಳಿ, ಪಶ್ಚಿಮ ಘಟ್ಟಗಳು, ಬಯಲುಸೀಮೆ ಹೀಗೆ ಮೂರು ವಿಧದ ಭೌಗೋಳಿಕ ಪರಿಸರವನ್ನು ಹೊಂದಿದೆ. 2011ರ ಜನಗಣತಿಯಂತೆ ಒಟ್ಟೂ 1,436,847 ಜನಸಂಖ್ಯೆಯನ್ನು ಹೊಂದಿರುವ ಉತ್ತರಕನ್ನಡ ಜಿಲ್ಲೆ ಕರಾವಳಿಯ ಬಹುದೊಡ್ಡ ಜಿಲ್ಲೆಯಾಗಿರುತ್ತದೆ. ಶೇ.70ರಷ್ಟು ಅರಣ್ಯ ಪ್ರದೇಶ ಶೇ.30 ರಷ್ಟು ಜನವಸತಿ ಪ್ರದೇಶವು ಹೆಚ್ಚಾಗಿ ಅರಣ್ಯಾವೃತವಾಗಿಯೇ ಇರುವುದನ್ನು ಇಲ್ಲಿ ಗಮನಿಸಬಹುದು. ಈ ರೀತಿಯ ಭೌಗೋಳಿಕ ಪರಿಸರ ಹೊಂದಿರುವ ಹಾಗೂ ಕಡಿದಾದ ದುರ್ಗಮ ಕಾಡುಗಳಲ್ಲಿ ನೆಲೆನಿಂತ ಕುಂಬ್ರಿ ಮರಾಠಿ ಸಮುದಾಯಗಳನ್ನು ಭೇಟಿ ಮಾಡುವುದು ಒಂದು ರೀತಿಯ ಸವಾಲೇ ಆಗಿತ್ತು.

ಅಧ್ಯಯನದ ಉದ್ದೇಶಗಳಿಗೆ ಅನುಗುಣವಾಗಿ ಕುಂಬ್ರಿ ಮರಾಠಿ ಸಮುದಾಯ ವಾಸ ವಾಗಿರುವ ಉತ್ತರಕನ್ನಡ ಜಿಲ್ಲೆಯ ಏಳು ತಾಲೂಕುಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಕುಂಬ್ರಿ ಮರಾಠಿಗರು ವಾಸವಾಗಿರುವ ಈ ಎಂಟು ತಾಲೂಕುಗಳ 210 ಗ್ರಾಮಗಳಲ್ಲಿ ವ್ಯಾಪಕ ಕ್ಷೇತ್ರಕಾರ್ಯ ಕೈಗೊಳ್ಳಲಾಗಿದೆ. ಅಲ್ಲದೆ 3387 ಕುಟುಂಬಗಳ Household Survey ಯನ್ನು ಅಂಕಿ ಅಂಶಗಳನ್ನು ನಿಶ್ಚಿತ ಪ್ರಶ್ನಾವಳಿಯ ಮೂಲಕ ಸಂಗ್ರಹಿಸಲಾಗಿದೆ. ಜೊತೆಗೆ 100 ಜನ ಕುಂಬ್ರಿ ಮರಾಠಿ ಸಮುದಾಯದ ಪ್ರಮುಖರನ್ನು 'ವ್ಯಕ್ತಿ ಅಧ್ಯಯನ' (Case Study) ಕ್ಕೆ ಸಂದರ್ಶಿಸಲಾಗಿದೆ.

## ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನಕ್ಕೆ ಉತ್ತರಕನ್ನಡ ಜಿಲ್ಲೆಯ 07 ತಾಲೂಕುಗಳಲ್ಲಿ ಕುಮರಿ ಮರಾಠಿ ಸಮುದಾಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಕುಂಬ್ರಿ ಮರಾಠಿಗಳ ಜೀವನ ವಿಧಾನ ಇತರ ಸಮುದಾಯಗಳಿಗಿಂತ ಭಿನ್ನವಾಗಿದ್ದು ಈ ಸಮುದಾಯದ ಮೇಲೆ ಕೈಗಾರೀಕರಣ, ಜಾಗತೀಕರಣ ಹಾಗೂ ಆಧುನಿಕೀಕರಣಗಳಿಂದಾದ ಪರಿಣಾಮವನ್ನು ಗಮನದಲ್ಲಿರಿಸಿಕೊಂಡು ಅಧ್ಯಯನ ನಡೆಸಲು ಉದ್ದೇಶಿಸಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಈ ಕೆಳಗಿನ ಅಧ್ಯಯನದ ವಿಧಾನಗಳನ್ನು ಅನುಸರಿಸುತ್ತಿದ್ದೇನೆ.

1. ಚಾರಿತ್ರಿಕ ವಿಧಾನ
2. ಪ್ರಶ್ನಾವಳಿ ವಿಧಾನ
3. ಮಾದರಿಗಳ ಆಯ್ಕೆ ವಿಧಾನ
4. ಸಹಭಾಗಿತ್ವ ವಿಧಾನ
5. ಗುಂಪು ಚರ್ಚೆ ಮತ್ತು ಸಂದರ್ಶನ ವಿಧಾನ
6. ಲಭ್ಯ ಸಾಹಿತ್ಯಿಕ ಆಕರಗಳ ಅಧ್ಯಯನ ವಿಧಾನ

### 1. ಚಾರಿತ್ರಿಕ ವಿಧಾನ

ಪ್ರಸ್ತುತ ಅಧ್ಯಾಯನದಲ್ಲಿ ಕುಂಬ್ರಿ ಮರಾಠಿ ಸಮುದಾಯವು ನಮ್ಮ ಪಾರಂಪರಿಕ ಸಮಾಜದಲ್ಲಿ ಬೆಳೆದು ಬಂದ ಬಗೆಯನ್ನು ವಿವರಿಸಿಕೊಳ್ಳಲು ಪ್ರಯತ್ನಿಸಲಾಗಿದೆ. ಇಲ್ಲಿಯವರೆಗೆ ಪ್ರಸ್ತುತ ಸಮುದಾಯದ ಕುರಿತು ಲಭ್ಯವಿರುವ ಆಕರಗಳನ್ನು ಗಮನಿಸಲಾಗಿದೆ. ಪಾರಂಪರಿಕ ಸಮಾಜದಲ್ಲಿ ಬದುಕುವ ಸಮುದಾಯಗಳ ವರ್ತಮಾನದ ಬದುಕಿನ ಚಿತ್ರಣ ಚರಿತ್ರೆಯಲ್ಲಿ ದಾಖಲಾದ ಬಗ್ಗೆ ಪರಾಮರ್ಶಿಸಿ ಚಾರಿತ್ರಿಕ ಭೌತಿಕವಾದದ ಹಿನ್ನೆಲೆಯಲ್ಲಿ ಕುಂಬ್ರಿ ಮರಾಠಿ ಸಮುದಾಯದ ಚಾರಿತ್ರಿಕ ರೂಪಾಂತರಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

**2. ಪ್ರಶ್ನಾವಳಿ ವಿಧಾನ**

ಕುಂಬ್ರಿ ಮರಾಠಿಗರ ಸಾಮಾಜಿಕ ಆರ್ಥಿಕ ಹಾಗೂ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಅರ್ಥಮಾಡಿಕೊಳ್ಳಲು ನಿಶ್ಚಿತ ಪ್ರಶ್ನಾವಳಿಯನ್ನು ರೂಪಿಸಲಾಗಿತ್ತು. ಈ ಪ್ರಶ್ನಾವಳಿಯನ್ನು ಕುಂಬ್ರಿ ಮರಾಠಿಗರ ಹೌಸ್ ಹೋಲ್ಡ್ ಡಾಟಾ(House hold) ಸಂಗ್ರಹಿಸಲು ಬಳಸಲಾಗಿದೆ. ಈ ಪ್ರಶ್ನಾವಳಿಯ ಮೂಲಕ ಕುಂಬ್ರಿ ಮರಾಠಿಗರ ಮನೆ ಮನೆಯ ಸಾಮಾನ್ಯ ವಿವರಗಳನ್ನು ಸಂಗ್ರಹಿಸಲಾಗಿದೆ.

**3. ಮಾದರಿಗಳ ಆಯ್ಕೆ(ನಮೂನೆ)ವಿಧಾನ**

ಕುಂಬ್ರಿ ಮರಾಠಿಗ ಸಮುದಾಯದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಸ್ಥಿತಿಗಳನ್ನು ಅಧ್ಯಯನ ಮಾಡಲು ಮಾದರಿ ಸಮೀಕ್ಷೆ ವಿಧಾನವನ್ನು ಅನುಸರಿಸಲಾಗಿದೆ. ಈ ಸಮುದಾಯದ ಪ್ರದೇಶಗಳು, ನೆಲೆಗಳು, ಕುಟುಂಬಗಳು, ಪಂಗಡಗಳನ್ನು ಕುರಿತು ವಿವರಣೆಯನ್ನು ಇಲ್ಲಿ ಸಂಗ್ರಹಿಸಲಾಗಿದೆ. 'ವ್ಯಕ್ತಿ ಅಧ್ಯಯನ'(Case Study) ಕ್ಕೆ ಸಂಬಂಧಿಸಿದಂತೆ ನಾನು ಮಾದರಿ ಆಯ್ಕೆಯ ವಿಧಾನದಲ್ಲಿ ವ್ಯಕ್ತಿಗಳನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಜೊತೆಗೆ 50 ಜನ ಕುಂಬ್ರಿ ಮರಾಠಿ ಸಮುದಾಯದ ಪ್ರಮುಖರನ್ನು 'ವ್ಯಕ್ತಿ ಅಧ್ಯಯನ'(Case Study) ಕ್ಕೆ ಸಂದರ್ಶಿಸಲಾಗಿದೆ.

**4. ಸಹಭಾಗಿತ್ವ ವಿಧಾನ**

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕುಂಬ್ರಿ ಮರಾಠಿ ಸಮುದಾಯದ ಹಬ್ಬ, ಜಾತ್ರೆ, ವಿವಾಹ, ಉತ್ಸವ, ಆಚರಣೆ ಹಾಗೂ ಇತರೆ ವಿಶಿಷ್ಟ ದಿನಗಳಲ್ಲಿ ಕೆಲವು ದಿನ ಇವರ ಜೊತೆಯಲ್ಲಿಯೇ ಇರುವುದರ ಮೂಲಕ ಇವರಿಂದ ಹೆಚ್ಚಿನ ಮಾಹಿತಿಯನ್ನು ಪಡೆಯಲಾಗಿದೆ. ಸಹಭಾಗಿತ್ವ ವಿಧಾನವು ಅಂಕಿಅಂಶಗಳು ಕೊಡುವ ತಿಳಿವಳಿಕೆಗಿಂತ ಹೆಚ್ಚು ಆಳವಾದ ತಿಳುವಳಿಕೆಯನ್ನು ಅಧ್ಯಯನಕ್ಕೆ ನೀಡಬಲ್ಲದು. ನಮ್ಮ ಅಧ್ಯಯನಕ್ಕೆ ಒಳಪಡುವ ಮಾದರಿ ಗ್ರಾಮ ಮತ್ತು ಕುಟುಂಬಗಳಲ್ಲಿ ಕೆಲವು ದಿನ ಇರುವುದರ ಮೂಲಕ ಕುಂಬ್ರಿ ಮರಾಠಿಗರ ಜೀವನ ವಿಧಾನಕ್ಕೆ ಸಂಬಂಧಿಸಿದಂತೆ ಮುಖಾಮುಖಿ ವಿಚಾರ ವಿನಿಮಯ ಮಾಡಿಕೊಳ್ಳಲು ಪ್ರಯತ್ನ ಮಾಡಲಾಗಿದೆ.

**5. ಗುಂಪು ಚರ್ಚೆ ಮತ್ತು ಸಂದರ್ಶನ ವಿಧಾನ**

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಕುಂಬ್ರಿ ಮರಾಠಿಗ ಸಮುದಾಯದ ವ್ಯಕ್ತಿಗಳನ್ನು ಸಂದರ್ಶನ ಮಾಡಲಾಗಿದೆ. ಈ ಸಮುದಾಯದ ನಾಯಕರು, ಜನಪ್ರತಿನಿಧಿಗಳು, ಸಂಘ

ಸಂಸ್ಥೆಗಳ ಪಧಾದಿಕಾರಿಗಳು ಹಾಗೂ ವಿದ್ವಾಂಸರ ಸಂದರ್ಶನವನ್ನು ಮಾಡಲಾಗಿದೆ. ಜೊತೆಗೆ ಈ ಸಮುದಾಯದ ಕೆಲವು ಜನರನ್ನು ಗುಂಪು ಮಾಡಿ ನಿಶ್ಚಿತ ಪ್ರಶ್ನಾವಳಿಯ ಮೂಲಕ ಗುಂಪು ಚರ್ಚೆಯನ್ನು ಮಾಡಲು ವ್ಯವಸ್ಥೆಗೊಳಿಸಿ ಅವರಿಂದ ಮಾಹಿತಿ ಪಡೆಯಲಾಗಿದೆ. ಇದರಿಂದ ವ್ಯಕ್ತಿಗತ ಮತ್ತು ಸಮುದಾಯಿಕ ಜನಾಭಿಪ್ರಾಯಗಳನ್ನು ಪಡೆಯಲು ಸಾಧ್ಯವಾಗಿದೆ.

**6. ಲಭ್ಯ ಸಾಹಿತ್ಯಿಕ ಆಕರಗಳ ಅಧ್ಯಯನ ವಿಧಾನ**

ವಸಾಹತು ಆಡಳಿತ ಕಾಲದಿಂದ ಇಲ್ಲಿಯವರೆಗೆ ಕುಂಬ್ರಿ ಮರಾಠಿ ಸಮುದಾಯದ ಕುರಿತು ನಡೆದಿರುವ ಅಧ್ಯಯನಗಳನ್ನು ಪರಾಮರ್ಶಿಸಲಾಗಿದೆ. ಜೊತೆಗೆ ಶಾಸನ, ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖ ಹಾಗೂ ಅಂಕಿ ಅಂಶಗಳ ಆಕರಗಳನ್ನು ಪ್ರಸ್ತುತ ಅಧ್ಯಯನಕ್ಕೆ ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ. ಇದರ ಜೊತೆಗೆ ಕುಂಬ್ರಿ ಮರಾಠಿಗರ ಮೌಖಿಕ ಸಂದರ್ಶನ, ಸಾಹಿತ್ಯವನ್ನು ಪ್ರಧಾನ ಆಕರವೆಂದು ಪರಿಗಣಿಸಲಾಗಿದೆ.

## ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಸಂಶೋಧನೆ ಪ್ರೌಢ ರೀತಿಯಲ್ಲಿ ಮೂಡಿ ಬರಬೇಕಾದರೆ ಆಕರ ಸಾಮಾಗ್ರಿಗಳು ಪ್ರಮುಖ ಪಾತ್ರ ವಹಿಸುತ್ತವೆ. ಅವುಗಳು ದೊರೆತಷ್ಟು ಅಧ್ಯಯನವು ಅರ್ಥ ಪೂರ್ಣತೆಯನ್ನು ಪಡೆಯುತ್ತದೆ. ಸಂಶೋಧನೆಯಲ್ಲಿ ಪ್ರಕಟಿತ ಹಾಗೂ ಅಪ್ರಕಟಿತ ಸಾಹಿತ್ಯ ಕೃತಿಗಳು, ನಿಘಂಟುಗಳು, ವಿಶ್ವಕೋಶಗಳು, ಗೆಜೆಟೀಯರ್‌ಗಳು, ಪತ್ರಿಕಾ ವರದಿಗಳು, ಲೇಖನಗಳು, ಐತಿಹ್ಯಗಳು, ಇದುವರೆಗೂ ನಡೆದ ಅಧ್ಯಯನದ ಕೃತಿಗಳು, ಎಂ.ಫಿಲ್ ಮತ್ತು ಪಿ.ಎಚ್.ಡಿ ಮಹಾ ಪ್ರಬಂಧಗಳನ್ನು ಸಾಂದರ್ಭಿಕ ಅಧ್ಯಯನದ ಆಕರ ಸಾಮಗ್ರಿಗಳಾಗಿ ಬಳಸಿಕೊಳ್ಳಲಾಗಿದೆ.

1956 ರವರೆಗೂ ಮುಂಬೈ ಸರಕಾರದ ಆಡಳಿತಕ್ಕೊಳಪಟ್ಟಿದ್ದ ಉತ್ತರಕನ್ನಡ ಜಿಲ್ಲೆ ಭಾಷಾವಾರು ಪ್ರಾಂತ್ಯ ವಿಂಗಡಣೆಯಾದಾಗ ಮೈಸೂರು ರಾಜ್ಯಕ್ಕೆ ಸೇರಲ್ಪಟ್ಟಿತು. ಹೀಗೆ ಸೇರಲ್ಪಟ್ಟ ಉತ್ತರಕನ್ನಡ ಜಿಲ್ಲೆ ಶೇ.70 ಭಾಗ ಕಾಡು ಹಾಗೂ ಶೇ.30 ಭಾಗ ಜನವಸತಿ ಪ್ರದೇಶಗಳನ್ನು ಹೊಂದಿದ ಜಿಲ್ಲೆಯಾಗಿದೆ. ಭಾಷಾವಾರು ಪ್ರಾಂತ್ಯವಾಗಿ ಬೇರ್ಪಟ್ಟಿದ್ದರೂ ಸಹ ಕರ್ನಾಟಕ ಹಾಗೂ ಮಹಾರಾಷ್ಟ್ರಗಳ ಗಡಿ ಭಾಗವಾದ ಉತ್ತರಕನ್ನಡ ಜಿಲ್ಲೆಯ ಪೂರ್ವ ಭಾಗ ಮಹಾರಾಷ್ಟ್ರ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿರುವುದು ಕಂಡು ಬರುತ್ತದೆ. ಈ ಭಾಗದ ಜನ ಜೀವನ, ಭಾಷೆ, ಆಚಾರ ವಿಚಾರ, ಪರಂಪರೆಗಳು ಇದನ್ನು ಸಾಕ್ಷೀಕರಿಸುತ್ತವೆ. ಈ ಹಿನ್ನೆಲೆಯಲ್ಲಿ ಕುಮರಿ ಮರಾಠಿ ಸಮುದಾಯವನ್ನು ಅವಲೋಕಿಸಿದಾಗ ಈ ಸಮುದಾಯ ಉತ್ತರಕನ್ನಡ ಜಿಲ್ಲೆಯ ಗಡಿಭಾಗದಲ್ಲಿ ಕಂಡು ಬರದೇ ಜಿಲ್ಲೆಯ ಶಿರಸಿ, ಕುಮಟಾ, ಹೊನ್ನಾವರ,

ಭಟ್ಕಳ, ಯಲ್ಲಾಪುರ, ಅಂಕೋಲಾ, ಸಿದ್ದಾಪುರ ತಾಲೂಕುಗಳ ಪಶ್ಚಿಮ ಘಟ್ಟದ ದಟ್ಟ ಕಾಡು ಕಣಿವೆಗಳಲ್ಲಿ ಚದುರಿದಂತೆ ನೆಲೆ ಕಂಡುಕೊಂಡಿರುವುದು ಕಂಡುಬರುತ್ತದೆ.

ಈ ಸಮುದಾಯದ ಕುರಿತು ಮಾಹಿತಿ ಅರಸಿ ಹೊರಟಾಗ ಎಲ್ಲಿಯೂ ಸ್ಪಷ್ಟ ಮಾಹಿತಿ ಲಭ್ಯವಿದ್ದದ್ದು ಕಂಡು ಬರುವುದಿಲ್ಲ. ಆದರೆ ಕೆನರಾ ಗೆಜೆಟಿಯರ್ ಹಾಗೂ ಬಾಂಬೇ ಗೆಜೆಟಿಯರ್‌ಗಳಲ್ಲಿ ಕುಂಬ್ರಿ ಮರಾಠಿಗರ ಕುರಿತು ಸಂಕ್ಷಿಪ್ತ ವಿವರಣೆಗಳಿದ್ದು, ಈ ವಿವರಣೆಗಳು 'ಕುಂಬ್ರಿ ಮರಾಠಿ' ಸಮುದಾಯದ ಸಮಗ್ರ ವಿವರಗಳನ್ನು ಪೂರೈಸುವುದಿಲ್ಲ. ಕನ್ನಡ ವಿಶ್ವ ವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ. ಎ.ಎಸ್ ಪ್ರಭಾಕರರವರು ಸಂಪಾದಿಸಿದ 'ಆದಿವಾಸಿ ಆಖ್ಯಾನ' ಎಂಬ ಗ್ರಂಥದಲ್ಲಿ ಡಾ. ಹಿ.ಚಿ ಬೋರಲಿಂಗಯ್ಯರವರು ಬರೆದ 'ಅರಣ್ಯದೊಳಗಿನ ಬುಡಕಟ್ಟುಗಳು : ಒಂದು ವಿವೇಚನೆ' ಎಂಬ ಲೇಖನದಲ್ಲಿ ಮರಾಠಿ ಭಾಷೆ ಬಗ್ಗೆ ಪ್ರಸ್ಥಾಪಿಸಲಾಗಿದ್ದರೂ ಕುಂಬ್ರಿ ಮರಾಠಿ ಸಮುದಾಯವನ್ನು ದೃಢೀಕರಿಸುವುದಿಲ್ಲ. ಶ್ರೀಮತಿ ವಿಜಯಲಕ್ಷ್ಮಿ ಆರ್. ರವರು ಬರೆದ ಇನ್ನೊಂದು ಲೇಖನವಾದ 'ಕರ್ನಾಟಕದ ಬುಡಕಟ್ಟು ನೆಲೆಗಳು' ಎಂಬ ಲೇಖನದಲ್ಲಿ ಐವತ್ತು ಬುಡಕಟ್ಟುಗಳನ್ನು ಹೆಸರಿಸುತ್ತ – ಕೊಕ್ನ, ಕುಕ್ನಿ, ಕುಕ್ನ ಸಮುದಾಯಗಳು ಕಾರವಾರ ಹಾಗೂ ಅಂಕೊಲಾಗಳಲ್ಲಿ ಹೆಚ್ಚಾಗಿದ್ದು ಗೋವಾದಿಂದ ವಲಸೆ ಬಂದವರೆಂದೂ, ಕುಮರಿ ವ್ಯವಸಾಯ ಮಾಡುವರೆಂದು, ಕೊಂಕಣಿ–ಮರಾಠಿ ಮಾತನಾಡುವವರೆಂದು ಪ್ರಸ್ತಾಪಿಸುತ್ತಾರೆ. ಆದರೆ ಕುಂಬ್ರಿ ಮರಾಠಿಗರು ಕಾರವಾರದಲ್ಲಿ ಕಂಡು ಬರುವುದಿಲ್ಲ. ಅಲ್ಲದೇ ಇವರ ಲೇಖನದಲ್ಲಿಯೂ ಕೂಡ ಕುಂಬ್ರಿ ಮರಾಠಿ ಸಮುದಾಯವೆಂಬ ಬಗ್ಗೆ ಎಲ್ಲಿಯೂ ಪ್ರಸ್ತಾಪವಿಲ್ಲ. ಮುಂದುವರೆದು ದಕ್ಷಿಣ ಕನ್ನಡ, ಕೊಡಗು ಹಾಗೂ ಚಿಕ್ಕ ಮಗಳೂರು ಜಿಲ್ಲೆಗಳಲ್ಲಿ ಮರಾಠ ಮತ್ತು ಮರಾಠಿಗರ ಬಗ್ಗೆ ಪ್ರಸ್ತಾಪವಿದ್ದರೂ ಸಹ ಉತ್ತರ ಕನ್ನಡದ ಕುಂಬ್ರಿ ಮರಾಠಿ ಸಮುದಾಯಕ್ಕೆ ಹೋಲಿಕೆ ಕಂಡು ಬರುವುದಿಲ್ಲ.

ಉತ್ತರ ಕನ್ನಡ ಜಿಲ್ಲೆಯ ರಂಗಭೂಮಿಯ ಕುರಿತು ಅಧ್ಯಯನ ಮಾಡಿದ ಡಾ. ಶ್ರೀಪಾದ ಭಟ್‌ರವರು ತಮ್ಮ ಪಿಹೆಚ್‌ಡಿ ಮಹಾಪ್ರಬಂಧದಲ್ಲಿ ಕುಂಬ್ರಿ ಮರಾಠಿಗರ ಕಲಾಪ್ರಕಾರಗಳಲ್ಲಿ ಒಂದಾದ 'ಕೋಲು ಕುಣಿತ'ದ ಬಗ್ಗೆ ವಿವರಿಸಿದ್ದಾರೆ. ಈ ವಿವರಣೆ ಕುಂಬ್ರಿ ಮರಾಠಿಗರ ಬದುಕನ್ನು ವಿವರಿಸುವುದಿಲ್ಲ. ಜಿಲ್ಲೆಯ ಮುಕ್ರಿ ಸಮುದಾಯದ ಕುರಿತು ಡಾ.ಶ್ರೀಪಾದ ಶೆಟ್ಟಿಯವರು, ನಾಡವರ ಕುರಿತು ಡಾ.ಎನ್.ಆರ್ ನಾಯಕ್ ಅವರು, ಗೊಂಡರ ಕುರಿತು ಡಾ.ಝುಮಿರುಲ್ಲಾ ಶರಿಫ್ ಅವರು, ಜಿಲ್ಲೆಯ ಜಾನಪದ ಕಥೆಗಳ ಕುರಿತು ಡಾ.ಎಲ್ ಆರ್ ಹೆಗಡೆಯವರು, ಕುಣಬಿಯರ ಕುರಿತು ಡಾ. ಹಿ.ಚಿ ಬೋರಲಿಂಗಯ್ಯ ಅವರು ಹಾಗೂ ಹಾಲಕ್ಕಿ ಒಕ್ಕಲಿಗರ

ಕುರಿತು ಶ್ರೀ ವಿಷ್ಣು ನಾಯಕ್ ಹಾಗೂ ಡಾ.ಎನ್ ಆರ್ ನಾಯಕ್‌ರವರು ಬರೆದ ಬರಹಗಳಲ್ಲಿ ಕುಮರಿ ಮರಾಠಿಗರ ಬಗ್ಗೆ ಪ್ರಸ್ತಾಪಗಳಿರುತ್ತವೆ. ಆದರೆ ಎಲ್ಲಿಯೂ ಈ ಸಮುದಾಯದ ಕುರಿತು ಅಧಿಕೃತ ದಾಖಲೆಗಳಿರುವ ಬಗ್ಗೆ ಮತ್ತು ಅಧ್ಯಯನಕ್ಕೊಳಪಟ್ಟ ಬಗ್ಗೆ ಮಾಹಿತಿಗಳಿಲ್ಲ. ಕನ್ನಡ ವಿಶ್ವವಿದ್ಯಾಲಯ ಪ್ರಕಟ ಪಡಿಸಿದ ಬುಡಕಟ್ಟು ಅಧ್ಯಯನ ಮಾಲಿಕೆಗಳು ಹಾಗೂ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿದ ಉಪ ಸಂಸ್ಕೃತಿ ಅಧ್ಯಯನ ಮಾಲಿಕೆಗಳಲ್ಲೂ ಸಹ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಬಗ್ಗೆ ವಿವರಣೆಗಳು ಲಭ್ಯವಿಲ್ಲ.

ಮುಂದುವರೆದು ವಸಾಹತುಶಾಹಿ ಕಾಲಘಟ್ಟದಿಂದ ಈವರೆಗಿನ ಮಾನವ ಶಾಸ್ತ್ರೀಯ ಅಧ್ಯಯನಗಳಲ್ಲಿ 1908 ರ ಹೊತ್ತಿಗೆ ಎಡ್ಗರ್ ಥರ್ಸ್ಟನ್‌ರ 'ದ ಕಾಸ್ಟ್ ಎಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ' ಮತ್ತು 'ಎಥ್ನೋಗ್ರಾಫಿಕ್ ಸ್ಟಡೀಸ್', 1879ರ ಹೊತ್ತಿಗೆ ಪ್ರಕಟವಾದ ಶೆರ್ರಿಂಗ್‌ರ 'ದ ಹಿಂದೂ ಕಾಸ್ಟ್ ಆ್ಯಂಡ್ ಟ್ರೈಬ್ಸ್', 1898 ರ ಹೊತ್ತಿಗೆ ಪ್ರಕಟವಾದ ಫ್ರಾನ್ಸಿಸ್ ಬುಕಾನಿನ್‌ರ 'ದ ಮಲಬಾರ್ ಟು ಮೈಸೂರ್' ಕೃತಿಗಳಲ್ಲಿ ಕುಮರಿ ಮರಾಠಿಗರ ಬಗ್ಗೆ ಇರುವ ಪ್ರಸ್ತಾವನೆಗಳನ್ನು ಪರಿಶೀಲಿಸಲಾಗಿದೆ.[9] ಈ ಹಿನ್ನೆಲೆಯಲ್ಲಿ ಕುಂಬ್ರಿ ಮರಾಠಿ ಸಮುದಾಯದ ಕುರಿತು ದಾಖಲೆಗಳನ್ನು, ಸಾಹಿತ್ಯಿಕ ಹಾಗೂ ಚಾರಿತ್ರಿಕ ವಿವರಗಳನ್ನು ಪರಿಶೀಲಿಸಲಾಗಿ ಈವರೆಗೂ ಜಿಲ್ಲೆಯಲ್ಲಿರುವ 'ಕುಂಬ್ರಿ ಮರಾಠಿ' ಸಮುದಾಯದ ಕುರಿತು ಯಾವುದೇ ಅಂತರ್‌ಶಿಸ್ತೀಯ ಅಧ್ಯಯನಗಳಾದ ಬಗ್ಗೆ ಮಾಹಿತಿಗಳಿರುವುದಿಲ್ಲ.

ವಸಾಹತು ಕಾಲಘಟ್ಟದಲ್ಲಿ Ethnographic Survey of Indiaದ ಭಾಗವಾಗಿ ಎಂಥೋವನ್ ಉತ್ತರ ಕನ್ನಡ ಜಿಲ್ಲೆ ಮತ್ತು ಬಾಂಬೆ ಪ್ರಾಂತ್ಯದ ಸಮುದಾಯಗಳನ್ನು ಅಧ್ಯಯನ ಮಾಡಲು ಪ್ರಯತ್ನಿಸಿದ್ದಾನೆ. ಈತ ಉತ್ತರ ಕನ್ನಡ ಜಿಲ್ಲೆ ಕುರಿತು ಕೇವಲ ಮೇಲ್‌ಸ್ತರದ ಮಾಹಿತಿಗಳನ್ನು ಕಲೆಹಾಕಿರುವುದು ಮಾತ್ರ ಕಂಡುಬರುತ್ತದೆ. ಕಂಪನಿ ಆಡಳಿತ ನಡೆಸಿದ ಈ ಸರ್ವೇ ವಸಾಹತು ರಾಜಕಾರಣದ ಅಗತ್ಯಗಳಿಗೆ ಅನುಗುಣವಾಗಿತ್ತು. ಆದರೆ ಸರಿ ಸುಮಾರು ಇದೇ ಸಂದರ್ಭದಲ್ಲಿ ದಿನಕರ ದೇಸಾಯಿಯವರು 'Aboriginals of North Canara District'ಎಂಬ ಪುಸ್ತಕವನ್ನು ಪ್ರಕಟಿಸಿದ್ದಾರೆ. ಈ ಪುಸ್ತಕವು ಉತ್ತರ ಕನ್ನಡ ಜಿಲ್ಲೆಯ ಮೂಲನಿವಾಸಿಗಳ ಕುರಿತು ಅಮೂಲ್ಯ ಮಾಹಿತಿಗಳನ್ನು ನೀಡುತ್ತದೆ. ವಸಾಹತು ಕಾಲಘಟ್ಟದ ನಂತರ ಎಲ್.ಆರ್. ಹೆಗಡೆ ಎನ್.ಆರ್. ನಾಯಕ್ ಮತ್ತು ಎಲ್.ಜಿ. ಭಟ್‌ರವರು ಉತ್ತರ ಕನ್ನಡದ ಹಲವು ಸಮುದಾಯಗಳ ಮೌಖಿಕ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಸಂಗ್ರಹಿಸಿ ಸಂಪಾದಿಸಿ ಪ್ರಕಟಿಸಿದ್ದಾರೆ.

- ಉತ್ತರ ಕನ್ನಡದ ಹಲವು ಸಮುದಾಯಗಳ ಕುರಿತು ಆರ್.ಇ. ಎಂಥೋವನ್‌ರವರ 'ದಿ ಟ್ರೈಬ್ಸ್ ಅಂಡ್ ಕ್ಯಾಸ್ಟ್ ಆಫ್ ಬಾಂಬೆ' (1975) ಎಂಬ ಗ್ರಂಥವನ್ನು ಪ್ರಕಟಿಸಲಾಗಿದೆ. ಉತ್ತರ ಕನ್ನಡದ ಹಲವು ಸಮುದಾಯಗಳ ಜೀವನಶೈಲಿ, ಜೀವನ ವಿಧಾನಗಳ ಸ್ಥೂಲ ಪರಿಚಯವಿದೆ.

- ಬಾಂಬೆ ಗೆಝೇಟಿಯರ್‌ನಲ್ಲಿ ಉತ್ತರ ಕನ್ನಡದ ಹಲವು ಸಮುದಾಯಗಳ ಕುಲಪಂಚಾಯ್ತಿ, ಕುಲದೈವ, ವಿವಾಹ, ಹುಟ್ಟು, ಸಾವು, ರೂಢಿ, ಸಂಪ್ರದಾಯಗಳನ್ನು ಅವರ ಉಡುಗೆ-ತೊಡುಗೆ, ಊಟೋಪಚಾರ, ಸಾಮಾಜಿಕ, ಆರ್ಥಿಕ, ಧಾರ್ಮಿಕ ವಿಚಾರಗಳ ಕುರಿತು ಸಾಕಷ್ಟು ತಿಳುವಳಿಕೆಯನ್ನು ನೀಡಲಾಗಿದೆ.

- 'ಕರ್ನಾಟಕ ಸ್ಟೇಟ್ ಗೆಝೇಟಿಯರ್ ಉತ್ತರ ಕನ್ನಡ ಜಿಲ್ಲೆ' ಎಂಬ ಗ್ರಂಥದಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿನ ಸಮುದಾಯಗಳ ಕಿರು ಪರಿಚಯವನ್ನು ನೀಡಲಾಗಿದೆ.

- ಗೆಝೇಟಿಯರ್ ಮುಂಬಯಿ ಇಲಾಖೆಗೆ ಸೇರಿದ 'ಕರ್ನಾಟಕ ಭಾಗದ್ದು ಅಥವಾ ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳು' ಸಹಿತ ಎಂಬ ಗ್ರಂಥದಲ್ಲೂ ಉತ್ತರ ಕನ್ನಡದ ಹಲವು ಸಮುದಾಯಗಳ ಅತ್ಯಂತ ಆದಿಮ ಮಾಹಿತಿಗಳನ್ನು ನೀಡಲಾಗಿದೆ.

- ಗೊ.ರು. ಚನ್ನಬಸಪ್ಪನವರ "ಕರ್ನಾಟಕ ಜನಪದ ಕಲೆಗಳು" 1977, ಎಂಬ ಗ್ರಂಥದಲ್ಲಿ ಕರ್ನಾಟಕದ ಸಮುದಾಯಗಳ ಜಾನಪದ ಕಲೆಗಳ ಬಗ್ಗೆ ಸಾಕಷ್ಟು ವಿವರಿಸಲಾಗಿದೆ. ಅದರಲ್ಲಿ ಉತ್ತರ ಕನ್ನಡದ ಹಲವು ಸಮುದಾಯಗಳ ಜಾನಪದ ಕಲೆಗಳ ಕುರಿತು ವಿವರವಾದ ಮಾಹಿತಿ ಇದೆ.

- ಟಿ.ಕೆ. ಮಹಮೂದ್ ಸಂಪಾದಿಸಿರುವ 'ಉತ್ತರ ಕನ್ನಡ ದರ್ಶನ'(1986) ಎಂಬ ಪುಸ್ತಕವು ಇಡಿ ಉತ್ತರ ಕನ್ನಡ ಜಿಲ್ಲೆಯ ಚಾರಿತ್ರಿಕ ಸಂಗತಿಗಳನ್ನು ತಿಳಿಸುತ್ತಾ, ಉತ್ತರ ಕನ್ನಡದ ವಿವಿಧ ಜನಾಂಗಗಳು ಎಂಬ ಲೇಖನದಲ್ಲಿ ಉತ್ತರ ಕನ್ನಡ ಜಿಲ್ಲೆಯ ಸಮುದಾಯಗಳನ್ನು ವಿಶ್ಲೇಷಿಸಲಾಗಿದೆ.

- ಗೋಪಾಲಕೃಷ್ಣ ಪಿ. ನಾಯಕರವರ 'ಉತ್ತರ ಕನ್ನಡ ದರ್ಶನ' (1997) ಎಂಬ ಪುಸ್ತಕದಲ್ಲಿ ಉತ್ತರ ಕನ್ನಡ ಜಿಲ್ಲೆಯ ಹಲವು ಆದಿವಾಸಿ ಸಮುದಾಯಗಳು ವಾಸಿಸುವ ಕೊಪ್ಪಗಳ ಕುರಿತು ಅಲ್ಲಲ್ಲಿ ಚರ್ಚಿಸಲಾಗಿದೆ.

- ಪ್ರೊ ಎಚ್.ಜೆ. ಲಕ್ಕಪ್ಪಗೌಡ ಅವರು ಪ್ರಧಾನ ಸಂಪಾದಕರಾಗಿರುವ 'ಕರ್ನಾಟಕ ಬುಡಕಟ್ಟುಗಳು' ಸಂಪುಟ–1 ಮತ್ತು ಸಂಪುಟ–2ರಲ್ಲಿ (1998) ಉತ್ತರ ಕನ್ನಡ ಜಿಲ್ಲೆಯ ಸಮುದಾಯಗಳ ಕುರಿತ ಸಂಕ್ಷಿಪ್ತ ಬರಹಗಳಿವೆ.

- ಬಾಂಬೆ ಗೆಜೆಟೀಯರ್ – 'ಕರ್ನಾಟಕ ಭಾಗದ್ದು ಅಥವಾ ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳು' ಭಾಗ–13 ಎಂಬ ಗ್ರಂಥದಲ್ಲಿ 'ಕುಣಬಿ ಸಮುದಾಯ ನೆಲೆಸಿರುವ ತಾಲೂಕು, ಅವರ ಜನಸಂಖ್ಯೆಗಳ ಬಗ್ಗೆ ಕುರಿತು ವಿವರಿಸಲಾಗಿದೆ', 1893 (ಪುಟ ಸಂಖ್ಯೆ 438–441).

- ದಕ್ಷಿಣ ಭಾರತದ ಜಾತಿ ಮತ್ತು ಬುಡಕಟ್ಟುಗಳನ್ನು ಅಧ್ಯಯನ ಮಾಡಿದ ಪ್ರಮುಖರಲ್ಲಿ ಥರ್ಸಟನ್ ಒಬ್ಬ. Thurstonರವರು 'ದಕ್ಷಿಣ ಭಾರತದಲ್ಲಿ ಬುಡಕಟ್ಟು' (Caste and tribes of South India)ಗಳು (1909) ಅಧ್ಯಯನದಲ್ಲಿ ಕುಣಬಿಯರನ್ನು ಬುಡಕಟ್ಟು ಎಂದು ಮೊಟ್ಟಮೊದಲು ಗುರುತಿಸಿ ತನ್ನ ಕೃತಿಯಲ್ಲಿ ದಾಖಲಿಸಿದ್ದಾರೆ. ಸುಮಾರು 100 ವರ್ಷಗಳ ಹಿಂದೆಯೆ ಕುಣಬಿಯರ ವಿವಿಧ ಆಚರಣೆಗಳು, ಸಂಪ್ರದಾಯಗಳ ವಿವರಣೆ ಮತ್ತು ವಿಧಾನಗಳ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ದಕ್ಷಿಣ ಭಾರತದಲ್ಲಿರುವ ಅನೇಕ ಬುಡಕಟ್ಟು, ಜಾತಿಗಳ ಬಗ್ಗೆ ಥರ್ಸಟನ್‌ರ ಕೃತಿ ಸಂಕ್ಷಿಪ್ತ ಮಾಹಿತಿ ಕೊಡುತ್ತದೆ. ಆದರೆ ಅವರ ಸಮಸ್ಯೆಗಳು, ಬದಲಾವಣೆಗಳು, ಅಭಿವೃದ್ಧಿ ಬಗ್ಗೆ ಏನೂ ಹೇಳುವದಿಲ್ಲ(ಪು. 34) ಅಲ್ಲದೆ ಕುಂಬ್ರಿ ಮರಾಠಿಗರ ಕುರಿತು ಪ್ರಸ್ಥಾಪಿಸಿದ್ದು ಇರುವುದಿಲ್ಲ.

- ನಂಜುಂಡಯ್ಯ ಅನಂತ್ ಕೃಷ್ಣ ಅಯ್ಯರ (1928) 'The Mysore Tribes and Caste' (Vol. II) ಅಧ್ಯಯನದಲ್ಲಿ ಕುಣಬಿಗಳಲ್ಲಿ ಒಂದು ಉಪವಿಭಾಗವಾದ 'ಅರೆ ಕುಣಬಿ' (ಮರಾಠಾ ಕುಣಬಿ ಎಂದು ನಮೂದಿಸಲ್ಪಟ್ಟಿರುವವರು)ಗಳ ಬಗ್ಗೆ ಸಂಕ್ಷಿಪ್ತ ಅಧ್ಯಯನ ಮಾಡಿದ್ದಾರೆ. ಬುಡಕಟ್ಟಿನ ಆಂತರಿಕ ಸಂರಚನೆ, ವಿವಾಹ, ವಿಧಿ–ವಿಷೇಧಗಳು, ಬುಡಕಟ್ಟು ಸಮಿತಿ, ಧರ್ಮ, ಕುಮ್ರಿ ಬೇಸಾಯ, ಆಹಾರ, ಉಡುಗೆ, ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಅರೆ ಕುಣಬಿಗಳ ಜೀವನ ವಿಧಾನವನ್ನು ಅಭ್ಯಸಿಸಿದ್ದಾರೆ.

- 1954ರಲ್ಲಿ ಎ.ಎ.ಡಿ. ಲೂಯಿಸ್ ರವರು 'ಟ್ರೈಬ್ಸ್ ಆಫ್ ಮೈಸೂರ್'ನಲ್ಲಿ ಕುಣಬಿಯರ ಕುರಿತು ವಿವರಣೆ ನೀಡಿದ್ದಾರೆ. ಇವರ ಪ್ರಕಾರ ಉತ್ತರ ಕನ್ನಡ ಜಿಲ್ಲೆಯ ಭಟ್ಕಳ, ಕುಮಟಾ, ಅಂಕೋಲಾ, ಕಾರವಾರ ಮತ್ತು ಸೂಪಾ ತಾಲೂಕುಗಳಲ್ಲಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು, ಕಾರ್ಕಳ, ಉಡುಪಿ, ಕುಂದಾಪುರ ತಾಲೂಕುಗಳಲ್ಲಿ ನಾವು ಕುಣಬಿಗಳನ್ನು ಕಾಣುತ್ತೇವೆ. ನೆರೆಯ ಜಿಲ್ಲೆಗಳಲ್ಲಿಯೂ ಕಾಣುತ್ತೇವೆ.

ಮೇಲ್ಕಂಡ ಬಹುತೇಕ ಎಲ್ಲಾ ಗ್ರಂಥಗಳಲ್ಲಿ ಅವುಗಳ ಕಾಲ ಮತ್ತು ಸಂದರ್ಭಗಳ ಮಿತಿಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಸಮುದಾಯಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ಇವು ಪ್ರಸ್ತುತ ನನ್ನ ಅಧ್ಯಯನಕ್ಕೆ ವಿಪುಲ ತಿಳುವಳಿಕೆಯನ್ನು ನೀಡಿವೆ. ಹಾಗೆಯೇ ನನ್ನ ಸಂಶೋಧನೆಗೆ ದಾರಿದೀಪಗಳಾಗಿವೆ.

## ಮಹಾಪ್ರಬಂಧದ ಅಧ್ಯಾಯಗಳು

### ಅಧ್ಯಾಯ 1: ಅಧ್ಯಯನದ ಉದ್ದೇಶ ಮತ್ತು ತಾತ್ವಿಕತೆ

ಮೊದಲ ಅಧ್ಯಾಯವು ಒಟ್ಟಾರೆ ಮಹಾಪ್ರಬಂಧದ ತಾತ್ವಿಕ ನಿಲುವನ್ನು ಸ್ಥೂಲವಾಗಿ ವಿವರಿಸುತ್ತದೆ. ಕುಂಬ್ರಿ ಮರಾಠಿ ಸಮುದಾಯದ ಕುರಿತು ನಡೆದಿರುವ ಅಧ್ಯಯನಗಳು ಕಡಿಮೆ. ಆದರೆ ಉತ್ತರ ಕನ್ನಡ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಕುಂಬ್ರಿ ಮರಾಠಿ ಸಮುದಾಯ ಕುರಿತಾಗಿ ಇಲ್ಲಿಯವರೆಗೂ ಅಂತಹ ಮಹತ್ವದ ಅಧ್ಯಯನಗಳು ನಡೆದಿಲ್ಲವೆಂದೆ ಹೇಳಬಹುದು. ಅಂತಹ ಕೊರತೆಯನ್ನು ಈ ಅಧ್ಯಯನವು ಅಲ್ಪಮಟ್ಟಿಗಾದರೂ ಪೂರೈಸಲಿದೆ ಎಂದು ಹೇಳಬಹುದು.

ಇಲ್ಲಿಯವರೆಗೆ ಕುಂಬ್ರಿ ಮರಾಠಿಯರನ್ನು ಕುರಿತು ನಡೆದಿರುವ ಚರ್ಚೆಗಳನ್ನು ಗಮನದಲ್ಲಿರಿಸಿಕೊಂಡು ಪ್ರಸ್ತುತ ಅಧ್ಯಯನದ ಸೈದ್ಧಾಂತಿಕ ನಿಲುವುಗಳನ್ನು ಮೊದಲ ಅಧ್ಯಾಯದಲ್ಲಿ ಸ್ಪಷ್ಟಪಡಿಸಲಾಗಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಪ್ರಾದೇಶಿಕ ವಿವರಗಳನ್ನು ಮತ್ತು ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಈ ಮಹಾಪ್ರಬಂಧ ಬರೆಯಲು ಅನುಸರಿಸಿದ ಅಧ್ಯಯನದ ವಿಧಾನಗಳನ್ನು ಇಲ್ಲಿ ವಿವರಿಸಲಾಗಿದೆ. ಈ ಅಧ್ಯಾಯದ ಕೊನೆಯಲ್ಲಿ ಕುಂಬ್ರಿ ಮರಾಠಿ ಸಮುದಾಯ ಕುರಿತು ಈ ವರೆಗೆ ನಡೆದ ಅಧ್ಯಯನಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

### ಅಧ್ಯಾಯ 2: ಉತ್ತರ ಕನ್ನಡ ಜಿಲ್ಲೆ ಮತ್ತು ಕುಂಬ್ರಿ ಮರಾಠಿಗರು

ಕುಂಬ್ರಿ ಮರಾಠಿಗರೆಂದರೆ ಯಾರು? ಕುಂಬ್ರಿ ಮರಾಠಿ ಪದದ ನಿಷ್ಪತ್ತಿ, ವಲಸೆ ಮತ್ತು ಈ ಸಮುದಾಯದ ಮೂಲದ ಕುರಿತು ವಿವರಿಸಲು ಪ್ರಯತ್ನಿಸಲಾಗಿದೆ. ಪ್ರಸ್ತುತ ಅಧ್ಯಾಯವು ಈ ಮಹಾಪ್ರಬಂಧಕ್ಕೆ ಒಂದು ಪ್ರವೇಶಿಕೆಯನ್ನು ಒದಗಿಸುತ್ತದೆ. ಇದರಲ್ಲಿ ಉತ್ತರ ಕನ್ನಡ ಜಿಲ್ಲೆಯ ಪ್ರದೇಶಗಳ ಭೌಗೋಳಿಕ ಮತ್ತು ಅದರ ಚಾರಿತ್ರಿಕತೆಯನ್ನು ಸ್ಥೂಲವಾಗಿ ವಿವರಿಸಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳ ಸ್ಥೂಲ ಪರಿಚಯ ಹಾಗೂ ಉತ್ತರ ಕನ್ನಡ ಜಿಲ್ಲೆಯ ಪರಿಶಿಷ್ಟ ಜಾತಿ, ಸಮುದಾಯದ ಅಂಕಿ-ಅಂಶಗಳ ವಿವರಗಳನ್ನು ನೀಡಲಾಗಿದೆ.

ಕುಂಬ್ರಿ ಮರಾಠಿ ಸಮುದಾಯದ ಚಾರಿತ್ರಿಕ ರೂಪಾಂತರಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಕುಂಬ್ರಿ ಮರಾಠಿ ಮೂಲ, ಭಾರತದ ವಿವಿಧ ರಾಜ್ಯಗಳ ಕುಂಬ್ರಿ ಮರಾಠಿಗರ ಅವಲೋಕನ, ಕರ್ನಾಟಕದ ಕುಂಬ್ರಿ ಮರಾಠಿಗರ ತೌಲನಿಕ ಚರ್ಚೆಯನ್ನು ಮಾಡಲಾಗಿದೆ. ಹಾಗೆಯೇ ಕುಂಬ್ರಿ ಮರಾಠಿ ಸಮುದಾಯದ ಸಾಂಸ್ಕೃತಿಕ ಜಗತ್ತನ್ನು ಸ್ಥೂಲವಾಗಿ ವಿವರಿಸಲು ಪ್ರಯತ್ನಿಸಲಾಗಿದೆ.

**ಅಧ್ಯಾಯ 3: ಕುಂಬ್ರಿ ಮರಾಠಿಗರ ಸಾಮಾಜಿಕ ಸ್ಥಿತಿಗತಿಗಳು:**

ಪ್ರಸ್ತುತ ಮಹಾಪ್ರಬಂಧದ ಇದು ಬಹುಮುಖ್ಯವಾದ ಅಧ್ಯಾಯವಾಗಿದೆ. ಈ ಅಧ್ಯಾಯದಲ್ಲಿ ಕುಂಬ್ರಿ ಮರಾಠಿಗರ ಸಾಮಾಜಿಕ ಸ್ಥಿತಿಗತಿಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಕುಂಬ್ರಿ ಮರಾಠಿಗರ ಕುಟುಂಬ ವ್ಯವಸ್ಥೆ ಕುಂಬ್ರಿ ಮರಾಠಿಗರಲ್ಲಿ ಲಿಂಗಸಂಬಂಧಗಳು, ಬಳಿ ಕುಲ ಮತ್ತು ಒಳಾಡಳಿತ ಅನ್ಯ ಸಮುದಾಯಗಳ ಜೊತೆಗಿನ ಕೊಡುಕೊಳ್ಳುವಿಕೆ ಸಾಮಾಜಿಕ ಶ್ರೇಣೀಕರಣ, ವಸತಿ, ಉಪಭಾಷೆ, ಆಹಾರ ಪ್ರವೃತ್ತಿಗಳು, ಆರೋಗ್ಯ, ಸಾಮಾಜಿಕ, ಉಡುಗೆ–ತೊಡುಗೆ, ಬಂಧುತ್ವ, ಮದುವೆ, ಮುಂತಾದವುಗಳಿಗೆ ಸಂಬಂಧಿಸಿದಂತೆ ಕುಂಬ್ರಿ ಮರಾಠಿಗರ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನವನ್ನು ವಿವೇಚಿಸುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕುಂಬ್ರಿ ಮರಾಠಿ ಸಮುದಾಯದ 'ಮನೆವಾರು(Household Survey) ಸಮೀಕ್ಷೆ' ಮತ್ತು 'ವ್ಯಕ್ತಿಗಳ(Case Study) ಸಂದರ್ಶನ'ಗಳನ್ನು ಆಧರಿಸಿದ ವಾಸ್ತವದ ತಿಳುವಳಿಕೆಯನ್ನು ಮುಖ್ಯವಾಗಿಟ್ಟುಕೊಂಡು ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸ್ಥಿತಿಗತಿಯನ್ನು ವಿವರಿಸಲಾಗಿದೆ. ಕುಂಬ್ರಿ ಮರಾಠಿ ಸಮುದಾಯದ ಕೆಲವು ನಿರ್ದಿಷ್ಟ ಸಾಮಾಜಿಕ ಸ್ಥಿತಿಗತಿಗಳಲ್ಲಿ ಉಂಟಾಗಿರುವ ಬದಲಾವಣೆಗಳನ್ನು ಸಹ ಚರ್ಚಿಸಲಾಗಿದೆ.

**ಅಧ್ಯಾಯ 4: ಕುಂಬ್ರಿ ಮರಾಠಿಗರ ಆರ್ಥಿಕ ಸ್ಥಿತಿಗತಿಗಳು**

ನಾಲ್ಕನೆಯ ಅಧ್ಯಾಯದಲ್ಲಿ ಕುಣಬಿ ಸಮುದಾಯದ ಆರ್ಥಿಕ ಸ್ಥಿತಿಗತಿಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಇಲ್ಲಿಯೂ ಸಹ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕುಣಬಿಗಳ ವಿಭಿನ್ನ ಪ್ರದೇಶಗಳಲ್ಲಿನ 'ಮನೆವಾರು(Household Survey)ಸಮೀಕ್ಷೆ' ಮತ್ತು 'ವ್ಯಕ್ತಿಗಳ(Case Study)ಸಂದರ್ಶನ' ಅಂಕಿ–ಅಂಶಗಳನ್ನು ಮತ್ತು ವಿವರಗಳನ್ನು ಮುಖ್ಯವಾಗಿಟ್ಟು ಕೊಂಡು ಈ ಅಧ್ಯಯನ ಮಾಡಲಾಗಿದೆ.

ಕುಂಬ್ರಿ ಮರಾಠಿಗರ ಮೂಲ ವೃತ್ತಿಗಳು ಯಾವುವು? ಮೂಲ ವೃತ್ತಿಗಳಿಂದ ಆ ಸಮುದಾಯ ದೂರ ಉಳಿಯಲು ಕಾರಣಗಳೇನು? ಇಂದಿಗೂ ಮೂಲ ವೃತ್ತಿಗಳನ್ನು

ಅನುಸರಿಸುತ್ತಿರುವ ಕುಟುಂಬಗಳು ಎಷ್ಟಿವೆ? ಪ್ರಸ್ತುತ ದಿನಗಳಲ್ಲಿ ಜೀವನಾಧಾರಕ್ಕಾಗಿ ಆಯ್ಕೆ ಮಾಡಿಕೊಂಡ ವೃತ್ತಿಗಳು ಯಾವುವು? ಹಾಗೂ ಒಟ್ಟು ಸಮುದಾಯಗಳಲ್ಲಿ ಆರ್ಥಿಕವಾಗಿ ಮುಂದುವರೆದ ಮತ್ತು ಹಿಂದುಳಿದ ಕುಟುಂಬಗಳೆಷ್ಟು? ಎಂಬುದನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಜೊತೆಗೆ ಅವರ ಮನೆಗಳ ಸ್ವರೂಪ, ಶೈಕ್ಷಣಿಕ ಸ್ಥಾನಮಾನ, ವರ್ತಮಾನ ಸ್ಥಿತಿಗತಿ ಕುರಿತು ಚರ್ಚಿಸಲಾಗಿದೆ.

## ಅಧ್ಯಾಯ 5: ಕುಂಬ್ರಿ ಮರಾಠಿಗರ ಸಾಂಸ್ಕೃತಿಕ ಸ್ಥಿತಿಗತಿ ಮತ್ತು ವರ್ತಮಾನದ ಸವಾಲುಗಳು

ಪ್ರಸ್ತುತ ಅಧ್ಯಾಯದಲ್ಲಿ ಕುಂಬ್ರಿ ಮರಾಠಿಗರ ಸಾಂಸ್ಕೃತಿಕ ಬದುಕನ್ನು ವಿವೇಚಿಸಲು ಪ್ರಯತ್ನಿಸಲಾಗಿದೆ. ಕುಂಬ್ರಿ ಮರಾಠಿಗರ ಜೀವನಾವರ್ತನ ಆಚರಣೆಗಳು, ಕುಂಬ್ರಿ ಮರಾಠಿಗರ ವಾರ್ಷಿಕಾವರ್ತನ ಆಚರಣೆಗಳ ವಿವರಗಳನ್ನು ನೀಡಲಾಗಿದೆ. ಜೊತೆಗೆ, ಸಮುದಾಯಗಳ ಜೊತೆಗಿನ ಕೊಡುಕೊಳ್ಳುವಿಕೆ  ಸಾಮಾಜಿಕ ಶ್ರೇಣೀಕರಣ, ವಸತಿ, ಉಪಭಾಷೆ, ಆಹಾರ ಪ್ರವೃತ್ತಿಗಳು, ಆರೋಗ್ಯ, ಸಾಮಾಜಿಕ, ಉಡುಗೆ–ತೊಡುಗೆ, ಬಂಧುತ್ವ ಮದುವೆ, ಮುಂತಾದವುಗಳಿಗೆ ಸಂಬಂಧಿಸಿದಂತೆ ಕುಂಬ್ರಿ ಮರಾಠಿಗರ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನವನ್ನು ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ಈ ಅಧ್ಯಾಯದ ಎರಡನೇ ಭಾಗದಲ್ಲಿ ಕುಂಬ್ರಿ ಮರಾಠಿಗರ ವರ್ತಮಾನದ ಸ್ಥಿತಿಗತಿಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಕುಂಬ್ರಿ ಮರಾಠಿ ಸಮುದಾಯದ ರಾಜಕೀಯ ಸ್ಥಿತಿಗತಿಗಳನ್ನು ಚರ್ಚಿಸಲಾಗಿದೆ. ಕುಂಬ್ರಿ ಮರಾಠಿ ಸಮುದಾಯದ ರಾಜಕೀಯ ತಿಳುವಳಿಕೆ ಮತ್ತು ಪಾಲ್ಗೊಳ್ಳುವಿಕೆ, ಭೂಹೋರಾಟಗಳು, ಅರಣ್ಯ ಹಕ್ಕುಗಳ ಕುರಿತ ಹೋರಾಟಗಳು, ಮೀಸಲಾತಿ ಕುರಿತ ಚಳುವಳಿ, ಕುಂಬ್ರಿ ಮರಾಠಿ ಸಮುದಾಯದ ಸಂಘಟನೆಗಳು, ಮುಂತಾದವುಗಳನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಅರಣ್ಯದ ಉಪಉತ್ಪನ್ನ ಮತ್ತು ಕುಂಬ್ರಿ ಮರಾಠಿಗರ ಪಾರಂಪರಿಕ ಹಕ್ಕುಗಳು ಹಾಗೂ ಅರಣ್ಯ ಇಲಾಖೆಯ ಸರಕಾರಿ ಕಾನೂನುಗಳ ನಡುವಿನ ಸಂಘರ್ಷಾತ್ಮಕ ನಿಲುವುಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

## ಅಧ್ಯಾಯ 6: ವರ್ತಮಾನ ಮತ್ತು ಕುಂಬ್ರಿ ಮರಾಠಿಗರು

ಪ್ರಸ್ತುತ ಅಧ್ಯಾಯದಲ್ಲಿ ಕುಂಬ್ರಿ ಮರಾಠಿಗರ ವರ್ತಮಾನದ ಸ್ಥಿತಿಗತಿಗಳನ್ನು ವಿಶ್ಲೇಷಿಸಲಾಗಿದೆ. ಕುಂಬ್ರಿ ಮರಾಠಿಗರ ಆರ್ಥಿಕ ಸಂಕಷ್ಟಗಳು, ವಸತಿ ಸಮಸ್ಯೆ, ಆಧುನಿಕ ವೃತ್ತಿಗಳು ಮತ್ತು ನಿರುದ್ಯೋಗ, ಭೂಹೀನ ಕುಂಬ್ರಿ ಮರಾಠಿಗರ ಬವಣೆಗಳನ್ನು ವಿಶ್ಲೇಷಿಸಲಾಗಿದೆ. ಸರಕಾರಿ ಸೌಲಭ್ಯಗಳನ್ನು ಪಡೆಯದೇ ಇರುವ ಜನರ ನಿತ್ಯದ ಸಮಸ್ಯೆಗಳು, ಅನಿಶ್ಚಿತ ಆದಾಯದ

ಮೂಲಗಳು ಮತ್ತು ವರ್ತಮಾನದ ಸಮಸ್ಯೆಗಳನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

**ಸಮಾರೋಪ**

ಪ್ರಸ್ತುತ ಮಹಾಪ್ರಬಂಧದ ಸಾರರೂಪವನ್ನು ಇಲ್ಲಿ ನೀಡಲಾಗಿದೆ. ಜೊತೆಗೆ ಅಧ್ಯಯನದ ಫಲಿತಗಳು ಹಾಗೂ ಸಲಹೆಗಳನ್ನು ಸಮಾರೋಪದಲ್ಲಿ ನೀಡಲಾಗಿದೆ. ಹಾಗೆ ಅನುಬಂಧ ಒಂದರಲ್ಲಿ ಸರಕಾರದ ಹಾಗೂ ಇತರೆ ದಾಖಲೆ ಪತ್ರಗಳನ್ನು ಕೊಡಲಾಗಿದೆ. ತಿಳುವಳಿಕೆದಾರರ ಸೂಚಿ, ವ್ಯಕ್ತಿ ಅಧ್ಯಯನ ಪ್ರಶ್ನಾವಳಿ, ಪತ್ರಿಕಾ ವರದಿಗಳು, ಅಂಕಿಅಂಶಗಳ ಪಟ್ಟಿ, ರೇಖಾಚಿತ್ರಗಳು, ನಕ್ಷೆಗಳು, ಛಾಯಾಚಿತ್ರಗಳನ್ನು ಕೊಡಲಾಗಿದೆ. ಕೊನೆಯಲ್ಲಿ ಅಧ್ಯಯನಕ್ಕೆ ಪೂರಕ ಮಾಹಿತಿಗಳನ್ನು ಒದಗಿಸಿದ ಪರಾಮರ್ಶನ ಗ್ರಂಥಗಳ ವಿವರಗಳನ್ನು ನೀಡಲಾಗಿದೆ.

**ಅಡಿಟಿಪ್ಪಣಿಗಳು**

1. Kincaid C A, Rao Bahadue D B Parasnis, The History of Maratha People, Vol 1, Humpherey Milford, Oxford University Press, London, 1918
2. Ibid P45
3. Russel, R. V, Hiralal, Tribes and Castes of the Central, Provinces of India. Vol. p. 172. IV, Cosmo Pub. Delhi, 1916 (Reprint 1975)
4. Karve Irawati, Anthropometric Measurement in Karnataka and Orissa and a Comparison of these two Regions with Maharashtra. Journal of the Anthropological Society of Bombay, 8: 45-76. 1954.
5. ನಾವಡ ಎ ವಿ., ಒಂದು ಸೊಲ್ಲು ನೂರು ಸ್ವರ, ಕರ್ನಾಟಕ ಸಂಘ ಪುತ್ತೂರು, 1999
6. ಬೋರಲಿಂಗಯ್ಯ ಹಿ ಚಿ, ಕುಣಬಿಯರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2004
7. Singh K S, Peopleof Maharashtra, (3 Volume) Antropological Survey Of India, 1992
8. ಬಾಂಬೆ ಗೆಜೆಟೀಯರ್ – ಕರ್ನಾಟಕ ಭಾಗದ್ದು, ಪು. 438–441, 1985.
9. Edgar Thurston Castes and Tribes of South India' Vol. I P 34, 1909

# ಅಧ್ಯಾಯ: ಎರಡು

## ಉತ್ತರ ಕನ್ನಡ ಜಿಲ್ಲೆ ಮತ್ತು ಕುಂಬ್ರಿ ಮರಾಠಿಗರು

1. ಕುಂಬ್ರಿ ಮರಾಠಿಗರೆಂದರೆ ಯಾರು?
2. ಕುಂಬ್ರಿ ಮರಾಠಿಗರ ಭೌಗೋಳಿಕ ವಿವರಗಳು.
3. ಕುಂಬ್ರಿ ಮರಾಠಿ, ಕುಡುಬಿ ಮತ್ತು ಕುಣಬಿ ಸಮುದಾಗಳ ನಡುವಿನ ಸಾಮ್ಯತೆಗಳು
4. ಉತ್ತರ ಕನ್ನಡ ಜಿಲ್ಲೆಯ ಭೌಗೋಳಿಕ ವಿವರಗಳು.
5. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕುಂಬ್ರಿ ಮರಾಠಿಗರ ಕೊಪ್ಪಗಳು

## ಅಧ್ಯಾಯ: ಎರಡು

# ಉತ್ತರ ಕನ್ನಡ ಜಿಲ್ಲೆ ಮತ್ತು ಕುಂಬ್ರಿ ಮರಾಠಿಗರು

### 1. ಕುಂಬ್ರಿ ಮರಾಠಿಗರೆಂದರೆ ಯಾರು?

**ಪೀಠಿಕೆ**

ಪ್ರಸುತ ಅಧ್ಯಾಯದಲ್ಲಿ ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರೆಂದರೆ ಯಾರು? ಕುಂಬ್ರಿ ಮರಾಠಿ ಸಮುದಾಯದ ಭೌಗೋಳಿಕ ವಿವರ ಮತ್ತು ಉತ್ತರ ಕನ್ನಡ ಜಿಲ್ಲೆಯ ಭೌಗೋಳಿಕ ವಿವರಗಳನ್ನು ನೀಡಲಾಗಿದೆ. ಜೊತೆಗೆ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕುಂಬ್ರಿ ಮರಾಠಿ ಸಮುದಾಯದ ಕೊಪ್ಪಗಳ ವಿವರಗಳನ್ನು ನೀಡಲಾಗಿದೆ. ಕುಂಬ್ರಿ ಮರಾಠಿಗರು ಮೂಲತಃ ಕೊಂಕಣಿ, ಮರಾಠಿ ಮತ್ತು ಕನ್ನಡದ ಮಿಶ್ರಭಾಷಿಕ ಪ್ರದೇಶದಲ್ಲಿ ನಿರಂತರ ವಲಸೆ ಮಾಡುತ್ತ ಬಂದವರು. ಕಾಲಾನಂತರ ಗೋವಾ ಮತ್ತು ಮಹಾರಾಷ್ಟ್ರದ ಗಡಿಭಾಗದ ಜೋಯಿಡ ಮೂಲಕ ಕರ್ನಾಟಕವನ್ನು ಪ್ರವೇಶಿಸಿದ ಈ ಸಮುದಾಯ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ, ಶಿರಸಿ, ಕುಮಟಾ, ಅಂಕೋಲಾ, ಸಿದ್ದಾಪುರ, ಹೊನ್ನಾವರ ಹಾಗೂ ಭಟ್ಕಳ ತಾಲೂಕುಗಳಲ್ಲಿ ನೆಲೆಸಿದೆ. ಕುಂಬ್ರಿ ಮರಾಠಿ ಸಮುದಾಯವು ಸಹ ದಕ್ಷಿಣ ಭಾರತದ ಪ್ರಮುಖ ಬುಡಕಟ್ಟು ಸಮುದಾಯಗಳಲ್ಲಿ ಒಂದು. ಮೂಲತಃ ಪಶುಪಾಲಕರು, ಮತ್ತು ಪಾರಂಪರಿಕ ಕೃಷಿಕರೂ ಆದ ಕುಂಬ್ರಿ ಮರಾಠಿಗರು ದಕ್ಷಿಣ ಭಾರತದ ವಿಶಿಷ್ಟ ಜನವರ್ಗಕ್ಕೆ ಸೇರಿದವರು. ಇವರ ಪಶುಪಾಲನೆ ಮತ್ತು ಕುಮ್ರಿ ಬೇಸಾಯದ ಕುರಿತ ಅನೇಕ ವಿವರಗಳು ನಮ್ಮ ದೇಶದ ಆದಿಮ ಜನಸಮುದಾಯಗಳ ವಿಶಿಷ್ಟ ದುಡಿಮೆಯ ಕ್ರಮವನ್ನು ಚಾರಿತ್ರಿಕವಾಗಿ ಕಟ್ಟಿಕೊಡುತ್ತವೆ. ಇದರ ಜೊತೆಗೆ ದಕ್ಷಿಣ ಪ್ರಸ್ಥಭೂಮಿಯ ವಿಶಿಷ್ಟ ಮತ್ತು ಆದಿಮ ಕೃಷಿಯ ಚಹರೆಗಳು ಇನ್ನೂ ಈ ಸಮುದಾಯದಲ್ಲಿ ಆಚರಣೆಯಲ್ಲಿವೆ. ಇಂತಹ ಸಮುದಾಯಗಳು ತಮ್ಮ ದುಡಿಮೆಯ ಕ್ಷೇತ್ರವನ್ನು ನಿರ್ದಿಷ್ಟವಾಗಿ ಗುರುತಿಸಿಕೊಳ್ಳುವ ಕ್ರಮದಲ್ಲಿಯೇ ಆದಿಮ ಕೃಷಿ ಪದ್ಧತಿಯ ಕುರುಹುಗಳಿವೆ, ಕುಂಬ್ರಿ ಮರಾಠಿಗರಲ್ಲಿ ಆದಿಮ 'ಕುಮ್ರಿ' ಬೇಸಾಯ

ಪದ್ಧತಿ ಚಾರಿತ್ರಿಕವಾಗಿ ಇಂದಿಗೂ ಉಳಿದುಕೊಂಡು ಬಂದಿದೆ. ಕುಂಬ್ರಿ ಮರಾಠಿಗರ ಭೌಗೋಳಿಕ ವಿವರಗಳನ್ನೂ ಒಳಗೊಂಡಂತೆ, ಈ ಸಮುದಾಯದ ಹೆಸರಿನ ಪದ ನಿಷ್ಪತ್ತಿಯನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಕಳೆದ ಎರಡು ದಶಕಗಳಿಂದ ನಾನು ಕುಂಬ್ರಿ ಮರಾಠಿಗರ ಜೊತೆಗೆ ಒಡನಾಡಿದ ವಿವರಗಳು ಮತ್ತು ಈ ಅಧ್ಯಯನಕ್ಕೆ ಸಂಗ್ರಹಸಿದ ತಿಳುವಳಿಕೆಯನ್ನು ಬಳಸಿ ಈ ಅಧ್ಯಾಯವನ್ನು ಬರೆಯಲಾಗಿದೆ.

ಈ ಮೊದಲೇ ಹೇಳಿದಂತೆ ಕುಂಬ್ರಿ ಮರಾಠಿಗರು ಅಲೆಮಾರಿ ಪಶುಪಾಲಕರು ಮತ್ತು ಕುಮ್ರಿ ಬೇಸಾಯ ಪದ್ಧತಿಯನ್ನು ರೂಢಿಸಿಕೊಂಡು ಬಂದಿರುವ ವಲಸಿಗ ಸಮುದಾಯಕ್ಕೆ ಸೇರಿದವರು. 'ಕುಂಬ್ರಿ' ಎಂಬ ಪದವು 'ಕುಮ್ರಿ' ಎಂಬ ಪದದ ಸ್ಥಳೀಯ ಬಳಕೆಯ ರೂಪವಾಗಿದೆ. 'ಕುಮ್ರಿ' ಬೇಸಾಯ ಮಾಡುತ್ತ ಉತ್ತರ ಕನ್ನಡದ ಇಳಿಜಾರು ಕಣಿವೆಗಳಲ್ಲಿ ವಾಸಿಸುವ ಈ ಸಮುದಾಯ ಇಂದಿಗೂ ಜಿಲ್ಲೆಯ ಹಲವೆಡೆ ಕುಮ್ರಿ ಬೇಸಾಯ ಕ್ರಮವನ್ನು ಅನುಸರಿಸಿತ್ತಿದೆ. ಜನಾಂಗಿಕವಾಗಿ ಕುಂಬ್ರಿ ಮರಾಠಿಗರಿಗೆ ಸಂಬಂಧಸಿರುವ ಕುಣಬಿ, ಕುಡುಬಿ ಮತ್ತು ಮರಾಠಿ ನಾಯಕ ಸಮುದಾಯ ಗಳೂ ಸಹ ಕುಮ್ರಿ ಬೇಸಾಯಗರರು. ಈ ಸಮುದಾಯ ಕುಮ್ರಿ ಬೇಸಾಯ ಅನುಸರಿಸಿಕೊಂಡು ಬಂದ ಕಾರಣಕ್ಕೆ 'ಕುಮ್ರಿ ಮರಾಠಿ'ಗರು, 'ಕುಂಬ್ರಿ ಮರಾಠಿ'ಗರು ಎಂದು ಕರೆಯಲಾಗಿತ್ತದೆ. ಕುಂಬ್ರಿ ಮರಾಠಿಗರು ಚರಿತ್ರೆಯ ಯಾವುದೋ ಕಾಲಘಟ್ಟದಲ್ಲಿ ಕರ್ನಾಟಕಕ್ಕೆ ವಲಸೆ ಬಂದಿರಬಹುದಾದ ಒಂದು ಕೃಷಿಕ ಸಮುದಾಯ. ಆದರೆ ಪಶುಪಾಲನೆ ಮತ್ತು ಆಹಾರ ಸಂಗ್ರಹಣೆಗಳೂ ಸಹ ಈ ಸಮುದಾಯದ ಪ್ರಧಾನ ಆರ್ಥಿಕ ಅವಲಂಬನೆಗಳಾಗಿವೆ. ಆದರೆ ಕುಂಬ್ರಿ ಮರಾಠಿಗರು ಕಾಡಿನ ಕಣಿವೆಗಳಲ್ಲಿ ಆದಿಮ ಕೃಷಿ ಪದ್ಧತಿಯನ್ನು ಪ್ರಧಾನವಾಗಿ ಅವಲಂಬಿಸಿದ್ದ ಸಮುದಾಯವಾಗಿದೆ. ಕೆತ್ಲು ಬೇಸಾಯ, ಕುಮೇರು ಕೃಷಿ, ಸ್ಥಳಾಂತರಿತ ವ್ಯವಸಾಯಗಳಂತಹ ಲಘು ವ್ಯವಸಾಯ ಪದ್ಧತಿಗಳನ್ನು ಅವಲಂಬಿಸಿಕೊಂಡು ಬದುಕಿಬಂದ ಸಮುದಾಯಗಳಲ್ಲಿ ಕುಂಬ್ರಿ ಮರಾಠಿ ಸಮುದಾಯವೂ ಒಂದು. 'ಕುಂಬ್ರಿ ಮರಾಠಿ' ಎಂಬ ಜೋಡಿ ಪದವೇ ಈ ಸಮುದಾಯದ ಆದಿಮತನವನ್ನು ಹೇಳುತ್ತದೆ. 'ಕುಂಬ್ರಿ' ಎಂದರೆ ಆದಿಮ 'ಕುಮ್ರಿ' ಬೇಸಾಯ ಕ್ರಮವನ್ನು ಸೂಚಿಸಿದರೆ, 'ಮರಾಠಿ'ಯು ಈ ಸಮುದಾಯದ ಭಾಷಿಕ ಅನನ್ಯತೆಯನ್ನು ಸೂಚಿಸುತ್ತದೆ. ಅಂದರೆ ಕುಂಬ್ರಿ ಮರಾಠಿಗರು, ಮರಾಠಿ ಭಾಷಿಕ ಪ್ರದೇಶದ ಆದಿಮ ಕೃಷಿಕರಾಗಿದ್ದಿರಬಹುದು ಎಂಬುದಕ್ಕೆ ಹಲವು ಸಾಕ್ಷ್ಯಾಧಾರಗಳು ಸಿಗುತ್ತವೆ.[1] ಕುಂಬ್ರಿ ಮರಾಠಿಗರು, ಕುಣಬಿಗಳು, ಮರಾಠಿ ನಾಯಕರು ಮತ್ತು ಕುಸುಬಿಗಳು ಮೂಲತಃ ಸೈನಿಕ ಸಮುದಾಯಗಳು ಎಂದು ಚರಿತ್ರೆಕಾರರು ಕರೆದಿದ್ದಾರೆ. ಅಲ್ಲದೆ, ಶಿವಾಜಿಯ ಸೈನ್ಯದಲ್ಲಿ ಈ ಸಮುದಾಯಗಳು ಹೆಚ್ಚಿನ ಸಂಖ್ಯೆಯಲ್ಲಿದ್ದರು. ಶಿವಾಜಿಯು ಕರ್ನಾಟಕದ ಗಡಿ ಪ್ರದೇಶದಲ್ಲಿ ತನ್ನ ರಾಜ್ಯ ವಿಸ್ತರಿಸುವ ಭಾಗವಾಗಿ ಈ ಸಮುದಾಯಗಳನ್ನು ಇಲ್ಲಿಗೆ ಪದೇ

ಪದೇ ಮುನ್ನೆಡಿಸಿರಬಹುದೆಂದು ಅನೇಕ ಚರಿತ್ರೆಕಾರರು ಊಹಿಸುತ್ತಾರೆ.[2] ಇದು ನಿಜವಿರಬಹುದು. ಏಕೆಂದರೆ, ಕುಂಬ್ರಿ ಮರಾಠಿಗರು, ಕುಣಬಿಗಳು, ಮರಾಠಿ ನಾಯಕರು ಮತ್ತು ಕುಸುಬಿಗಳು ಉತ್ತಮ ದೇಹದಾರ್ಢ್ಯ ಹೊಂದಿದ್ದು, ಸೈನಿಕ ಸಮುದಾಯದ ಚಹರೆಗಳು ಇನ್ನೂ ಅವರಲ್ಲಿವೆ. ಇದೆಲ್ಲದಿಕ್ಕಿಂತ ಮುಖ್ಯವಾಗಿ, ಈ ನಾಲ್ಕೂ ಸಮುದಾಯಗಳು ಮೂಲತಃ ವಲಸಿಗ ಪಶುಪಾಲಕರು ಮತ್ತು ಕುಮ್ರಿ ಬೇಸಾಯಗಾರರು. ಕನ್ನಡ, ಕೊಂಕಣಿ ಮತ್ತು ಮರಾಠಿ ಭಾಷಿಕ ಪ್ರದೇಶದ ಕಾಡುಗಳಲ್ಲಿ ಈ ಸಮುದಾಯಗಳು ಪಶುಪಾಲನೆ ಮತ್ತು ಕೃಷಿಗಳನ್ನು ಅವಲಂಬಿಸಿಕೊಂಡಿದ್ದರು. ಸೈನಿಕರಾಗಿಯೂ ಇವರು ಹಲವು ರಾಜಪ್ರಭುತ್ವಗಳಿಗೆ ಸೇವೆಯನ್ನೂ ಸಲ್ಲಿಸುತ್ತಿದ್ದರು. ಈ ಕಾರಣಕ್ಕಾಗಿ ಈ ಸಮುದಾಯಗಳು ಕನ್ನಡ ಭಾಷಿಕ ಪ್ರದೇಶಗಳಿಗೆ ವಲಸೆ ಬರುವುದು ಅನೂಚಾನವಾಗಿ ನಡೆದೇ ಇತ್ತು. ಇದಲ್ಲದೆ, ಕರ್ನಾಟಕದ ಪಶ್ಚಿಮ ಘಟ್ಟದ ಹಲವು ಕಣಿವೆಗಳು ಇವರ ಪಶುಪಾಲನೆ ಮತ್ತು ಕುಮ್ರಿ ಬೇಸಾಯ ಪದ್ಧತಿಗಳಿಗೆ ಹೇಳಿಮಾಡಿಸಿದಂತಿದ್ದವು. ಈ ಕಾರಣದಿಂದ ಈ ಸಮುದಾಯಗಳು ಉತ್ತರ ಕನ್ನಡ, ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ನೆಲೆನಿಲ್ಲುವಂತಾಗಿದೆ.[3] ಜೊತೆಗೆ ಈ ಜಿಲ್ಲೆಗಳು ಉಲ್ಲೇಖಿತ ಸಮುದಾಯಗಳ ಕಸುಬುಗಳಿಗೂ ಸೂಕ್ತವಾಗಿದ್ದ ಕಾರಣಕ್ಕಾಗಿ ಈ ಸಮುದಾಯಗಳು ಈ ಜಿಲ್ಲೆಗಳ ಕಣಿವೆ ಪ್ರದೇಶಗಳಲ್ಲಿ ನೆಲೆನಿಂತವು.

## 2. ಕುಂಬ್ರಿ ಮರಾಠಿಗರ ಭೌಗೋಳಿಕ ವಿವರಗಳು

ಉತ್ತರ ಕನ್ನಡ ಜಿಲ್ಲೆ ಇಡೀ ರಾಜ್ಯದಲ್ಲಿಯೇ ವಿಶಿಷ್ಟವಾದ ಭೌಗೋಳಿಕ ಲಕ್ಷಣಗಳನ್ನು ಹೊಂದಿದೆ. ಕರಾವಳಿ, ಮಲೆನಾಡು, ಅರೆಮಲೆನಾಡು ಹಾಗೂ ಬಯಲುಸೀಮೆ ಹೀಗೆ ನಾಲ್ಕು ವಿಧದ ಪ್ರಾದೇಶಿಕ ವೈವಿಧ್ಯತೆ ಈ ಜಿಲ್ಲೆಗಿದೆ. ಈ ರೀತಿಯ ಪ್ರದೇಶವನ್ನು ರಾಜ್ಯದ ಇನ್ನಾವುದೇ ಜಿಲ್ಲೆಗಳಲ್ಲಿ ನೋಡಲು ಸಾಧ್ಯವಿಲ್ಲ. ಉತ್ತರ ಕನ್ನಡ ಜಿಲ್ಲೆಯು 11 ತಾಲೂಕುಗಳಿಂದ ಕೂಡಿದ ಅತೀ ದೊಡ್ಡ ಜಿಲ್ಲೆಯಾಗಿದ್ದು ವಿಶ್ವ ಪಾರಂಪರಿಕ ತಾಣವಾಗಿ ಯುನೆಸ್ಕೋದಿಂದ ಗುರುತಿಸಲ್ಪಟ್ಟಿದ್ದಲ್ಲದೇ ಶೇ. 80 ರಷ್ಟು ಭಾಗ ಕಾಡು ಬೆಟ್ಟಗಳಿಂದಾವೃತವಾದ ಜಿಲ್ಲೆಯಾಗಿದೆ. ನಿತ್ಯ ಹರಿದ್ವರ್ಣ ಕಾಡುಗಳು, ಕಡಿದಾದ ಕೊಳ್ಳ ಕಣಿವೆ ಪ್ರದೇಶಗಳಿಂದ ಕೂಡಿದ ನೈಸರ್ಗಿಕವಾಗಿ ಸಂಪದ್ಭರಿತ ಜಿಲ್ಲೆ ಉತ್ತರ ಕನ್ನಡ. ಇಲ್ಲಿ ಯಾವುದೇ ಪ್ರಮುಖ ವಾಣಿಜ್ಯ ವ್ಯವಹಾರಗಳನ್ನು ನಡೆಸುವ ಅಥವಾ ಉತ್ಪಾದನೆಗಳನ್ನು ಕೈಗೊಳ್ಳುವ ಕೈಗಾರಿಕೆಗಳಾಗಲೀ, ಕಂಪನಿಗಳಾಗಲೀ, ಉದ್ದಿಮೆಗಳಾಗಲೀ ಇಲ್ಲ. ಕೃಷಿಯೇ ಮೂಲ ಕಸುಬಾಗಿದ್ದು ಬುಡಕಟ್ಟು ಸಮುದಾಯದ ಬದುಕಿಗೆ ಪೂರಕವಾದ ವಾತಾವರಣ ಹೊಂದಿರುವುದರಿಂದ ಈ ಜಿಲ್ಲೆಯಲ್ಲಿ ಅತೀ ಹೆಚ್ಚು ಹಾಗೂ ವೈವಿಧ್ಯಮಯ ಬುಡಕಟ್ಟುಗಳು ವಲಸೆ ಬಂದು ನೆಲೆ ನಿಂತು ಬದುಕು ಸಾಗಿಸುತ್ತಿರುವುದು ಕಂಡುಬರುತ್ತದೆ. ರಕ್ಷಣೆ, ಆಹಾರಕ್ಕಾಗಿ ವಲಸೆ ಬಂದ ಸಮುದಾಯಗಳ ಪೈಕಿ ಕುಂಬ್ರಿ ಮರಾಠಿ ಸಮುದಾಯವೂ ಒಂದಾಗಿರುವ ಬಗ್ಗೆ ಉಲ್ಲೇಖಗಳು ಸಾಕ್ಷೀಕರಿಸುತ್ತವೆ.

ಉತ್ತರ ಕನ್ನಡ ಜಿಲ್ಲೆಯ7 ತಾಲೂಕುಗಳಲ್ಲಿ ಸಮೀಕ್ಷೆ ಮಾಡುವ ಮೂಲಕ ಕುಂಬ್ರಿ ಮರಾಠಿ ಸಮುದಾಯದ ನೆಲೆಗಳ ಕುರಿತು ಮಾಹಿತಿ ಸಂಗ್ರಹಿಸಲಾಗಿ ಶಿರಸಿ, ಸಿದ್ಧಾಪುರ, ಕುಮಟಾ, ಹೊನ್ನಾವರ, ಭಟ್ಕಳ, ಯಲ್ಲಾಪುರದ ದಕ್ಷಿಣ ಭಾಗ, ಅಂಕೋಲಾ ತಾಲೂಕಿನ ಪೂರ್ವ ಭಾಗಗಳಲ್ಲಿ ಈ ಸಮುದಾಯಗಳು ನೆಲೆ ನಿಂತಿರುವ ಬಗ್ಗೆ ಗುರುತಿಸಲಾಗಿದೆ. ಕುಂಬ್ರಿ ಮರಾಠಿ ಸಮುದಾಯವು ಜಿಲ್ಲೆಯ ಯಲ್ಲಾಪುರ ತಾಲೂಕಿನ ಕೆಳಾಸೆ, ಇಳೆಹಳ್ಳಿ, ಹೆಮ್ಮಾಡಿ, ಕೊಡ್ಲಗದ್ದೆ, ಅರಬೈಲು, ಸುಂಕಸಾಳ, ಮಂಚಿಕೇರಿ, ಕೋಟೆಮನೆ, ಕೊಂಡೆಮನೆ, ಕನ್ನಡಗಲ್ಲು, ಬೆಳಗೇರಿ, ಚಿಪಗೇರಿ ಕಡೆಗಳಲ್ಲಿ ಶಿರಸಿ ತಾಲೂಕಿನ ಬೆಡಸಗಾಂ, ಎಕ್ಕಂಬಿ, ಬಿಸಲಕೊಪ್ಪ, ಮಳಗಿ, ಸೋಂದಾ, ಸಾಲ್ಕಣಿ, ವಾಜಗದ್ದೆ, ಜಡ್ಡಿಗದ್ದೆ, ದೇವನಹಳ್ಳಿ, ಬೆಣಗಾಂವ್, ಮೇಲಕೊಪ್ಪಲು, ಮತ್ತಿಘಟ್ಟಾ, ಸವಲೆ, ಬರಸಗುಣಿ, ಕಲ್ಲಳ್ಳಿ, ಮುಂಡಗಾರುಗಳಲ್ಲಿ ಸಿದ್ದಾಪುರ ತಾಲೂಕಿನ ನಿಲಕುಂದ, ಬಿರಲಮಕ್ಕಿ, ಕೋಡಿಗದ್ದೆ, ಹೆಗ್ಗರಣಿ, ಹಳ್ಳಿಬೈಲು, ವಂದಾನೆಗಳಲ್ಲಿ ಕುಮಟಾ ತಾಲೂಕಿನ ಬಗಣೆ, ಮೊರಸೆ, ಕವಲೋಡಿ, ಸಾಂತ್‌ಗಲ್, ಉಳ್ಳೂರ್‌ಮಠ, ಮಾಸ್ತಿಮನೆ, ನಾಗೂರು, ಖಂಡಗಾರ, ಯಾಣ, ಹಳ್ಳಿಬೈಲುಗಳಲ್ಲಿ ಹೊನ್ನಾವರ ತಾಲೂಕಿನ ಮಂಕಿ, ಗೇರುಸೊಪ್ಪ, ಅಡಿಕೆಕುಳಿ, ಸಂಪೊಳ್ಳಿ, ಹಡಿನಬಾಳಗಳಲ್ಲಿ ಭಟ್ಕಳದ ಹಡಿಲು, ಹೆಂಜಲೆ ಕಟಗಾರಕೊಪ್ಪಗಳಲ್ಲಿ ಈ ಸಮುದಾಯವಿರುವುದನ್ನು ಗುರುತಿಸಲಾಗಿದೆ. ಕುಂಬ್ರಿ ಮರಾಠಿ ಸಮುದಾಯದ ಜನಸಂಖ್ಯೆ ಕುರಿತು ನಿಖರವಾದ ಮಾಹಿತಿಗಳಿಲ್ಲ. 2011ರ ಜನ-ಗಣತಿಯಲ್ಲಿಯೂ ಸಹ ಕುಂಬ್ರಿ ಮರಾಠಿಗರ ಕುರಿತು ಪ್ರತ್ಯೇಕ ಅಂಕಿ-ಅಂಶಗಳು ಲಭ್ಯವಿರುವುದಿಲ್ಲ. ಆದರೆ 2000 ನೇ ಸಾಲಿನಲ್ಲಿ ಕುಂಬ್ರಿ ಮರಾಠಿ ಸಮುದಾಯದ ಕೆಲ ಪ್ರತಿನಿಧಿಗಳು ಸೇರಿ ಜಿಲ್ಲಾಮಟ್ಟದಲ್ಲಿ ಕುಂಬ್ರಿ ಮರಾಠಿ ಅಭಿವೃದ್ಧಿ ಸಂಘವನ್ನು ರಚಿಸಿಕೊಂಡು ಮಾಹಿತಿ ಸಂಗ್ರಹಿಸಿದ್ದು, ಈ ಅಂಕಿ-ಅಂಶಗಳ ಪ್ರಕಾರ ಉತ್ತರ ಕನ್ನಡ ಜಿಲ್ಲೆಯಲ್ಲಿ ಸುಮಾರು 15 ರಿಂದ 16 ಸಾವಿರ ಜನರಿರುವ ಬಗ್ಗೆ ಹೇಳಲಾಗುತ್ತಿದೆ. ಪ್ರಸ್ತುತ ಸುಮಾರು 15 ರಿಂದ 18 ಸಾವಿರ ಜನಸಂಖ್ಯೆ ಹೊಂದಿರುವ ಬಗ್ಗೆ ಈ ಸಮುದಾಯದ ಮುಖಂಡರು ಅಂದಾಜಿಸಿದ್ದಾರೆ. ಹಾಗೂ ಶಿರಸಿ, ಕುಮಟಾ, ಹೊನ್ನಾವರ, ಭಟ್ಕಳ ತಾಲೂಕು ಭಾಗಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಈ ಸಮುದಾಯವಿರುವುದನ್ನು ಗಮನಿಸಲಾಯಿತು.

ಕುಂಬ್ರಿ ಮರಾಠಿಗಳು ಸ್ಥಳಾಂತರ ಬೇಸಾಯ ಪದ್ಧತಿಯನ್ನು ರೂಢಿಸಿಕೊಂಡು ಆಹಾರಕ್ಕಾಗಿ ಹಾಗೂ ರಕ್ಷಣೆಗಾಗಿ ಕರಾವಳಿ ರಾಜ್ಯಗಳಿಗೆ ವಲಸೆ ಬಂದಿರುವ ಕುರಿತು ಅವರ ಭಾಷೆ, ಆಹಾರ, ಉಡುಗೆ ತೊಡುಗೆಗಳು ಹಾಗೂ ಬಳಿಗಳು ಸಾಕ್ಷ್ಯ ಒದಗಿಸುತ್ತವೆ. ಕುಂಬ್ರಿ ಮರಾಠಿಗರು ಎಲ್ಲ ಬುಡಕಟ್ಟುಗಳಂತೆ ತಮ್ಮದೇ ಆದ ವೈಶಿಷ್ಟ್ಯ ಪೂರ್ಣ ರೂಢಿ ಸಂಪ್ರದಾಯಗಳನ್ನು ಹೊಂದಿದವರಾಗಿದ್ದು, ಪ್ರಕೃತಿ ಆರಾಧಕರಾಗಿದ್ದಾರೆ. ಈ ಸಮುದಾಯದ ಮನೆಯ ಯಜಮಾನ ಪ್ರತಿನಿತ್ಯ ಸೂರ್ಯೋದಯದ ವೇಳೆ ಸೂರ್ಯನಗೆ ನಮಸ್ಕರಿಸಿ ದಿನದ ಕಾರ್ಯ ಆರಂಭಿಸುತ್ತಾನೆ. ಸ್ತ್ರೀಯರು ಸೂರ್ಯೋದಯಕ್ಕೂ

ಮುನ್ನ ಆಕಳ ಸಗಣಿಯಿಂದ ಮನೆಯನ್ನು ಸಾರಿಸಿ, ಶೇಡಿಯಿಂದ ಮನೆ ಮುಂದಿನ ತುಳಸಿ ಕಟ್ಟೆ ಹಾಗೂ ಬಾಗಿಲ ಮುಂದೆ ರಂಗೋಲಿ ಹಾಕಿ ಬಾಗಿಲ ಬಳಿ ಸಕ್ಕರೆ ಕಾಳನ್ನು ಹಾಕಿ ಮುಂದಿನ ಕೆಲಸ ಆರಂಭಿಸುತ್ತಾರೆ. ಗಡಿ ಹಬ್ಬ, ಭೂಮಿ ಹುಣ್ಣಿಮೆ, ಬೆಚ್ಚಿನ ಸಂಕ್ರಾಂತಿ, ಆರಿದ್ರ ಮಳೆ, ದೀಪಾವಳಿ, ಸುಗ್ಗಿ, ಹೊಸಕ್ಕಿ ಹಬ್ಬ, ಕಣಹಬ್ಬ, ಮುಷ್ಠಿ ಹಿಡಿಯುವಿಕೆ, ಹುಲಕೆ, ಕರಿ ಹಬ್ಬ ಮುಂತಾದ ಕೃಷಿ ಅವಲಂಬಿತ ಹಬ್ಬಗಳನ್ನು ಭಯ ಭಕ್ತಿಯಿಂದ ಆಚರಿಸುವ ಕುಂಬ್ರಿ ಮರಾಠಿಗರು ತಮ್ಮ ಬೆಳೆ, ಆರೋಗ್ಯ ರಕ್ಷಣೆಗಾಗಿ ಹುಲಿದೇವರು, ಮಾಸ್ತಿ, ಭೂತ, ಗಡಿಜಟಕ, ಚೌಡಿ, ಮುಂತಾದ ಕ್ಷುದ್ರ ದೇವರುಗಳನ್ನು ಆರಾಧಿಸುವವರಾಗಿದ್ದಾರೆ. ಆರಂಭದಲ್ಲಿ ಅರಣ್ಯದ ನಡುವಿನ ಬಯಲು ಪ್ರದೇಶಗಳಲ್ಲಿ ರಾಗಿಯನ್ನು ಬೆಳೆಯುತ್ತಿದ್ದ ಇವರು ಬರಬರುತ್ತಾ ಭತ್ತ, ಹೆಸರು, ಉದ್ದಿನಬೇಳೆ, ಬವಡೆ, ಗೆಣಸು, ಕೆಸ, ಹುರುಳಿ, ನುಗ್ಗೆ, ತೊಂಡೆ, ಬಾಳೆ, ಕುಂಬಳಕಾಯಿ, ಮೊಗೆಕಾಯಿ, ಕಬ್ಬು, ಹಲಸು ಮುಂತಾದ ಬೆಳೆಗಳನ್ನು ಬೆಳೆಯಲು ಆರಂಭಿಸಿದ್ದಾರೆ. ಅಲ್ಲದೇ ವಾಣಿಜ್ಯ ಬೆಳೆಗಳಾಗಿ ಅಡಿಕೆ, ಕಾಳುಮೆಣಸು, ಏಲಕ್ಕಿಗಳನ್ನೂ ಸಹ ಕೆಲವರು ಬೆಳೆಯುತ್ತಿರುವುದನ್ನು ನೋಡಬಹುದಾಗಿದೆ. ಆರಂಭದಲ್ಲಿ ಸ್ಥಳಾಂತರ ಬೇಸಾಯವನ್ನು ಅವಲಂಬಿಸಿದ್ದ ಇವರು ಬರಬರುತ್ತ ಒಂದೆಡೆ ನೆಲೆ ನಿಂತು ಕೃಷಿ ಚಟುವಟಿಕೆ ಕೈಗೊಂಡು ಬರುತ್ತಿರುವುದನ್ನು ಗಮನಿಸಲಾಯಿತು. ತದನಂತರದಲ್ಲಿ ಬಂದ ಅರಣ್ಯ ಕಾಯಿದೆಗಳು ಹಾಗೂ ಆಧುನಿಕತೆ ಹಾಗೂ ನಾಗರಿಕತೆಯ ಪರಿಣಾಮವಾಗಿ ಕೃಷಿಯನ್ನು ಹೊರತುಪಡಿಸಿ ಇತರೆ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವುದನ್ನು ಗಮನಿ ಸಲಾಯಿತು. ಕುಂಬ್ರಿ ಮರಾಠಿಗರು ಕಾಡಿನೊಂದಿಗೆ ಬದುಕು ಕಟ್ಟಿಕೊಂಡವರಾಗಿದ್ದರಿಂದ ಅರಣ್ಯ ಉತ್ಪನ್ನಗಳನ್ನು ಸುಲಭವಾಗಿ ಸಂಗ್ರಹಿಸುವ ಅನುಭವವನ್ನು ಹೊಂದಿದವರಾಗಿದ್ದು ಕಾಡು ಉತ್ಪನ್ನಗಳಾದ ಬೆತ್ತ, ಜೇನು, ಪತ್ರೆ, ವಾಟೆ, ಮುರುಗಲು, ಉಪ್ಪಾಗೆ, ಜಾಯಿಪತ್ರೆ, ಅರಗು, ದೂಪ, ದಾಲ್ಚಿನ್ನಿ, ಲವಂಗ, ಅಂಡಿ, ವಾಯುವಿಳಂಗ, ಅಂಟವಾಳ, ಶೀಗೇಕಾಯಿ, ಏಕನಾಯಕನ ಬೇರು, ನೆಲ್ಲಿಕಾಯಿ, ಕಾಡು ಅರಿಷಿಣ, ಬೂರಲಮೊಗ್ಗೆ, ಸುರಗಿಮೊಗ್ಗೆ ಮುಂತಾದವುಗಳನ್ನು ಸಂಗ್ರಹ ಮಾಡಿ ಮಧ್ಯಸ್ಥರಿಗೆ ಮಾರಿ ಬಂದ ಹಣದಲ್ಲಿ ಜೀವನಾವಶ್ಯಕ ವಸ್ತುಗಳನ್ನು ಖರೀದಿಸುತ್ತಾರೆ. ಪ್ರಾಣಿ ಪ್ರಿಯರಾದ ಇವರು ಎಮ್ಮೆ, ಆಕಳು, ಕುರಿ, ಕೋಳಿ, ಬೆಕ್ಕು, ನಾಯಿಗಳಂತಹ ಪ್ರಾಣಿಗಳನ್ನು ಹಾಗೂ ಕೋಳಿಗಳನ್ನು ಸಾಕುತ್ತಾರೆ. ದೇಶಿ ತಳಿಯಾದ ಮಲೆನಾಡಗಿಡ್ಡ ಎಂಬ ಜಾತಿಯ ಹೋರಿಗಳನ್ನು ಹಾಗೂ ಆಕಳುಗಳನ್ನು ಇವರು ಪ್ರೀತಿಯಿಂದ ಸಾಕುತ್ತಾರೆ. ಕೃಷಿ ಹಾಗೂ ಅರಣ್ಯೋತ್ಪನ್ನಗಳ ಸಂಗ್ರಹಣೆಯೊಡನೆ ಇತರ ಪೂರಕ ಚಟುವಟಿಕೆಗಳನ್ನೂ ಆರಂಭಿಸಿರುವ ಇವರು ಚಾಪೆ ನೇಯುವುದು, ಬಿದಿರು–ಬೆತ್ತದ ಕಣಜ, ಬುಟ್ಟಿ ಇತ್ಯಾದಿ ವಸ್ತುಗಳನ್ನು ತಯಾರಿಸುವುದು, ಮನೆ ಹೊದಿಕೆ ಮಾಡುವುದು, ನಾಟಿ ಔಷಧಿ ಕೊಡುವುದು, ತೋಟಗಳಿಗೆ ಮಣ್ಣು ಹೊಯ್ಯುವುದು, ಬಾವಿ ತೆಗೆಯುವುದು, ಮುಂತಾದ ಕೆಲಸಗಳಲ್ಲಿ ತೊಡಗಿರುವುದನ್ನು ಗಮನಿಸಲಾಯಿತು.

ಕುಂಬ್ರಿ ಮರಾಠಿಗರು ವಾಸಿಸುವ ಪ್ರದೇಶಗಳಿಗೆ ಹೆಚ್ಚಿನ ಕಡೆಗಳಲ್ಲಿ 'ಕೊಪ್ಪ' ಎಂದು ಕರೆಯುವದನ್ನು ಗಮನಿಸಲಾಯಿತು. ಇವರು ಬೇರೆ ಬೇರೆ ಪ್ರದೇಶಗಳಿಗೆ ಕೊಪ್ಪ ಎಂದರೆ, ಕುಂಬ್ರಿ ಮರಾಠಿಗರ ಹಳ್ಳಿ ಎಂದರ್ಥ. ಕೆಲವೊಂದು ಕಡೆ ಅವಿಭಕ್ತ ಕುಟುಂಬಗಳನ್ನು ಈಗಲೂ ಕಾಣಬಹುದಾಗಿದೆ. ಗುಡ್ಡಬೆಟ್ಟಗಳ ಕಡಿದಾದ ಪ್ರದೇಶಗಳಲ್ಲಿ ಹರಿದು ಹಂಚಿದಂತೆ ಅಲ್ಲಲ್ಲಿ ವಾಸಿಸುವ ಇವರು ನೆಲೆನಿಂತ ಪ್ರದೇಶಗಳಲ್ಲಿ ಒಟ್ಟಿಗೆ ಹತ್ತಿರ ಹತ್ತಿರ ಮನೆ ಕಟ್ಟಿಕೊಂಡು ಗುಂಪು ಗುಂಪಾಗಿ ವಾಸಿಸುತ್ತಿದ್ದಾರೆ. ತಾಳೆಗರಿ, ಕರಡ (ಬೆಟ್ಟದಲ್ಲಿ ಬೆಳೆಯುವ ಹುಲ್ಲು), ಅಡಿಕೆ ಸೋಗೆ, ತೆಂಗಿನಗರಿಗಳ ಹೊದಿಕೆಯೊಡನೆ ಮನೆ ಚಾವಣಿ ನಿರ್ಮಿಸಿಕೊಂಡು ವಾಸಿಸುವವರಾಗಿದ್ದಾರೆ. ಒಂದೇ ಕಡೆ ಗುಂಪು ಗುಂಪಾಗಿ ಇರುವ ಇವರಲ್ಲಿ ಸಮುದಾಯದ ಮುಖಂಡನನ್ನು "ಗೌಡ" ಎಂದು ಕರೆಯುವ ವ್ಯವಸ್ಥೆ ಇದೆ. ಸಮುದಾಯದಲ್ಲಿ ಉಂಟಾಗುವ ನ್ಯಾಯ ಪಂಚಾಯತಿ, ಊರವರೆಲ್ಲರೂ ಕೂಡ ಕೈಗೊಳ್ಳುವ ಚಟುವಟಿಕೆಗಳು, ಹೊಂದಾಣಿಕೆ, ಸಹಬಾಳ್ವೆಯೂ ಸೇರಿದಂತೆ ಸಹಜ ಹಾಗೂ ಸರಳ ಜೀವನದ ನಿರ್ವಹಣೆಗೆ ಈ "ಗೌಡ" ಸಲಹೆ ಮಾರ್ಗದರ್ಶನ ನೀಡುತ್ತಾನೆ. ತಮ್ಮಲ್ಲಿ ರೂಢಿಯಲ್ಲಿರುವ ಆಚಾರ, ವಿಚಾರ, ಸಂಪ್ರದಾಯಗಳನ್ನು ಮೀರಿದರೆ ಶಿಕ್ಷೆ ವಿಧಿಸುವ ಪದ್ಧತಿಯೂ ರೂಢಿಯಲ್ಲಿದೆ.

ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದ ಕುಂಬ್ರಿ ಮರಾಠಿಗರು ಅನಕ್ಷರಸ್ಥರಾದರೂ ಸಹ ಜನಪದ, ಸೊಬಾನೆ ಪದಗಳನ್ನು ಸುಶ್ರಾವ್ಯವಾಗಿ ಹಾಡಬಲ್ಲರು, ಯಕ್ಷಗಾನ, ಸುಗ್ಗಿ ಕುಣಿತ, ಗುಮ್ಮಟೆಪಾಂಗ್, ಬಾಂದೋಳ್, ಕೋಲಾಟ, ಹಸೆಚಿತ್ರ, ಚವಲದೆತ್ತು, ಭಜನೆ-ಬೂರ್‌ಗಳ ಮುಂತಾದ ಪ್ರದರ್ಶನ ಕಲೆಗಳನ್ನು ಪರಂಪರಾಗತವಾಗಿ ರೂಢಿಸಿಕೊಂಡು ಬಂದವರಾಗಿದ್ದಾರೆ. ಕುಂಬ್ರಿ ಮರಾಠಿಗರು ಈ ಹಿಂದೆ "ಸಂಗ್ಯಾಬಾಳ್ಯಾ"ದಂತಹ ನಾಟಕವನ್ನು ಆಡುತ್ತಿದ್ದರು ಎಂದು ಹೇಳಲಾಗುತ್ತಿದೆ. ಅಪಾರ ದೈವ ಭಕ್ತರಾದ ಇವರು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಹೊಂದಿದ್ದು ಆಂತರಿಕವಾಗಿ ಹಲವಾರು ಬಳಿಗಳ ಮೂಲಕ ಗುರುತಿಸಲ್ಪಡುತ್ತಿದ್ದಾರೆ. ಕ್ಷೇತ್ರಭೇಟಿಯ ಸಂದರ್ಭದಲ್ಲಿ ವಿವಿಧ ಬುಡಕಟ್ಟು ಸಮುದಾಯಗಳಲ್ಲಿದ್ದಂತೆ ಸುಮಾರು 53 ಬಳಿಗಳ ಬಗ್ಗೆ ವಿವರ ಪಡೆಯಲಾಯಿತು. ಅದರಲ್ಲಿ ಪಾರ್ದಿ, ಹಳಿಯೆ, ತೆಲೆಯೆ, ಸೊಡೊನ್‌ಕಾರ್, ಕುಂಬಾರಾಚೆ, ಮುಂಡಿಗೆಕಾರ, ಬಂಡಾರ್‍ಯಾಚೆ, ಪುಕನೆ, ಚೌಕೆಕಾರ, ಗಾಂವಕಾರ, ರಾಣೆ, ನೆವಾಳೆ, ಸೊನಾರಾ, ಚೆಂಬೆಚೆ, ಹುಂಡಳೆಕಾರ್, ತೆದ್‌ಮಾಚೆ, ಹಳದಿಯಾಚೆ, ಖಾಂದಾರ್‍ಯಾಚೆ, ಧುರೆಯಚೆ, ಸಿತ್ರೆ, ಬಟೊನೆಕಾರ, ಕಾಸಡೆಕಾರ್, ಬೆಳ್ಳೆಕಾರ್, ತಿಂಗಡೆಚೆ, ತಮಾನೆಕಾರ್, ಚುಣೆಕಾರ, ವಾಣಿಯಾಚೆ, ಸೆಂಗಾಳೆ, ವಂಜಾರ್‍ಯಾಚೆ, ಮುಪ್ಪಿಲಕಾರ, ಮೆಡೆಕಾರ, ಧಾಪಳೆಕಾರ, ಆದ್ಲೆಕಾರ, ಜುವೆಕಾರ, ಕೊಳಸೋಣಕಾರ, ಸೆನೆವೆ, ದಾಬೊಳೆಕಾರ, ಕಾನಸ್ಯಾಚೆ, ವಾಂಡ್ರೆ, ಬಾಪಟಕಾರ, ಪಡಗಾವಡೆ, ಘಾಟಕ, ಬಾರಿಯೆ, ಮಂಚೆಕಾರ, ದರ್ಪೆ, ಜಾಂತೆಕಾರ, ಪೂಜಾರೆಕಾರ, ರಾಮಾನ್ಯೆ, ಗಾವಡೆಕಾರ, ಧೊಂಡಾಚೆ, ಆಗ್ರೆಕಾರ, ಮೊಳಾರಾಚೆ,

ಗೊವ್ಳೊಳ್‌ಕಾರ ಓಗೆ ಮೌಖಿಕವಾಗಿ ಕೇಳಿ ದಾಖಲಿಸಿಕೊಳ್ಳಲಾಯಿತು. ಅಲ್ಲದೇ ಇನ್ನೂ ಬಳಿಗಳು ಇರುವ ಕುರಿತು ಮಾಹಿತಿ ಸಂಗ್ರಹಿಸಲಾಗಿದೆ.

ಕುಂಬ್ರಿ ಮರಾಠಿಗರ ಆಚಾರ–ವಿಚಾರಗಳು, ರೂಢಿ–ಸಂಪ್ರದಾಯಗಳು, ಆಚರಣೆಗಳು ಒಂದೇ ಇದ್ದರೂ ಸಹ ಜಿಲ್ಲೆಯ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರಿನಿಂದ ಗುರುತಿಸುತಿಸಲಾಗಿತ್ತದೆ. ಯಲ್ಲಾಪುರ ಭಾಗದಲ್ಲಿರುವ ಮರಾಠಿಗರನ್ನು ಶಿವಾಜಿ ಮರಾಠಿಗರೆಂದು, ಸಿದ್ದಾಪುರ ಭಾಗದಲ್ಲಿರುವ ಮರಾಠಿಗರನ್ನು ಜೋಗಿ ಮರಾಠಿಗರೆಂದು, ಅಂಕೋಲಾ ಭಾಗದಲ್ಲಿರುವ ಮರಾಠಿಗರನ್ನು ಕುಣಬಿ ಮರಾಠಿಗರೆಂದು, ಶಿರಸಿ, ಕುಮಟಾ, ಹೊನ್ನಾವರ ಭಾಗದ ಮರಾಠಿಗರಿಗೆ ಕುಂಬ್ರಿ ಮರಾಠಿಗರೆಂದು, ಭಟ್ಕಳದ ಗಡಿಭಾಗದಲ್ಲಿರುವ ಮರಾಠಿಗರಿಗೆ ಕುಡುಬಿ ಮರಾಠಿಗರೆಂದು ಕರೆಯಲಾಗುತ್ತದೆ. ಕ್ಷೇತ್ರ ಭೇಟಿಯ ಸಮಯದಲ್ಲಿ ಭೇಟಿಯಾದ ಕೆಲವು ಮುಖಂಡರಿಂದ ಕುಂಬ್ರಿ ಮರಾಠಿಗರು ಗೋವಾ ರಾಜ್ಯದ ಕಾಣಕೋಣ ಹಾಗೂ ಮಹಾರಾಷ್ಟ್ರದ ರತ್ನಾಗಿರಿ ಎಂಬ ಪ್ರದೇಶದಲ್ಲೂ ಇವರು ನೆಲೆಸಿರುವುದು ಕಂಡುಬರುತ್ತದೆ. ಗೋವಾದ ಸಾವಡೆನ್, ಸಾಂಗೇ, ಕ್ಯೂಪ್ಪಂ, ಬಾಂದಾ, ಕಂಡೋಲಾ ಪ್ರದೇಶಗಳಲ್ಲಿ ಹಾಗೂ ಮಹಾರಾಷ್ಟ್ರ ರಾಜ್ಯದ ರತ್ನಾಗಿರಿ ಜಿಲ್ಲೆಯ ಝುರೇವಾಡ, ಚಾರ್‌ವೇಲಿ, ನಗ್ಲೆವಾಡ, ಕಾಪಡಗಾಂ, ಪಣಸಾಳೆ, ಪಾಲಿ, ದಂಸೆ ಗಳಲ್ಲಿ ಕುಂಬ್ರಿ ಮರಾಠಿಗರು ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿರುವ ಬಗ್ಗೆ ಹಾಗೂ ಇತ್ತಿತ್ತಲಾಗಿ ವಿವಾಹ ಸಂಬಂಧಗಳು ಏರ್ಪಡುತ್ತಿವೆ. ಕುಂಬ್ರಿ ಮರಾಠಿಗರು ಮಹಾರಾಷ್ಟ್ರ, ಗೋವಾ ರಾಜ್ಯಗಳ ಮೂಲಕ ಅಲ್ಲಲ್ಲಿ ನೆಲೆ ನಿಂತು ಕಾಲ ಕ್ರಮೇಣ ಕರ್ನಾಟಕವನ್ನು ಪ್ರವೇಶಿಸಿರಬಹುದೆಂದು ಊಹಿಸಲಾಗಿದೆ. ವಿಠಲ್ ಭಂಡಾರಿಯವರು 'ಸಾವಿರಾರು ವರ್ಷಗಳ ಹಿಂದೆ ಈಶಾನ್ಯ ಭಾರತದ ಭಾಗದಿಂದ ಪ್ರಾರಂಭವಾದ ಪ್ರಯಾಣ ಮಧ್ಯಪ್ರದೇಶ, ಗುಜರಾತ್, ಮಹಾರಾಷ್ಟ್ರ, ಗೋವಾ, ಕರ್ನಾಟಕ, ಕೇರಳ ರಾಜ್ಯಗಳಲ್ಲಿ ಈ ಸಮುದಾಯ ಧನೋಜಿ, ಘಟೋಲೆ, ಹಿಂದ್ರೆ, ಜಾದವ್, ಖೈರೆ, ಲೇವಾ, ತೋನಾರಿ, ವಾರ್ಲಿ, ಗೊವರಿ, ಕುಣಬಿ, ಕುಂಬ್ರಿ ಮರಾಠಿ, ಮರಾಠಿ ಮುಂತಾದ ಹೆಸರಿನಲ್ಲಿ ವಾಸಿಸುತ್ತಿದ್ದಾರೆ ಎಂದು ತಜ್ಞರು ಹೇಳುತ್ತಾರೆ. ಈ ಮೇಲಿನ ಬುಡಕಟ್ಟುಗಳಲ್ಲಿ ಒಂದಾದ 'ಕುಣಬಿ'ಗಳನ್ನು ವಿವಿಧ ರಾಜ್ಯಗಳಲ್ಲಿ, ಕುಣಬಿ, ಕುರ್ಮಿ, ಕುಡುಂಬಿ, ಕುರುಂಬಿ, ಕಣಬಿ, ಕುಣಮಿ, ಕುರುಂಬ, ಕುರುಂಬಂ, ಕುರುಮನ್, ಕುಡುಬಿ, ಕುಡುಮಾ, ಕುಂಬ್ರಿ ಮರಾಠಿ, ಮರಾಠಿ ಇತ್ಯಾದಿ ಹೆಸರಿನಲ್ಲಿ ಗುರುತಿಸುತ್ತಾರೆ. ಮೂಲತಃ ಶೈವಪಂಥದವರಾಗಿರಬೇಕೆಂದೂ ಇವರು ಪೂಜಿಸುವ 'ಮಹಾದೇವ' ಮತ್ತು 'ಕುರ್ಮಿನಾಥ' ಅಥವಾ 'ಕಲ್ಮರಾಜ್' ಮುಂತಾದ ದೇವರ ಹೆಸರಿನಿಂದ ತಿಳಿಯುತ್ತದೆ. ಆದರೆ ಉತ್ತರ ಕನ್ನಡದಲ್ಲಿ ಇವರು ಮಾತೃದೇವತೆಯನ್ನು ಹೆಚ್ಚಾಗಿ ಪೂಜಿಸುತ್ತಾರೆ.'[4] ಎನ್ನುತ್ತಾರೆ. ಕರ್ನಾಟಕದ ಗಡಿ ಭಾಗದ ಆದಿಮ ಸಮುದಾಯಗಳ ವಲಸೆ ಮತ್ತು ಅಲೆಮಾರಿತನಗಳನ್ನು ಇದಮಿತ್ಥಮ್ ಎಂದು ಊಹಿಸಲು ಸಾಧ್ಯವಿಲ್ಲ. ಶತಮಾನಗಳ ಕಾಲದ ಸಮುದಾಯಗಳ ನಡೆಗಳು ಅನೇಕ ಚಾರಿತ್ರಿಕ ಕಾರಣಗಳಿಗಾಗಿ

ನಡೆದುಹೋಗಿವೆ. ಕುಂಬ್ರಿ ಮರಾಠಿ, ಕುಣಬಿ ಇತ್ಯಾದಿ ಸಮುದಾಯಗಳನ್ನು 'ಕರ್ನಾಟಕದ ಮೂಲ ಬುಡಕಟ್ಟೆಂದು' ಬುಕಾನಸ್ 1800ರಷ್ಟೊತ್ತಿಗೆ ಗುರುತಿಸಿದ್ದಾನೆ. 'ಶಿವಾಜಿ ಸೈನ್ಯದಿಂದ ಓಡಿ ಬಂದು ಕಾಡು ಸೇರಿಕೊಂಡಿರುವ ಜನಾಂಗ ಇವರದಾಗಿರಬೇಕೆಂದು ಡಾ. ಎಲ್. ಆರ್. ಹೆಗಡೆ ಸಂಶಯ ವ್ಯಕ್ತಪಡಿಸುತ್ತಾರೆ. "ನಾವು ಗೋವಾದಿಂದ ಬಂದವರು. ಇಲ್ಲಿಗೆ ಬರಲು ಕಾರಣ ಪೋರ್ಚಗೀಸರ ಜೊತೆಗಿನ 'ಬಂಡ್'. ಪೋರ್ಚುಗೀಸರು ಗೋವಾವನ್ನು ಆಕ್ರಮಿಸಿದ ನಂತರ ನಮ್ಮ ಸಂಸ್ಕೃತಿಗೆ ದೊಡ್ಡ ಹೊಡೆತ ಬಿದ್ದಿತು. ನಮ್ಮ ಜಾತಿ ಶುದ್ಧತೆ ಉಳಿಸಿಕೊಳ್ಳಲು ನಾವು ಗೋವಾ ಬಿಟ್ಟು ಕರ್ನಾಟಕದ ಕಾಡು ಸೇರಬೇಕಾಯಿತು. ನಮ್ಮ ಹಿರಿಯರು ಬೇರೆ ಊರಿಂದ ಅಲ್ಲಿಗೆ ಬಂದಿರಬಹುದು. ನಾವು ಗೋವಾದ ಕುಸಗೆ, ಕರಂಬಳ, ಕಾಜರ್, ಕುಡತರಿ, ತುಡೊವ್, ಎಲ್ಲೆ, ಮಲಕರ್ಣೆ, ಕುಂಬಾರಿ, ಸೋಲಿಯೇ, ಗಾವಂಡಗಿರಿ ಪ್ರದೇಶದಿಂದ ಗುಳೆ ಎದ್ದು ಬಂದೆವು." ಎಂದು ಹೆಗ್ಗಡು ಮಿರಾಶಿ, ಬಾಳ್ಗೋ ವೆಳಿಪ್ ಮತ್ತು ಪಾಂಡು ಗಾವಡಾ ಹೇಳುತ್ತಾರೆ. ಈ ಪ್ರದೇಶಗಳೆಲ್ಲವೂ ಗೋವಾದ ಕಾಣಕೋಣ ಮತ್ತು ಸಾಲಸೆಟ್‌ದ ಸುತ್ತ ಮುತ್ತಲಿರುವ ಊರುಗಳ ಹೆಸರುಗಳಾಗಿದ್ದು ಕುಣಬಿಗರು ಗೋವಾದ ಕಾಡಿನ ಮೂಲಕ ಕರ್ನಾಟಕದ ಕಾಡು ಸೇರಿದರು. ಗೋವಾದಲ್ಲಿ ಕೂಡ 'ಗಾವಡಾ', 'ಕುನ್‌ಬಿ', 'ವೆಳಿಪ್', 'ದನಗರ' ಮುಖ್ಯ ಸಮುದಾಯವಾಗಿದೆ(1. Dhodia 2. Dubla (Halpati) 3. Naikda (Talavia) 4. Siddi (Nayaka) 5. Varli] 1[6. Kunbi 7. Gawda 8. Velip.]). ಅಲ್ಲಿ ಹಿಂದೂ ಸಂಪ್ರದಾಯ ಮತ್ತು ಕ್ರಿಶ್ಚಿಯನ್ ಸಂಪ್ರದಾಯವನ್ನು ಅನುಸರಿಸುತ್ತಿದ್ದು ಇವರನ್ನು ಗೋವಾ ಸರ್ಕಾರ (ಗೋವಾರಾಜ್ಯ ಪತ್ರ: 13/04/90 ಎಸ್.ಡಬ್ಲ್ಯು.ಡಿ–ವೊಲ್ಯೂಂ–11/189) ಪರಿಶಿಷ್ಠ ಪಂಗಡಕ್ಕೆ ಸೇರಿಸಿದೆ.[6]

ಕುಂಬ್ರಿ ಮರಾಠಿಗರು ಉತ್ತರ ಕನ್ನಡ ಜಿಲ್ಲೆಗೆ ಕನ್ನಡ, ಮರಾಠಿ ಮತ್ತು ಕೊಂಕಣಿ ಭಾಷಿಕ ಪ್ರದೇಶದಿಂದ ವಲಸೆ ಬಂದವರೆಂಬುದು ಸ್ಪಷ್ಟ ಕುಂಬ್ರಿ ಮರಾಠಿಯರಲ್ಲಿದ್ದಂತೆ ದಕ್ಷಿಣ ಕನ್ನಡದಲ್ಲಿರುವ ಕುಡಬಿ ಸಮುದಾಯ ಹಾಗೂ ಕಾರವಾರ, ಜೋಯಿಡಾ, ಯಲ್ಲಾಪುರ ಪ್ರದೇಶದಲ್ಲಿರುವ ಕುಣಬಿಯರಲ್ಲೂ ಕೆಲವು ಬಳಿಗಳು ಒಂದೇ ರೀತಿಯಲ್ಲಿರುವುದು ಈ ಮೂರೂ ಸಮುದಾಯಗಳು ಮೂಲದಲ್ಲಿ ಒಂದೇ ಜನಾಂಗಿಕ (Ethnological) ಲಕ್ಷಣಗಳನ್ನು ಹೊಂದಿವೆ. ಗಾವಡೆ, ಗಾವುಡಾ, ಗೌಡ ಎಂಬ ಶಬ್ದಗಳೂ ಸಹ ಮೂರೂ ಸಮುದಾಯದಲ್ಲೂ ಆಯಾ ಸಮುದಾಯದ ಹಿರಿಯನನ್ನು, ಮುಖಂಡನನ್ನು ಸಂಬೋಧಿಸಲು ಬಳಸಲಾಗುತ್ತದೆ. ಕುಂಬ್ರಿ ಮರಾಠಿಗರಿಗೆ ಜೋಗಿ ಮರಾಠಿ, ಶಿವಾಜಿ ಮರಾಠಿ, ಕುಂಬ್ರಿ ಮರಾಠಿ, ಕುಣಬಿ ಮರಾಠಿ ಎಂಬಂತೆ, ಕುಣಬಿ ಮತ್ತು ಕುಡಬಿ ಸಮುದಾಯದಲ್ಲೂ ಈ ರೀತಿಯ ಸೂಚಕ ಹೆಸರುಗಳಿವೆ. ದಕ್ಷಿಣ ಕನ್ನಡದ ಕುಡುಬಿಯರನ್ನು ಕುಂಬ್ರಿ ಕುಡುಬಿ ಎಂದೂ ಗುರುತಿಸಲಾಗುತ್ತದೆ. ಕುಂಬ್ರಿ ಮರಾಠಿ, ಕುಣಬಿ, ಕುಡಬಿಯರಲ್ಲಿ ಒಂದೇ ರೀತಿಯ ಕೌಟುಂಬಿಕ ಪದ್ಧತಿ ಇದೆ. ಕುಂಬ್ರಿ ಮರಾಠಿಯರು ಗೋವಾ, ಮಹಾರಾಷ್ಟ್ರ

ರಾಜ್ಯದಲ್ಲೂ ಇದೆ. ಕುಂಬ್ರಿ ಬೇಸಾಯದೊಡನೆ ಬದುಕು ಕಟ್ಟಿಕೊಂಡು ಬಂದ ಸಮುದಾಯವು ಮರಾಠಿ ಮಾತನಾಡುತ್ತಿದ್ದುದ್ದರಿಂದ 'ಕುಂಬ್ರಿ ಮರಾಠಿ'ಗರೆಂದು ಗುರುತಿಸಲಾಗುತ್ತಿದೆ ಉತ್ತರ ಕನ್ನಡ ಜಿಲ್ಲೆಯಲ್ಲಿ ನೆಲೆ ನಿಂತ ಕುಂಬ್ರಿ ಮರಾಠಿಗರ ಭಾಷೆಯಲ್ಲಿ ಬಳಸುವ ಶಬ್ದಗಳಲ್ಲಿ ಹಾಗೂ ದಕ್ಷಿಣ ಕನ್ನಡದ ಕುಡಬಿಯರು ಹಾಗೂ ಕಾರವಾರ, ಜೋಯಿಡಾ, ಯಲ್ಲಾಪುರ ಪ್ರದೇಶದಲ್ಲಿರುವ ಕುಣಬಿ ಸಮುದಾಯದವರು ಬಳಸುವ ಶಬ್ದಗಳಲ್ಲಿ ಸಾಮ್ಯತೆ ಇರುವುದರಿಂದ ಈ ಸಮುದಾಯಗಳ ನಡುವೆ ಪರಸ್ಪರ ಜನಾಂಗಿಕ (Ethnological) ಸಂಬಂಧಗಳಿವೆ.[6] ಈ ಕುರಿತು ಪ್ರತ್ಯೇಕ ತೌಲನಿಕ ಅಧ್ಯಯನ ಮಾಡುವ ಅಗತ್ಯವಿದೆ. ಕರ್ನಾಟಕ ಸರ್ಕಾರ ಘೋಷಿಸಿದ ಹಿಂದುಳಿದ ವರ್ಗಗಳಲ್ಲಿ ಗುರುತಿಸಲಾದ, ಕುಡುಬಿಯರು, ಕುಂಬ್ರಿ ಮರಾಠಿ, ಕುಣಬಿ, ಕುಳವಾಡಿ ಕಣಬಿ, ಕುರ್ಮ, ಕುರ್ಮಿ ಸಮುದಾಯಗಳನ್ನು ಸಹ ತುಲನೆ ಮಾಡಿ ನೋಡಬೇಕಾದ ಅವಶ್ಯಕತೆ ಇದೆ.

ಉತ್ತರ ಕನ್ನಡ ಜಿಲ್ಲೆಯ ದಟ್ಟ ಕಾಡುಗಳ ನಡುವೆ ನೆಲೆನಿಂತ ಕುಂಬ್ರಿ ಮರಾಠಿ ಸಮುದಾಯವನ್ನು ಅವಲೋಕಿಸಲಾಗಿ ಎಲ್ಲಿಯೂ ಸರಿಯಾದ ಅಂಕಿ ಅಂಶಗಳು ಲಭ್ಯವಾಗದ ಕಾರಣ ಈ ಸಮುದಾಯದ ಇರುವಿಕೆ ಹಾಗೂ ನೆಲೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಯಿತು. ಈ ಹಿನ್ನೆಲೆಯಲ್ಲಿ ವಿವಿಧ ತಾಲೂಕುಗಳಲ್ಲಿ ಸಂಚರಿಸಿ ಕುಂಬ್ರಿ ಮರಾಠಿಗರ ನೆಲೆಗಳು ಹೀಗಿವೆ.

**ಕೋಷ್ಟಕ 1**

**ಉತ್ತರ ಕನ್ನಡ ಜಿಲ್ಲೆಯಲ್ಲಿ ಕುಂಬ್ರಿ ಮರಾಠಿ ಸಮುದಾಯದ ನೆಲೆಗಳು**

| ಕ್ರ.ಸಂ. | ತಾಲೂಕುಗಳು | ಹಳ್ಳಿಗಳು |
|---|---|---|
| 1. | ಶಿರಸಿ | ಮೇಲಿನಕೊಪ್ಪಲು, ಎಟಿಗಾರ, ದೇವಿಮನೆ, ಹಳ್ಳಿಬೈಲ್, ಸವಲೆ, ಬೆಣಗಾಂ, ಮತ್ತಿಘಟ್ಟಾ, ದೇವನಳ್ಳಿ, ಹೊಸ್ಕೆರೆ, ಕಳೂಗಾರ, ಹಕ್ಕಿಗದ್ದೆ ಬಿಲ್ಲುಗದ್ದೆ. |
| 2. | ಸಿದ್ದಾಪುರ | ಕೋಡಿಗದ್ದೆ, ಬಿರ್ಲಮಕ್ಕಿ, ಗವಿನಗುಡ್ಡ. |
| 3. | ಕುಮಟಾ | ಬಂಗಣೆ, ಕಲವೆ, ಮೊರ್ಸೆ, ಯಾಣ,ಕಬಗಾಲ, ಬ್ರಹ್ಮೂರು. |
| 4. | ಭಟ್ಕಳ | ಉತ್ತರಕೊಪ್ಪ, ಶ್ಯಾನವಳ್ಳಿ, ಮುಗಳಿ, ಕಕ್ಕ, ಕೆಕ್ಕೋಡ, ಹೊಸೂರು, ಹೇರಬುಡಕಿ, ಬೀಳೂರು, ಶಿರಾಣಿ, ಗುಜ ಮಾಂವ. |
| 5. | ಹೊನ್ನಾವರ | ತಲಗೋಡು, ಬಳಕೂರು, ಕಾಸಗೇರಿ. |
| 6. | ಅಂಕೋಲಾ | ವಾಡಗಾರ, ಗುಡ್ಡದ ನ್ಯಾವಳ್ಸೆ, ಚನ್ನಗಾರ, ಅಂಗಡಿ ಬೈಲ್, |
| 7. | ಮುಂಡಗೋಡ | ಹೊಸ್ತೋಟ, ಟೆಂಕಾಲ್. |
| 8. | ಯಲ್ಲಾಪುರ | ಕೊಡಸೆ, ತೆಂಗಿನಗೇರಿ, ಒಡೆಹುಕ್ಕಳಿ, ತುಡುಗುಣಿ |

## 3. ಕುಂಬ್ರಿ ಮರಾಠಿ, ಕುಡುಬಿ ಮತ್ತು ಕುಣಬಿ ಸಮುದಾಗಳ ನಡುವಿನ ಸಾಮ್ಯತೆಗಳು

ಕುಂಬ್ರಿ ಮರಾಠಿ ಸಮುದಾಯದ ಕುರಿತು ನಡೆಸಿದ ಅಧ್ಯಯನದ ಭಾಗವಾಗಿ ಕುಂಬ್ರಿ ಮರಾಠಿ, ಕುಡುಬಿ ಮತ್ತು ಕುಣಬಿ ಸಮುದಾಗಳ ನಡುವಿನ ಸಾಮ್ಯತೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಮೂಲಕ ಹಾದು ಹೋಗುವ ಪಶ್ಚಿಮಘಟ್ಟದ ದಟ್ಟ ಅರಣ್ಯಗಳ ಇಳಿಜಾರು ಕೊಳ್ಳ ಪ್ರದೇಶಗಳಲ್ಲಿ ಚದುರಿದಂತೆ ನೆಲೆನಿಂತ ಈ ಸಮುದಾಯ ಹಾಗೂ ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಗಳಲ್ಲಿ ಕಂಡುಬರುವ 'ಕುಡುಬಿ' ಸಮುದಾಯ ಹಾಗೂ ಉತ್ತರ ಕನ್ನಡ ಜಿಲ್ಲೆಯ ಹಾಗೂ ಗೋವಾ ರಾಜ್ಯದ ಗಡಿ ಪ್ರದೇಶಕ್ಕೆ ಅಂಟಿಕೊಂಡಿರುವ ಜೋಯಿಡಾ ತಾಲೂಕಿನಲ್ಲಿ ಹೆಚ್ಚಾಗಿ ಕಂಡುಬರುವ 'ಕುಣಬಿ' ಸಮುದಾಯ ಮತ್ತು 'ಕುಂಬ್ರಿ ಮರಾಠಿ' ಸಮುದಾಯಗಳ ನಡುವೆ ಅನೇಕ ಸಾಮ್ಯತೆಗಳು ಕಂಡುಬರುತ್ತವೆ.

### ದಕ್ಷಿಣ ಕನ್ನಡದ "ಕುಡುಬಿ"ಯರು

ಕುಡುಬಿಯರು ಕರ್ನಾಟಕದ ಕರಾವಳಿ ಪ್ರದೇಶದ ಉಡುಪಿ, ಕುಂದಾಪುರ, ಕಾರ್ಕಳ, ಮಂಗಳೂರು, ಬಂಟವಾಳ ತಾಲೂಕುಗಳಿಗೆ ಸೇರಿದ ಬಾರಕೂರು, ಮಂದರ್ತಿ, ಕೊಕ್ಕರ್ಣೆ, ಸುರಾಲು, ಬಿಲ್ಲಾಡಿ, ಹೆಸ್ಕುಂದಾ, ಹಾಲಾಡಿ, ಸಿರಿಯಾರ, ನೆಡೂರು, ಕೊಲ್ಲೂರು, ಭಜಪೆ ಮುಂತಾದ ಊರುಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ಈ ಎಲ್ಲಾ ಸ್ಥಳಗಳೂ ಕರಾವಳಿ ಪ್ರದೇಶದಲ್ಲಿದ್ದರೂ ಕಾಡಿನಿಂದ ಆವೃತವಾದ ಹಾಗೂ ಪಶ್ಚಿಮಘಟ್ಟ ಪ್ರದೇಶದ ಸಮೀಪದ ಸ್ಥಳಗಳಾಗಿವೆ. ಕುಡುಬಿಯರು ಗೋವಾ ರಾಜ್ಯದ ಮೂಲ ನಿವಾಸಿಗಳ ಗುಂಪಿಗೆ ಸೇರಿದವರಾಗಿದ್ದು ಸುಮಾರು ನಾಲ್ಕು ಶತಮಾನಗಳ ಹಿಂದೆ ವಲಸೆ ಬಂದವರೆಂದು ಹೇಳಲಾಗುತ್ತಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಮಾರು 62 ಸಾವಿರ ಜನ ಸಂಖ್ಯೆಯನ್ನು ಹೊಂದಿರುವ ಕುಡಬಿ ಸಮುದಾಯದ ಬಗ್ಗೆ ಜರ್ಮನಿಯ ಮಾನವ ಶಾಸ್ತ್ರಜ್ಞ ಘಾ। ಸ್ಟೀಫನ್ ಮುಚ್‌ರವರು 'ಕುಡಬಿಯರು ದಕ್ಷಿಣ ಭಾರತದಲ್ಲಿರುವ ಆಹಾರ ಸಂಗ್ರಹಣೆಗಾಗಿ ಬೇಟೆಯಾಡುವ ಬುಡಕಟ್ಟು ಜನಾಂಗ'[7] ಎಂದು ಕರೆದರೆ ಎಲ್.ಜಿ.ಹಾವನೂರ್‌ರವರು ಹಿಂದುಳಿದ ವರ್ಗಗಳ ಆಯೋಗದಲ್ಲಿ ಕುಡುಬಿಯರು 'ಕಾಡು ಮತ್ತು ಗುಡ್ಡ ಬೆಟ್ಟಗಳಲ್ಲಿ ಪ್ರತ್ಯೇಕವಾಗಿ ವಾಸಿಸುವ ಆದಿವಾಸಿ ಬುಡಕಟ್ಟು'[8]ಗಳೆಂದು ನಮೂದಿಸಿರುವುದು ಕಂಡುಬರುತ್ತದೆ. ಅಂತೆಯೇ ಎಲ್.ಕೆ. ಅನಂತಕೃಷ್ಣ ಅಯ್ಯರ್, ಡಾ.ಪಿ. ಗುರುರಾಜ ಭಟ್, ಥರ್ಸ್ಟನ್, ದಕ್ಷಿಣ ಕನ್ನಡ ಜಿಲ್ಲೆಯ ಗೆಜೆಟಿಯರ್‌ನ ಮುಖ್ಯ ಸಂಪಾದಕರಾದ ಅಭಿಶಂಕರ್‌ರವರು ತಮ್ಮ ವಿವಿಧ ವರದಿಗಳಲ್ಲಿ 'ಕುಡುಬಿ ಸಮುದಾಯವು ಬೇಟೆಯಾಡುವ ಬುಡಕಟ್ಟು', 'ಸ್ಥಳಾಂತರ ಬೇಸಾಯ ಮಾಡುವ ಕಾಡಿನ ಬುಡಕಟ್ಟು', 'ಆದಿವಾಸಿ ಮೂಲದ ಭೂಹೀನ ಕಾರ್ಮಿಕರು' ಎಂದು ಬೇರೆ ಬೇರೆ ರೀತಿಯಲ್ಲಿ ಉಲ್ಲೇಖಿಸಿದ್ದಾರೆ. ಸಮಾಜ

ಶಾಸ್ತ್ರೀಯ ಸಂಶೋಧಕರಾದ ಡಾ.ವೈ. ರವೀಂದ್ರನಾಥರಾವ್‌ರವರು ತಮ್ಮ ಸಂಶೋಧನಾ ಕೃತಿಯಲ್ಲಿ[9] 'ಕುಡುಬಿಯರ ಸಾಮಾಜಿಕ ರಚನೆ, ಜೀವನ ಕ್ರಮ ಸಂಪ್ರದಾಯ, ಆಚಾರ-ವಿಚಾರ, ಆರಾಧನೆ, ಆಚರಣೆಗಳ ಕುರಿತು ಉಲ್ಲೇಖಿಸುತ್ತಾ ಇವರನ್ನು ಗೋವಾ 'ಕುಡುಬಿ'ಯರು, 'ಕುಮ್ರಿ ಕುಡುಬಿ'ಯರೆಂದು ಕರೆಯಲಾಗುತ್ತಿರುವ ಬಗ್ಗೆ ದಾಖಲಿಸಿದ್ದಾರೆ. ಇವರೆಲ್ಲರೂ ವಾಸ್ತವದಲ್ಲಿ ಒಂದೇ ಗುಂಪಿನವರಾಗಿದ್ದು ಸ್ಥಳೀಯರು ವಲಸೆ ಬಂದ 'ಕುಡುಬಿ'ಯರನ್ನು ಗುರುತಿಸುವಾಗ ಈ ರೀತಿ ಹೆಸರಿಸಿರುವ ಬಗ್ಗೆ ರವೀಂದ್ರನಾಥರಾವ್‌ರವರು ಪ್ರಸ್ತಾಪಿಸುತ್ತಾರೆ. ಅಂತೆಯೇ ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಯ ಸಮುದ್ರದ ದಂಡೆಯಲ್ಲಿರುವ ಕುಡುಬಿಯರನ್ನು ಕೋಡಿ ಮೂಲದ ಕುಡುಬಿಯರು ಮತ್ತು ಜೋಗಿ ಕುಡುಬಿಯರೆಂದು ಕರೆಯುವುದು ರೂಢಿಯಲ್ಲಿದೆ. ಇವರಿಗೆ ಕಾಲ ಕ್ರಮೇಣ ಕಾಡಿನ ಸಂಪರ್ಕ ತಪ್ಪಿ ಸಮುದ್ರದ ಸಂಪರ್ಕ ಬಂದಿದ್ದು ಸಮುದ್ರ ದಂಡೆಯ ಕೊಡಿಯಾಲಾ ಎಂಬಲ್ಲಿ ನೆಲೆಸಿದ್ದರಿಂದ ಸ್ಥಳನಾಮ ಅಂಟಿಕೊಂಡು 'ಕೊಡಿಯಾಲಾ ಕುಡುಬಿಯರು' ಎಂದು ಹೆಸರು ಬಂದಿರುವ ಬಗ್ಗೆ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಅಲ್ಲದೇ ಕುಡುಬಿಗಳಲ್ಲಿ ನಾಡ ಕುಡುಬಿ, ಜಾತಿ ಕುಡುಬಿ ಹೀಗೆ ಒಟ್ಟೂ 6 ಒಳ ಪಂಗಡಗಳಿರುವ ಬಗ್ಗೆ ಉಲ್ಲೇಖಗಳಿದ್ದು ಕೆಲವೆಡೆ ಇವರನ್ನು 'ಅಟ್ಟೆ ಕುಣ್‌ಬಿ' ಯೆಂತಲೂ ಕರೆಯಲಾಗುತ್ತಿದೆ.

**ಕುಡುಬಿ ಸಮುದಾಯದ ಭಾಷೆ**

ಕುಡುಬಿಯರು ಇಂಡೋ-ಆರ್ಯನ್ ಭಾಷೆಗೆ ಸೇರಿದ ಕೊಂಕಣಿ ಭಾಷೆಯನ್ನು ಮಾತನಾಡುತ್ತಾರೆ. ಇವರ ಮೇಲೆ ದಕ್ಷಿಣ ಕನ್ನಡದ ಸಾಮಾಜಿಕ ವ್ಯವಸ್ಥೆ ಪರಿಣಾಮ ಬೀರಿದ್ದರಿಂದ ತಾವಾಡುವ ಭಾಷೆಯಲ್ಲಿ ತುಳು ಹಾಗೂ ಕನ್ನಡ ಶಬ್ದಗಳನ್ನು ಬಳಸಿ ಮಾತನಾಡುತ್ತಾರೆ.

**ಕುಡುಬಿ ಸಮುದಾಯದ ಉಡುಗೆ ತೊಡುಗೆ**

ಕುಡುಬಿಗಳಲ್ಲಿ ಸಾಮಾನ್ಯವಾಗಿ ಪುರುಷರು ಹಾಗೂ ಮಹಿಳೆಯರು ಸರಳವಾಗಿ ವಸ್ತ್ರ ಧರಿಸುವವರಾಗಿದ್ದು, ಪುರುಷರು ಪಂಚೆ ಹಾಗೂ ಬನಿಯನ್ ಆಕಾರದ ಶರ್ಟ್‌ನ್ನು ಧರಿಸಿದರೆ, ಮಹಿಳೆಯರು ಕುಪ್ಪಸ ಧರಿಸದೇ ಸೀರೆಯನ್ನೇ ಮೈ ಮುಚ್ಚುವಂತೆ ಪುರಾತನ ಶೈಲಿಯಲ್ಲಿ ಸುತ್ತಿಕೊಳ್ಳುವ ಪದ್ಧತಿ ಇದ್ದು ಈಗ ಎಲ್ಲರಂತೆ ಸೀರೆ ಉಡುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ.

**ಕುಡುಬಿಗಳ ಆಹಾರ**

ಕುಡುಬಿಯರು ಬುಡಕಟ್ಟು ಸಮುದಾಯದವರಾಗಿದ್ದರೂ ತಮ್ಮ ಆಹಾರ ವ್ಯವಸ್ಥೆಯಲ್ಲಿ ಕೆಲವು ವಿಭಿನ್ನ ಕ್ರಮಗಳನ್ನು ರೂಢಿಸಿಕೊಂಡವರಾಗಿದ್ದಾರೆ. ಇವರು ಮಾಂಸಹಾರಿಗಳಾಗಿದ್ದರೂ

ಸಾಕು ಪ್ರಾಣಿಗಳಾದ ಕೋಳಿ, ಆಡು, ಕುರಿ ಇತ್ಯಾದಿ ಪ್ರಾಣಿಗಳ ಮಾಂಸಗಳನ್ನು ತಿನ್ನುವುದಿಲ್ಲ. ಆದರೆ ಕಾಡಿನಿಂದ ಬೇಟೆಯಾಡಿ ತಂದ ಪ್ರಾಣಿಗಳ ಮಾಂಸವನ್ನು ಹಂಚಿ ತಿನ್ನುವ ಪರಿಪಾಠವಿದೆ.

**ಕುಡುಬಿಗಳಲ್ಲಿ ಸಾಮಾಜಿಕ ವ್ಯವಸ್ಥೆ**

ಕುಡುಬಿಯರಲ್ಲಿ ಪಿತೃಪ್ರಧಾನ ವ್ಯವಸ್ಥೆಯ ಅವಿಭಕ್ತ ಕುಟುಂಬ ಪದ್ಧತಿ ಇದ್ದು ಈಗ ವಿಭಕ್ತ ಕುಟುಂಬಗಳಾಗಿ ಪರಿವರ್ತಿತಗೊಳ್ಳುತ್ತಿರುವುದು ಕಂಡು ಬರುತ್ತಿದೆ. ಕುಡುಬಿಯರಲ್ಲಿ ಒಳಾಡಳಿತ ವ್ಯವಸ್ಥೆಯಿದ್ದು, ಅದನ್ನು 'ವೋಡೋ', 'ಕೂಡುಕಟ್ಟು' ಅಥವಾ 'ವಾಡು' ಎಂದು ಕರೆಯುತ್ತಾರೆ. "ವೋಡೋ"ವಿನಲ್ಲಿ "ಗುರಿಕಾರ್" ಅಥವಾ "ಬುದ್ವಂತಗಾರ್" ಎಂಬ ಮುಖ್ಯಸ್ಥನಿದ್ದು, ಆತನ ಅಧಿಕಾರವು ವಂಶಪಾರಂಪರ್ಯವಾಗಿರುತ್ತದೆ. ಇವನಿಗೆ ರಾಯ್‌ಬರಿ ಮತ್ತು ಗಾಡ್ಯ ಎಂಬ ಇಬ್ಬರು ಸಹಾಯಕರಿದ್ದು ಇವರು ಗುರಿಕಾರನಿಗೆ ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳಲ್ಲಿ ಸಹಕಾರ ನೀಡುತ್ತಾರೆ. ಇವರಲ್ಲಿ ಗೋವಾ ಕುಡುಬಿ ಹಾಗೂ ಕೊಡಿಯಾಲ ಕುಡುಬಿ ಎಂಬ ಎರಡು ಪಂಗಡಗಳಿದ್ದು ಹಲವಾರು ಬಳಿಗಳನ್ನು ಕಾಣಬಹುದಾಗಿದೆ. ವಾಘಣ್‌ಕಾರ್, ಮೋರ್‌ಕಾರ್, ಕೇಳ್‌ಕಾರ್, ಸೊಂಸ್‌ಕಾರ್, ದನ್‌ಕಾರ್, ದಿವ್‌ಡೇಕಾರ್, ಪಣಿಲೀಕಾರ್ ಇತ್ಯಾದಿ ಬಳಿಗಳಿರುವುದು ಕಂಡು ಬರುತ್ತದೆ. ಕುಡುಬಿಯರಲ್ಲಿ ಸಾಮಾನ್ಯವಾಗಿ ಕೆಲವು ಮರಗಳ ಹಾಗೂ ದೇವರ ಹೆಸರುಗಳನ್ನಿಟ್ಟುಕೊಳ್ಳುವ ಇವರಲ್ಲಿ ಗೋವಾ ಕುಡುಬಿಯರ ಪೈಕಿ ಗಂಡಸರಲ್ಲಿ ಸುಕಡಿ ನಾಯ್ಕ, ಕುಯಿರ್ ನಾಯ್ಕ, ರೌಹುಳು ನಾಯ್ಕ, ಪೈಕ ನಾಯ್ಕ, ಜೀಬಲ್ ನಾಯ್ಕ, ಗುಟ್ಟಿಯ ನಾಯ್ಕ ಮುಂತಾದ ಹೆಸರುಗಳಿಂದ ಗುರುತಿಸಿಕೊಂಡರೆ ಮಹಿಳೆಯರು ಬುಡ್ಡಿ ಬಾಯ್, ಬಿಕ್ರಿ ಬಾಯ್, ಸಿಬ್ಲಾ ಬಾಯ್, ಜಬ್ಲಿ ಬಾಯ್, ರಾಮ್ಲಿ ಬಾಯ್ ಹಾಗೂ ಕೊಡಿಯಾಲ ಕುಡುಬಿ ಪಂಗಡಗಳಲ್ಲಿ ಗಂಡಸರು ವಟ್ಟು ಗೌಡ, ಕಾಂಟ್ಯ ಗೌಡ, ರಾವಲಪ್ಪ ಗೌಡ, ಪೈಕ ಗೌಡ ಎಂದು ಹಾಗೂ ಮಹಿಳೆಯರಿಗೆ ಬೈಯು ಬಾಯ್, ಇರಮೊ ಬಾಯ್, ಬಾವಣಿ ಬಾಯ್ ಮುಂತಾದ ಹೆಸರುಗಳನ್ನಿಡುವುದು ಕಂಡುಬರುತ್ತದೆ.

**ಕುಡುಬಿಯರ ಆಚರಣೆಗಳು**

"ಕುಡುಬಿಯರು ಪ್ರಕೃತಿ ಆರಾಧಕರಾಗಿದ್ದು, ಸ್ಥಳೀಯ ಭೂತಾರಾಧನೆಯನ್ನು ಸಹ ಆಚರಿಸುತ್ತಾರೆ. ಹೋಳಿ ಹಬ್ಬದ ಸಂದರ್ಭದಲ್ಲಿ ಗೋವಾದ ಮಲ್ಲಿಕಾರ್ಜುನ ದೇವರು ಹಾಗೂ ಗೋವಾ ಅಮ್ಮ ಎನ್ನುವ ದೇವರನ್ನು ಮುಖ್ಯ ದೇವರಾಗಿ ಪೂಜಿಸುತ್ತಾರೆ. ಈ ಸಂದರ್ಭದಲ್ಲಿ ಜಾನಪದ ಸಾಂಪ್ರದಾಯಿಕ ಶೈಲಿಯ ಉಡುಗೆಗಳನ್ನು ತೊಟ್ಟು "ಗುಂಬೋಟ್", "ತೋನಿ" ಮತ್ತು "ದೋರಿನಾಚ್" ಎಂಬ ಹೆಸರಿನ ನೃತ್ಯವನ್ನು ಪ್ರಸ್ತುತಪಡಿಸಿ ಹಬ್ಬಗಳನ್ನು ಆಚರಿಸುತ್ತಾರೆ.

**ಕುಡುಬಿಯರ ಕಸುಬು**

ಕುಡುಬಿಯರು ದಕ್ಷಿಣ ಕನ್ನಡದ ಕರಾವಳಿ ಪ್ರದೇಶ ಹಾಗೂ ಪರ್ವತ ಶ್ರೇಣಿಗಳು ಸಂಧಿಸುವ ಪ್ರದೇಶಗಳಲ್ಲಿ ಹೆಚ್ಚಿಗೆ ವಾಸವಾಗಿದ್ದು ಆರಂಭದಲ್ಲಿ ಆಹಾರಕ್ಕಾಗಿ ಬೇಟೆಯನ್ನು ಅವಲಂಬಿಸಿ ತದನಂತರ ಸ್ಥಳಾಂತರ ಬೇಸಾಯ ಪದ್ಧತಿಯನ್ನು ರೂಢಿಸಿಕೊಂಡರು. ಭೂಮಿಗಳಿಲ್ಲದ ಕುಡುಬಿಗಳು ಹತ್ತಿರದ ಜಮೀನ್ದಾರರ ಹೊಲಗಳಲ್ಲಿ ಕೂಲಿಗಾಗಿ ದುಡಿಯುತ್ತಿದ್ದರು. 1961ರಲ್ಲಿ ಜಾರಿಗೆ ಬಂದ ಭೂಸುಧಾರಣಾ ಕಾಯಿದೆಯಿಂದ ಕೆಲವರು ಭೂಮಿ ಪಡೆಯುವಂತಾಗಿ ವ್ಯವಸಾಯ ಆರಂಭಿಸಿದರೆ ಇನ್ನೂ ಕೆಲವರು ಕೃಷಿ ಕೂಲಿಕಾರರಾಗಿ, ಅರಣ್ಯ ಉತ್ಪನ್ನಗಳ ಸಂಗ್ರಹಣೆಕಾರರಾಗಿ, ಬೆತ್ತದ ಬುಟ್ಟಿ ನೇಯುವ, ಚಾಪೆ ನೇಯುವ ಕಾಯಕದವರಾಗಿ ಔಷಧದ ಗಿಡ ಮೂಲಿಕೆ ಸಂಗ್ರಾಹಕರಾಗಿ ಹಾಗೂ ಸಣ್ಣ ಪ್ರಮಾಣದ ಪಶುಸಂಗೋಪನೆ ಮುಂತಾದ ಕಸುಬುಗಳನ್ನು ರೂಢಿಸಿಕೊಂಡು ಬದುಕಿನ ಭದ್ರತೆಗೆ ದಾರಿಮಾಡಿಕೊಂಡವರಾಗಿದ್ದಾರೆ.

ಕುಡುಬಿಯರು ಶೈಕ್ಷಣಿಕವಾಗಿ ತೀರಾ ಹಿಂದುಳಿದವರಾಗಿದ್ದು, ಸಾಮಾಜಿಕವಾಗಿ ಇನ್ನೂ ಕೆಳಮಟ್ಟದಲ್ಲೇ ಇದ್ದಾರೆ. ತಮ್ಮ ಸಮುದಾಯವು ಪರಿಶಿಷ್ಟ ಪಂಗಡಕ್ಕೆ ಸೇರುವುದರಿಂದ ಮೂಲಭೂತ ಸೌಕರ್ಯಗಳನ್ನು ಪಡೆಯಲು ಸಾಧ್ಯವೆಂದು ತಿಳಿದ ಕುಡುಬಿಗಳು ತಮ್ಮ ಅಸ್ತಿತ್ವದ ಪ್ರತಿಪಾದನೆಗೆ ಸಂಘಟಿತರಾಗಿ ಹೋರಾಟ ನಡೆಸಿಕೊಂಡು ಬರುತ್ತಿದ್ದಾರೆ.

**ಉತ್ತರ ಕನ್ನಡದ ಕುಣಬಿ ಸಮುದಾಯ**

ಕುಣಬಿಗಳು ಸಾಮಾನ್ಯವಾಗಿ ಉತ್ತರ ಕನ್ನಡದ ಕಾರವಾರ, ಅಂಕೋಲ, ಹೊನ್ನಾವರ ತಾಲೂಕುಗಳಲ್ಲಿ ಹಾಗೂ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕುಗಳಲ್ಲಿ ಕಂಡು ಬರುತ್ತಾರಾದರೂ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿರುವುದು ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲೂಕಿನಲ್ಲಿ. ದುರ್ಗಮವಾದ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತ ಕುಮರಿ ಬೇಸಾಯವನ್ನು ತನ್ನ ಪಾರಂಪರಿಕ ಕಸುಬನ್ನಾಗಿ ಪೋಷಿಸಿಕೊಂಡು ಬರುತ್ತಿರುವ ಕುಣಬಿಗಳು ನಿಸರ್ಗದ ಬಗ್ಗೆ ಅಪಾರ ಜ್ಞಾನ ಹೊಂದಿರುವಂತವರು. ಇತರ ಬುಡಕಟ್ಟು ಸಮುದಾಯಗಳಲ್ಲಿದ್ದಂತೆ ಭೂಮಿ ಸಮಸ್ಯೆ, ಒಕ್ಕಲೆಬ್ಬಿಸುವಿಕೆ, ಸಾಮಾಜಿಕ ದಬ್ಬಾಳಿಕೆ, ಮೂಲಭೂತ ಸೌಕರ್ಯಗಳ ಹಂಚಿಕೆಯಲ್ಲಿ ನಿರ್ಲಕ್ಷ, ಶೈಕ್ಷಣಿಕ ಹಿನ್ನಡೆ, ಸಾಂಸ್ಕೃತಿಕ ಶಿಥೀಲತೆ ಮುಂತಾದ ಸಮಸ್ಯೆಗಳನ್ನು ಈ ಸಮುದಾಯ ಸಹ ಎದುರಿಸುತ್ತಿರುವುದನ್ನು ನೋಡಬಹುದಾಗಿದೆ. ಮಲೆನಾಡಿನಲ್ಲಿ ವಾಸವಿರುವ ಹಲವಾರು ಬುಡಕಟ್ಟುಗಳಲ್ಲಿ ಕೆಲವು ಸ್ಥಳೀಯ ಆದಿವಾಸಿ ಗುಂಪುಗಳಾಗಿದ್ದರೆ, ಇನ್ನು ಕೆಲವು ಸಮುದಾಯಗಳು ಹೊರನಾಡಿನಿಂದ ಬಂದ ಬುಡಕಟ್ಟುಗಳಾಗಿವೆ. ಹೀಗೆ ಹೊರಗಿನಿಂದ ಬಂದ ಬುಡಕಟ್ಟುಗಳಲ್ಲಿ ಕುಣಬಿ ಸಮುದಾಯವೂ ಒಂದು. ಕುಣಬಿಗಳು ದಕ್ಷಿಣ ಕನ್ನಡದ ಕುಡುಬಿಗಳು, ಉತ್ತರ ಕನ್ನಡದ ಗೌಳಿಗಳು ಹಾಗೂ

ಮರಾಠಿ ನಾಯ್ಕ ಸಮುದಾಯಗಳಂತೆ ಗೋವಾದಿಂದ ವಲಸೆ ಬಂದ ಸಮುದಾಯಗಳಾಗಿವೆ. ಆದರೆ ವಲಸೆಗೆ ನಿಖರ ಕಾರಣವನ್ನು ಹೇಳಲು ಸಾಧ್ಯವಾಗದಿದ್ದರೂ ಸಹ ಹಲವಾರು ಅಧ್ಯಯನಕಾರರು ಪೋರ್ಚುಗೀಸರ ಆಡಳಿತ ಕಾಲದಲ್ಲಿ ಅವರು ಹೇರುತ್ತಿದ್ದ ಬಲವಂತದ ಮತಾಂತರಕ್ಕೆ ಹೆದರಿ ಗೋವಾ ಮತ್ತು ಅದರ ಸುತ್ತಮುತ್ತಲಿನ ಪ್ರದೇಶದ ದೂರದ ಕಾಡುಗಳಿಗೆ ವಲಸೆ ಬಂದಿರುತ್ತಾರೆಂದು ಹೇಳಲಾಗುತ್ತದೆ. ಆದರೆ ಕುಣಬಿಗಳು ಆಹಾರ ಸಂಗ್ರಹಣೆ ಹಂತದಲ್ಲಿ ಪೂರ್ಣ ಅಲೆಮಾರಿಗಳಾದ್ದು ಕುಮರಿ ಕೃಷಿ ಹಂತಕ್ಕೆ ತಲುಪಿದ ಮೇಲೆ ಅರೆ ಅಲೆಮಾರಿಗಳಾಗಿ ಪರಿವರ್ತಿತರಾದರು. ಈ ಹಿನ್ನೆಲೆಯಲ್ಲಿ "ಸ್ಥಳಾಂತರ ಬೇಸಾಯ" ಅಥವಾ "ಕೆತ್ತುವ ಬೇಸಾಯ" ಮಾಡಿಕೊಂಡು ಬಂದ ಬಗ್ಗೆ ಮಾಹಿತಿಗಳು ಸಿಗುತ್ತವೆ. ಹೀಗೆ ವಲಸೆ ಬಂದ ಕುಣಬಿಗಳು ಸ್ಥಳೀಯ ಸಮುದಾಯಗಳೊಂದಿಗೆ ವ್ಯವಹರಿಸುತ್ತ ಬದುಕು ಕಟ್ಟಿಕೊಳ್ಳುತ್ತ ಇತ್ತಿತ್ತಲಾಗಿ ಸಂಘಟಿತರಾಗುತ್ತಿರುವುದು ಕಂಡುಬರುತ್ತಿದೆ.

ಸಾಮಾನ್ಯವಾಗಿ ಕುಂಬ್ರಿ ಮರಾಠಿಗರಂತೆ ಕುಣಬಿಗಳೂ ಸಹ ಪಶ್ಚಿಮ ಘಟ್ಟದ ಪ್ರದೇಶಗಳಲ್ಲಿ ವಾಸಿಸುವವರಾಗಿದ್ದು ಗಡಿ ಪ್ರದೇಶಗಳಾದ ಜೊಯಿಡಾ, ಕಾರವಾರ, ಅಂಕೋಲಾ, ಹಳಿಯಾಳ, ಯಲ್ಲಾಪುರ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಕುಣಬಿಗಳ ನೆಲೆಗಳ ತಾಲೂಕುವಾರು ಮಾಹಿತಿ ಸಂಗ್ರಿಸಲಾಗಿದ್ದು ಅವು ಇಂತಿವೆ.

**ಜೊಯಿಡಾತಾಲೂಕು** : ಅಣಶಿವಾಡಾ, ಆಲ್‌ಕುಂಬಿ, ಅಸುಳ್ಳಿ, ಅಂಬರ್ಡೆ, ಅಂಬೋಳಿ, ಅಂಬಟ್‌ಗಾಳಿ, ಅಂಬಾಳಿ, ಕಡಕರ್ಣ, ಕಣ್ಣೆ, ಕರಕಣೆ, ಕರಂಬಾಳಿ, ಕಳಣೆ, ಕಾಜುವಾಡಾ, ಕಾಟೇಲ್, ಕಾರಟೋಳಿ, ಕಾರ್‌ಸಿಂಗಳ್, ಕಾಳಸಾಯಿ, ಕಿರವತ್ತಿ, ಕಿಂದಳೆ, ಕುರಾವಲಿ, ಕುಮ್‌ಗಾಳ್, ಕುಂಡಲ್, ಕುಣ್ಣಂಗ್, ಕೇಲೋಲಿ, ಕೊಂದೊರ್, ಖಾನ್‌ಗಾಂವ್, ಗಾವಡೇವಾಡಾ, ಗಾಳ್,ಗಾಂಗೋಡಾ, ಗುಂದ್, ಗುಂದರೆ, ಗುಂದಾಳಿ,ಗೋಕರ್ಣ, ಘಟ್ಟಾವ್, ಚಾಪಾಳಿ, ಚಾಪೇಲ್, ಚಾಪೋಲಿ (ಕಳಸಾಯಿ) ಚಾಪೋಲಿ, ಚೌಕನ್‌ಗಾಳಿ, ಚಂದ್ರಾಳಿ, ಝೂಮ್‌ಗಾಳಿ, ಟಿಟಗಾಳಿ, ಡಿಗ್ಗಿ, ಡೇರಿಯಾ, ತಾಡಕೇತ್, ತಿನೇಕಂಡ್, ತೇಲೋಲಿ, ದಾಡಸೇತ್, ದಾತೋಡಿ, ದಿಗಲಂಬ್, ದುಧಮಳಾ, ದುಧಮಳಾ, ವೈಲವಾಡ, ಧುಪೇವಾಡ, ನಗರ ಭಾವಿ, ನಗರಿ, ನವರ್, ನುಜ್ಜಿಪಾಟ್ನೇ, ಪಟ್ಟೇಗಾಳಿ, ಪತ್ರಿವಾಡಾ, ಪಾತಾಗುಡಿ, ಪಿಸೋಸಾ, ಪ್ರಶೇಲಿ, ಪೋಟೋಳಿ, ಪೋಸೋಲಿ, ಬಾಕಿ, ಬಾಂದೇಗಾಳಿ, ಬಿಡೋಳಿ ಪಾಟ್ನೆ, ಬಿರೊಡಾ, ಬೊಂಡೇಲಿ, ಭಾಮಣೆ, ಭಾರಾಡಿ, ಮಡಭಾವಿ, ಮಲಕರ್ಣಿ, ಮಾತಕಣೆ, ಮಾಟಗಾಂವ್, ಮಾಯಾರೆ, ಮಿರಾಸಕುಂಟೇಲ, ಮುಡಿಯೇ, ಮೈನೋಳ, ರಾಮನಗರ, ರಿಂಬುಡ್‌ಶೇತ್, ರುಂಡಾಳಿ, ವಡಾಕಡೇ, ವಾರಂಡ, ವಾಗಬಂದ್, ವಾಗೇಲಿ, ವಾಸ್‌ಪೋಡ್, ವಿರಲ್, ಶಿರೋಳಾ, ಸಾಚ್ಚೇವಾಡಾ, ಸಾಮ್‌ಜೋಯಿಡಾ, ಸಿಟ್ಟೇಗಾಳಿ, ಸಿತಾವಾಡಿ, ಸಿಸಯಿ, ಸುಕ್‌ತರಿ, ಸುಳಾವಳಿ, ಸೊಲಿಯಾ, ಹೆಣಕೋಳ, ಹನುಲ್ಲೇ, ಹುಡಸಾ.[10]

1. **ಯಲ್ಲಾಪುರತಾಲೂಕು** : ಅಳ್ಳೆಮನೆ, ತಾರೆಮನೆ, ಗೀರಕ್ಲುತಿಮಾನಿ, ಬಂತೊಳ್ಳಿ, ಹೆಗ್ಗಾರಮನೆ.

2. **ಕಾರವಾರತಾಲೂಕು** : ಕಡಚಿಮನೆ, ಕಬ್ಯಾ, ಹರೂರು.

3. **ಅಂಕೋಲಾ ತಾಲೂಕು** : ಲಕ್ಕೆಮನೆ, ಶೇಡಿಗುಳಿ.

**ಕುಣಬಿಯರ ಐತಿಹಾಸಿಕ ಹಿನ್ನೆಲೆ**

ಕುಣಬಿಯರು ಗೋವಾದಿಂದ ವಲಸೆ ಬಂದು ಉತ್ತರಕನ್ನಡದ ಕಾಡುಗಳಲ್ಲಿ ನೆಲೆನಿಂತರು. 16 ನೇ ಶತಮಾನದಲ್ಲಿ ಗೋವಾದಿಂದ ವಲಸೆ ಬಂದಿರುವ ಇವರು ಸರಿಸುಮಾರು ನಾಲ್ಕು ಶತಮಾನಗಳಿಂದ ಉತ್ತರ ಕನ್ನಡದ ಕಾಡುಗಳಲ್ಲಿ ಬದುಕುತ್ತಾ ಬಂದಿದ್ದಾರೆ. ಐತಿಹಾಸಿಕವಾಗಿ ಕುಣಬಿಯರು ಗೋವಾದಿಂದ ಸುಮಾರು 1504 ರಿಂದ 1509ರ ಕಾಲದಲ್ಲಿ ಪೋರ್ಚುಗೀಸರು ಗೋವಾವನ್ನು ಆಕ್ರಮಿಸಿಕೊಂಡ ಕಾಲದಲ್ಲಿ ಅವರ ದಬ್ಬಾಳಿಕೆಗೆ ಹೆದರಿ ಬೇರೆ ಬೇರೆ ಕಡೆಗಳಿಗೆ ವಲಸೆ ಬಂದರು ಎಂದು ಹೇಳಲಾಗುತ್ತಿದೆ.

ಈ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು ಕುಂಬ್ರಿ ಮರಾಠಿಗಳ ಸಾಂಸ್ಕೃತಿಕ ಹಾಗೂ ಧಾರ್ಮಿಕ ಚಟುವಟಿಕೆಗಳನ್ನು ಗಮನಿಸಲಾಗಿ ಕುಂಬ್ರಿ ಮರಾಠಿಗರು ತಮ್ಮ ದೇವರುಗಳನ್ನು ಬಟ್ಟೆಯಲ್ಲಿ ಸುತ್ತಿ ಪೆಟ್ಟಿಗೆಯಲ್ಲಿಟ್ಟು ಚಾವಿ ಹಾಕುವ ಹಾಗೂ ವಿಶೇಷ ಸಂದರ್ಭದಲ್ಲಿ ಹೊರತೆಗೆದು ಪೂಜಿಸಿ ಪುನಃ ಪೆಟ್ಟಿಗೆಯಲ್ಲಿಡುವುದು ಕಂಡುಬರುತ್ತದೆ. ಇದರಿಂದ ಕುಂಬ್ರಿ ಮರಾಠಿಗರೂ ಸಹ ಅಲೆಮಾರಿಗರು ಮತ್ತು ವಲಸಿಗರು ಎಂಬುದು ಸ್ಪಷ್ಟವಾಗುತ್ತದೆ.

ಕುಣಬಿಗಳು ಕಾಡು ಮಾರ್ಗವಾಗಿ ಉತ್ತರ ಕನ್ನಡದ ಕೆಲ ಪ್ರದೇಶಗಳಿಗೆ ಬಂದ ಆರಂಭದಲ್ಲಿ ಬದುಕಿಗಾಗಿ ಕಾಡನ್ನೇ ಅವಲಂಬಿಸಿದ್ದರು. ಕಾಡುಕೋಳಿ, ಕಾಡುಕುರಿ, ಕಾಡುಹಂದಿ ಸೆರೆ ಹಿಡಿಯುತ್ತಾ ನದಿ ಕೆರೆಗಳಲ್ಲಿ ಮೀನು ಹಿಡಿಯುತ್ತಾ ಆಹಾರಕ್ಕೆ ಮಾರ್ಗೋಪಾಯಗಳನ್ನು ಕಂಡುಕೊಳ್ಳುತಿದ್ದರು. ತದನಂತರದಲ್ಲಿ ಸ್ಥಳಾಂತರ ಬೇಸಾಯವನ್ನು ಆರಂಭಿಸಿಕೊಂಡು ಭತ್ತ ಬೆಳೆಯಲು ಆರಂಭಿಸಿದರು. ಅದರ ಜೊತೆಗೆ ದನಕರುಗಳನ್ನು ಸಾಕುತ್ತಾ, ಹಾಲಿನ ಉತ್ಪನ್ನಗಳನ್ನು ಬಳಸತೊಡಗಿದರು. ಜೊತೆಗೆ ಕೆಸುವಿನ ಗಡ್ಡೆ, ಹೆಜ್ಜೇನು, ತುಡವಿಜೇನು, ಮಿಸರಿಜೇನು ಹುಡುಕುತ್ತಾ ಆಹಾರ ಸಂಗ್ರಹಕಾಯಕದಲ್ಲಿರುವ ಕುಣಬಿಗಳು ಅಲೆಮಾರಿಗಳಂತೆಯೂ ಕಂಡುಬರುತ್ತಾರೆ.

**ಕುಣಬಿ ಸಮುದಾಯದ ಭಾಷೆ**

ಕರ್ನಾಟಕ ಹಾಗೂ ಗೋವಾ ರಾಜ್ಯದ ಗಡಿ ಪ್ರದೇಶ ಉತ್ತರ ಕನ್ನಡ ಜಿಲ್ಲೆಯಲ್ಲಿ ಕಂಡುಬರುವ "ಕುಣಬಿ" ಸಮುದಾಯ ಜಿಲ್ಲೆಯ ಗಡಿ ಭಾಗದ ಜೋಯಿಡಾ ತಾಲೂಕಿನ ಕಾಡುಗಳಲ್ಲಿ ಹೆಚ್ಚಿನ

ಸಂಖ್ಯೆಯಲ್ಲಿ ನೆಲೆಸಿದೆ. ಕುಣಬಿಯರು ಮರಾಠಿ ಮಿಶ್ರಿತ ಕೊಂಕಣಿ ಭಾಷೆಯಲ್ಲಿ ಮಾತನಾಡುತ್ತಾರೆ. ಅಲ್ಲದೇ ಇವರಾಡುವ ಭಾಷೆಯ ಮೇಲೆ ಸ್ಥಳೀಯ ಕನ್ನಡ ಭಾಷೆಯೂ ಕೂಡ ಪರಿಣಾಮ ಬೀರಿರುವುದು ಅವರ ಆಡು ಭಾಷೆಯಲ್ಲಿ ಕಂಡು ಬರುತ್ತದೆ.

**ಕುಣಬಿಯರ ಉಡುಗೆ ತೊಡುಗೆ**

ಉತ್ತರ ಕನ್ನಡ ಹಾಗೂ ಶಿವಮೊಗ್ಗ ಜಿಲ್ಲೆಗಳ ಪಶ್ಚಿಮ ಘಟ್ಟ ಪ್ರದೇಶಗಳಲ್ಲಿ ಕಂಡುಬರುವ ಕುಣಬಿಯರು ಸರಳ ಉಡುಗೆ ತೊಡುಗೆಯವರಾಗಿದ್ದು ಪುರುಷರು ಹೆಚ್ಚಿನದಾಗಿ ಲುಂಗಿ ಸುತ್ತಿಕೊಳ್ಳುತ್ತಾರೆ ಹಾಗೂ ಕಸೆ ಅಂಗಿಗಳನ್ನು ಧರಿಸುತ್ತಾರೆ. ಅಂತೆಯೇ ಮಹಿಳೆಯರು ಕುಡುಬಿ ಯರಂತೆಯೇ ಕುಪ್ಪುಸ ಧರಿಸದೇ ಕೇವಲ ಸೀರೆಯಿಂದಲೇ ದೇಹಕ್ಕೆ ಸುತ್ತಿಕೊಂಡು ಭುಜ ಭಾಗದಿಂದ ಸೆರಗಿನ ಒಂದು ತುದಿಯನ್ನು ಎಳೆದು ಕಟ್ಟಿಕೊಳ್ಳುತ್ತಾರೆ. ಇದನ್ನು ಗೇಟಿ ಪದ್ಧತಿ ಎಂದು ಕರೆಯಲಾಗುತ್ತದೆ. ಹಿರಿಯ ವ್ಯಕ್ತಿಗಳನ್ನು ಹೊರತು ಪಡಿಸಿದರೆ ಈಗೀಗ ಪುರುಷರು ಪ್ಯಾಂಟ್ ಶರ್ಟ್, ಮಹಿಳೆಯರು ಸೀರೆ ಕುಪ್ಪುಸ ಧರಿಸುವುದನ್ನು ರೂಢಿಸಿಕೊಂಡಿದ್ದಾರೆ.

**ಕುಣಬಿಯರ ಆಹಾರ**

ಕುಣಬಿಗಳು ಗೋವಾದಿಂದ ವಲಸೆ ಬಂದ ಆದಿಯಿಂದಲೂ ಸ್ಥಳಾಂತರ ಬೇಸಾಯ ಪದ್ಧತಿಯನ್ನು ರೂಢಿಸಿಕೊಂಡು ತಮಗೆ ಬೇಕಾದ ಭತ್ತ ಹಾಗೂ ಗೆಡ್ಡೆಗೆಣಸುಗಳನ್ನು ಬೆಳೆದುಕೊಳ್ಳುತ್ತಾರೆ. ಪಟ್ಟೋ, ವೈಪರ್, ಬಂಗಾರ್‌ಸಾಳ್, ಪೂನಂ ಇವು ಕುಣಬಿಗಳು ಬೆಳೆಯುವ ವಿಶೇಷ ಭತ್ತ ತಳಿಗಳಾದರೆ ಕೋನ, ಮೂಡ್ಲಿ, ಕಾಟೆಕಣಂಗ್, ಚಿರತೆ ಎಂಬ ಗೆಡ್ಡೆ ಗೆಣಸುಗಳಾಗಿವೆ. ಇವರು ಮಾಂಸಹಾರಿಗಳೂ ಆಗಿದ್ದು ಆಹಾರಕ್ಕಾಗಿ ಬೇಟೆಯನ್ನು ಉಪ ವೃತಿಯನ್ನಾಗಿಸಿಕೊಂಡಿದ್ದ ಕುಣಬಿಗಳು ಬೇಟೆ ನಿಷೇಧದಿಂದ ಈ ಪದ್ಧತಿಯನ್ನು ಬಿಟ್ಟಿದ್ದಾರೆ.

**ಕುಣಬಿಯರ ಸಾಮಾಜಿಕ ವ್ಯವಸ್ಥೆ**

ಕಾರಣಾಂತರಗಳಿಂದ ವಲಸೆ ಬಂದ ಕುಣಬಿಗಳಲ್ಲಿ ದಕ್ಷಿಣ ಕನ್ನಡದ ಕುಡುಬಿಗಳ ಸಮುದಾಯದಲ್ಲಿರುವಂತೆ ಒಳಾಡಳಿತ ವ್ಯವಸ್ಥೆಯಿದ್ದು ಗೋವಾ ರಾಜ್ಯದಲ್ಲಿ ಪರಿಶಿಷ್ಟ ಪಂಗಡವೆಂದು ಘೋಷಿಸಲಾದ ಕುಣಬಿಗಳ ಸಮುದಾಯದ ಹೆಚ್ಚಿನ ಎಲ್ಲಾ ಲಕ್ಷಣಗಳನ್ನು ಉತ್ತರ ಕನ್ನಡ ಜಿಲ್ಲೆಯ ಕುಣಬಿಯರು ಹೊಂದಿರುವುದು ಕಂಡುಬರುತ್ತದೆ. ಇವರಲ್ಲಿ ಒಂದೇ ಕುಲಕ್ಕೆ ಸೇರಿದ ವಿವಿಧ ಕುಟುಂಬಗಳ ಆಡಳಿತ ನೋಡಿಕೊಳ್ಳಲು "ಬುಧ್‌ವಂತ್" ಎಂಬ ಹಿರಿಯನಿರುತ್ತಾನೆ. ಕುಟುಂಬಗಳ ನಡುವಿನ ಯಾವುದೇ ವ್ಯವಹಾರ ತಂಟೆ ತಕರಾರು, ವ್ಯಾಜ್ಯಗಳಿದ್ದಲ್ಲಿ "ಬುಧ್‌ವಂತ್" ಹೇಳಿದ ತೀರ್ಮಾನವೇ ಅಂತಿಮ. ವಿವಿಧ ಕುಳಾವಿಗಳ ನಡುವಿನ ವ್ಯವಹಾರಗಳನ್ನು "ಗಾವಡೆ"ಗಳು

ನೋಡಿಕೊಳ್ಳುತ್ತಾರೆ. ಗಾವಡೆ ಬುಧ್‌ವಂತ್‌ನಿಗಿಂತ ಮೇಲಿನ ಸ್ಥಾನದಲ್ಲಿರುತ್ತಾನೆ. ಒಟ್ಟಾರೆ ಕುಣಬಿ ಸಮುದಾಯದ ಹಬ್ಬ ಹರಿದಿನ ಹಾಗೂ ಜಾತ್ರೆ ಉತ್ಸವಗಳ ಉಸ್ತುವಾರಿ ಮತ್ತು ಇತರ ತೀರ್ಮಾನಗಳನ್ನು "ಬುಧ್‌ವಂತ್" ಹಾಗೂ "ಗಾವಡೆ"ಗಳು ಒಟ್ಟಾಗಿ ಸೇರಿ ತೀರ್ಮಾನಿಸುತ್ತಾರೆ. ವರ್ಷದಲ್ಲಿ ಒಂದೆರಡು ಬಾರಿ ಅಂತರ ಕುಳಾವಿಗಳ ಅಂದರೆ ಇಡೀ ಸೀಮೆಯ ಸಮೂಹ ಸಭೆ ನಡೆಯುವುದುಂಟು. ಕುಣಬಿಗಳ ದೈವಪೂಜೆ ಮತ್ತು ದೇವಸ್ಥಾನಗಳ ಉಸ್ತುವಾರಿಯನ್ನು "ಮಿರಾಶಿ"ಗಳು ನೋಡಿಕೊಳ್ಳುತ್ತಾರೆ. ಮಿರಾಶಿ ಪೂಜಾರಿಯೂ ಹೌದು, ಉಸ್ತುವಾರಿಯ ಮುಖಂಡನೂ ಹೌದು. ಸೀಮೆಗಳ ಸಭೆಗಳಿಗೆ ಮಿರಾಶಿಗಳನ್ನು ಗೌರವ ಸದಸ್ಯರನ್ನಾಗಿ ಕರೆಸಲಾಗುತ್ತದೆ.

**ಕುಣಬಿಗಳ ಆಚರಣೆ**

ಕುಣಬಿಯರು ಅಪಾರ ದೈವ ಭಕ್ತರಾಗಿದ್ದು ತಮ್ಮ ರಕ್ಷಣೆಗೆ ಅನೇಕ ದೈವಗಳನ್ನು ಆರಾಧಿಸುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ಅವುಗಳಲ್ಲಿ ದಾಂಡೇಲಪ್ಪ, ಸಿದ್ಧನಾಥ, ಮಲ್ಲಿಕಾರ್ಜುನ, ಮಾಬಳೇಶ್ವರ, ಸೋಮನಾಥ, ಕಾಲಭೈರವ ಇವು ಶಿವ ಸ್ವರೂಪಿ ದೈವಗಳಾಗಿದ್ದು ಇವುಗಳಿಗೆ ಯಾವುದೇ ನಿರ್ದಿಷ್ಟ ರೂಪಗಳಿಲ್ಲಾ ಆದರೆ ವರಟು ಕಲ್ಲು ಅದರ ಪಕ್ಕದಲ್ಲಿ ಒಂದು ತ್ರಿಶೂಲ ಇರುವುದನ್ನೇ ಈ ಮೇಲಿನ ದೇವರುಗಳನ್ನಾಗಿ ಪೂಜಿಸುವ ಪರಿಪಾಠವಿದೆ. ಅಂತೆಯೇ ಕೆಲವು ಕಡೆಗಳಲ್ಲಿ ಭೂಮಿಯಿಂದ ನೆಟ್ಟಗೆ ಮೇಲೆದ್ದು ಬಂದಂತೆ ಕಾಣುವ 7 ಕಲ್ಲಿನ ಸಮೂಹವನ್ನು "ಸಾತ್ ಪುರುಷ್" ದೇವರೆಂದು ಅವು ತೀರಿ ಹೋದ ಹಿರಿಯ ಆತ್ಮಗಳನ್ನು ಸಾಂಕೇತಿಸುವ ದೇವರೆಂದು ನಂಬುತ್ತಾರೆ. ಅಲ್ಲದೇ ಇವರಲ್ಲಿ "ಕಾಪ್ರಿ" ದೇವರೆಂದು ಕರೆಯಲ್ಪಡುವ ಗಡಿ ದೇವರನ್ನು ಆರಾಧಿಸುವ ಹಾಗೂ ಊರಿನ ಕುಳಾವಿಯ ಹಿತ ಕಾಪಾಡುವ "ಜನ್ಮಿ" ಎಂಬ ದೈವದ ಆರಾಧನೆಯನ್ನು ಇವರಲ್ಲಿ ಕಾಣಬಹುದಾಗಿದೆ. ಅಷ್ಟೇ ಅಲ್ಲದೇ ಸ್ಥಳೀಯ ಪ್ರದೇಶದ ಬೆಟ್ಟ ಗುಡ್ಡಗಳನ್ನೂ, ಅತ್ತಿ, ಆಲ, ಬನ್ನಿ, ಗೋಳಿ, ಮಾವು ಮುಂತಾದ ಮರಗಳನ್ನೂ ಸಹ ಇವರು ಪೂಜಿಸುತ್ತಾರೆ. ಇವರಲ್ಲಿ "ಕಾಪ್ರಿ" ದೇವರ ಹಾಗೂ ಸ್ತ್ರೀ ದೇವತೆಯಾದ "ಗೌಳಾ ದೇವಿ"ಯ ಜಾತ್ರೆಯನ್ನು ವಿಶೇಷವಾಗಿ ಆಚರಿಸುತ್ತಾರೆ. "ಮಾಳ್" ಎಂದು ಆಚರಿಸುವ ಹೋಳಿ ಕುಣಬಿಯರ ಸಡಗರದ ಹಬ್ಬ. ಈ ಹಬ್ಬದಲ್ಲಿ "ಹೋಳಿ ಸಿಗ್ಮಾ" ಎಂಬ ವಿಶೇಷ ಕುಣಿತದಿಂದ ಸಂಭ್ರಮಪಡುತ್ತಾರೆ. ಅಂತೆಯೇ ದೀಪಾವಳಿ, ಗಣೇಶ ಚೌತಿ ಹಬ್ಬಗಳನ್ನೂ ಸಹ ಉತ್ತರ ಕನ್ನಡದ ಕುಣಬಿಗಳು ವಿಶೇಷವಾಗಿ ಆಚರಿಸುತ್ತಾರೆ.

**ಕುಣಬಿಯರ ಕಸುಬು**

ವಿದ್ವಾಂಸರ ಪ್ರಕಾರ ಗೋವಾ ರಾಜ್ಯದಿಂದ ವಲಸೆ ಬಂದ ಕುಣಬಿಯರು ಅರಣ್ಯವನ್ನೇ ನಂಬಿ ಬದುಕುತ್ತಿರುವ ಸಮುದಾಯವೆಂಬುದರಲ್ಲಿ ಎರಡು ಮಾತಿಲ್ಲಾ. ಹೀಗೆ ಅರಣ್ಯಾಧಾರಿತವಾಗಿ

ಬದುಕು ಕಟ್ಟಿಕೊಂಡ ಕುಣಬಿಗಳ ಕಸುಬನ್ನು 3 ಹಂತಗಳಲ್ಲಿ ವಿಂಗಡಿಸಿ ನೋಡಬಹುದಾಗಿದೆ. ಅವು 1. ಆಹಾರ ಸಂಗ್ರಹಣೆ 2. ಬೇಟೆ 3. ಕುಮರಿ ಬೇಸಾಯ ಪದ್ಧತಿಗಳಾಗಿವೆ. ಒಂದಾನೊಂದು ಕಾಲದಲ್ಲಿ ಅರಣ್ಯದಲ್ಲಿ ನೈಸರ್ಗಿಕವಾಗಿ ಸಿಗುವ ಗೆಡ್ಡೆ–ಗೆಣಸು, ಹಣ್ಣು–ಹಂಪಲು, ನಾರು–ಬೇರು, ಜೇನು ಇತ್ಯಾದಿಗಳನ್ನು ಸಂಗ್ರಹಿಸಿ ಬದುಕು ಸಾಗಿಸುತ್ತಿದ್ದು ಸಾವಿರಾರು ವರ್ಷಗಳ ನಂತರ ಆಹಾರ ಸಂಗ್ರಹಣೆಯ ಜೊತೆಗೆ ಬೇಟೆಯನ್ನು ರೂಢಿಸಿಕೊಂಡಿರುವ ಬಗ್ಗೆ ತಿಳಿದು ಬರುತ್ತದೆ. ಬೇಟೆ ಎಂದರೆ ಅದೊಂದು ಉಪಜೀವನ ಪದ್ಧತಿ ಮಾತ್ರ, ಆಹಾರ ಸಂಗ್ರಹ ಲಭ್ಯವಿಲ್ಲದಿದ್ದಾಗ ಹಾಗೂ ಸಂಗ್ರಹಿಸಿದ ಆಹಾರ ಪದಾರ್ಥಗಳ ಕೊರತೆ ಇದ್ದಾಗ ಬೇಟೆ ಅನಿವಾರ್ಯವಾಗುತ್ತಿತ್ತು. ಕಾಲ ಕಳೆದಂತೆ ಆಹಾರ ಸಂಗ್ರಹಣೆ ಮತ್ತು ಬೇಟೆಯ ಹಂತ ಸಡಿಲಗೊಂಡು ಕೃಷಿಯ ಕಡೆಗೆ ಗಮನ ಹರಿಸಿದರಲ್ಲದೇ ಆರಂಭದಲ್ಲಿ "ಕುಮರಿ ಬೇಸಾಯ" ಅಥವಾ "ಕೆತ್ತುವ ಬೇಸಾಯ" ಅಥವಾ "ಸ್ಥಳಾಂತರ ಬೇಸಾಯ" ಪದ್ಧತಿಯ ಕೃಷಿಯನ್ನೇ ಮುಖ್ಯ ಕಸುಬನ್ನಾಗಿ ರೂಢಿಸಿಕೊಂಡವರಾಗಿದ್ದಾರೆ. ಅಲ್ಲದೇ ಜೀವನೋಪಾಯಕ್ಕಾಗಿ ಕಾಡು ಉತ್ಪನ್ನಗಳ ಸಂಗ್ರಹಣೆ ಹಾಗೂ ಕಾಡಲ್ಲಿ ಸಿಗುವ ಬೆತ್ತ, ನಾರು, ಬೀಳಲು ಹಾಗೂ ಹುಲ್ಲುಗಳನ್ನು ಸಂಗ್ರಹಿಸಿ ಕರಕುಶಲ ವಸ್ತುಗಳನ್ನು ಸಿದ್ಧಪಡಿಸಿ ಮಾರಾಟ ಮಾಡುತ್ತಾರೆ.

### 4. ಉತ್ತರ ಕನ್ನಡದ ಕುಣಬಿ ಮತ್ತು ಕುಡುಬಿಗಳ ನಡುವಿನ ಸಾಮ್ಯತೆ

ಕುಣಬಿಯರು ಉತ್ತರ ಕನ್ನಡ ಮತ್ತು ಶಿವಮೊಗ್ಗ ಜಿಲ್ಲೆಯ ಘಟ್ಟದ ಮೇಲಿನ ದಟ್ಟ ಅರಣ್ಯಗಳಲ್ಲಿದ್ದರೆ, ಕುಣಬಿಯರು ದಕ್ಷಿಣ ಕನ್ನಡ ಜಿಲ್ಲೆಯ ಘಟ್ಟದ ಕೆಳಗಿನ ಕರಾವಳಿ ಪ್ರದೇಶದಲ್ಲಿ ವಾಸವಾಗಿದ್ದಾರೆ. ಆಚಾರ–ವಿಚಾರ, ದೈಹಿಕ ಚಹರೆ ಹಾಗೂ ಸಾಂಸ್ಕೃತಿಕ ವಿವರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಕುಡುಬಿ ಮತ್ತು ಕುಣಬಿಯರಲ್ಲಿ ಅಂಥ ವ್ಯತ್ಯಾಸವೇನೂ ಕಾಣುವುದಿಲ್ಲಾ. ಬಹುಶಃ ಘಟ್ಟದ ಮೇಲೆ ಮತ್ತು ಘಟ್ಟದ ಕೆಳಗಿನ ಅಕ್ಷರ ಉಚ್ಚಾರದಲ್ಲಿ ಆಗಿರುವ ಅಕ್ಷರ ವ್ಯತ್ಯಾಸವೇ ಹೊರತು ಅದಕ್ಕಿಂತ ದೊಡ್ಡ ಕಾರಣವೇನೂ ಇರಲಾರದು. ಆದರೆ ಸಹಜವಾಗಿ ಘಟ್ಟದ ಮೇಲಿನ ಮತ್ತು ಘಟ್ಟದ ಕೆಳಗಿನ ಜನ ಜೀವನದಲ್ಲಿಯೇ ಸಾಕಷ್ಟು ಪ್ರಾದೇಶಿಕ ವ್ಯತ್ಯಾಸಗಳಿರುವುದರಿಂದ ಈ ಸಮುದಾಯಗಳಲ್ಲಿಯೂ ಅಷ್ಟರ ಮಟ್ಟಿನ ಪ್ರಾದೇಶಿಕ ವ್ಯತ್ಯಾಸವಿದೆ. ಘಟ್ಟದ ಮೇಲೆ ಕೊಂಕಣಿಗೆ ಕನ್ನಡ ಬೆರೆತಿರುವಂತೆ, ಘಟ್ಟದ ಕೆಳಗೆ ಕೊಂಕಣಿಗೆ ತುಳು ಬೆರೆತಿದೆ. ಕುಂದಾಪುರದ ಸುತ್ತ–ಮುತ್ತಲ "ಕುಡುಬಿ"ಯರ ಕೊಂಕಣಿಗೆ ಕುಂದಾಪುರದ ಪ್ರಾದೇಶಿಕ ಕನ್ನಡವೂ ಬೆರೆತಿದೆ ಎನ್ನಬಹುದು. "ಕುಡುಬಿ"ಯರು ಕೂಡಾ ಗೋವಾದಿಂದ ವಲಸೆ ಬಂದವರು ಎಂದು ಹಲವಾರು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ದಕ್ಷಿಣ ಕನ್ನಡ ಕಾಡಿನಲ್ಲಿ ವಾಸಿಸುವ ಕುಡುಬಿಯರನ್ನು ಗೋವಾ ಕುಡುಬಿಯರು, ಕುಮ್ರಿ ಕುಡುಬಿಯರು ಎಂದು ಕರೆಯುತ್ತಾರೆ. ವಾಸ್ತವವಾಗಿ ಇವರೆಲ್ಲರೂ ಒಂದೇ ಗುಂಪಿನವರಾಗಿ

ಸ್ಥಳೀಯರು ಹೊರಗಿನವರನ್ನು ಗುರುತಿಸುವಾಗ ಒಂದೊಂದು ಹೆಸರು ಕೊಟ್ಟಂತೆ ಕಾಣುತ್ತದೆ. ಸಮುದ್ರದ ದಂಡೆಯಲ್ಲಿ ವಾಸಿಸುವ ಕುಡುಬಿಯರನ್ನು ಕೊಡಿ ಮೂಲ ಕುಡುಬಿಯರು ಮತ್ತು ಜೋಗಿ ಕುಡುಬಿಯರು ಎಂದು ಕರೆಯುತ್ತಾರೆ. ಇವರಿಗೆ ಕ್ರಮೇಣ ಕಾನನ ಸಂಪರ್ಕ ತಪ್ಪಿ ಸಮುದ್ರದ ಸಂಪರ್ಕ ಬಂದಿದೆ. ಸಮುದ್ರ ದಂಡೆಯ "ಕೊಡಿಯಾಲ" ಎಂಬಲ್ಲಿ ನೆಲೆ ನಿಂತ ಕಾರಣ ಆ ಸ್ಥಳನಾಮದ ಹೆಸರು ಅಂಟಿಕೊಂಡಿದೆ ಎಂಬುದು ಸ್ಪಷ್ಟ.[11]

ದಕ್ಷಣ ಕನ್ನಡ ಕುಡುಬಿಯರ ಸಾಂಸ್ಕೃತಿಕ ನೆಲೆಗಳೆಲ್ಲವೂ ಉತ್ತರ ಕನ್ನಡ ಕುಣಬಿಯರ ಮುಂದುವರೆದ ರೂಪಗಳೇ ಆಗಿವೆ. ವಲಸೆ ಮುಂದುವರಿದಂತೆ ದಕ್ಷಿಣದ ಕಡೆಗೆ ಬಂದ ಇವರು ಕರಾವಳಿಯ ದಟ್ಟ ಕಾನನಗಳಲ್ಲಿ ತಮ್ಮ ನೆಲೆ ಕಂಡು ಕೊಂಡರು. ಕುಂದಾಪುರ, ಮಂದರ್ತಿ, ಕೊರ್ಕ್ಕರ್ಣ, ಸುರಾಲು, ಬಿಲ್ಲಾಡಿ, ಹೆಸ್ಕುಂದ, ಹಾಲಾಡಿ, ಸಿರಿಯಾರ, ನೆಡೂರು, ಕೊಲ್ಲೂರು, ಭಜಪೆ ಮುಂತಾದ ಊರುಗಳಲ್ಲಿ ಹೆಚ್ಚಿನ ಸಂಖ್ಯೆಯ ಕುಡುಬಿಯರು ಕಂಡುಬರುತ್ತಾರೆ. ಈ ಸ್ಥಳಗಳಲ್ಲೆವೂ ಕರಾವಳಿ ಪ್ರದೇಶದಲ್ಲಿದ್ದರೂ ಕಾಡಿನಿಂದ ಆವೃತವಾದ ಹಾಗೂ ಘಟ್ಟಗಳಿಗೆ ಸಮೀಪವಾದ ಸ್ಥಳಗಳು ಎಂಬುದನ್ನು ಗಮನಿಸಬೇಕು. ಒಂದು ಕಾಲಕ್ಕೆ "ಕುಮರಿ ಬೇಸಾಯವೇ" ಇವರಿಗೂ ಪ್ರಮುಖವಾಗಿದ್ದು, ಕಾಡಿನ ಕಾನೂನಗಳು ಬಿಗಿಯಾದ ನಂತರ ಒಡೆಯರ ತೋಟಗಳಲ್ಲಿ ಕೆಲಸ ಮಾಡುವುದು ಇವರಿಗೆ ಅನಿವಾರ್ಯವಾಯಿತು. ಇಂತಹ ಹಲವಾರು ಅಂಶಗಳನ್ನು ಗಮನಿಸಲಾಗಿ ಕುಣಬಿಯರಿಗೂ ಕುಡುಬಿಯರಿಗೂ ನಡುವೆ ಅನೇಕ ಸಮಾನ ಹೋಲಿಕೆಗಳಿವೆ ಎಂಬುದು ವೇದ್ಯವಾಗುತ್ತದೆ. ಕುಮ್ರಿ ಬೇಸಾಯ, ಹೋಳಿ ಹಬ್ಬ ಗುಮಟೆವಾದನ, ಕೊಂಕಣಿ ಕಥಾನಕಗಳು ಇಂತಹ ಹಲವಾರು ಅಂಶಗಳು ಈ ಎರಡೂ ಸಮುದಾಯಗಳೂ ಮೂಲದಲ್ಲಿ ಒಂದೇ ಎಂದು ತೀರ್ಮಾನಸುವುದಕ್ಕೆ ಅನುವು ಮಾಡಿಕೊಡುತ್ತವೆ.

**ಮರಾಠಿ ನಾಯ್ಕರು**

ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವ "ಮರಾಠಿ ನಾಯ್ಕ" ಸಮುದಾಯದವರು ಸುಮಾರು 14ನೇ ಶತಮಾನದಲ್ಲಿ ಮಹಾರಾಷ್ಟ್ರದಿಂದ ಗೋವಾ ಮೂಲಕ ಕರ್ನಾಟಕಕ್ಕೆ ವಲಸೆ ಬಂದಿರಬಹುದೆಂದು ಅಂದಾಜಿಸಲಾಗುತ್ತಿದೆ. ಇವರಂತೆಯೇ ಶ್ರಮ ಸಂಸ್ಕೃತಿಯ ಶ್ರಮಜೀವನ ನಡೆಸುವ ಕೆಳ ವರ್ಗದ ಇತರ ಮರಾಠಿಗರಾದ ಕುಣಬಿಯರು, ಕುಡುಬಿಯರೂ ಸಹ ಮರಾಠಿ ನಾಯ್ಕ ಸಮುದಾಯದೊಂದಿಗೆ ಕರ್ನಾಟಕವನ್ನು ತಮ್ಮ ಜೀವಪೋಷಕ ನೆಲೆಯಾಗಿಸಿಕೊಂಡಿರುವುದು ಕಂಡು ಬರುತ್ತದೆ. ಇವರಲ್ಲಿ ಗೋವಾದಿಂದ ಬಂದವರೆಂದು ಹೇಳಲಾಗುವ ಕುಡುಬಿಯರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸಿಸುತ್ತಿದ್ದಾರೆ. ಹೀಗೆ ಬಂದ

ಕುಡುಬಿಯರನ್ನು ಗೋವೆ ಕುಡುಬಿಯರು, ಕೋಡಿಯಾಲ ಕುಡುಬಿಯರು, ಅರೆ ಕುಡುಬಿಯರು ಮತ್ತು ಜೋಗಿ ಕುಡುಬಿಯರು"ಎಂಬ ಹೆಸರುಗಳಿಂದ ಗುರುತಿಸಿದಂತೆ ಮರಾಠಿ ನಾಯ್ಕ ಸಮುದಾಯದಲ್ಲಿ, "ಮರಾಠಿ ನಾಯ್ಕ", "ದೇಶ ಮರಾಠಿ", "ಕುಂಬ್ರಿ ಮರಾಠಿ" ಮುಂತಾದ ಒಳ ಪಂಗಡಗಳು ಕಂಡುಬರುತ್ತವೆ.

ಮರಾಠಿ ನಾಯ್ಕರು ಮಹಾರಾಷ್ಟ್ರ ಮೂಲದವರೆಂದು ಗುರುತಿಸಲಾಗುತ್ತಿದ್ದು, ಕರಾವಳಿ ಜಿಲ್ಲೆಗಳ ಪಶ್ಚಿಮ ಘಟ್ಟದ ದಟ್ಟ ಕಾಡು ಹಾಗೂ ಕಾಡಂಚಿನ ಕಡಿದಾದ ಪ್ರದೇಶಗಳಲ್ಲಿ ನೆಲೆ ಕಂಡುಕೊಂಡಿದ್ದಾರೆ. ಈ ಸಮುದಾಯವು ದಕ್ಷಿಣ ಕನ್ನಡದ, ಕೊಡಗು ಕೇರಳದ ಕಾಸರಕೋಡು ಜಿಲ್ಲೆಗಳಲ್ಲಿ ಹೆಚ್ಚಾಗಿ ಹಾಗೂ ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಅಲ್ಲಲ್ಲಿ ಚದುರಿದಂತೆ ಕಂಡುಬರುತ್ತಾರೆ.

ಕಾಡು ಮಾರ್ಗವಾಗಿ ಬಂದ ಈ ಸಮುದಾಯಗಳು ತಮ್ಮ ಬದುಕಿಗಾಗಿ ಕಾಡನ್ನೇ ಅವಲಂಬಿಸಿದ್ದವು ಎನ್ನುವುದನ್ನು ಅಲ್ಲಗಳೆಯುವಂತಿಲ್ಲ. ನವನಾಗರಿಕತೆಯಿಂದ ದೂರ ಉಳಿದು ಕಾಡು ಹಾಗೂ ಬೆಟ್ಟ ಗುಡ್ಡಗಳ ಕಡಿದಾದ ಪ್ರದೇಶಗಳಲ್ಲಿ ನೆಲೆಸುತ್ತಿರುವ ಈ ಬುಡಕಟ್ಟು ಸಮುದಾಯಗಳು ಯಾವಾಗ, ಯಾಕೆ ವಲಸೆ ಬಂದವು ಎಂಬುದನ್ನು ನಿಖರವಾಗಿ ಹೇಳಲು ಸಾಧ್ಯವಿಲ್ಲ, ಆದರೆ ವಲಸೆ ಬಂದ ಬುಡಕಟ್ಟುಗಳ ಬಗೆಗಿನ ಐತಿಹ್ಯಗಳಿಗೆ ಬರವಿಲ್ಲ. ಸಮುದಾಯದ ಹಿರಿಯರನ್ನು ಮಾತನಾಡಿಸಿದಾಗ ತಾವು ಕ್ಷತ್ರಿಯ ವಂಶದವರೆಂದು, ಶಿವಾಜಿ ಮಹಾರಾಜರ ಸೈನಿಕರಾಗಿದ್ದವರೆಂದು ಹೇಳಿಕೊಳ್ಳುವ ಮರಾಠಿ ನಾಯ್ಕರು ಶಿವಾಜಿ ಮತ್ತಿತರ ರಾಜರುಗಳ ಕಾಲದಲ್ಲಿ ಸೈನಿಕರಾಗಿಯೇ, ಬರಗಾಲ ಕಾಣಿಸಿಕೊಂಡಿದ್ದರಿಂದಲೋ ಅಥವಾ ಶಿವಾಜಿ ಸೈನ್ಯದ ಭಾಗವಾಗಿ ಕರ್ನಾಟಕದ ಪಶ್ಚಿಮಘಟ್ಟ ಪ್ರದೇಶಗಳಲ್ಲಿ ನೆಲೆಸಿರಬಹುದೆಂದು ಅಭಿಪ್ರಾಯ ಪಡುತ್ತಾರೆ.

ಸಾಮಾನ್ಯವಾಗಿ ಮರಾಠಿ ನಾಯ್ಕ ಸಮುದಾಯವು ಇಂದಿನ ಮಹಾರಾಷ್ಟ್ರದ ಸಾಂಗ್ಲಿ, ಸೊಲಾಪುರ, ಕೊಲ್ಲಾಪುರ, ಫಂಡರಾಪುರ, ಸತಾರ, ಕರಾಡ ಮತ್ತು ಗೋವಾ ಹೀಗೆ ಬೇರೆ ಬೇರೆ ಪ್ರದೇಶಗಳಿಂದ ಕರ್ನಾಟಕದ ಗಡಿ ಪ್ರದೇಶಗಳಿಗೆ ಹಾಗೂ ಕರಾವಳಿ ಮಲೆನಾಡು ಪ್ರದೇಶಗಳಿಗೆ ಬಂದಿದ್ದರೆಂದು ಅಧ್ಯಯನಗಳು ಹೇಳುತ್ತವೆ. ಹೀಗೆಯೇ ಕುಬಿಗಳು, ಕುಣಬಿಗಳು ಹಾಗೂ ಕುಂಬ್ರಿ ಮರಾಠಿಗರೂ ಸಹ ಕರ್ನಾಟಕಕ್ಕೆ ವಲಸೆ ಬಂದಿರುವ ಬಗ್ಗೆ ಆಯಾ ಸಮುದಾಯಗಳ ಸಾಂಸ್ಕೃತಿಕ ಹಿನ್ನೆಲೆಗಳು ಸಾಕ್ಷ್ಯ ಒದಗಿಸುತ್ತವೆ. ಇವರು ವಲಸೆ ಬಂದು ನೆಲೆನಿಂತ ಪ್ರದೇಶದ ಸ್ಥಳೀಯ ಸಾಂಸ್ಕೃತಿಯ ಪ್ರಭಾವಕ್ಕೆ ಒಳಗಾದರೂ ಸಹ ತಮ್ಮ ಮೂಲವನ್ನು ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದಾಗಿದೆ.

## ಮರಾಠಿ ನಾಯ್ಕ ಸಮುದಾಯದ ಹಿನ್ನೆಲೆ

ಮರಾಠಿ ಮಾತನಾಡುವ ಕಾರಣಕ್ಕಾಗಿ ಈ ಸಮುದಾಯವನ್ನು ಮರಾಠಿ ನಾಯ್ಕ ಎಂದು ಕರೆಯಲಾಗುತ್ತಿದೆ. "ನಾಯ್ಕ" ಎಂಬುದು ಶಿವಾಜಿ ಸೈನ್ಯದಲ್ಲಿರುವ ಒಂದು ಹುದ್ದೆ. ಈ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಿರುವವರು ಇದೇ ಹುದ್ದೆಯಿಂದಲೇ ಗುರುತಿಸಿಕೊಂಡು ಬಂದವರೆಂದು, ಶಿವಾಜಿಯ ಆಡಳಿತ ಕಾಲಾವಧಿಯಲ್ಲಿ, ಪೇಶ್ವೆಯರ ಕಾಲದಲ್ಲಿ ಮರಾಠಿಗರು ವಲಸೆ ಬಂದಿರುವ ಸಾಧ್ಯತೆಗಳಿವೆ. ಕರಾವಳಿಯ ಬಸರೂರು ಎಂಬಲ್ಲಿ ಶಿವಾಜಿ ಕ್ರಿ.ಶ. 1665 ರಲ್ಲಿ ದಾಳಿ ಮಾಡಿರುವ ಬಗ್ಗೆ ಇತಿಹಾಸದಲ್ಲಿ ದಾಖಲೆ ಇದೆ. ಈ ಸಂದರ್ಭದಲ್ಲಿ ಶಿವಾಜಿಯು ಸಾಮಂತ ರಾಜರುಗಳಿಂದ ಕಪ್ಪಕಾಣಿಕೆ ಪಡೆದಿರುವ ಬಗ್ಗೆ ಇತಿಹಾಸದಲ್ಲಿ ಉಲ್ಲೇಖವಿದೆ. ಔರಂಗಜೇಬನು ಶಿವಾಜಿಯ ಮೇಲೆ ದಂಡೆತ್ತಿ ಬಂದಾಗ ಅನೇಕ ಮರಾಠಾ ಸೈನಿಕರು ಕರ್ನಾಟಕ ಕರಾವಳಿ ಮತ್ತು ಇತರೆ ಪ್ರದೇಶಗಳಿಗೆ ಬಂದು ನೆಲೆಯೂರಿರುವ ಸಾಧ್ಯತೆಗಳಿವೆ. ಹಾಗೆಯೇ ಗೋವಾ ರಾಜ್ಯಕ್ಕೂ ವಲಸೆ ಹೋಗಿರುವ ಸಾಧ್ಯತೆಗಳಿವೆ.

## ದಕ್ಷಿಣ ಕನ್ನಡದಲ್ಲಿ ಮರಾಠಿ ನಾಯ್ಕರ ನೆಲೆಗಳು

ಸುಮಾರು 14ನೇ ಶತಮಾನದಲ್ಲಿ ವಲಸೆ ಬಂದ ಮರಾಠಿ ಸಮುದಾಯಗಳಲ್ಲಿ ಒಂದು ಗುಂಪಾಗಿ ಬಂದವರು ಮರಾಠಿ ನಾಯ್ಕರು. ಗೋವಾ ಪೋರ್ಚುಗೀಸರ ಸ್ವಾಧೀನವಾದಾಗ ಅಲ್ಲಿಂದ ಓಡಿಸಲ್ಪಟ್ಟ ಸಮುದಾಯ ಇದೆಂದು ಇತಿಹಾಸದಲ್ಲಿ ಉಲ್ಲೇಖಗಳಿವೆ. ಹೀಗೆ ಬಂದ ಮರಾಠಿ ನಾಯ್ಕ ಸಮುದಾಯ ದಕ್ಷಿಣ ಕನ್ನಡದ ದಟ್ಟ ಕಾಡು ಹಾಗೂ ಪಶ್ಚಿಮ ಘಟ್ಟಗಳ ಅಂಚಿನ ಇಳಿಜಾರು ಪ್ರದೇಶಗಳಲ್ಲಿ ನೆಲೆ ನಿಂತಿದೆ. ಈ ಸಮುದಾಯ ಪುತ್ತೂರು, ಬೆಳ್ತಂಗಡಿ, ಸೂಳ್ಯ, ಕಾರ್ಕಳ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ.

## ಮರಾಠಿ ನಾಯ್ಕರ ಭಾಷೆ

ಮರಾಠಿ ನಾಯ್ಕ ಎಂಬ ಹೆಸರಿನಲ್ಲೇ ಇರುವಂತೆ ಇವರು ಮರಾಠಿ ಭಾಷಿಕರಾಗಿದ್ದಾರೆ. ಕೊಂಕಣಿ ಮಿಶ್ರಿತ ಮರಾಠಿ ಇರುವ ಆಡು ಭಾಷೆ. ಆರಂಭದಲ್ಲಿ ಮರಾಠಿ ನಾಯ್ಕರು ಪಶುಪಾಲಕರಾಗಿದ್ದು ವಲಸೆ ಬಂದು ನೆಲೆ ನಂತಂತೆ ಸ್ಥಳೀಯ ಭಾಷೆಗಳನ್ನು ಸಹ ಮಾತನಾಡಲು ಆರಂಭಿಸಿದರು. ಇವರು ಆಡುವ ಭಾಷೆ ಮರಾಠಿ ಆಗಿದ್ದರೂ ಸಹ ಮಹಾರಾಷ್ಟ್ರ ರಾಜ್ಯದಲ್ಲಿ ಆಡುವ ಭಾಷೆಯಂತೆ ಇಲ್ಲ. ಮರಾಠಿ ನಾಯ್ಕ ಸಮುದಾಯ ತಾನು ಅವಲಂಬಿಸಿದ ಮರಾಠಿ ಭಾಷೆಯಲ್ಲಿ ಕೊಂಕಣಿ, ಕನ್ನಡ, ತುಳು ಮಲೆಯಾಳಂ ಭಾಷೆಗಳ ಪದಗಳೂ ಸಹ ಸೇರಿಕೊಡಂತೆ ಕಾಣುತ್ತದೆ. ಅಲ್ಲದೇ ಕೇರಳ ರಾಜ್ಯದ ಕಾಸರಕೋಡು ಜಿಲ್ಲೆಯಲ್ಲೂ ಕಂಡು ಬರುವ ಈ ಸಮುದಾಯ

ಆಂತರಿಕವಾಗಿ ಮರಾಠಿ ಮಾತನಾಡಿದರೂ ಸಹ ವ್ಯವಹಾರಿಕವಾಗಿ ತುಳು ಹಾಗೂ ಮಲೆಯಾಳಂ ಭಾಷೆಯನ್ನು ಬಳಸುವುದು ಕಂಡುಬರುತ್ತದೆ.

**ಮರಾಠಿ ನಾಯ್ಕ ಸಮುದಾಯದ ಸಾಮಾಜಿಕ ವ್ಯವಸ್ಥೆ**

ಸಾಮಾನ್ಯವಾಗಿ ಎಲ್ಲಾ ಬುಡಕಟ್ಟುಗಳಲ್ಲಿರುವಂತೆ ಮರಾಠಿ ನಾಯ್ಕ ಸಮುದಾಯವೂ ಸಹ ತನ್ನದೇ ಆದ ವಿಶಿಷ್ಟ ಹಾಗೂ ಪ್ರತ್ಯೇಕ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿದೆ. ಮೂಲತಃ ಪಶುಪಾಲಕರಾದ ಇವರು ದಕ್ಷಿಣ ಕನ್ನಡ, ಕೊಡಗು, ಕಾಸರಕೋಡು ಜಿಲ್ಲೆಗಳ ಕಾಡು ಪ್ರದೇಶಗಳಲ್ಲಿ ಕಾಡು ಕಡಿದು ಸಮತಟ್ಟು ಮಾಡಿಕೊಂಡು ವ್ಯವಸಾಯವನ್ನು ಆರಂಭಿಸಿದರೆಂದು ಅಧ್ಯಯನಕಾರರು ಹೇಳುತ್ತಾರೆ. ಅದಕ್ಕೆ ಸ್ಥಳೀಯ ಸನ್ನಿವೇಶಗಳು ಸಹ ಸಾಕ್ಷೀಕರಿಸುತ್ತವೆ. ಈ ಸಮುದಾಯದವರು ದಟ್ಟ ಕಾಡುಗಳ ಅಂಚಿನಲ್ಲಿ ಗುಂಪು ಗುಂಪಾಗಿ ಸಣ್ಣ ಪುಟ್ಟ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ಕಾಲಾನಾಂತರ ಹತ್ತಿರ ಹಳ್ಳಿಗಳ ಸುತ್ತಮುತ್ತ ಮನೆ ಕಟ್ಟಿಕೊಂಡು ವಾಸ ಮಾಡುತ್ತಿರುವುದು ಕಂಡು ಬರುತ್ತದೆ. ಮರಾಠಿ ನಾಯ್ಕರಲ್ಲೂ ಸಹ ಒಳಾಡಳಿತ ವ್ಯವಸ್ಥೆಯಿದ್ದು ಸಮುದಾಯದ ಆಗುಹೋಗುಗಳ ತೀರ್ಮಾನವನ್ನು "ಗುರಿಕಾರ" ನೋಡಿಕೊಳ್ಳುತ್ತಾನೆ. ಪುರುಷ ಪ್ರಧಾನ ಕೌಟುಂಬಿಕ ವ್ಯವಸ್ಥೆಯನ್ನು ಹೊಂದಿರುವ ಮರಾಠಿ ನಾಯ್ಕ ಸಮುದಾಯದಲ್ಲೂ ಮಹಿಳೆಯರಿಗೆ ವಿಶೇಷ ಗೌರವವನ್ನು ನೀಡುತ್ತಾರೆ. ಆದರೆ ಆಧುನಿಕತೆಯ ಪ್ರಭಾವ ಈ ಸಮುದಾಯದ ಮೇಲೆ ಆಗಿದ್ದು, ಆರಂಭದಲ್ಲಿದ್ದ ಒಳಾಡಳಿತ ವ್ಯವಸ್ಥೆ ಇತ್ತಿತ್ತಲಾಗಿ ಕ್ಷೀಣಿಸುತ್ತಿರುವುದು ಸಹ ಕಂಡು ಬರುತ್ತಿದೆ. ಅಲ್ಲದೇ ಈಗ ಕೌಟುಂಬಿಕ ಸಮಸ್ಯೆಗಳು ಎದುರಾದಾಗ "ಗುರಿಕಾರನನ್ನು" ಅವಲಂಬಿಸುವುದು ಕಂಡು ಬರುವುದಿಲ್ಲ.

ಸ್ವಾತಂತ್ರ್ಯಾ ನಂತರ ಕೇಂದ್ರ ಸರಕಾರದ ಮೀಸಲಾತಿ ಸೌಲಭ್ಯ ಒದಗಿಸುವ ಸಲುವಾಗಿ ಹೊಸ ಪಟ್ಟಿ ತಯಾರಿಸಲು ನಿರ್ಧರಿಸಿ ಪ್ರೆಸಿಡೆಂಟ್ ಕಮಿಷನ್ ಒಂದನ್ನು ರಚಿಸಿ ಮಹಾರಾಷ್ಟ್ರದ ಪ್ರಸಿದ್ಧ ಸಮಾಜ ಸೇವಕ ಕಾಕಾ ಕಾಲೇಲ್ಕರ್ ಎಂಬುವರನ್ನು ಅಧ್ಯಕ್ಷರನ್ನಾಗಿ ನೇಮಿಸಿತು. ಇದೇ ಸಂದರ್ಭದಲ್ಲಿ ಜಿಲ್ಲಾ ಸಮಾಜಾಭಿವೃದ್ಧಿ ಅಧಿಕಾರಿಯಾಗಿದ್ದ ಮರಾಠಿಗರೇ ಆಗಿದ್ದ ಶ್ರೀ ಪುತ್ತೂರು ವೆಂಕಪ್ಪರವರು ಮತ್ತು ಜಿಲ್ಲಾ ಕಲೆಕ್ಟರ್ ಆಗಿದ್ದ ರಾಮದಾಸ ಎಂಬುವರು ಮರಾಠಿ ನಾಯ್ಕ ಸಮುದಾಯಕ್ಕೆ ವಿಶೇಷ ಸೌಲಭ್ಯ ಒದಗಿಸುವ ನಿಟ್ಟಿನಲ್ಲಿ ಪಟ್ಟಿ ತಯಾರಿಸಿ ಪ್ರೆಸಿಡೆಂಟ್ ಕಮಿಷನ್‌ಗೆ ಸಲ್ಲಿಸಿದ್ದರು. ಈ ಹಿನ್ನೆಲೆಯಲ್ಲಿ 1955 ರಲ್ಲಿ ಪ್ರೆಸಿಡೆಂಟ್ ಕಮಿಷನ್ ಜಿಲ್ಲೆಗೆ ಭೇಟಿ ನೀಡಿತು. ಇದೇ ಸಂದರ್ಭದಲ್ಲಿ ಪುನಃ ಮರಾಠಿ ನಾಯ್ಕ ಸಮುದಾಯದ ಹಿರಿಯರೆಲ್ಲ ಸೇರಿ ಮತ್ತೊಂದು ಮನವಿಯನ್ನು ಸಲ್ಲಿಸಿದರು. ಈ ಸಂದರ್ಭದಲ್ಲಿ ಭೇಟಿ ನೀಡಿದ್ದ ಪ್ರೆಸಿಡೆಂಟ್ ಕಮಿಷನ್ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮರಾಠಿ ಸಮುದಾಯವಿರುವುದನ್ನು ಗಮನಿಸಿ ಪರಮಾಶ್ಚರ್ಯ ವ್ಯಕ್ತಪಡಿಸಿ ಸ್ಥಳೀಯ ಸ್ಥಿತಿಗತಿಗಳ ಮಾಹಿತಿ ಪಡೆಯಿತು. ಅಂತೆಯೇ ಮುಂದುವರೆದು 1956 ರಲ್ಲಿ ಆಗಿನ

ಮೈಸೂರು ರಾಜ್ಯ ಮರಾಠಿ ನಾಯ್ಕರನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಪರಿಷ್ಕೃತ ಆದೇಶ ಪಟ್ಟಿಯ III ಭಾಗ VIII ಕ್ರಸಂಖ್ಯೆ 6 ಮತ್ತು 2(4)ರ ಪ್ರಕಾರ ಮರಾಠಿಗರನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಲಾಯಿತು.

**ಮರಾಠಿ ನಾಯ್ಕ ಸಮುದಾಯದ ಬಳಿ ವ್ಯವಸ್ಥೆ**

ವರ್ಣ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದ ಭಾರತೀಯ ಸಂಸ್ಕೃತಿ ಕಾಲಾ ನಂತರ ಶಿಥಿಲಗೊಂಡು ಕ್ರಮೇಣ ಜಾತಿ ವ್ಯವಸ್ಥೆ ಹುಟ್ಟಿಕೊಂಡಿತು. ತಮ್ಮ ತಮ್ಮ ವ್ಯವಸ್ಥೆಗನುಗುಣವಾಗಿ ಸಾವಿರಾರು ಜಾತಿಗಳು ಸೃಷ್ಟಿಯಾಗುತ್ತಾ ಬಂದವು. ಹೀಗೆ ಹುಟ್ಟಿಕೊಂಡ ಜಾತಿ ವ್ಯವಸ್ಥೆಗೆ ಆಯಾ ಸಮುದಾಯದ ಬಳಿಗಳು ಭದ್ರ ಅಡಿಪಾಯಗಳಾದವು ಅಥವಾ ಗೋತ್ರಗಳಾದವು. ಬಳಿ, ಬರಿ, ಕುಲ, ಗೋತ್ರ ಮುಂತಾದ ಪದಗಳು ವಂಶದ ಅರ್ಥವನ್ನು ಸೂಚಿಸುವ ಪದಗಳಾಗಿವೆ. ಬ್ರಾಹ್ಮಣರು ಗೋತ್ರ ಎಂದರೆ ಇತರರು ವಂಶ, ಕುಲ, ಬರಿ, ಬಳಿ ಎಂದು ಕರೆಯುತ್ತಾ ಬಂದರು. "ಬರಿ" ಎಂಬುವುದು ತುಳು ಭಾಷೆಯಲ್ಲಿ "ಬಳಿ", "ಬಳ್ಳಿ" ಎಂಬ ಪದವನ್ನು ಸೂಚಿಸುತ್ತದೆ.

ನಾಗರಿಕತೆಯ ಆದಿಯಲ್ಲಿ ಮಾನವ ಗುಂಪುಗುಂಪಾಗಿ ವಾಸಿಸುತ್ತಾ ಭೌಗೋಳಿಕವಾಗಿ ಅಲೆಯುತ್ತಾ ಚದುರುತ್ತಾ ವಿಭಿನ್ನ ರೂಢಿ ಸಂಪ್ರದಾಯಗಳನ್ನು ಆಚರಿಸಿಕೊಳ್ಳುತ್ತಾ ವಿಭಿನ್ನ ವೃತ್ತಿಗಳನ್ನು ಕೈಗೊಂಡಾಗ ತಮ್ಮ ತಮ್ಮ ಗುಂಪುಗಳನ್ನು ಒಂದೊಂದು ಸಂಕೇತದ ಮೂಲಕ ಗುರುತಿಸಿಕೊಂಡು ಬಂದಿರುವುದು ಕಂಡುಬರುತ್ತದೆ. ಪ್ರಕೃತಿಯಲ್ಲಿ ಕಂಡ ಪ್ರಾಣಿ, ಪಕ್ಷಿ, ಗಿಡ, ಮರ, ಬಳ್ಳಿಗಳನ್ನು ಗುರುತಿಸಿ ಅವುಗಳಿಂದಲೇ ತಮ್ಮ ಗುಂಪಿನ ಸಂಕೇತವನ್ನು ನಿರ್ಧರಿಸಿಕೊಂಡು ಕುಟುಂಬದ ರಕ್ಷಣೆ ಮಾಡುತ್ತಾ ಬಂದ ಇಂತಹ ಸಂಕೇತಗಳೇ ಆಯಾ ಸಮುದಾಯದ ಕುಲದ ಸಂಕೇತವಾಗಿರುವುದು ಕಂಡುಬರುತ್ತದೆ.

ಹಾಗಾಗಿ ಎಲ್ಲಾ ಬುಡಕಟ್ಟುಗಳ ರಕ್ತ ಸಂಬಂಧದ ಮೂಲಕೊಂಡಿಯೇ "ಬಳಿ". ಈ ಬಳಿಗಳನ್ನು ಅನುಸರಿಸಿಯೇ ವೈವಾಹಿಕ ಸಂಬಂಧಗಳು ಹಾಗೂ ಹಲವಾರು ಸಂಪ್ರದಾಯಗಳು ರೂಢಿಯಲ್ಲಿವೆ. ಈ ಹಿನ್ನೆಲೆಯಲ್ಲಿ ಬುಡಕಟ್ಟುಗಳು ಹೊಂದಿರುವ ಬಳಿಗಳ ಆಧಾರದಿಂದಲೇ ಬುಡಕಟ್ಟಿನ ಮೂಲದೊಂದಿಗೆ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲು ಸಾಧ್ಯವಾಗುತ್ತದೆ. 'ಮರಾಠಿ ನಾಯ್ಕ' ಸಮುದಾಯದಲ್ಲಿ ಇಂತಹ ನೂರಕ್ಕೂ ಹೆಚ್ಚು ಬಳಿಗಳಿರಬಹುದೆಂದು ಅಂದಾಜಿಸಲಾಗಿದ್ದು ಮರಾಠಿ ನಾಯ್ಕ ಸಮುದಾಯದವರೇ ಆದ ಡಾ॥ ಎಸ್. ಮೋಹನ್‌ರವರು ತಾವು ಕೈಗೊಂಡ ಮರಾಠಿ ನಾಯ್ಕರ ಸಾಂಸ್ಕೃತಿಕ ಅಧ್ಯಯನದಲ್ಲಿ ಸುಮಾರು ಎಪ್ಪತ್ತು ಬಳಿಗಳನ್ನು ಗುರುತಿಸಿದ್ದಾರೆ ಅವು ಇಂತಿವೆ:

1. ಅಡೋಲ್ಕಾರ್
2. ಆಗ್ರಿಯಾ
3. ಬುಳೆಗಾರ್
4. ಬಾಂದ್ಯೋ
5. ಬೀತ್ ಮಾ
6. ಭೀಷ್ಮ
7. ದುವಾಳಿಯಾ
8. ದಾಂಗೆಕಾರ್
9. ದುಮ್ಲಿಕಾರ್
10. ಡೋಲಣ್ಣ
11. ಅರೆಕ್ಕಾರ್
12. ಬಡೆಕಾರ್
13. ಬಡಮ
14. ಬೀಂದ್ರೊ
15. ಬೇಂದ್ರೆ
16. ಚವಣ್‌ಕಾರ್
17. ದೋರೆಕಾರ್
18. ಬಾಂಬ್ರಿಯಾ
19. ಡೊರ್ಲೆ
20. ಡೊಪ
21. ಗಾರ್ಡಿಯಾ
22. ಗೂಡೂನ್ಕರ್
23. ಜಡಿಯಾರ್
24. ಕಾವಡ್ಕರ್ (ಕಾಡೆಕಾರ್)
25. ಕರ್ಮತಿ
26. ಕಂಡ್ರೆ
27. ಕರುವೊತ್ಕಾರ್
36. ಸುಗುಣ
37. ಸಿರಿಯಣ್ಣ
38. ಶಿಲ್ಪ
39. ಸಾಲ್ವೆ (ಸಾಲ್ವೆಗಾರ್)
40. ತೆಲ್‌ಪನ್‌ಕಾರ್
41 . ಮನೊಂಟೋಳಕಾರ್
42. ವಾನಯಾ
43. ದಾದ
44. ಇರ್ಮಾಳ್
45. ಕೊಂಚಾಂಚಿ
46. ಗರಡಿ
47. ಗೋರ್ಲೆ
48. ಜೋವಾನ್
49. ಕಸೋಳ್ಕಾರ್
50. ಕುಳ್ಯಾಂಚಿ
51. ಕುಳಿಯ
52. ಕೆಂಚಣ್ಣ
53. ಲಾಂಜಗಾರ್
54. ಮಂಜೋಲಣ್ಣ
55. ಮಾಂಡೊವ್‌ಕಾರ್
56. ನೋವುಲೆಕಾರ್
57. ಪೆನ್ಸ್‌ಲೆಗಾರ್
58. ಪಾಟ್‌ಕಾರ್
59. ರೆವಿನ್ಸ್‌ಕಾರ್ (ನೆವಣೆಕಾರ್)
60. ಸಾವಂತ
61. ಸಿಂದ (ಸಿಂದೊ)
62. ಸಾಲ್ಕೆ

28. ಕುಸುಮ
29. ಮಂಜೊಲ್‌ಕಾರ್
30. ಮಾಲ್ಯ
31. ನವಲ್ಯಾಂಜ
32. ಪಾಟೀಲ
33. ಪಿನ್ನಳಿಕಾರ್
34. ಪರೋಡಿಯಾ
35. ಸೆಡ್ದೊಲ್‌ಗಾರ್
63. ಶ್ರವಣ
64. ತಾಂಬೆ
65. ಉಪ್ಪಣ್ಣ
66. ವಾಲಂಚೆ
67. ಅಡ್ಕಿಳಿಕಾರ್
68. ಪೊಂಕ್ರ
69. ಪಬಣಂಜಿ
70 ದೊವ್ಲಾಂಚಿ. [12]

ಈ ರೀತಿ ಬಳಿಗಳನ್ನು ಗುರುತಿಸಲಾಗಿದ್ದು ಕೆಲವೊಂದು ಬಳಿಗಳ ಮಧ್ಯೆ ಯಾವುದೇ ರೀತಿಯ ವೈವಾಹಿಕ ಸಂಬಂಧಗಳು ಏರ್ಪಡುವುದಿಲ್ಲ. ಆದರೆ ವೈವಾಹಿಕ ಸಂಬಂಧಗಳನ್ನು ಏರ್ಪಡಿಸುವ ಸಮಯದಲ್ಲಿ ಬಳಿಗಳೇ ಪ್ರಮುಖ ಪಾತ್ರವಹಿಸುತ್ತವೆ. ಮರಾಠಿ ನಾಯ್ಕರು ತಮ್ಮ ಬಳಿಗಳನ್ನಾಧರಿಸಿಯೇ ಸಂಬಂಧಗಳನ್ನು ಬೆಳೆಸುತ್ತಾರೆ.

**ಮರಾಠಿ ನಾಯ್ಕ ಸಮುದಾಯದ ಆಚರಣೆಗಳು**

ಎಲ್ಲಾ ಬುಡಕಟ್ಟು ಸಮುದಾಯದಂತೆ ಮರಾಠಿ ನಾಯ್ಕ ಸಮುದಾಯಗಳು ಸಹ ತಮ್ಮದೆ ಆದ ವಿಶಿಷ್ಟ ರೂಢಿ ಸಂಪ್ರದಾಯಗಳನ್ನು ಹೊಂದಿದ್ದು ಪ್ರಕೃತಿ ಆರಾಧಕರಾಗಿದ್ದಾರೆ. ಹುಟ್ಟು ಸಾವಿನ ಮಧ್ಯೆ ಬದುಕಿನ ಅನೇಕ ಸಂದರ್ಭಗಳಲ್ಲಿ ವಿಧಿ, ಸಂಪ್ರದಾಯ, ಸಂಸ್ಕಾರಗಳನ್ನು ಚಾಚು ತಪ್ಪದೆ ಆಚರಿಸುವ ಪರಂಪರೆ ಈ ಸಮುದಾಯದಲ್ಲೂ ಕಂಡುಬರುತ್ತದೆ. ಅಂತೆಯೇ ಮರಾಠಿ ನಾಯ್ಕ ಸಮುದಾಯವು "ಗೊಂಧಳ್" ಮತ್ತು "ಬಾಳಸಂತು" ಎಂಬ ಎರಡು ಪೂಜೆಗಳನ್ನು ಅತಿ ಭಯ ಭಕ್ತಿಯಿಂದ ಆಚರಿಸುತ್ತಾರೆ. ಒಣಗಿದ ಬಾಳೆ ಎಲೆಗಳ ಮಾಲೆ ಧರಿಸಿ ಹುಣ್ಣಿಮೆಯ ಬೆಳದಿಂಗಳಲ್ಲಿ ಮನೆ ಮನೆಗೆ ಹೋಗಿ ದೇವರ ಕೀರ್ತನೆ ಹಾಡುತ್ತಾ ಕುಣಿಯುತ್ತಾ ಪೂಜಿಸುವುದಕ್ಕೆ ಬಾಳಸಂತು ಎಂದು ಕರೆಯಲಾಗುತ್ತದೆ. ಹಾಗೆಯೇ ಎಲ್ಲರನ್ನೂ ಸುತ್ತುವರೆದು ದೇವರ ಭಜನೆ ಕೀರ್ತನೆ ಹಾಡಿ ಪೂಜೆ ಮಾಡುವ ಕ್ರಮಕ್ಕೆ ಗೊಂಧಳ್ (ಗೊಂದೆಲ್) ಎಂದು ಕರೆಯುತ್ತಾರೆ. ಇವರ ಮೂಲ ದೈವ ಮಹಾದೇವಿಯೊಂದಿಗೆ ಖಂಡೊಬ ಹಾಗೂ ಶಿವನನ್ನು ಆರಾಧಿಸುವರು. ಜೊತೆಗೆ ಗ್ರಾಮ ಪ್ರದೇಶದ ದೈವಗಳನ್ನು ಪೂಜಿಸುವರು. ಹೆಚ್ಚಿನದಾಗಿ ಹಿಂದೂ ಪರಂಪರೆಯ ಯುಗಾದಿ, ದಸರಾ, ದೀಪಾವಳಿ, ಬಾಳಸಂತು, ಗೊಂಧಳ್ ಹಬ್ಬಗಳನ್ನು ಆಚರಿಸುತ್ತಾರಲ್ಲದೆ ಇಂತಹ ಸಂದರ್ಭಗಳಲ್ಲಿ ಜಾನಪದ ಗೀತೆಗಳನ್ನು ವಾದ್ಯಗಳನ್ನು ಬಳಸುತ್ತಾ ನೃತ್ಯದೊಂದಿಗೆ ಹಾಡುವ ಸಂಪ್ರದಾಯ ರೂಢಿಯಲ್ಲಿದೆ. ಅಂತೆಯೇ ಕೇರಳದ ಕಾಸರಗೋಡಿನಲ್ಲಿ ಕಂಡು ಬರುವ

ಮರಾಠಿಗಳು ಸಹ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿನ ಮರಾಠಿಗರು ಆಚರಿಸುವ ಆಚರಣಗಳನ್ನೇ ಅನುಸರಿಸಿರುವುದು ಕಂಡುಬರುತ್ತದೆ.

**ಮರಾಠಿ ನಾಯ್ಕ ಸಮುದಾಯದ ಕಸುಬುಗಳು**

ತಮ್ಮ ಆಹಾರ ಮತ್ತು ರಕ್ಷಣೆಯ ಉದ್ದೇಶದಿಂದ ದಕ್ಷಿಣ ಕನ್ನಡ, ಕೊಡಗು, ಕಾಸರಗೋಡು ಜಿಲ್ಲೆಗಳಿಗೆ ವಲಸೆ ಬಂದಂತಹ ಮರಾಠಿ ನಾಯ್ಕರು ಪ್ರಕೃತಿ ಸಂಪತ್ತನ್ನು ಬಳಸಿಕೊಳ್ಳುವಲ್ಲಿ ಸಿದ್ಧ ಹಸ್ತರಾಗಿದ್ದಾರೆ. ಪ್ರಾಚೀನ ಕಾಲದಲ್ಲಿ ಯಾರೊಬ್ಬರ ಒಡೆತನಕ್ಕೆ ಸೇರದ ಕಾಡಿನಲ್ಲಿ ಗಿರಿಜನರೇ ಸ್ವಯಂ ಪ್ರಭಾವಿಗಳಾಗಿದ್ದರು. ಆಹಾರದ ಕೊರತೆಯಿಂದಾಗಿ ಕಾಡಿನ ಸಮತಟ್ಟಾದ ನೆಲವನ್ನು ನೋಡಿ ಗಿಡ ಗಂಟಿಗಳನ್ನು ಕಡಿದು, ಸುಟ್ಟು ಮಳೆಗಾಲದಲ್ಲಿ ನೆಲ ಮೆದುವಾದಾಗ ನೆಲವನ್ನು ಕೆದರಿ ರಾಗಿ, ಭತ್ತದ ಬೇಸಾಯವನ್ನು ಮಾಡಿಕೊಂಡು ಬಂದರು. ಅಲ್ಲದೆ ಪುನಃ ಕಾಲಾಂತರದಲ್ಲಿ ಅಲ್ಲಿಂದ ಬೇರೆಡೆ ತಮ್ಮ ನೆಲೆಯನ್ನು ಬದಲಾಯಿಸಿಕೊಳ್ಳುತ್ತಿದ್ದರು. ಇವರು ಆರಂಭದಲ್ಲಿ ಬೇಟೆ ಮಾಡುವುದನ್ನೇ ವೃತ್ತಿಯನ್ನಾಗಿಸಿಕೊಂಡವರಾಗಿದ್ದು ಅರಣ್ಯದಲ್ಲಿ ನೆಲೆಸುತ್ತಿದ್ದಂತೆ "ಕುಮೇರಿ" ಬೇಸಾಯ ಪದ್ಧತಿಯನ್ನು ಅನುಸರಿಸಿ ರೂಢಿಸಿಕೊಂಡಿದ್ದರು. ಕ್ರಮೇಣ ಕೃಷಿಯೇ ಇವರ ಮುಖ್ಯ ಕಸುಬಾಯಿತು. ಹಾಗೇಯೇ ಕೂಲಿ, ಬೀಡಿ ಕಟ್ಟುವುದು, ಪಶುಪಾಲನೆ, ಅರಣ್ಯೋತ್ಪನ್ನಗಳ ಸಂಗ್ರಹದಂತಹ ವೃತ್ತಿಯನ್ನು ಸಹ ರೂಢಿಸಿಕೊಂಡು ಬಂದಿರುವುದು ಕಂಡು ಬರುತ್ತದೆ.

**ವರ್ತಮಾನದಲ್ಲಿ ಮರಾಠಿ ನಾಯ್ಕ ಸಮುದಾಯ** 

ಎಲ್ಲಾ ಬುಡಕಟ್ಟುಗಳಂತೆ ದಕ್ಷಿಣ ಕನ್ನಡದ ಮರಾಠಿಗರೂ ಸಹ ದಿನೇ ದಿನೇ ಸಂದಿಗ್ಧ ಪರಿಸ್ಥಿತಿಯತ್ತ ಮುಖ ಮಾಡುತ್ತಿದ್ದಾರೆ. ಆಧುನೀಕರಣಕ್ಕೆ ಒಳಗಾಗಿ ತಮ್ಮ ಸಾಂಸ್ಕೃತಿಕ ಪ್ರತ್ಯೇಕತೆಯನ್ನು ಉಳಿಸಿಕೊಳ್ಳಲು ಹೆಣಗಾಡುತ್ತಿರುವುದು ಮತ್ತು ತಾವು ಇದುವರೆಗೂ ನಡೆಸಿಕೊಂಡು ಬಂದಂತಹ ಆಚಾರ ವಿಚಾರ, ರೂಢಿ ನಂಬಿಕೆಗಳನ್ನು ದೂರಿಕರಿಸುತ್ತಿರುವುದು ಈ ಸಮುದಾಯದ ಸಂದಿಗ್ಧತೆ ಗಳಲ್ಲೊಂದು. ಮೂಲತಃ ಬುಡಕಟ್ಟು ಸಮುದಾಯದವರಾದ ಮರಾಠಿಗರು ಕಾಲಕ್ರಮೇಣ ಆಧುನಿಕ ಬದುಕಿಗೆ ಸ್ಥಿತ್ಯಂತರಗೊಳ್ಳುತ್ತಿರುವವರು. ಇಂತಹ ಸಂದಂರ್ಭದಲ್ಲಿ ಸಹಜ ಪರಿವರ್ತನೆಯ ಹಾದಿಯಲ್ಲಿರುವ ಇವರಿಗೆ ಹೊಸತನ್ನು ಪೂರ್ತಿ ಒಪ್ಪಿಕೊಳ್ಳಲಾಗಿದೇ ಹಿಂದಿನದನ್ನು ಬಿಡಲಾಗದೆ ಎರಡನ್ನೂ ಸಮನ್ವೀಕರಿಸಿಕೊಳ್ಳಲಾಗದ ಪರಿಸ್ಥಿತಿಯಲ್ಲಿ ಇರುವವರು. ತಮ್ಮ ಮೂಲ ಕಸುಬುಗಳ ಲ್ಲೊಂದಾದ "ಕುಮೇರಿ" ಬೇಸಾಯವನ್ನು ಬಹುತೇಕ ಬಿಟ್ಟಿರುವ ಮರಾಠಿಗಳು ಕಾಲ ಕಳೆದಂತೆ ಕೃಷಿಯೇತರ ಕಸುಬು, ವ್ಯವಹಾರ, ಉದ್ಯೋಗ, ವ್ಯಾಪಾರಗಳತ್ತ ಮುಖ ಮಾಡಿದ್ದಾರೆ. ಉತ್ತರ ಕನ್ನಡ ಜಿಲ್ಲೆಯ ಭೌಗೋಳಿಕ ಪರಿಸರವನ್ನು ಕೇಂದ್ರೀಕರಿಸಿಕೊಂಡು "ಕುಂಬ್ರಿ ಮರಾಠಿ" ಸಮುದಾಯದ ಕುರಿತು ಅಧ್ಯಯನ ಕೈಗೊಂಡು ಕ್ಷೇತ್ರ ಕಾರ್ಯ ನಡೆಸುವ ಸಂದರ್ಭದಲ್ಲಿ ಬಳಿಗಳ ವಿಚಾರಗಳು,

"ಕುಂಬ್ರಿ ಮರಾಠಿ" ಗರಂತೆಯೇ ದೈಹಿಕ ಚಹರೆ, ರೂಢಿ ಸಂಪ್ರದಾಯಗಳು, ಆಹಾರ ಕ್ರಮ, ಕಸುಬು, ಭಾಷೆ, ಬಳಿಗಳೊಂದಿಗೆ ತಳುಕು ಹಾಕಿಕೊಂಡಿರುವುದನ್ನು ಗಮನಿಸಬಹುದು. ದಕ್ಷಿಣ ಕನ್ನಡ, ಕೊಡಗು ಹಾಗೂ ಕೇರಳ ರಾಜ್ಯಗಳ ಕಾಸರಗೋಡು ಜಿಲ್ಲೆಗಳಲ್ಲಿ "ಮರಾಠಿ ನಾಯ್ಕ" ಸಮುದಾಯಗಳ ಕುರಿತು ಅಧ್ಯಯನ ಕೈಗೊಳ್ಳಲಾಯಿತು. ಹೀಗೆ ಕೈಗೊಂಡ ಅಧ್ಯಯನದಲ್ಲಿ ಈ ಕೆಳಕಂಡ ಅಂಶಗಳನ್ನು ಗಮನಿಸಲಾಯಿತು.

1. ಮರಾಠಿ ನಾಯ್ಕ ಸಮುದಾಯವು ಮಹಾರಾಷ್ಟ್ರ ಹಾಗೂ ಗೋವಾ ರಾಜ್ಯಗಳಿಂದ ವಲಸೆ ಬಂದವರು.
2. ಆರಂಭದಲ್ಲಿ ಪಶುಪಾಲಕರಾಗಿದ್ದ ಮರಾಠಿಗರು ಕ್ರಮೇಣ "ಕುಮೇರಿ" ಬೇಸಾಯ ಕ್ರಮವನ್ನು ಅವಲಂಬಿಸಿದ್ದರು.
3. ಕೊಂಕಣಿ, ತುಳು, ಕನ್ನಡ, ಮಲಯಾಳಂ ಭಾಷೆಗಳ ಪ್ರಭಾವಕ್ಕೊಳಗಾದ ಮರಾಠಿ ಭಾಷೆಯನ್ನು ಮಾತನಾಡುತ್ತಾರೆ.
4. ಕುಂಬ್ರಿ ಮರಾಠಿ ಸಮುದಾಯದಲ್ಲಿದ್ದಂತೆ "ಬಳಿ" ವ್ಯವಸ್ಥೆಯನ್ನು ಹೊಂದಿದವರಾಗಿದ್ದಾರೆ.
5. ಇತರ ಬುಡಕಟ್ಟುಗಳಂತೆ ಈ ಮರಾಠಿಗರು ತಮ್ಮದೇ ಆದ ಒಳಾಡಳಿತ ವ್ಯವಸ್ಥೆಯನ್ನು ಹಾಗೂ ರೂಢಿ ಸಂಪ್ರದಾಯಗಳನ್ನು ಹೊಂದಿದವರಾಗಿದ್ದಾರೆ.
6. ಕುಂಬ್ರಿ ಮರಾಠಿ ಸಮುದಾಯಗಳಂತೆ ಈ ಸಮುದಾಯವು ಪಶ್ಚಿಮ ಘಟ್ಟಗಳ ಇಳಿಜಾರು ಪ್ರದೇಶದ ಕಾಡುಗಳಲ್ಲಿ ನೆಲೆ ನಿಂತವರಾಗಿದ್ದಾರೆ.
7. ದಕ್ಷಿಣ ಕನ್ನಡ, ಕೊಡಗು, ಕೇರಳದ ಕಾಸರಗೋಡ್ ಜಿಲ್ಲೆಗಳಲ್ಲಿನ ಮರಾಠಿ ಸಮುದಾಯವನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಲಾಗಿದೆ.
8. ಇತರ ಸಮುದಾಯಗಳಂತೆ ಮರಾಠಿ ಸಮುದಾಯವೂ ಸಹ ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿರುವುದು ಕಂಡು ಬರುತ್ತದೆ.

**ಕುಡುಬಿ, ಮರಾಠಿ ನಾಯ್ಕ, ಕುಣಬಿ ಮತ್ತು ಕುಂಬ್ರಿ ಮರಾಠಿ ಸಮುದಾಯ**

ಉತ್ತರ ಕನ್ನಡ ಜಿಲ್ಲೆಯ ದಟ್ಟ ಕಾಡುಗಳ ನಡುವೆ ನೆಲೆ ನಿಂತ ಕುಂಬ್ರಿ ಮರಾಠಿ ಸಮುದಾಯವನ್ನು ಕೇಂದ್ರೀಕರಿಸಿಕೊಂಡು ಇತರ ಸಮುದಾಯಗಳೊಡನೆ ಹೋಲಿಕೆ ಮಾಡಿ ನೋಡಲಾಗಿ ಉತ್ತರ ಕನ್ನಡ ಜಿಲ್ಲೆಯ ಕುಣಬಿಗಳು ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಕುಡುಬಿ ಸಮುದಾಯಗಳ ನಡುವೆ ಸಾಮ್ಯತೆಗಳಿರುವುದು ಕಂಡುಬರುತ್ತದೆ. ಅಧ್ಯಯನಕಾರರ ಅಭಿಪ್ರಾಯದಂತೆ ಕುಣಬಿಯರು ಮತ್ತು ಕುಡಬಿಯರು ಗೋವಾ ರಾಜ್ಯದ ಮೂಲದವರಾಗಿದ್ದು ಗೋವಾ ಸರಕಾರ ಬುಡಕಟ್ಟು

ಸಮುದಾಯ ಎಂದು ಘೋಷಿಸಿರುವ ಕುಣಬಿ ಸಮುದಾಯಕ್ಕೆ ಸೇರಿದವರೆಂದು ಉಲ್ಲೇಖವಿದೆ. ಈ ಹಿನ್ನೆಲೆಯಲ್ಲಿ ಕುಣಬಿ ಹಾಗೂ ಕುಡಬಿಗಳ ದೇಹದ ಸ್ವರೂಪ, ಉಡುಗೆ ತೊಡುಗೆ, ಭಾಷೆ, ಕಲೆ, ಆಚರಣೆ, ಆಹಾರ, ಕಸುಬು, ಒಳಾಡಳಿತ ವ್ಯವಸ್ಥೆ, ಬಳಿಗಳು, ಆರಾಧನೆಗಳನ್ನು ಗಮನಿಸಿದರೆ ಉತ್ತರ ಕನ್ನಡ ಜಿಲ್ಲೆಯ "ಕುಂಬ್ರಿ ಮರಾಠಿ" ಸಮುದಾಯಲ್ಲೂ ಈ ಎಲ್ಲಾ ಅಂಶಗಳೂ ಇರುವ ಬಗ್ಗೆ ಕಂಡುಬರುತ್ತದೆ. ಈ ಮೂರು ಸಮುದಾಯಗಳು ನೆಲೆಸಿರುವ ಪ್ರದೇಶ, ಕುಮರಿ ಬೇಸಾಯ, ಹೋಳಿ, ಸುಗ್ಗಿ ಹಬ್ಬಗಳು, ಬಳಸುವ ಗುಮ್ಮಟೆ ವಾದನ, ಭಾಷೆ, ಕಾಡು ಉತ್ಪನ್ನಗಳ ಸಂಗ್ರಹಣೆ ವಿಧಾನ, ದೈವಾರಾಧನೆ, ರೂಢಿ ಸಂಪ್ರದಾಯಗಳನ್ನು ಗಮನಿಸಿದರೆ ಈ ಮೂರು ಸಮುದಾಯಗಳ ನಡುವೆ ಪರಸ್ಪರ ಹೋಲಿಕೆಗಳು ಕಂಡುಬರುತ್ತವೆ. ಆದರೆ ಕುಡಬಿಗಳು ಹಾಗೂ ಕುಣಬಿ ಸಮುದಾಯಗಳ ಕುರಿತು ಅಧ್ಯಯನಗಳು ನಡೆದಂತೆ ಕುಂಬ್ರಿ ಮರಾಠಿಗರ ಬಗ್ಗೆ ಈವರೆಗೂ ಶಾಸ್ತ್ರೀಯ ಅಧ್ಯಯನ ನಡೆಯದ ಕಾರಣ ಕುಂಬ್ರಿ ಮರಾಠಿಗರು ಗೋವಾ ಕಡೆಯಿಂದಲೇ ವಲಸೆ ಬಂದವರೆಂದಾಗಲೀ, ಅಥವಾ ಗೋವಾ ರಾಜ್ಯದ ಕುಣಬಿ ಸಮುದಾಯದ ಮೂಲದವರೆಂದಾಗಲೀ ಹೇಳಲು ಸಾಧ್ಯವಾಗುವುದಿಲ್ಲಾ. ಆದರೆ ಕುಂಬ್ರಿ ಮರಾಠಿ ಸಮುದಾಯಕ್ಕೂ ಹಾಗೂ ಗೋವಾ, ಮಹಾರಾಷ್ಟ್ರ ರಾಜ್ಯದಲ್ಲಿ ಕಂಡುಬರುವ "ಕುರ್ಮಿ" ಮತ್ತು "ಕುಣಬಿ" ಸಮುದಾಯದ ನಡುವೆ ಇರುವ ಸಂಬಂಧವನ್ನು ಅಲ್ಲಗಳೆಯುವಂತಿಲ್ಲ.

## 4. ಉತ್ತರ ಕನ್ನಡ ಜಿಲ್ಲೆಯ ಭೌಗೋಳಿಕ ವಿವರಗಳು

### ಉತ್ತರಕನ್ನಡ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ

ಉತ್ತರ ಕನ್ನಡ ಜಿಲ್ಲೆ ಕರ್ನಾಟಕದಲ್ಲಿರುವ ಜಿಲ್ಲೆಗಳಲ್ಲೆಲ್ಲಾ ತುಂಬಾ ಸಂಪದ್ಭರಿತ ಜಿಲ್ಲೆ ಯಾಗಿದೆ. ಇದು ಬೆಳಗಾವಿ ವಿಭಾಗಕ್ಕೆ ಸೇರಿದ ಒಂದು ಜಿಲ್ಲೆ. "ಕಾರವಾರ ಉತ್ತರ ಕನ್ನಡ ಜಿಲ್ಲಾ ಕೇಂದ್ರವಾಗಿದೆ. ಜಿಲ್ಲೆಯ ವಿಸ್ತೀರ್ಣ 10.291 ಚ.ಕಿ.ಮೀ ಇದೆ. ಇದು ರಾಜ್ಯದ 5ನೇ ದೊಡ್ಡ ಜಿಲ್ಲೆಯಾಗಿದೆ. 2001ರ ಜನಗಣತಿಯಂತೆ ಒಟ್ಟು ಜನಸಂಖ್ಯೆ 13,53,644 ಇದೆ. ಒಟ್ಟು 11 ತಾಲ್ಲೂಕುಗಳನ್ನು ಉತ್ತರ ಕನ್ನಡ ಜಿಲ್ಲೆ ಹೊಂದಿದೆ. ಅವುಗಳು ಅಂಕೋಲಾ, ಭಟ್ಕಳ, ಕಾರವಾರ, ಹಳಿಯಾಳ, ಹೊನ್ನಾವರ, ಸುಪಾ, ಕುಮಟಾ, ಮುಂಡಗೋಡು, ಸಿದ್ಧಾಪುರ, ಸಿರಸಿ ಮತ್ತು ಯಲ್ಲಾಪುರ. 14 ನಗರ ಪಟ್ಟಣಗಳಿವೆ. 35 ಹೋಬಳಿಗಳನ್ನು, 207 ಗ್ರಾಮ ಪಂಚಾಯತಿಗಳನ್ನು ಹೊಂದಿದೆ. ಜಿಲ್ಲೆಯ ಸಾಕ್ಷಾರತೆಯ ಪ್ರಮಾಣ ಶೇ.76.6ರಷ್ಟು, ಜನಸಾಂದ್ರತೆ 132ಚ.ಕಿ.ಮೀ. ಲಿಂಗಾನುಪಾತ 970 ಹೆಣ್ಣು, 1000 ಗಂಡು. ನೈಸರ್ಗಿಕ ಸಂಪತ್ತು 8,14,718 ಹೆಕ್ಟೇರು ಅರಣ್ಯ.

ಉತ್ತರ ಕನ್ನಡ ಕರ್ನಾಟಕದ 30 ಜಿಲ್ಲೆಗಳಲ್ಲಿ ಒಂದು. ಅರಬೀ ಸಮುದ್ರದ ಗುಂಟ ತನ್ನ ಕರಾವಳಿ ಪ್ರದೇಶವನ್ನು ಹೊಂದಿರುವ ಕರ್ನಾಟಕದ ಮೂರು ಕರಾವಳಿ ಜಿಲ್ಲೆಗಳಲ್ಲೊಂದಾಗಿದೆ.

ಪಶ್ಚಿಮ ಘಟ್ಟ ಪ್ರದೇಶವು ಇದನ್ನು ಎರಡು ಭಾಗಗಳನ್ನಾಗಿ ವಿಭಾಗಿಸಿದೆ. ಉತ್ತರ ಕನ್ನಡ ಜಿಲ್ಲೆಯು ಐದು ಕರಾವಳಿ ಗುಂಟ ತಾಲೂಕುಗಳನ್ನು ಹೊಂದಿದೆ. ಅವಾವುವೆಂದರೆ 1. ಕಾರವಾರ, 2. ಹೊನ್ನಾವರ, 3. ಕುಮಟಾ, 4.ಅಂಕೋಲಾ ಮತ್ತು 5.ಭಟ್ಕಳ. ಅಲ್ಲದೆ ಎತ್ತರ ಘಟ್ಟ ಪ್ರದೇಶಗಳಲ್ಲಿ ಆರು ತಾಲೂಕುಗಳಿವೆ – ಅವು 1. ಸಿದ್ದಾಪುರ, 2. ಶಿರ್ಸಿ, 3. ಸೂಪಾ, 4. ಮುಂಡಗೋಡ, 5. ಯಲ್ಲಾಪುರ ಮತ್ತು 6. ಹಳಿಯಾಳ. ಇವು ದಖನ್ ಪ್ರಸ್ತಭೂಮಿಯವರೆಗೆ ವಿಸ್ತರಿಸಿವೆ.

ಉತ್ತರ ಕನ್ನಡ ಜಿಲ್ಲೆಯು ಬಿಳಿ ರಜತ ವರ್ಣದ ಬೀಚ್‌ಗಳು, ಸುಂದರ ಹಸಿರು ವರ್ಣದ ಭತ್ತದ ಬೆಳೆಯ ಕ್ಷೇತ್ರಗಳು, ತಂಪು ತರುವ ಪಾಮ್ ಗಿಡಗಳು, ದಟ್ಟ ಕಾಡು ಹಾಗೂ ನದಿಕೊಳ್ಳಗಳಿಂದ ಕಂಗೊಳಿಸುವ ನಿಸರ್ಗ ರಮಣೀಯ ಸುಂದರ ಪ್ರದೇಶಗಳಲ್ಲೊಂದು. ನಿಸರ್ಗ ನಿರ್ಮಿತ ಜಲಪಾತಗಳು ದೇಶ–ವಿದೇಶಗಳಿಂದ ಪ್ರವಾಸಿಗರನ್ನು ಆಕರ್ಷಿಸುತ್ತವೆ. ಫಾನಾ ಮತ್ತು ಫ್ಲೋರಾಗಳಿಂದ ಸಂಪದ್ಭರಿತವಾಗಿದೆ. ಅಂತರಾಷ್ಟ್ರೀಯ ಖ್ಯಾತಿಯ ಬಂದರುಗಳಿವೆ. ಮೀನುಗಾರಿಕೆ ಮತ್ತು ಅಂತರಾಷ್ಟ್ರೀಯ ವ್ಯಾಪಾರೋಧ್ಯಮಕ್ಕೆ ಹೆಸರುಗಳಿಸಿದೆ.[13]

**ಉತ್ತರ ಕನ್ನಡ ಹೆಸರಿನ ನಿಷ್ಪತ್ತಿ**

ಕರ್ನಾಟಕದಲ್ಲಿ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಎಂದು ಎರಡು ಕರಾವಳಿ ಜಿಲ್ಲೆಗಳು ಬಂದರುಗಳಿಗೆ ಪ್ರಸಿದ್ಧಿ ಹೊಂದಿವೆ. ಪೋರ್ಚುಗೀಸರು ಕರ್ನಾಟಕ ಎಂಬುದನ್ನು 'ಕೆನರಾ' ಎಂದು ಸಂಕ್ಷಿಪ್ತಗೊಳಿಸಿದರು. ಪೋರ್ಚುಗೀಸ ಇತಿಹಾಸ ತಜ್ಞ ಫಾರಿಯಾ ವಾಯ್. ಸೌಜಾ 'ಕೆನರಾ' ಎಂಬ ಹೆಸರಿನ ಉಪಯೋಗವನ್ನೇ ಮುಂದುವರೆಸಿದರು. ಡಚ್ ಪ್ರವಾಸಿಗ ವೊನ್ ಲಿನ್ಸ್‌ಕೋಟೆನ್ (1583) ಇಲ್ಲಿಯ ಜನರಿಗೆ ಕೆನರಿಯನ್‌ರು ಎಂದು ಕರೆದಿದ್ದಾನೆ. ಕ್ರಿ.ಶ. 1799 ರಲ್ಲಿ ಬ್ರಿಟಿಷರು ಟಿಪ್ಪು ಸುಲ್ತಾನನಿಂದ ಈ ಪ್ರದೇಶವನ್ನು ವಶಪಡಿಸಿಕೊಂಡ ನಂತರ ಕೆನರಾ ಜಿಲ್ಲೆ ಎಂದೇ ಕರೆದರು. ಇದೇ ಪ್ರದೇಶವನ್ನು ವಿಭಜಿಸಿ ಉತ್ತರ ಭಾಗವನ್ನು (ನಾರ್ಥ್ ಕೆನರಾ) ಉತ್ತರ ಕನ್ನಡ ಎಂದೂ, ದಕ್ಷಿಣ ಭಾಗವನ್ನು (ಸೌತ ಕೆನರಾ) ದಕ್ಷಿಣ ಕನ್ನಡ ಎಂದೂ ಕರೆದರು. ಸ್ವಾತಂತ್ರ್ಯ ನಂತರ ಕರ್ನಾಟಕ ಈ ಹೆಸರುಗಳನ್ನು ಬದಲಾಯಿಸಿ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳೆಂದೂ 31–1–1977 ರಿಂದ ಕರೆಯಲು ಪ್ರಾರಂಭಿಸಲಾಯಿತು. ಆದರೆ ಉತ್ತರ ಕನ್ನಡಕ್ಕೆ ಬದಲಾಗಿ ಕಾರವಾರ ಜಿಲ್ಲೆ ಎಂದೇ ಹೆಚ್ಚು ಪ್ರಚಲಿತವಿದೆ.

**ಭೌಗೋಳಿಕ ಸ್ಥಾನಮಾನ**

ಕಾರವಾರ ಮತ್ತು ಬೇಲಿಕೆರಿಗಳಲ್ಲಿ ಚಿಕ್ಕ ಕೊಲ್ಲಿಗಳಿವೆ. ಉಳಿದಂತೆ ನೆರವಾದ ತೀರ ಪ್ರದೇಶಗಳಿವೆ. ಇಡಿ ಉತ್ತರ ಕನ್ನಡ ಜಿಲ್ಲೆ ಚೆಲುವಿನ ಬೀಡಾಗಿದೆ, ಇದೊಂದು ಪ್ರಕೃತಿಯ ಪವಾಡವೆಂದೆ

ಹೇಳಬಹುದು. ನೋಡಿದಷ್ಟು ವಿಸ್ತಾರದ ಕಡಲು, ನದಿಕೊಳ್ಳಗಳ ಝುಳು ಝುಳುನಾದ, ಪಕ್ಷಿಗಳ ಚಿಲಿಪಿಲಿ ಕಲರವ, ಹಸಿರು ವಾಸಿಯಾದ ಸೃಷ್ಟಿ ಸೌಂದರ್ಯದಿಂದ ಕೂಡಿದ ನೈಸರ್ಗಿಕ ಅರಣ್ಯ ಸಂಪತ್ತು, ಬಂದರುಗಳು, ಜಲಪಾತಗಳು, ಪುಣ್ಯ ಕ್ಷೇತ್ರಗಳು, ಆಣೆಕಟ್ಟುಗಳು, ಇತಿಹಾಸ ಪ್ರಸಿದ್ಧಿ ಸ್ಥಳಗಳು ಉತ್ತರ ಕನ್ನಡ ಜಿಲ್ಲೆಯ ಪ್ರಸಿದ್ಧಿಯನ್ನು ಹೆಚ್ಚಿಸಿವೆ.

ಉತ್ತರ ಕನ್ನಡ ಜಿಲ್ಲೆ, ಇದರ ಉತ್ತರಕ್ಕೆ ಗೋವಾ ರಾಜ್ಯ, ದಕ್ಷಿಣಕ್ಕೆ ದಕ್ಷಿಣ ಕನ್ನಡ ಜಿಲ್ಲೆ, ಪೂರ್ವಕ್ಕೆ ಧಾರವಾಡ, ಬೆಳಗಾವಿ, ಶಿವಮೊಗ್ಗ ಜಿಲ್ಲೆಗಳಿವೆ. ಈ ಜಿಲ್ಲೆಯ ಪೂರ್ವ ರೇಖಾಂಶ 74.9 ರಿಂದ 75.10 ಹಾಗೂ 13.55 ರಿಂದ 15.31. ಉತ್ತರ ಅಕ್ಷಾಂಶಗಳ ನಡುವೆ 10276 ಚದುರ ಕಿಲೋಮೀಟರ್ ಪ್ರದೇಶವನ್ನು ವ್ಯಾಪಿಸಿಕೊಂಡಿದೆ. ಸುಮಾರು 700 ಮೀಟರ್ ಎತ್ತರವಾಗಿ ದಕ್ಷಿಣೋತ್ತರವಾಗಿ ಹಬ್ಬಿರುವ ಸಹ್ಯಾದ್ರಿ ಶ್ರೇಣಿಯಲ್ಲಿಯ ದೇವಿಮನೆ ಘಟ್ಟ, ಮಲೆಮನೆ ಘಟ್ಟ, ಅರಬೈಲ್ ಘಟ್ಟಗಳು ಈ ಜಿಲ್ಲೆಯನ್ನು ಪ್ರಾಕೃತಿಕವಾಗಿ ಘಟ್ಟದ ಮೇಲಿನ ಹಾಗೂ ಘಟ್ಟದ ಕೆಳಗಿನ ಪ್ರದೇಶಗಳಾಗಿ ಹೊಂದಿದೆ.

ಹೀಗೆ ಉತ್ತರ ಕನ್ನಡ ಜಿಲ್ಲೆ ಕರ್ನಾಟಕದ ಅತ್ಯಂತ ಸಂಪದ್ಭರಿತ ಜಿಲ್ಲೆಯಾಗಿದೆ. ಇಲ್ಲಿನ ಭೌಗೋಳಿಕ, ನೈಸರ್ಗಿಕ ಸಂಪತ್ತು ಬಹುಶಃ ನಮ್ಮ ರಾಜ್ಯದ ಬೇರೆ ಜಿಲ್ಲೆಗೆ ಹೋಲಿಸಿದರೆ ಅತ್ಯಧಿಕವಾಗಿದೆ. 'ಮ್ಯಾಂಗನೀಸ್, ಕಬ್ಬಿಣ, ಸುಣ್ಣದಕಲ್ಲು, ಜೇಡಿಮಣ್ಣು, ಇಲ್ಮನೈಟ್, ಗಾಜು, ಸಾಬೂನು, ಕಲ್ಲು, ಅಭ್ರಕ, ಬಾಕ್ಸೈಡ್ ಈ ಜಿಲ್ಲೆಯ ಖನಿಜಗಳು. ಜಿಲ್ಲೆಯಲ್ಲಿ ಅನೇಕ ಕಡೆ ಮ್ಯಾಂಗನೀಸ್ ದೊರೆಯುತ್ತದೆ. ಜೋಯ್ಡ ತಾಲೂಕಿನ ಕೋಡ್ಲಿಗವಿಗಳು ಮ್ಯಾಂಗನೀಸ್‌ಗೆ ಪ್ರಸಿದ್ಧವಾಗಿದ್ದರೆ, ಹೊನ್ನಾವರ ತಾಲೂಕಿನ ಅಪ್ಸರ ಕೊಂಡದಲ್ಲು, ಕುಮಟಾ ತಾಲೂಕಿನ ಯಾಣದಲ್ಲೂ ಕಬ್ಬಿಣದ ಅದಿರಿನ ನಿಕ್ಷೇಪವಿದೆ. ಸಹ್ಯಾದ್ರಿ ಪಾದಭಾಗಗಳಲ್ಲಿ ಕಬ್ಬಿಣವಲ್ಲದೆ ಇತರ ಲೋಹ ನಿಕ್ಷೇಪಗಳುಂಟು. ಯಾಣ ಮತ್ತಿತರ ಕಡೆಗಳಲ್ಲಿ ಸುಣ್ಣದಕಲ್ಲು ದೊರೆಯುತ್ತದೆ. ಹಲವೆಡೆ ಸ್ವರ್ಣಮಷಿಕೆ, ಬಿಳಿಬೇಡಿ ಇವೆ. ಭತ್ತ, ತೆಂಗು, ಕಬ್ಬು, ಅಡಕೆ, ಮೆಣಸು, ಏಲಕ್ಕಿ, ಬಾಳೆ ಮುಖ್ಯವಾದ ಬೆಳೆಗಳು. ಇವಲ್ಲದೆ ಜಿಲ್ಲೆಯಲ್ಲಿ ಗೋಡಂಬಿ, ಮಾವು, ಹುಣಸೆ, ನಿಂಬೆ, ಅನಾನಸು, ಹಲಸು, ಪಪ್ಪಾಯಿ, ಬಟಾಟೆ, ಬದನೆ, ಕಲ್ಲಂಗಡಿ, ಹೈಬ್ರಿಡ್ ಜೋಳ, ರಾಗಿ, ಶೇಂಗಾ, ಇತ್ಯಾದಿಗಳನ್ನು ಬೆಳೆಯಲಾಗುತ್ತದೆ. ಭತ್ತ 85924 ಹೆಕ್ಟೇರ್, ಏಲಕ್ಕಿ 396 ಹೆಕ್ಟೇರ್, ಮೆಣಸು 135 ಹೆಕ್ಟೇರ್, ಮಾವು 1140 ಹೆಕ್ಟೇರ್, ಬಾಳೆ 1320 ಹೆಕ್ಟೇರ್, ಅನಾನಸ್ 315 ಹೆಕ್ಟೇರ್, ಹಲಸು 206 ಹೆಕ್ಟೇರ್, ಪಪ್ಪಾಯಿ 1149 ಹೆಕ್ಟೇರ್, ಹತ್ತಿ 14823 ಹೆಕ್ಟೇರ್‌ನಲ್ಲಿ ಬೆಳೆಯುತ್ತಾರೆ. ಅಡಕೆಯ ತೋಟದಲ್ಲಿ ಏಲಕ್ಕಿ, ಕಾಳುಮೆಣಸು, ಬಾಳೆ ಬೆಳೆಯುತ್ತಾರೆ. ಗದ್ದೆಯಲ್ಲಿ ರಾಗಿ, ಕಡಲೆ, ತೊಗರಿ, ಮೊದಲಾದ ಧಾನ್ಯಗಳನ್ನು ಬೆಳೆಯುತ್ತಾರೆ'.[14]

ಮೀನುಗಾರಿಕೆ ಉತ್ತರ ಕನ್ನಡ ಜಿಲ್ಲೆಯ ಒಂದು ಮುಖ್ಯ ಉದ್ಯೋಗವಾಗಿದೆ. ಒಂದು ಕಾಲದಲ್ಲಿ ಹರಿಕಾಂತ ತಾಂಡೇಲ, ಖಾರ್ವಿ, ಗಾವಿತ, ಅಂಬಿಗ, ಮೊಗೇರ, ಅಗೇರ, ಕ್ರಿಶ್ಚಿಯನ್ ದಾಲಜಿಗಳಷ್ಟೇ ಈ ವೃತ್ತಿಯನ್ನವಲಂಭಿಸಿದ್ದರೆ, ಇತ್ತೀಚೆಗೆ ಸಾಮಾನ್ಯವಾಗಿ ಎಲ್ಲ ಜಾತಿಯವರೂ ಮೀನು ಉದ್ಯಮದಲ್ಲಿ ತೊಡಗಿಕೊಂಡಿದ್ದಾರೆ. ಸುಮಾರು 54.763 ಜನ ಈ ವೃತ್ತಿಯಲ್ಲಿದ್ದಾರೆ. ಇವರು ಕರಾವಳಿ ಪ್ರದೇಶದ 118 ಹಳ್ಳಿಗಳಲ್ಲಿದ್ದಾರೆ. ಸಮುದ್ರದಿಂದ ಮೀನು ಹಿಡಿಯುವ ಕೇಂದ್ರಗಳೆಂದರೆ ಅಗ್ರಾ, ಭಟ್ಕಳ, ಬಿಣಗಾ, ಚೆಂಡಿಯೆ, ಗಂಗಾವಳಿ, ಕಾರವಾರ, ಹೊನ್ನಾವರ, ಖಾರವಿ, ಕೇಣಿ, ಕೋಡಾರ, ಕುಮಟಾ, ಮಾಜಾಳಿ, ಮಂಕಿ, ಮುರ್ಡೇಶ್ವರ, ಶಿರಾಲಿ, ತದಡಿ. ಸಾಗರ ಮೀನುಗಾರಿಕೆಯಲ್ಲಿ 30094 ಟನ್ ಹಿಡಿದರೆ, ಸಿಹಿನೀರಿನಲ್ಲಿ 249 ಟನ್ ಮೀನು ಹಿಡಿಯಲಾಗುತ್ತದೆ.

ಜಿಲ್ಲೆಯಲ್ಲಿ 52 ಮಂಜುಗಡ್ಡೆ ತಯಾರಿಕಾ ಕಾರ್ಖಾನೆಗಳಿವೆ. ದಾಂಡೇಲಿಯಲ್ಲಿಯೂ ಕಾಗದದ ಕಾರ್ಖಾನೆ ದೊಡ್ಡ ಉದ್ದಿಮೆ. ಅಲ್ಲದೆ ಪ್ಲೈವುಡ್, ಫೆರೋಮ್ಯಾಂಗನೀಸ್ ಉದ್ದಿಮೆಗಳೂ ಇವೆ. ಕಾರವಾರ, ಬೆಲೆಕೇರಿ, ತದಡಿ, ಕುಮಟಾ, ಹೊನ್ನಾವರ, ಭಟ್ಕಳ, ಇವು ಮುಖ್ಯ ಬಂದರುಗಳು. ಕಾರವಾರದಲ್ಲಿ ಸರ್ವಋತು ಬಂದರನ್ನು ಬೃಹತ್ತಾಗಿ ಕಟ್ಟಿದ್ದಾರೆ. ಬಳ್ಳಾರಿ ಪ್ರದೇಶ ಕಬ್ಬಿಣದ ಅದಿರನ್ನು ಸಾಗಿಸುವುದು ಕಾರವಾರ ಬಂದರಿನಿಂದಲೆ. ಜಿಲ್ಲೆಯಲ್ಲಿ 329 ಕಿ.ಮೀ.ಗಳ ರಾಷ್ಟ್ರೀಯ ಹೆದ್ದಾರಿ, 672 ಕಿ.ಮೀ.ಗಳ ರಾಜ್ಯ ಹೆದ್ದಾರಿ ಮಾರ್ಗಗಳಿವೆ. ಜಿಲ್ಲಾ ಮುಖ್ಯ ರಸ್ತೆಗಳು 795 ಕಿ.ಮೀ., 24 ಭಾರಿ ಸೇತುವೆಗಳಿವೆ. ಪಶ್ಚಿಮ ಕರಾವಳಿಯ ಹೆದ್ದಾರಿ ದಕ್ಷಿಣಕ್ಕೆ ಕನ್ಯಾಕುಮಾರಿಯವರೆಗೆ, ಉತ್ತರಕ್ಕೆ ಕಾಶ್ಮೀರದವರೆಗೆ ಸಂಪರ್ಕ ಕಲ್ಪಿಸುತ್ತದೆ'.[15]

**ಉದ್ದಿಮೆಗಳು**

ಉತ್ತರ ಕನ್ನಡ ಜಿಲ್ಲೆಯಲ್ಲಿ ಎಂಜಿನಿಯರಿಂಗ್ ಉದ್ಯಮ 14, ರಾಸಾಯನಿಕ ಕಾರ್ಖಾನೆಗಳು 9, ಬಟ್ಟೆ ಕಾರ್ಖಾನೆ 2, ಇತರೆ ಸಣ್ಣ ಪ್ರಮಾಣದ ಕಾರ್ಖಾನೆಗಳು 62. ಈ ಕಾರ್ಖಾನೆಗಳಲ್ಲಿ ಉದ್ಯೋಗಿಗಳು 1846, ಜಿಲ್ಲೆಯಲ್ಲಿ ಕೆಲವು ಬೃಹತ್ ಮತ್ತು ಮಧ್ಯಮ ಗಾತ್ರದ ಉದ್ದಿಮೆಗಳಿವೆ. ವೆಸ್ಟ್‌ಕೋಸ್ಟ್ ಪೇಪರ್ ಮಿಲ್ಸ್, ದಾಂಡೇಲಿಯ ಇಂಡಿಯನ್ ಪ್ಲೈವುಡ್ ಮ್ಯಾನುಫ್ಯಾಕ್ಚರಿಂಗ್ ಕಂಪನ, ಜೈಹಿಂದ್ ಸಾಮಿಲ್, ಬಳ್ಳಾಪುರ ಇಂಡಸ್ಟ್ರೀಸ್ ಲಿ., ಬಿಣಗಾದ ಬಿಲ್ಟ್ ಕಾರ್ಖಾನೆ, ದಾಂಡೇಲಿ ಫೆರೋ ಅಲಾಯ್ಸ್ ಪ್ರೈ. ಲಿ., ಇವು ಮುಖ್ಯ ಉದ್ದಿಮೆಗಳು. ಇವಲ್ಲದೆ ಸಣ್ಣ ಕೈಗಾರಿಕಾ ಘಟಕಗಳು ಖಾದಿ ಗ್ರಾಮೋದ್ಯೋಗ ಕರಕುಶಲ ಘಟಕಗಳು ಹಾಗೂ ಮೀನುಗಾರಿಕೆ ಘಟಕಗಳು, ರಾಸಾಯನಿಕ ಘಟಕಗಳು, ಚರ್ಮ ಮತ್ತು ರಬ್ಬರ್ ಘಟಕಗಳು, ನೂಲುವ–ನೇಯುವ ಘಟಕಗಳು, ಮುದ್ರಣ ಘಟಕಗಳು, ಜೇನುಸಾಕಾನೆ, ಬೆತ್ತ ಬಿದಿರುಗಳಿಂದ ವಸ್ತುಗಳನ್ನು ತಯಾರಿಸುವ ಘಟಕಗಳು,

ಎಣ್ಣೆ ತಯಾರಿಕಾ ಘಟಕಗಳು, ಕುಂಬಾರಿಕೆ ಮುಂತಾದ ಅನೇಕ ಉದ್ಯಮಗಳಿವೆ."[16] ಡಾ. ಕೆ. ಮೋಹನ್‌ಕೃಷ್ಣ ರೈ ಅವರು "ಕೆನರಾದ ವಿಭಜನೆ, ಹತ್ತಿ ರಾಜಕೀಯದ ವಿಶ್ಲೇಷಣೆ" ಎಂಬ ಗ್ರಂಥದಲ್ಲಿ ಕೆನರಾದ ಚಾರಿತ್ರಿಕ ಹಿನ್ನೆಲೆಯನ್ನು ತಿಳಿಸಿದ್ದಾರೆ. ಅಧ್ಯಯನಕ್ಕೆ ಅಗತ್ಯವಾಗಿರುವುದರಿಂದ ಸಂಬಂಧಿಸಿದ ಕೆಲವು ಅಂಶಗಳನ್ನು ಇಲ್ಲಿ ದಾಖಲಿಸಲಾಗಿದೆ. "ಉತ್ತರಕನ್ನಡ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆಯನ್ನು ತಿಳಿದುಕೊಳ್ಳಬೇಕಾದರೆ ಕೆನರಾದ ಚಾರಿತ್ರಿಕ ಹಿನ್ನೆಲೆ ತಿಳಿಯುವುದು ಅಗತ್ಯ. ಕೆನರಾ ಪ್ರದೇಶದಲ್ಲಿ ಹೆಚ್ಚಾಗಿ ಬಂದರು ಪಟ್ಟಣಗಳು ಇರುವುದರಿಂದ ಗ್ರೀಕರು, ರೋಮನ್ನರು, ಅರೇಬಿಯನ್ನರು ಮತ್ತು ಯೂರೋಪಿಯನ್ನರು ಇತ್ಯಾದಿ ವಿದೇಶಿ ವ್ಯಾಪಾರಸ್ಥರ ಪ್ರಭಾವ ಎದ್ದು ಕಾಣುತ್ತದೆ. ಕರ್ನಾಟಕದ ಕರಾವಳಿಯ ಎರಡು ಜಿಲ್ಲೆಗಳನ್ನು ಕೆನರಾ ಎಂಬ ಹೆಸರಿನಿಂದ ಕರೆಯಲಾಯಿತು. ಅವುಗಳೆಂದರೆ ದಕ್ಷಿಣ ಕೆನರಾ ಮತ್ತು ಉತ್ತರ ಕೆನರಾಗಳು. ಕರ್ನಾಟಕ ಏಕೀಕರಣಗೊಂಡ ಮೇಲೆ ಕೆನರಾವನ್ನು ಕನ್ನಡ ಎಂಬುದಾಗಿ ಹೆಸರಿಸಲಾಯಿತು. ದಕ್ಷಿಣ ಕೆನರಾವು ದಕ್ಷಿಣ ಕನ್ನಡವಾದರೆ, ಉತ್ತರ ಕೆನರಾವು ಉತ್ತರ ಕನ್ನಡವಾಯಿತು.

"ಉತ್ತರ ಕನ್ನಡವು ಬಾಂಬೆ ಪ್ರೆಸಿಡೆನ್ಸಿಗೆ ಸೇರಿದ ಮೇಲೆ ಬಾಂಬೆ ಸರ್ಕಾರವು ಕಾನಡಾ ಎಂಬ ಹೆಸರಿನಿಂದ ಕರೆಯಲಾರಂಭಿಸಿತು. ಈ ಹೆಸರು 1977ರವರೆಗೂ ಇತ್ತು. ಕಾಲ್ಡ್‌ವೆಲ್ ಪ್ರಕಾರ ಕೆನರಾ, ಕನ್ನಡ, ಕರ್ನಾಟಿ ಪದಗಳು ಎರಡು ಹಳೆಯ ದ್ರಾವಿಡ ಪದಗಳಿಂದ ಬಂದಿರುವಂತಹವು. ಅವುಗಳೆಂದರೆ ಕಾರ್ ಅಂದರೆ ಕಪ್ಪು ನಾಡು ಅಂದರೆ ಪ್ರದೇಶ ಕಪ್ಪು ಮಣ್ಣನ್ನು ಹೊಂದಿರುವ ಪ್ರದೇಶ. ಕೆನರಾದ ಆರಂಭದ ಅರಸು ಮನೆತನಗಳು ದಕ್ಷಿಣ ಪ್ರಸ್ಥಭೂಮಿಯ ದಕ್ಷಿಣ ಭಾಗದಲ್ಲಿದ್ದವು ಎಂಬುದು ಇಲ್ಲಿನ ವಿವರಣೆ. ಕ್ರಮೇಣ ಕರ್ನಾಟಕ ಮತ್ತು ಕನ್ನಡ ಪದಗಳು ಹುಟ್ಟಿಕೊಂಡವು. ಅವೇ ಬ್ರಿಟಿಷ್ ಅವಧಿಯಲ್ಲಿ ಕೆನರಾ ಎಂಬುದಾಗಿ ಬದಲಾವಣೆಗೊಂಡವು. ಇನ್ನೊಂದು ಅಭಿಪ್ರಾಯವೆಂದರೆ ಪೋರ್ಚುಗೀಸರು ಈ ಪ್ರದೇಶವನ್ನು ಕೆನರಾ ಎಂಬುದಾಗಿ ಕರೆದರು."[17] ಪೋರ್ಚುಗೀಸರು ಕರಾವಳಿ ಕರ್ನಾಟಕಕ್ಕೆ ಆಗಮಿಸಿದಾಗ ಕರಾವಳಿಯ ಜನರು ಆಡುತ್ತಿದ್ದ ಕನ್ನಡ ಭಾಷೆಯನ್ನು ಕೇಳಿಸಿಕೊಂಡು ಈ ಪ್ರದೇಶವನ್ನು ಕೆನರಾ/ಕನ್ನಡ ಎಂಬುದಾಗಿ ಕರೆದಿರಬೇಕು. ಗೋವಿಂದ ಪೈ ಅವರ ಪ್ರಕಾರ "ಪೋರ್ಚುಗಿಸ್ ಭಾಷೆಯಲ್ಲಿ ಡ–ಕಾರವಿಲ್ಲದ ಕಾರಣ ರ–ಕಾರವನ್ನು ಅವರು ಬಳಸಿದರು." ಹಾಗಾಗಿ ಕನ್ನಡ ಎನ್ನುವುದು ಕನ್ನರ–ಕಾನರಾ–ಕೆನರಾ ಎಂದಾಗಿರಬೇಕು."[18] ಉತ್ತರಕನ್ನಡ ಜಿಲ್ಲೆಯ ಚರಿತ್ರೆಯಲ್ಲಿ ಕೊಂಕಣ ಪ್ರದೇಶವು ಒಂದು. ಇದು ಕರಾವಳಿ ತೀರದ ಪ್ರದೇಶವಾಗಿದೆ. "ಅರಬ್ಬಿಸಮುದ್ರ ಮತ್ತು ಪಶ್ಚಿಮಘಟ್ಟಗಳ ಮಧ್ಯದ ಭೂಭಾಗವನ್ನು ಕೊಂಕಣ ಎಂಬುದಾಗಿ ಕರೆಯಲಾಗಿದೆ. ಆದರೆ ಈ ಭೂಭಾಗ ಎಲ್ಲಿಂದ ಎಲ್ಲಿಯವರೆಗೆ ವಿಸ್ತರಿಸಿಕೊಂಡಿತ್ತು ಎನ್ನುವುದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. "ಸಾಮಾನ್ಯ ಅಭಿಪ್ರಾಯದ

ಪ್ರಕಾರ ಕೊಂಕಣವು ಉತ್ತರದಲ್ಲಿ ಗುಜರಾತಿನ ದಾಮನ್‌ನಿಂದ ದಕ್ಷಿಣದಲ್ಲಿ ಗೋವಾದವರೆಗೆ ವಿಸ್ತರಿಸಿಕೊಂಡಿತ್ತು." ಆಡಳಿತ ಘಟಕವಾಗಿ ಕೊಂಕಣ 700, ಕೊಂಕಣ 900 ಎನ್ನುವ ಉಲ್ಲೇಖಗಳು ಸಿಗುತ್ತವೆ. "ಕಲ್ಯಾಣಿ ಚಾಲುಕ್ಯರ ಆಳ್ವಿಕೆಯ ಅವಧಿಯಲ್ಲಿ ಕೊಂಕಣ 700 ಪ್ರದೇಶ ಒಂದು ಆಡಳಿತ ವಿಭಾಗವಾಗಿತ್ತು. ಗೋವೆಯ ಕದಂಬರು ತಮ್ಮ ಆಳ್ವಿಕೆಯಲ್ಲಿ ಕೊಂಕಣ 900 ಪ್ರದೇಶವನ್ನು ಹೊಂದಿದ್ದರು. ಕೊಂಕಣ 900 ರಲ್ಲಿ ಇಂದಿನ ಕಾರವಾರ ಹಾಗೂ ಅಂಕೋಲಾ ತಾಲೂಕುಗಳು ಸೇರಿದವು. ಗಂಗಾವಳಿಯ ಉತ್ತರ ಭಾಗವನ್ನು ಕೊಂಕಣ ಎಂದು ಕರೆಯಲಾಗುತ್ತಿತ್ತು."[19] ಎನ್ನುವ ಮಾಹಿತಿಗಳು ಸಿಗುತ್ತವೆ. ಕರಾವಳಿ ಕರ್ನಾಟಕದ ಇನ್ನೊಂದು ಆಡಳಿತ ವಿಭಾಗ ಹೈವೆ ಅಥವಾ ಹೈವೆನಾಡು. "ಸಪ್ತ ಕೊಂಕಣಗಳಲ್ಲಿ ಉಲ್ಲೇಖಿತವಾಗಿರುವ ಪಶು ಅಥವಾ ಪಶುಕ ಹೈವೆನಾಡು ಆಗಿರಬೇಕು ಎನ್ನುವ ಅಭಿಪ್ರಾಯವಿದೆ." "ಪಶುಕವು ಕ್ರಮೇಣ ಪಯಿಕ(ಪಯ್ಕ), ಪಯಿಗ (ಪಯ್ಗ) ಎಂದಾಗಿ ನಂತರ ಪಯಿಗ(ಪಯ್ಗ) ಹಯಿಗ(ಹಯ್ಗ) ಎಂಬುದಾಗಿ ರೂಪಾಂತರ ಗೊಂಡು ಹೈಗ ಆಗಿರಬೇಕು ಎಂದು ಗೋವಿಂದ ಪೈ ಅವರ ವಾದ. ಹಾಗಾಗಿ ಪಶು ಅಂದರೆ ಹೈಗ ದೇಶ. ಇದುವೆ ಉತ್ತರಕನ್ನಡ ಜಿಲ್ಲೆ ಎನ್ನುವುದು ಗೋವಿಂದ ಪೈ ಅವರ ಸ್ಪಷ್ಟ ನಿಲುವು." "ಹೈವೆಯನ್ನು ಹೈಗ ಎಂಬ ಹೆಸರಿನಿಂದಲೂ ಕರೆಯಲಾಗಿದೆ. ಹೈಗ ಪದವು ಹಾವು-ಹಾವಿಗ ಎನ್ನುವ ಪದದಿಂದ ಬಂದಿರಬೇಕು ಎನ್ನುವ ವಾದವಿದೆ. ಏಕೆಂದರೆ ಉತ್ತರಕನ್ನಡ ಜಿಲ್ಲೆಯು ದಟ್ಟ ಅರಣ್ಯಗಳನ್ನು ಹೊಂದಿರುವುದಾಗಿ ಹಾವುಗಳ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿದ್ದು, ಅದು ಹಾವುಗಳ ಭೂಮಿಯಾಗಿದೆ ಎನ್ನುವ ವಿವರಣೆಯಿದೆ."[20] ಡಾ. ಕೆ. ಮೋಹನ್‌ಕೃಷ್ಣ ರೈ ಅವರು ಕೆನರಾದ ವಿಭಜನೆ: ಹತ್ತಿ ರಾಜಕೀಯದ ವಿಶ್ಲೇಷಣೆ ಎಂಬ ಗ್ರಂಥದಲ್ಲಿ ಪ್ರಸ್ತುತ ಉತ್ತರಕನ್ನಡ ಜಿಲ್ಲೆಯ ಚರಿತ್ರೆಯನ್ನು ಸಾರಾಂಶ ರೂಪದಲ್ಲಿ ಈ ಕೆಳಗಿನಂತೆ ವಿವರಿಸಿದ್ದಾರೆ. ಉತ್ತರಕನ್ನಡ ಜಿಲ್ಲೆಯ ಪ್ರಾಚೀನತೆಯು ಪರಶುರಾಮ ಸೃಷ್ಟಿಯಿಂದ ಆರಂಭಗೊಳ್ಳುತ್ತದೆ. ಇದಕ್ಕೆ ಸಂಬಂಧಿಸಿದಂತೆ ಸ್ಕಂದಪುರಾಣದ ಸಹ್ಯಾದ್ರಿ ಖಂಡದಲ್ಲಿ ವಿವರಣೆ ಸಿಗುತ್ತದೆ ಎಂದು ತಿಳಿಸುತ್ತಾರೆ. ಉತ್ತರಕನ್ನಡ ಜಿಲ್ಲೆಯು ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತೆ ಎನ್ನುವುದು ಚರ್ಚೆಯ ವಿಷಯ. ಆದರೆ ಬನವಾಸಿಯ ಮೌರ್ಯರ ಮುದ್ರಾಂಕಿತ ನಾಣ್ಯಗಳು ಈ ಪ್ರದೇಶದಲ್ಲಿ ಸಿಕ್ಕಿವೆ. ಶಾತವಾಹನರ ಆಳ್ವಿಕೆಗೆ ಈ ಜಿಲ್ಲೆಯು ಒಳಪಟ್ಟಿತ್ತು ಎನ್ನುವುದಕ್ಕೆ ಸಾಕಷ್ಟು ಆಧಾರಗಳು ಲಭ್ಯವಿವೆ. ಬನವಾಸಿಯು ಶಾತವಾಹನರ ಕಾಲದ ಪ್ರಮುಖ ವ್ಯಾಪಾರ ನೆಲೆಯಾಗಿತ್ತು. ಶಾತವಾಹನರ ಸಾಮಂತರಾಗಿದ್ದ ಚುಟುಗಳು ಬನವಾಸಿಯಿಂದ ಆಳ್ವಿಕೆ ನಡೆಸಿದರು. ಸ್ವಲ್ಪ ಸಮಯ ಕಂಚಿಯ ಪಲ್ಲವರು ಈ ಪ್ರದೇಶದ ಮೇಲೆ ಅಧಿಕಾರ ಸ್ಥಾಪಿಸಿದರು. ಕ್ರಿ.ಶ. 4ನೆಯ ಶತಮಾನದ ನಂತರ ಕದಂಬರ ನೇರ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿತ್ತು. ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿ ಈ ಪ್ರದೇಶವನ್ನು ಆಳ್ವಿಕೆ ಮಾಡಿದ ರಾಜ ಮನೆತನವೆಂದರೆ ಕದಂಬರು.

ಇಂದಿನ ಕರ್ನಾಟಕ, ಮಹಾರಾಷ್ಟ್ರ ಹಾಗೂ ಗೋವಾ ರಾಜ್ಯಗಳು ಕದಂಬರ ಆಳ್ವಿಕೆಯ ವ್ಯಾಪ್ತಿಗೆ ಸೇರಿದ್ದವು. ಚಂದ್ರಾಪುರದ ಭೋಜರು ಗೋವಾವನ್ನು, ಖಾನಾಪುರ, ಹಳಿಯಾಳದ ಕೆಲವು ಪ್ರದೇಶಗಳನ್ನು ಹಾಗೂ ಕುಮಟಾದವರೆಗಿನ ಕರಾವಳಿಯನ್ನು ಆಳಿದರು. ಕದಂಬರ ಸಾಮಂತರಾದ ಕೇಕೆಯರು ಹೊನ್ನಾವರ ಮತ್ತು ಕುಮಟಾ ಪ್ರದೇಶಗಳನ್ನು ಹೊಂದಿದ್ದರು.

ಬಾದಾಮಿಯ ಚಾಲುಕ್ಯರು ಕ್ರಿ.ಶ. 6ನೇ ಶತಮಾನದಿಂದ ಈ ಪ್ರದೇಶದ ಮೇಲೆ ನಿಯಂತ್ರಣ ಸಾಧಿಸಿದರು. ಅದೇ ಸಂದರ್ಭದಲ್ಲಿ ದಕ್ಷಿಣ ಕನ್ನಡವು ಅಲುಪರ ಅಧೀನದಲ್ಲಿತ್ತು. ಪಲ್ಲವರ ಒಂದು ಶಾಖೆ ಚಾಲುಕ್ಯರಿಗೆ ಅಧೀನವಾಗಿ ಉತ್ತರಕನ್ನಡದಲ್ಲಿ ಆಳ್ವಿಕೆ ನಡೆಸಿತ್ತು. ಅಲುಪರು ಬನವಾಸಿ ಮಂಡಲವನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಂಡಿದ್ದರು. ಪ್ರಾಚೀನ ರಾಜಮನೆತನವಾದ ಅಳುಪರು ಮೊದಲು ಮಂಗಳೂರು ಹಾಗೂ ಉದ್ಯಾವರದಿಂದ, ನಂತರ ಬಾರಕೂರಿನಿಂದ ಆಳ್ವಿಕೆ ನಡೆಸಿದರು. ಆಳ್ವಖೇಡ 6000 ಆಡಳಿತ ವಿಭಾಗ ಇವರಿಗೆ ಸೇರಿತ್ತು. ಬಾದಾಮಿ ಚಾಲುಕ್ಯರ ಅವಧಿಯಲ್ಲಿ ಅಳುಪರು ಉತ್ತರಕನ್ನಡ ಜಿಲ್ಲೆಯ ಕೆಲವು ಭಾಗಗಳ ಮೇಲೆ ನಿಯಂತ್ರಣ ಸಾಧಿಸುವಲ್ಲಿ ಯಶಸ್ವಿಯಾದರು. ರಾಷ್ಟ್ರಕೂಟರ ಸಂದರ್ಭದಲ್ಲಿ ಬನವಾಸಿ ಮಂಡಲವು ಅಳುಪರ ಕೈತಪ್ಪಿ ಹೊಯಿತು. ಹೊಯ್ಸಳರ ಅವಧಿಯಲ್ಲಿ ಮತ್ತೆ ಉತ್ತರಕನ್ನಡ ಜಿಲ್ಲೆಯ ಕೆಲವು ಭಾಗ ಇವರ ಅಧೀನಕ್ಕೆ ಬಂದವು. ವಿಜಯನಗರದ ಪ್ರವೇಶದ ಬಳಿಕ ಉತ್ತರ ಕನ್ನಡ ಜಿಲ್ಲೆಯ ಮೇಲಿನ ಅಳುಪರ ಹಿಡಿತ ತಪ್ಪಿಹೊಯಿತು. ಬನವಾಸಿ 12000ವು ರಾಷ್ಟ್ರಕೂಟರ ಅಧೀನದಲ್ಲಿತ್ತು. ಬನವಾಸಿ 12000 ವಿಭಾಗವು ಜಿಲ್ಲೆಯ ಬಹುಭಾಗವನ್ನು ಒಳಗೊಂಡಿತ್ತು. ಕಲ್ಯಾಣಿ ಚಾಲುಕ್ಯರು ಬನವಾಸಿ 12000ರ ಜೊತೆಗೆ ಜಿಲ್ಲೆಯ ಇತರ ಪ್ರದೇಶಗಳಾದ ಹೈವೆ 500, ಕೊಂಕಣಿ 700, ಹಲಸಿ 12000 ಹಾಗೂ ಹಾನಗಲ್ 500 ಆಡಳಿತ ವಿಭಾಗಗಳನ್ನು ಹೊಂದಿದ್ದರು. ಕಲ್ಯಾಣಿ ಚಾಲುಕ್ಯರ ಅವಧಿಯಲ್ಲಿ ಹಾನಗಲ್ಲಿನ ಕದಂಬರು ಹಾಗೂ ಗೋವೆಯ ಕದಂಬರು ಜಿಲ್ಲೆಯ ಕೆಲವು ಭಾಗಗಳಲ್ಲಿ ಆಡಳಿತ ನಡೆಸುತ್ತಿದ್ದರು. ಹಾನಗಲ್ಲಿನ ಕದಂಬರು ಬನವಾಸಿ, ಹಾನಗಲ್ ಹಾಗೂ ಬಂಕಾಪುರಗಳಿಂದ ಆಳ್ವಿಕೆ ನಡೆಸಿದರು. ಬನವಾಸಿ 12000 ಹಾಗೂ ಶಾಂತಲಗೆ 1000 ಇವರ ಅಧೀನದಲ್ಲಿತ್ತು. ಗೋವೆಯ ಕದಂಬರು ಚಾಲುಕ್ಯರ ಸಾಮಂತರಾಗಿದ್ದರು. ಅವರು ಕೊಂಕಣ 900 ಹಾಗೂ ಹಲಸಿಗೆ 12000 ಆಡಳಿತ ವಿಭಾಗಗಳಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಕೊಂಕಣ 900ರಲ್ಲಿ ಇಂದಿನ ಕಾರವಾರ ಮತ್ತು ಅಂಕೋಲಾ ತಾಲೂಕುಗಳು ಸೇರಿದ್ದವು. ಹಾನಗಲ್ಲಿನ ಕದಂಬರಂತೆ ಅವರು ಕೂಡ ಬನವಾಸಿಯ ಕದಂಬ ವಂಶಸ್ಥರಾಗಿದ್ದರು. ಚಂದಾವರದ ಕದಂಬರು ಅಂಕೋಲಾ, ಹೊನ್ನಾವರ ಹಾಗೂ ಕುಮಟಾ ಪ್ರದೇಶಗಳಲ್ಲಿ ಆಳ್ವಿಕೆ ನಡೆಸುತ್ತಿದ್ದರು. 13ನೇ ಶತಮಾನದ ಆದಿಯಲ್ಲಿ ಗೇರುಸೊಪ್ಪೆಯ ಸಾಳುವರು ದಕ್ಷಿಣ ಕರಾವಳಿಯ

ತಾಲೂಕುಗಳಲ್ಲಿ ಆಳ್ವಿಕೆ ನಡೆಸುತ್ತಿದ್ದರು. 15ನೇ ಶತಮಾನದ ಸುಮಾರಿಗೆ ಈ ಮನೆತನದಲ್ಲಿ ಬಿರುಕು ಕಾಣಿಸಿಕೊಂಡು ಹಾಡುವಳಿಯ ಸಾಳುವರು ಕರಾವಳಿ ಪ್ರದೇಶವನ್ನು ವೆಂಕಟಾಪುರ ನದಿಯ ದಕ್ಷಿಣದವರೆಗೆ ಆಳಿದರು. ಗೇರುಸೊಪ್ಪೆಯ ಸಾಳುವರ ರಾಜಧಾನಿ ಗೇರುಸೊಪ್ಪೆಯಾಗಿತ್ತು. ಇದನ್ನು ಕ್ಷೇಮಪುರ, ನಗಿರೆ ಎಂಬುದಾಗಿಯೂ ಕರೆಯಲಾಗಿದೆ. ಹಾಡುವಳಿಯ ಸಾಳುವರ ರಾಜಧಾನಿ ಹಾಡುವಳಿ ಅಥವಾ ಸಂಗೀತಪುರ ಇದು ಭಟ್ಕಳ ತಾಲೂಕಿನ ಪ್ರದೇಶವಾಗಿದೆ. ಹಾಡುವಳಿಯು ಗೇರುಸೊಪ್ಪೆ ಸಾಳುವರ ಒಂದು ಶಾಖೆಯಾಗಿತ್ತು.

ಹೊಯ್ಸಳರು ಉತ್ತರಕನ್ನಡ ಜಿಲ್ಲೆಯ ಮೇಲೆ ಸಾಧಿಸಿದ ನಿಯಂತ್ರಣ ಕಡಿಮೆ ಅವಧಿಯದ್ದಾಗಿತ್ತು. ಹಾನಗಲ್ ಹೊಯ್ಸಳರ ವಿಷ್ಣುವರ್ಧನನ ಎರಡನೆಯ ರಾಜಧಾನಿಯಾಗಿತ್ತು. ಇವನು ಬನವಾಸಿ 12000 ಹಾಗೂ ಹಾನಗಲ್ಲನ್ನು ವಶಪಡಿಸಿಕೊಂಡಿದ್ದನು. ಮೂರನೆಯ ಬಲ್ಲಾಳನು ಅಳುಪರ ರಾಜಕುಮಾರಿ ಚೆಕ್ಕಯಿ ತಾಯಿಯನ್ನು ವರಿಸುವುದರ ಮೂಲಕ ಕರಾವಳಿ ತೀರದ ಸಂಪರ್ಕ ಸಾಧಿಸಿದ್ದನು. ಚೆಕ್ಕ ತಾಯಿ ಉತ್ತರಕನ್ನಡ ಜಿಲ್ಲೆಯ ಪ್ರದೇಶಗಳ ಆಳ್ವಿಕೆ ನೋಡಿಕೊಳ್ಳುತ್ತಿದ್ದಳು. ಮೂರನೇಯ ಬಲ್ಲಾಳನು ಭಟ್ಕಳದ ಮೇಲೆ ನೇರ ನಿಯಂತ್ರಣ ಹೊಂದಿದ್ದನು. ವಿಜಯನಗರ ಸಾಮ್ರಾಜ್ಯ ವಿಸ್ತರಣೆಯಲ್ಲಿ ತೊಡಗಿದಾಗ ಕರಾವಳಿಪ್ರದೇಶ ಅದರೊಳಗೆ ಸೇರಿಕೊಂಡಿತು.

ಉತ್ತರಕನ್ನಡ ಜಿಲ್ಲೆಯಲ್ಲಿ ಹೊನ್ನಾವರವು ವಿಜಯನಗರದ ಆಡಳಿತ ಕೇಂದ್ರವಾಗಿತ್ತು. ವಿಜಯನಗರದ ಅರಸರು ಉತ್ತರ ಮತ್ತು ದಕ್ಷಿಣ ಕನ್ನಡಗಳಲ್ಲಿ ಆಡಳಿತಾಧಿಕಾರಿ (ರಾಜ್ಯಪಾಲ)ಗಳನ್ನು ನೇಮಕ ಮಾಡಿದ್ದರು. ಎರಡನೆಯ ಹರಿಹರನ ಆಳ್ವಿಕೆಯ ಅವಧಿಯಲ್ಲಿ ನಾಗರಸ ಒಡೆಯನು (1378) ಎಂಬಾತನು ಹೊನ್ನಾವರ ರಾಜ್ಯಪಾಲನಾಗಿದ್ದನು. ಅಲ್ಲಿಂದ ಎರಡನೆಯ ದೇವರಾಯನ ಆಳ್ವಿಕೆಯ ಅವಧಿಯಲ್ಲಿ ರಾಜ್ಯಪಾಲನಾಗಿ ನೇಮಕಗೊಂಡ ಅಂತಪ್ಪ (1438) ಎಂಬಾತನವರೆಗೆ ರಾಜ್ಯಪಾಲರುಗಳ ಉಲ್ಲೇಖ ಸಿಗುತ್ತವೆ. 1438ರ ನಂತರ ಹೊನ್ನಾವರದ ರಾಜ್ಯಪಾಲರುಗಳು ಈ ಪ್ರದೇಶದ ಆಳ್ವಿಕೆಯನ್ನು ನೋಡಿಕೊಳ್ಳುತ್ತಿದ್ದರು ಎನ್ನುವ ವಿವರ ಸಿಗುತ್ತದೆ. 1480ರವರೆಗೆ ಹೊನ್ನಾವರದಲ್ಲಿ ರಾಜ್ಯಪಾಲರುಗಳಿದ್ದರೂ ಎನ್ನುವ ವಿವರಗಳಿದ್ದರೂ ಅದಕ್ಕೆ ಆಧಾರಗಳಿಲ್ಲ. ಇದರಿಂದ ಸ್ಥಳೀಯ ಅರಸುಮನೆತನಗಳಿಗೆ ಹೆಚ್ಚಿನ ಅಧಿಕಾರ ನೀಡಿರುವುದು ಎಂಬುದಾಗಿಯೂ ತೀರ್ಮಾನಿಸಬಹುದಾಗಿದೆ.

ಗೇರುಸೊಪ್ಪೆ, ಹಾಡುವಳಿ, ಸೊಂದಾ, ಬಿಳಗಿ ಅರಸು ಮನೆತನಗಳು ಆರಂಭದಲ್ಲಿ ವಿಜಯನಗರದ ಆಳ್ವಿಕೆಯನ್ನು ವಿರೋಧಿಸಿದವು. ಆದರೆ ವಿಜಯನಗರ ಇವರೆಲ್ಲರನ್ನು ತನ್ನ ಹತೋಟಿಗೆ ತೆಗೆದುಕೊಂಡ ಮೇಲೆ ವಿಜಯನಗರದ ಪ್ರಭುತ್ವವನ್ನು ಒಪ್ಪಿಕೊಂಡು ಸಾಮಂತ ಅರಸರಾಗಿ ಗುರುತಿಸಿಕೊಂಡರು. ವಿಜಯನಗರದ ಅರಸರು ಕರಾವಳಿಯ ಸ್ಥಳೀಯ

ಅರಸುಮನೆತನಗಳ ಮೇಲೆ ಅನಗತ್ಯ ಹಸ್ತಕ್ಷೇಪ ಮಾಡುತ್ತಿರಲಿಲ್ಲ. ಆರಂಭದಲ್ಲಿ ಚಂದ್ರಗುತ್ತಿಯ ರಾಜ್ಯಪಾಲ ಉತ್ತರಕನ್ನಡದ ಆಳ್ವಿಕೆ ನೋಡಿಕೊಳ್ಳುತ್ತಿದ್ದನು. ನಂತರ ಹೊನ್ನಾವರದ ರಾಜ್ಯಪಾಲರು ನೇರ ಆಳ್ವಿಕೆ ನಡೆಸಿದರು. ಹೊನ್ನಾವರದಿಂದ ಜಿಲ್ಲೆಯನ್ನು ಆಳ್ವಿಕೆ ನಡೆಸುತ್ತಿದ್ದ ರಾಜ್ಯಪಾಲರು ತುಳು, ಕೊಂಕಣಿ, ಹೈವೆ ಪ್ರದೇಶಗಳನ್ನು ನೋಡಿ ಕೊಳ್ಳುತ್ತಿದ್ದರು. 1550ರ ವೇಳೆಗೆ ಕೆಳದಿಯ ನಾಯಕರು ಈ ಪ್ರದೇಶದ ಮೇಲೆ ಹೆಚ್ಚಿನ ಆಸಕ್ತಿ ಹೊಂದಿದ್ದಂತೆ ಕಂಡುಬರುತ್ತದೆ. ವಿಜಯನಗರದ ಇನ್ನೊಂದು ವಿಶೇಷವೆಂದರೆ ಯುರೋಪಿಯನ್ನರಾದ ಪೋರ್ಚುಗೀಸರ ಆಗಮನ. ರಾಷ್ಟ್ರಕೂಟರ ಅವಧಿಯಲ್ಲಿಯೇ ಕರಾವಳಿಯಲ್ಲಿ ನೆಲೆಸಿ ವ್ಯಾಪಾರ ನಡೆಸುತ್ತಿದ್ದ ಅರಬಿಯನ್ನರಿಗೆ ಪೋರ್ಚುಗೀಸರ ಆಗಮನದಿಂದ ಹಿನ್ನಡೆಯಾಯಿತು. ಪೋರ್ಚುಗೀಸರ ಆಗಮನವನ್ನು ಕರಾವಳಿಯ ವ್ಯಾಪಾರದ ದೊಡ್ಡ ತಿರುವು ಎಂಬುದಾಗಿಯೂ ಕರೆಯಲಾಗಿದೆ. ಪೋರ್ಚುಗೀಸರಿಂದ ಆರಂಭಗೊಂಡ ಯುರೋಪ್ ಮಾದರಿಯ ವ್ಯಾಪಾರ ಹಾಗೂ ಕೈಗಾರಿಕಿಕರಣ ಬ್ರಿಟೀಷರ ಅವಧಿಯವರೆಗೂ ಮುಂದುವರೆಯಿತು. ಬಿಜಾಪುರದ ಸುಲ್ತಾನರು ಗೋವಾದ ಮೇಲಿನ ಹಿಡಿತ ಸಡಿಲಗೊಳ್ಳ ಲಾರಂಭಿಸಿದಾಗ ಪೋರ್ಚುಗೀಸರು ಅದರ ಲಾಭವನ್ನು ಪಡೆದರು. 1510ರಲ್ಲಿ ವಿಜಯನಗರದ ನೆರವಿನೊಂದಿಗೆ ಪೋರ್ಚುಗೀಸರು ಗೋವಾವನ್ನು ಪಡೆದುಕೊಂಡರು. ಹಾಗೂ ಉತ್ತರಕನ್ನಡ ಜಿಲ್ಲೆಯ ಬಂದರುಗಳಲ್ಲಿ ವ್ಯಾಪಾರ ಆರಂಭಿಸಿದರು. ವಿಜಯನಗರದ ಅರಸರಿಗೆ ಉತ್ತಮ ತಳಿಯ ಕುದುರೆಗಳನ್ನು ಒದಗಿಸುತ್ತಿದದ್ದರಿಂದಾಗಿ ಪೋರ್ಚುಗೀಸರು ವಿಶೇಷ ಸವಲತ್ತುಗಳನ್ನು ಪಡೆದುಕೊಂಡರು. ಕುದುರೆ ವ್ಯಾಪಾರ ಪೊರ್ಚುಗೀಸರಿಗೆ ಅತ್ಯಂತ ಲಾಭದಾಯಕವಾಗಿತ್ತು. ವಿಜಯನಗರದ ಸಾಮಂತರಾಗಿದ್ದ ಕೆಳದಿಯ ನಾಯಕರು 16ನೇ ಶತಮಾನದ ಮಧ್ಯಭಾಗದಲ್ಲಿ ಉತ್ತರಕನ್ನಡ ಜಿಲ್ಲೆಯ ಆಳ್ವಿಕೆ ನಡೆಸಲಾರಂಭಿಸಿದರು. ಆರಂಭದಲ್ಲಿ ವಿಜಯನಗರದ ಸಾಮಂತರಾಗಿ ಹಾಗೂ 17ನೇ ಶತಮಾನದಲ್ಲಿ ಸ್ವತಂತ್ರವಾಗಿ ಈ ಪ್ರದೇಶದ ಆಳ್ವಿಕೆ ನಡೆಸಲಾರಂಭಿಸಿದರು. ರಾಮರಾಯನ ಆಳ್ವಿಕೆಯ ಸಂದರ್ಭದಲ್ಲಿ ಕೆಳದಿಯ ಸದಾಶಿವ ನಾಯಕನಿಗೆ ಮಂಗಳೂರು, ಬಾರ್ಕೂರು ಹಾಗೂ ಗುತ್ತಿ ರಾಜ್ಯಗಳ ಆಳ್ವಿಕೆ ನೋಡಿಕೊಳ್ಳುವ ಅಧಿಕಾರ ನೀಡಲಾಗಿತ್ತು. ಗೇರುಸೊಪ್ಪೆ ಮತ್ತು ಹಾಡುವಳಿಯ ಅರಸು ಮನೆತನಗಳು ಸುಮಾರು 1606ರ ವೇಳೆಗೆ ಕೆಳದಿಯ ನಾಯಕರ ನಿಯಂತ್ರಣಕ್ಕೆ ಬಂದವು. ಅದೇ ರೀತಿ ಸೊಂದಾ, ಬಿಳಗಿ ಮುಂತಾದ ಕರಾವಳಿಯ ಸಣ್ಣಪುಟ್ಟ ಅರಸುಮನೆತನಗಳು ಕೆಳದಿ ನಾಯಕರ ಅಧೀನಕ್ಕೆ ಬಂದವು. ಸೊಂದಾದ ನಾಯಕರು ಶಿರಸಿ, ಯಲ್ಲಾಪುರ, ಹಳಿಯಾಳ, ಸೂಫಾ ಮುಂತಾದ ಪ್ರದೇಶಗಳ ಮೇಲೆ ಅಧಿಕಾರ ಹೊಂದಿದ್ದರು. ಇವರು ಬಿಜಾಪುರದ ಆದಿಲಾಶಾಹಿಗಳು ಹಾಗೂ ಮರಾಠರ ಸಾಮಂತರಾಗಿಯೂ ಆಳ್ವಿಕೆ ನಡೆಸಿದರು. ಬಿಡದಿ ಒಡೆಯರು ಆರಂಭದಲ್ಲಿ ಸಿದ್ಧಾಪುರದ ತಾಲೂಕಿನ ಐಸೂರಿನಿಂದ ಹಾಗೂ ನಂತರ ಬಿಳಗಿಯಿಂದ ಆಳ್ವಿಕೆ ನಡೆಸಿದರು. ಇವರು ಕೆಳದಿಯ ನಾಯಕರೊಂದಿಗೆ ನಿರಂತರ ಯುದ್ಧ

ನಡೆಸಿ ಕೊನೆಗೂ ಕೆಳದಿಯ ಅಧಿಪತ್ಯವನ್ನು ಒಪ್ಪಿಕೊಂಡರು. 1606ರಲ್ಲಿ ಕೆಳದಿಯ ವೆಂಕಟಪ್ಪ ನಾಯಕನು ಗೇರುಸೊಪ್ಪೆಯ ಹಾಡುವಳಿ ಸಾಳುವಮನೆತನದ ರಾಣಿಚೆನ್ನಭೈರಾದೇವಿಯನ್ನು ಸೋಲಿಸಿದ್ದನು. ಇದರಿಂದಾಗಿ ಕರಾವಳಿ ಕರ್ನಾಟಕದ ಬೈಂದೂರಿನಿಂದ ತದಡಿ ನದಿಯವರೆಗಿನ ಪ್ರದೇಶ ಕೆಳದಿಯ ನಾಯಕರ ವಶವಾಯಿತು. ಅದೇ ರೀತಿ ಭಟ್ಕಳ ಹಾಗೂ ಹೊನ್ನಾವರವನ್ನು ಸ್ವಾಧೀನಪಡಿಸಿಕೊಂಡರು. ಚೆನ್ನಭೈರಾದೇವಿಯನ್ನು 'ಕಾಳುಮೆಣಸಿನ ರಾಣಿ' ಎಂದು ಕರೆಯಲಾಗುತ್ತಿತ್ತು. ಇವಳು ಪೋರ್ಚುಗೀಸರನ್ನು ಆರಂಭದಲ್ಲಿ ವಿರೋಧಿಸಿದಳು. ನಂತರ ಅವರೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದಳು. ಪೋರ್ಚುಗೀಸರು ವಾಣಿಜ್ಯ ಬೆಳೆಯಾದ ಕಾಳುಮೆಣಸಿನ ವ್ಯಾಪಾರಕ್ಕೆ ಹೆಚ್ಚಿನ ಪ್ರಾಧ್ಯಾನತೆಯನ್ನು ನೀಡಿದರು. ಶಿವಪ್ಪ ನಾಯಕನ ಅವಧಿಯಲ್ಲಿ ಬಿಳಗಿ ಮತ್ತು ಸೊಂದಾ ಮನೆತನಗಳು ಸಂಪೂರ್ಣವಾಗಿ ಕೆಳದಿಯ ಅಧೀನಕ್ಕೆ ಬಂದವು. ಶಿವಪ್ಪನಾಯಕನು ಪೋರ್ಚುಗೀಸರನ್ನು ಹೊನ್ನಾವರದಿಂದ ಹೊರದಬ್ಬಿದನು. ಇದಕ್ಕೆ ಡಚ್ಚರ ನೆರವನ್ನು ಪಡೆದನು. ಸೋಮಶೇಖರ ನಾಯಕನ ಅವಧಿಯಲ್ಲಿ ಪೋರ್ಚುಗೀಸರು ಮತ್ತೆ ಉತ್ತರಕನ್ನಡದಲ್ಲಿ ವ್ಯಾಪಾರ ನಡೆಸುವ ಅನುಮತಿ ಪಡೆದರು. ಹೊನ್ನಾವರದಲ್ಲಿ ತಮ್ಮ ವ್ಯಾಪಾರ ಕೋಠಿಯನ್ನು ತೆರೆದರು. ಚೆನ್ನಮ್ಮಾಜಿಯ ಅವಧಿಯಲ್ಲೂ ಪೋರ್ಚುಗೀಸರು ವ್ಯಾಪಾರದ ಅನುಮತಿ ಪಡೆದರು. ವೀರಮ್ಮಾಜಿಯ ಆಳ್ವಿಕೆಯ ಅವಧಿಯಲ್ಲಿ ಮರಾಠರು ಮಿರ್ಜಾನನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದರು. ಮೈಸೂರಿನ ಹೈದರ್ ಅಲಿಯ 1763ರಲ್ಲಿ ಕೆಳದಿಯನ್ನು ವಶಪಡಿಸಿಕೊಂಡಾಗ ಕರಾವಳಿಯ ಎಲ್ಲಾ ಪ್ರದೇಶಗಳು ಹೈದರ್‌ನ ಅಧೀನಕ್ಕೆ ಬಂದವು.

ಬಿಜಾಪುರದ ಆದಿಲ್‌ಶಾಹಿಗಳು ಉತ್ತರಕನ್ನಡ ಪ್ರದೇಶದ ಹಲವಾರು ಭಾಗಗಳನ್ನು ವಶಪಡಿಸಿಕೊಂಡಿದ್ದರು. ಗೇರುಸೊಪ್ಪೆಯ ರಾಣಿ ಚೆನ್ನಭೈರಾದೇವಿ ಆದಿಲ್‌ಶಾಹಿಗಳೊಡನೆ ಕೆಳದಿಯ ವಿರುದ್ಧ ಒಪ್ಪಂದ ಮಾಡಿಕೊಂಡಿದ್ದಳು. ಆದರೆ ಅದು ಯಶಸ್ವಿಯಾಗಲಿಲ್ಲ. ಆದಿಲ್‌ಶಾಹಿಗಳು ಮಿರ್ಜಾನ್, ಅಂಕೋಲಾ, ಕಾರವಾರ ಮತ್ತು ಶಿವೇಶ್ವರಗಳ ಮೇಲೆ ನಿಯಂತ್ರಣ ಹೊಂದಿದ್ದರು. ಮಿರ್ಜಾನ್, ಕದ್ರಾ ಹಾಗೂ ಶಿವೇಶ್ವರಗಳಲ್ಲಿ ಕೋಟೆಗಳನ್ನು ನಿರ್ಮಿಸಿದರು. ಕಾರವಾರವು ಆದಿಲ್‌ಶಾಹಿಗಳ ಪ್ರಮುಖ ಬಂದರಾಗಿತ್ತು. ಆದಿಲಶಾಹಿಗಳು ರಾಜಕೀಯವಾಗಿ ಕ್ಷೀಣಿಸುತ್ತಿದ್ದಂತೆ ಸ್ಥಳೀಯ ಅರಸು ಮನೆತನಗಳು ಬಲಗೊಳ್ಳಲಾರಂಭಿಸಿದವು. ಮರಾಠರ ಪ್ರಭಾವವು ಶಿವಾಜಿಯಿಂದ ಪೇಶ್ವೆಗಳ ಅವಧಿಯವರೆಗೂ ಇತ್ತು. ಮರಾಠಿ ಭಾಷೆಯ ಪ್ರಭಾವವನ್ನು ಏಕೀಕರಣೋತ್ತರ ಸಂದರ್ಭದಲ್ಲಿ ಕಾಣಬಹುದಾಗಿದೆ. ಆದಿಲ್‌ಶಾಹಿಗಳು ಉತ್ತರಕನ್ನಡ ಜಿಲ್ಲೆಯಲ್ಲಿ ಹೊಂದಿದ್ದ ಪ್ರದೇಶಗಳನ್ನು ಶಿವಾಜಿಯು ಸ್ವಾಧೀನಪಡಿಸಿಕೊಳ್ಳಲು ಪ್ರಯತ್ನಿಸಿ ಯಶಸ್ವಿಯಾದನು. ಶಿವಾಜಿಯು ಭಟ್ಕಳ, ಬಸ್ರೂರ, ಕಾರವಾರ ಪ್ರದೇಶಗಳ ಮೇಲೆ ನಿಯಂತ್ರಣ ಸಾಧಿಸಿ ಅಲ್ಲಿನ ವ್ಯಾಪಾರಸ್ಥರಿಂದ

ಕೊಡುಗೆಗಳನ್ನು ಸ್ವೀಕರಿಸಿದನು. ಸಂಭಾಜಿ, ರಾಜಾರಾಮ, ಒಂದನೆಯ ಬಾಜಿರಾವ್ ಇವರೆಲ್ಲರೂ ಸೊಂದಾ ಹಾಗೂ ಬಿಳಗಿ ಅರಸರೊಂದಿಗೆ ಯುದ್ಧವನ್ನು ನಡೆಸುತ್ತಲೇ ಇದ್ದರು. ಹೈದರನ ಆಗಮನವಾದ ಬಳಿಕ ಮರಾಠರು ತೆರೆಮರೆಗೆ ಸರಿಯಬೇಕಾಯಿತು.

ಮೈಸೂರಿನ ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನ ಪಾಳೆಯಗಾರರ ವಿರುದ್ಧ ಸಮರ ಸಾರಿ ಅವರನ್ನು ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಳ್ಳುವಲ್ಲಿ ಯಶಸ್ವಿಯಾದರು. ಇದು ಕರಾವಳಿಯ ಎಲ್ಲಾ ಅರಸುಮನತೆಗಳಿಗೆ ಬಹಳ ದೊಡ್ಡ ಹಿನ್ನಡೆಯಾಗಿ ಪರಿಣಮಿಸಿತು. ಬಿಳಗಿ, ಸೊಂದಾ ಅರಸುಮನೆತನಗಳು ಹೈದರನ ವಶವಾದವು. ಹೈದರನು ಹೊನ್ನಾವರದಲ್ಲಿ ನೌಕಾ ನೆಲೆಯೊಂದನ್ನು ಸ್ಥಾಪಿಸಿ ಹಡಗು ನಿರ್ಮಾಣ ಕಾರ್ಯದಲ್ಲೂ ತೊಡಗಿದನು. ಅದೇರೀತಿ ಮೈಸೂರಿನಿಂದ ಪ್ರಯತ್ನವನ್ನು ಮಾಡಿದನು. ಹೈದರ್ ಘಾಟ್ ಎನ್ನುವ ಘಟ್ಟರಸ್ತೆ ಇಂದಿಗೂ ಬಳಕೆಯಲ್ಲಿದೆ. ಹೈದರನ ನಂತರ ಟಿಪ್ಪುಸುಲ್ತಾನ ಬಿದನೂರ, ಹೊನ್ನಾವರ್, ಮಿರ್ಜಾನ್ ಮುಂತಾದ ಪ್ರದೇಶಗಳನ್ನು ವಶಪಡಿಸಿ ಕೊಂಡನು. ಕಾರವಾರ ಹಾಗೂ ಭಟ್ಕಳ ಬಂದರುಗಳಿಂದ ವಿದೇಶಿ ವ್ಯಾಪಾರ ಸಂಪರ್ಕವನ್ನು ಹೊಂದುವ ಪ್ರಯತ್ನಮಾಡಿದನು. ತನ್ನದೆಯಾದ ಸ್ವತಂತ್ರ ನೌಕಾದಳವನ್ನು ಹೊಂದುವ ಹಾಗೂ ಹಡಗುಗಳನ್ನು ನಿರ್ಮಿಸುವ ಪ್ರಯತ್ನವನ್ನು ಟಿಪ್ಪು ಮಾಡಿದನು. ಆದರೆ ಬ್ರಿಟೀಷರ ವಿರೋಧದಿಂದಾಗಿ ಟಿಪ್ಪುವಿಗೆ ತನ್ನ ಪ್ರಯತ್ನದಲ್ಲಿ ಅಷ್ಟೊಂದು ಯಶಸ್ಸನ್ನು ಕಾಣಲು ಸಾಧ್ಯವಾಗಲಿಲ್ಲ. 1799ರಲ್ಲಿ ನಡೆದ ನಾಲ್ಕನೇಯ ಆಂಗ್ಲೊ-ಮೈಸೂರು ಯುದ್ಧದಲ್ಲಿ ಟಿಪ್ಪು ಸೋತು ಮರಣ ಹೊಂದಿದಾಗ ಕರಾವಳಿ ಕರ್ನಾಟಕವು ಬ್ರಿಟೀಷರ ಕೈವಶವಾಯಿತು.

ಯುರೋಪಿನಯನ್ನರಾದ ಪೋರ್ಚುಗೀಸರು, ಡಚ್ಚರು, ಫ್ರೆಂಚರು ಹಾಗೂ ಬ್ರಿಟೀಷರು ಕರಾವಳಿ ಕರ್ನಾಟಕದ ವ್ಯಾಪಾರದಲ್ಲಿ ಏಕಸ್ವಾಮ್ಯವನ್ನು ಹೊಂದುವುದಕ್ಕಾಗಿ ಪರಸ್ಪರ ಹೋರಾಟ ನಡೆಸಿದರು. ಸ್ಥಳೀಯ ಅರಸುಮನೆತನಗಳಿಗೆ ಬೆಂಬಲ ಸೂಚಿಸುವ, ವಿರೋಧಿಸುವ ತಂತ್ರಗಳು ನಿರಂತರವಾಗಿ ನಡೆಯುತ್ತಲೆ ಇದ್ದವು. ಆರಂಭದಲ್ಲಿ ಆಗಮಿಸಿದ ಪೋರ್ಚುಗೀಸರು ವಿಜಯನಗರದ ಅರಸರು ನೀಡಿದ ಆಶ್ರಯವನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡರು. ಸ್ಥಳೀಯ ಅರಸುಮನೆತನಗಳ ಮೇಲೆ ಸವಾರಿ ಮಾಡುವಷ್ಟು ಸಾಮರ್ಥ್ಯವನ್ನು ಪಡೆದುಕೊಂಡರು. ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ ಬ್ರಿಟಿಷರು ನಡೆಸಿದ ರಾಜಕಾರಣದ ರೀತಿಯಲ್ಲಿಯೇ ಪೋರ್ಚುಗೀಸರ ರಾಜಕಾರಣವು ಇತ್ತು. ಆದರೆ ಅದನ್ನು ಮುಂದುವರೆಸಲು ಬ್ರಿಟಿಷರು ಅವಕಾಶ ಮಾಡಿಕೊಡಲಿಲ್ಲ. ಬ್ರಿಟಿಷ ಸರ್ಕಾರ ಹತ್ತಿಗೆ ಹೆಚ್ಚಿನ ಪ್ರಾಧನ್ಯತೆಯನ್ನು ನೀಡಿ ಹತ್ತಿರಾಜಕೀಯ ನಡೆಸಿದರೆ, ಪೋರ್ಚುಗೀಸರು ಕಾಳುಮೆಣಸಿನ ರಾಜಕೀಯ ನಡೆಸಿದರು. ಇದರಿಂದಾಗಿ ಅರಬ್ ಹಾಗೂ ಟರ್ಕಿ ವ್ಯಾಪಾರಸ್ಥರು

ತಮ್ಮ ನೆಲೆ ಕಳೆದುಕೊಳ್ಳಬೇಕಾಯಿತು. ಡಚ್ಚರು ಕಾರವಾರ ಹಾಗೂ ಅಂಕೋಲಾ ಬಂದರುಗಳಿಂದ ವ್ಯಾಪಾರ ನಡೆಸುತ್ತಿದ್ದರು. ಆದರೆ ಇವರಿಗೆ ಪೋರ್ಚುಗೀಸರು ಹಾಗೂ ಬ್ರಿಟೀಷರ ವಿರೋಧವಿತ್ತು. 1680ರಲ್ಲಿ ಡಚ್ಚರು ಕಾಳಿ ನದಿಯ ಎತ್ತರಕ್ಕೆ ವ್ಯಾಪಾರ ಕೋಠಿಯೊಂದನ್ನು ತೆರೆದರು. ಬ್ರಿಟೀಷರು ಮತ್ತು ಪೋರ್ಚುಗೀಸರ ವ್ಯಾಪಾರದಲ್ಲಿ ಇಳಿಮುಖವಾಗುವಂತೆ ಮಾಡುವ ಪ್ರಯತ್ನದಲ್ಲಿ ತಾತ್ಕಾಲಿಕ ಯಶಸ್ಸನ್ನು ಪಡೆದರು. ಪೋರ್ಚುಗೀಸರಿಗೂ ಬಿಜಾಪುರದ ಆದಿಲ್‌ಶಾಹಿಗಳಿಗೂ ನಡೆಯುತ್ತಿದ್ದ ಯುದ್ಧದ ಲಾಭವನ್ನು ಡಚ್ಚರು ಪಡೆದುಕೊಂಡರು. ಫ್ರೆಂಚರು ಕರಾವಳಿ ಕರ್ನಾಟಕದಲ್ಲಿ ಅಷ್ಟೊಂದು ಯಶಸ್ಸನ್ನು ಕಾಣಲಿಲ್ಲ. 1669ರಲ್ಲಿ ಮಿರ್ಜಾನ್‌ನಲ್ಲಿ ವ್ಯಾಪಾರ ಕೋಠಿಯನ್ನು ತೆರೆದು ಅಲ್ಲಿಂದ ವ್ಯಾಪಾರ ನಡೆಸುತ್ತಿದ್ದರು. ಫ್ರೆಂಚರಿಗೆ ವ್ಯಾಪಾರದಲ್ಲಿ ಹೆಚ್ಚಿನ ಲಾಭ ಸಿಗದಿದ್ದರೂ ಇವರ ಪ್ರವೇಶ ಬ್ರಿಟಿಷ್ ವ್ಯಾಪಾರಕ್ಕೆ ಸ್ವಲ್ಪಮಟ್ಟಿನ ಹಿನ್ನಡೆಯಾಯಿತು. ಕರಾವಳಿಯ ವ್ಯಾಪಾರದಲ್ಲಿ ಯಶಸ್ಸನ್ನು ಕಂಡವರು ಬ್ರಿಟೀಷರು. ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿಯು ಕರಾವಳಿಯ ಬಂದರುಗಳನ್ನು ತನ್ನ ಮರ್ಕಂಟೈಲ್ ಧೋರಣೆಗೆ ಸರಿಯಾಗಿಯೇ ಬಳಸಿಕೊಂಡಿತು. ಬ್ರಿಟೀಷರು 1637ರಲ್ಲಿ ಭಟ್ಕಳದಲ್ಲಿ, 1653ರಲ್ಲಿ ಕಾರವಾರದಲ್ಲಿ ಹಾಗೂ 1737ರಲ್ಲಿ ಹೊನ್ನಾವರದಲ್ಲಿ ವ್ಯಾಪಾರ ಕೋಠಿಗಳನ್ನು ತೆರದರು. ಟಿಪ್ಪುವಿನ ಪತನದ ಬಳಿಕ ಬ್ರಿಟೀಷ್ ನೇರ ಆಳ್ವಿಕೆಗೆ ಒಳಗಾದ ಕರಾವಳಿ ಕರ್ನಾಟಕವು ಭಾರತ ಸ್ವತಂತ್ರಗೊಳ್ಳುವವರೆಗೆ ಬ್ರಿಟೀಷ್ ಆಡಳಿತದ ನಾನಾ ಬಗೆಯ ಅನುಭವಗಳಿಗೆ ಒಳಗಾಗುತ್ತಲೆ ಹೋಯಿತು.

### ಉತ್ತರ ಕನ್ನಡ ಜಿಲ್ಲೆಯ ಭೌಗೋಳಿಕ ಹಿನ್ನೆಲೆ

ಭೌಗೋಳಿಕತೆ ಎನ್ನುವುದು ಪ್ರಕೃತ್ತಿದತ್ತವಾದ ನಿರ್ಮಿತಿಗಳು. ಇವು ಎಲ್ಲಾ ಪ್ರದೇಶಗಳಲ್ಲೂ ಒಂದೇ ರೀತಿಯಾಗಿರದೇ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿ ರೂಪಗೊಂಡಿರುತ್ತವೆ. ಆಯಾ ಭೌಗೋಳಿಕ ಸನ್ನಿವೇಶಗಳಿಗೆ ಅನುಗುಣವಾಗಿ ಅಲ್ಲಿನ ಪರಿಸರ, ಹವಾಗುಣ ಹಾಗೂ ಜನಜೀವನ ರೂಪಗೊಂಡಿರುತ್ತದೆ. ಕರ್ನಾಟಕದ ಕರಾವಳಿ, ಮಲೆನಾಡು, ಅರೆಮಲೆನಾಡು, ಬಯಲುಸೀಮೆ ಮುಂತಾದ ಭೌಗೋಳಿಕ ಲಕ್ಷಣಗಳನ್ನು ಆಧರಿಸಿದ ವಿಂಗಡಣೆಗಳು ಈ ಭಿನ್ನತೆಯನ್ನು ಸೂಚಿಸುತ್ತವೆ. ಅಂದರೆ ಈ ತರಹದ ವಿಭಿನ್ನ ಭೌಗೋಳಿಕ ಹಿನ್ನೆಲೆಗೆ ಅನುಗುಣವಾಗಿ ವಿಭಿನ್ನವಾಗಿ ಜನಜೀವನ ರೂಪಗೊಂಡಿರುತ್ತದೆ.

### ಜಿಲ್ಲೆಯ ಸಾಮಾನ್ಯ ಭೌಗೋಳಿಕ ವಿವರಗಳು

ಕರ್ನಾಟಕ ರಾಜ್ಯದ 30 ಜಿಲ್ಲೆಗಳಲ್ಲಿ ಉತ್ತರಕನ್ನಡ ಜಿಲ್ಲೆ ಒಂದಾಗಿದೆ. ರಾಜ್ಯ ಪುನರ್ ವಿಂಗಡಣೆಯ ಮೊದಲು ಇದು ಮುಂಬೈ ಪ್ರಾಂತ್ಯದ ಭಾಗವಾಗಿತ್ತು. ಈ ಜಿಲ್ಲೆಯು ಕರ್ನಾಟಕದ

ಪಶ್ಚಿಮ ಭಾಗದಲ್ಲಿದ್ದು ಉತ್ತರಾರ್ಧಗೋಳದ ಉಷ್ಣವಲಯದಲ್ಲಿ ಉತ್ತರ ಅಕ್ಷಾಂಶ $13^0$–$55^0$ರಿಂದ $15^0$–$31^0$ ಹಾಗೂ ಪೂರ್ವರೇಖಾಂಶಗಳ $70^0$–00ದಿಂದ $75^0$–00 ನಡುವೆ ವಿಸ್ತರಿಸಿದೆ.

ಉತ್ತರಕನ್ನಡ ಜಿಲ್ಲೆಯ ಉತ್ತರಕ್ಕೆ ಗೋವಾ ರಾಜ್ಯ ಮತ್ತು ಬೆಳಗಾವಿ ಜಿಲ್ಲೆ ಪೂರ್ವಕ್ಕೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳು, ದಕ್ಷಿಣಕ್ಕೆ ಶಿವಮೊಗ್ಗ ಮತ್ತು ಉಡುಪಿ ಜಿಲ್ಲೆಗಳು ಹಾಗೂ ಪಶ್ಚಿಮಕ್ಕೆ ಅರಬ್ಬಿ ಸಮುದ್ರದಿಂದ ಆವರಿಸಲ್ಪಟ್ಟಿದ್ದು 142 ಕಿ.ಮೀ. ಉದ್ದದ ಕರಾವಳಿ ಇದೆ. ಈ ಜಿಲ್ಲೆಯ 10291 ಚ.ಕಿ.ಮೀ. ವಿಸ್ತೀರ್ಣ ಹೊಂದಿದೆ. ಕರ್ನಾಟಕದ ಆಡಳಿತ ವಿಭಾಗದಲ್ಲಿ ಬೆಳಗಾವಿ ವಿಭಾಗಕ್ಕೆ ಸೇರಿದ ಜಿಲ್ಲೆಯಾಗಿದೆ. ಕಾರವಾರವು ಜಿಲ್ಲೆಯ ಜಿಲ್ಲಾಕೇಂದ್ರವಾಗಿದೆ.

**ಜಿಲ್ಲೆಯ ತಾಲೂಕುಗಳು**

ಉತ್ತರಕನ್ನಡ ಜಿಲ್ಲೆಯು ಕರ್ನಾಟಕದ ದೊಡ್ಡ ಜಿಲ್ಲೆಗಳಲ್ಲಿ ಒಂದಾಗಿದೆ. ಕಾರವಾರವು ಉತ್ತರಕನ್ನಡ ಜಿಲ್ಲೆಯ ಜಿಲ್ಲಾಕೇಂದ್ರವಾಗಿದ್ದು, 11 ತಾಲೂಕುಗಳನ್ನು ಒಳಗೊಂಡಿದೆ. ಅವುಗಳೆಂದರೆ 1. ಕಾರವಾರ, 2. ಅಂಕೋಲಾ, 3. ಕುಮಟಾ, 4. ಹೊನ್ನಾವರ, 5. ಭಟ್ಕಳ, 6. ಸಿದ್ಧಾಪುರ, 7. ಶಿರಸಿ, 8. ಮುಂಡಗೋಡ, 9. ಯಲ್ಲಾಪುರ, 10. ಹಳಿಯಾಳ ಮತ್ತು 11. ಸೂಪಾ.

**ಸ್ಥಳೀಯ ಪಂಚಾಯತಗಳು**

ಜಿಲ್ಲೆಯಲ್ಲಿ ಒಟ್ಟು 1289 ಗ್ರಾಮಗಳಿದ್ದು ಅವುಗಳಲ್ಲಿ 1246 ಜನ ವಸತಿ ಇರುವ ಮತ್ತು 43 ಜನವಸತಿ ಇಲ್ಲದ ಗ್ರಾಮಗಳಾಗಿವೆ. ಈ ಜಿಲ್ಲೆಯಲ್ಲಿ 35 ಹೋಬಳಿಗಳು, 207 ಗ್ರಾಮಪಂಚಾಯಿತಿಗಳು, 3 ನಗರಸಭೆಗಳು, 2 ಪುರಸಭೆಗಳು ಹಾಗೂ 6 ಪಟ್ಟಣ ಪಂಚಾಯತ್‌ಗಳಿವೆ.

**ಜಿಲ್ಲೆಯ ಆಡಳಿತ ಉಪವಿಭಾಗಗಳು**

ಆಡಳಿತದ ದೃಷ್ಟಿಯಿಂದ ಉತ್ತರಕನ್ನಡ ಜಿಲ್ಲೆಯನ್ನು ನಾಲ್ಕು ಉಪವಿಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ 1. ಕಾರವಾರ 2. ಕುಮಟಾ 3. ಭಟ್ಕಳ 4. ಶಿರಸಿ ಉಪವಿಭಾಗ ಗಳಾಗಿವೆ.

ಕಾರವಾರ ಉಪವಿಭಾಗಕ್ಕೆ ಕಾರವಾರ, ಹಳಿಯಾಳ, ಸೂಪಾ ತಾಲೂಕುಗಳು,

ಕುಮಟಾ ಉಪವಿಭಾಗಕ್ಕೆ ಕುಮುಟಾ, ಅಂಕೋಲಾ ತಾಲೂಕುಗಳು.

ಭಟ್ಕಳ ಉಪವಿಭಾಗಕ್ಕೆ ಭಟ್ಕಳ ಮತ್ತು ಹೊನ್ನಾವರ ತಾಲೂಕುಗಳು.

ಶಿರಸಿ ಉಪವಿಭಾಗಕ್ಕೆ ಶಿರಸಿ, ಯಲ್ಲಾಪುರ, ಸಿದ್ದಾಪುರ ಹಾಗೂ ಮುಂಡಗೋಡ ತಾಲೂಕುಗಳು ಸೇರುತ್ತವೆ.

ಜಿಲ್ಲೆಯ ಭೌಗೋಳಿಕ ವಲಯಗಳು ಉತ್ತರಕನ್ನಡ ಜಿಲ್ಲೆಯನ್ನು ಭೌಗೋಳಿಕವಾಗಿ ಮೂರು ವಲಯಗಳಾಗಿ ವಿಂಗಡಿಸಲಾಗಿದೆ. ಕಾರವಾರ, ಅಂಕೋಲಾ, ಕುಮಟಾ, ಹೊನ್ನಾವರ ಮತ್ತು ಭಟ್ಕಳ ತಾಲೂಕುಗಳು ಕರಾವಳಿವಲಯ ಎಂದು, ಸೂಪಾ, ಯಲ್ಲಾಪುರ, ಶಿರಸಿ ಹಾಗೂ ಸಿದ್ದಾಪುರ ತಾಲೂಕುಗಳನ್ನು ಶೃಂಗವಲಯ ಎಂದು ಹಾಗೂ ಹಳಿಯಾಳ ಮತ್ತು ಮುಂಡಗೋಡು ತಾಲೂಕುಗಳು ಮೈದಾನವಲಯ ಎಂದು ಗುರುತಿಸಲಾಗಿದೆ.

ಎಲ್ಲಾ ನೈಸರ್ಗಿಕ ಸಂಪನ್ಮೂಲಗಳಲ್ಲಿ ಮಣ್ಣು ಅತ್ಯಂತ ಪ್ರಮುಖವಾದುದು. ಭಾರತದ ಮಟ್ಟಿಗೆ ಹೇಳುವುದಾದರೆ ಇದು ಸತ್ಯ ಏಕೆಂದರೆ ಭಾರತವು ಕೃಷಿ ಪ್ರಧಾನ ರಾಷ್ಟ್ರವಾಗಿದೆ. ಅಷ್ಟೇ ಅಲ್ಲದೆ ಇದು ಉತ್ತರಕನ್ನಡ ಜಿಲ್ಲೆಗೆ ಅನ್ವಯವಾಗುವ ಸತ್ಯವಾಗಿದೆ. ಅಂದರೆ ಉತ್ತರಕನ್ನಡ ಜಿಲ್ಲೆಯ ಜನರು ಜೀವನೋಪಾಯಕ್ಕಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ಇಲ್ಲಿನ ಮಣ್ಣಿನ ಸ್ವರೂಪವೆಂದರೆ ಪದರು ಪದರಾಗಿರುವ ಬೆಣಚುಕಲ್ಲಿನಿಂದ ಕೂಡಿದ ಹಗುರಾದ ಸಸ್ಯಪೋಷಕ ದ್ರವ್ಯಗಳು ಕಡಿಮೆಯಿದ್ದ ಮಣ್ಣು ಹಾಗೂ ಉಪ್ಪುನೀರಿನಿಂದ ಕೂಡಿದ ಉಸುಕಿನ ನೆಲ ಕರಾವಳಿ ಪ್ರದೇಶದಲ್ಲಿ ಕಂಡುಬರುತ್ತವೆ. ಜಿಲ್ಲೆಯಲ್ಲಿ ವಿವಿಧ ರೀತಿಯ ಮಣ್ಣುಗಳನ್ನು ಗುರುತಿಸಲಾಗಿದೆ. ಅವುಗಳೆಂದರೆ 1. ಕೆಂಪುಮಣ್ಣು, 2. ಕಪ್ಪು ಮಣ್ಣು, 3. ಮೆಕ್ಕಲು ಮಣ್ಣು, 4. ಜಂಬಿಟ್ಟಿಗೆ ಮಣ್ಣು ಎಂದು ಗುರುತಿಸಿ ವಿಂಗಡಿಲಾಗಿದೆ.

**ಜಿಲ್ಲೆಯ ಹರಿಯುವ ನದಿಗಳು**

ಉತ್ತರಕನ್ನಡ ಜಿಲ್ಲೆಯಲ್ಲಿ ಹಲವಾರು ನದಿಗಳು ಹರಿಯುತ್ತವೆ. ಕಾಳಿ, ಗಂಗಾವಳಿ, ಅಘನಾಶಿನಿ, ಬೇಡ್ತಿ, ಶರವತಿ, ವೆಂಕಟಾಪೂರ, ವರದಾ ಮುಂತಾದವು ಪ್ರಮುಖವಾದ ನದಿಗಳು ವರದಾ ನದಿಯನ್ನು ಹೊರತುಪಡಿಸಿ ಉಳಿದ ನದಿಗಳು ಪಶ್ಚಿಮಾಭಿಮುಖವಾಗಿ ಹರಿದು ಅರಬ್ಬೀ ಸಮುದ್ರ ಸೇರುತ್ತವೆ. ವೆಂಕಟಾಪೂರ ಮತ್ತು ವರದಾ ಚಿಕ್ಕ ನದಿಗಳಾಗಿದ್ದು, ಕಡಿದಾದ ಬೆಟ್ಟಗುಡ್ಡಗಳ ನಡುವೆ ರಭಸವಾಗಿ ಹರಿಯುತ್ತವೆ.

**ಜಿಲ್ಲೆಯ ಹವಾಗುಣ**

ಉತ್ತರಕನ್ನಡವು ಉಷ್ಣವಲಯದ ಮಾನ್ಸೂನ ವಾಯುಗುಣವನ್ನೊಳಗೊಂಡಿದೆ. "ಶಾಖ ಮತ್ತು ತೇವಾಂಶವುಳ್ಳ ಬೇಸಿಗೆ ಮತ್ತು ತಂಪಾದ ಚಳಿಗಾಲವು ಇಲ್ಲಿಯ ವಾಯುಗುಣದ ಸ್ವರೂಪವಾಗಿದೆ. ಆದರೆ ಇಲ್ಲಿಯ ವಾಯುಗುಣವು ವೈವಿಧ್ಯಮಯವಾದುದು. ಏಕೆಂದರೆ ಆಕ್ಷಾಂಶ, ಸಮುದ್ರಮಟ್ಟದಿಂದ ಎತ್ತರ, ಸಮುದ್ರ ಸಾಮಿಪ್ಯ, ಸ್ಥಳೀಯ ಮಾರುತಗಳು, ಸಸ್ಯವರ್ಗ, ಭೂಸ್ವರೂಪಗಳು ಮುಂತಾದ ಕಾರಣಗಳು, ಕರಾವಳಿ ಪ್ರದೇಶ, ಮಲೆನಾಡು ಮತ್ತು ಪಶ್ಚಿಮ ಘಟ್ಟಗಳ ಸರಣಿಗಳಲ್ಲಿ ಅಧಿಕ ಮಳೆಯಾಗುತ್ತದೆ. ತೀರಾ ಪ್ರದೇಶದಲ್ಲಿ ಸಮುದ್ರ ಪ್ರಭಾವದಿಂದ ಬೇಸಿಗೆ ಮತ್ತು ಚಳಿಗಾಲದ

ಉಷ್ಣಾಂಶ ಸಮನಾಗಿರುತ್ತದೆ. ಸಮುದ್ರದ ಮಂದ ಮಾರುತಗಳು ಉಷ್ಣತೆಯನ್ನುಂಟು ಮಾಡುತ್ತವೆ. "ಅರಬ್ಬಿ ಸಮುದ್ರದಕ್ಕೆ ಹೊಂದಿಕೊಂಡಿರುವ ಕರಾವಳಿಯಲ್ಲಿ ಹೆಚ್ಚು ಮಳೆ ಬಿಳುವುದರಿಂದ ಮಳೆಯ ಹಂಚಿಕೆಯಲ್ಲಿ ಹೆಚ್ಚು ವ್ಯತ್ಯಾಸವುಂಟಾಗುತ್ತದೆ. ಜಿಲ್ಲೆಯ ಹವಾಮಾನವು ಸಮಶೀತೋಷ್ಣವಾಗಿದೆ. ಸಮುದ್ರ ತೀರದಲ್ಲಿ ಆರ್ದ್ರತೆ ಮತ್ತು ಉಷ್ಣತೆ ಇರುತ್ತಿದ್ದು, ಬೇಸಿಗೆಯಲ್ಲಿ ಅತಿ ಹೆಚ್ಚು $33^0$ ಸೆಂ. ಚಳಿಗಾಲದಲ್ಲಿ ಅತಿ ಕಡಿಮೆ 20 ಸೆಂ. ಉಷ್ಣತೆ ಇರುತ್ತದೆ".[11]

**ಜಿಲ್ಲೆಯಲ್ಲಿಯ ನಿಸರ್ಗ ಸಂಪತ್ತು**

ಉತ್ತರಕನ್ನಡ ಜಿಲ್ಲೆಯು ನೈಸರ್ಗಿಕವಾಗಿ ಚೆಲುವಿನ ಬೀಡಾಗಿದೆ. ಕಣ್ಣಾಯಿಸಿದರೆ ವಿಸ್ತಾರವಾದ ಕಡಲು, ನದಿ ಕೊಳಗಳ ಝುಳುಝುಳು ನಾದ, ಪಕ್ಷಿಗಳ ಚಿಲಿಪಿಲಿ ಕಲರವ, ಸೃಷ್ಟಿ ಸೌಂದರ್ಯದಿಂದ ಕೂಡಿದ ನೈಸರ್ಗಿಕ ಅರಣ್ಯ ಸಂಪತ್ತು, ಬಂದರುಗಳು, ಜಲಪಾತಗಳು, ಪುಣ್ಯಕ್ಷೇತ್ರಗಳು ಅಣೆಕಟ್ಟುಗಳು ಇತಿಹಾಸ ಪ್ರಸಿದ್ಧಸ್ಥಳಗಳು. ಜಿಲ್ಲೆಯ ಚೆಲುವನ್ನು ಹೆಚ್ಚಿಸಿವೆ. "ಉತ್ತರಕನ್ನಡ ಜಿಲ್ಲೆಯು ಬಿಳಿ ರಜತವರ್ಣದ ಬೀಚ್‌ಗಳು, ಸುಂದರ ಹಸಿರು ವರ್ಣದ ಭತ್ತದಬೆಳೆಯ ಕ್ಷೇತ್ರಗಳು, ತಂಪು ತರುವ ಪಾಮ್ ಗಿಡಗಳು, ದಟ್ಟಕಾಡು, ಹಾಗೂ ನದಿಕೊಳಗಳಿಂದ ಕಂಗೋಳಿಸುವ ನಿಸರ್ಗ ರಮಣೀಯ ಸುಂದರ ಪ್ರದೇಶಗಳಲ್ಲೊಂದು. ನಿಸರ್ಗ ನಿರ್ಮಿತ ಜಲಪಾತಗಳು ದೇಶ–ವಿದೇಶಗಳಿಂದ ಪ್ರವಾಸಿಗರನ್ನು ಆಕರ್ಷಿಸುತ್ತವೆ. ಫೌನಾ ಮತ್ತು ಫ್ಲೋರಾಗಳಿಂದ ಸಂಪದ್ಭರಿತವಾಗಿದೆ. ಅಂತರಾಷ್ಟ್ರೀಯ ಖ್ಯಾತಿಯ ಬಂದರುಗಳಿವೆ. ಇವು ಮೀನುಗಾರಿಕೆ ಮತ್ತು ಅಂತರಾಷ್ಟ್ರೀಯ ವ್ಯಾಪಾರೋದ್ಯಮಕ್ಕೆ ಹೆಸರುಗಳಿಸಿವೆ".[12] ಉತ್ತರಕನ್ನಡ ಜಿಲ್ಲೆ ಕರ್ನಾಟಕದ ಅತ್ಯಂತ ಸಂಪದ್ಭರಿತ ಜಿಲ್ಲೆಯಾಗಿದೆ. ಇಲ್ಲಿನ ಭೌಗೋಳಿಕ ನೈಸರ್ಗಿಕ ಸಂಪತ್ತು ಎಲ್ಲಾ ಜಿಲ್ಲೆಗಳಿಗಿಂತ ಅತ್ಯಧಿಕವಾಗಿರುವುದು. "ಸುಮಾರು 700 ಮೀಟರ್ ಎತ್ತರವಾಗಿ ದಕ್ಷಿಣೋತ್ತರವಾಗಿ ಹಬ್ಬಿರುವ ಸಹ್ಯಾದ್ರಿ ಶ್ರೇಣಿಯಲ್ಲಿಯೆ ದೇವಿಮನೆ ಘಟ್ಟ, ಮಲೆಮನೆ ಘಟ್ಟ, ಅರಬೈಲ್ ಘಟ್ಟಗಳು ಈ ಜಿಲ್ಲೆಯನ್ನು ಪ್ರಾಕೃತಿಕವಾಗಿ ಘಟ್ಟದ ಮೇಲಿನ ಹಾಗೂ ಘಟ್ಟದ ಕೆಳಗಿನ ಪ್ರದೇಶಗಳಾಗಿ ವಿಂಗಡಿಸಿವೆ. "ಇಲ್ಲಿ ಮ್ಯಾಂಗನೀಸ್, ಕಬ್ಬಿಣ, ಸುಣ್ಣದಕಲ್ಲು, ಜೇಡಿಮಣ್ಣು, ಇಲ್ಮನೈಟ್, ಗಾಜು, ಸಾಬೂನು, ಕಲ್ಲು, ಅಭ್ರಕ, ಬಾಕ್ಸೈಟ್ ಈ ಜಿಲ್ಲೆಯ ಖನಿಜಸಂಪತ್ತು. ಜಿಲ್ಲೆಯ ಹಲವು ಕಡೆ ಮ್ಯಾಂಗನೀಸ್ ದೊರೆಯುತ್ತದೆ. ಅದರಲ್ಲೂ ಜೋಯಿಡಾ ತಾಲೂಕಿನ ಕೊಡ್ಲಿಗವಿಗಳು ಮ್ಯಾಂಗನೀಸ್ ನಕ್ಷೇಪನಕ್ಕೆ ಪ್ರಸಿದ್ಧವಾಗಿವೆ. ಅದೇರೀತಿ ಹೊನ್ನಾವರ ತಾಲೂಕಿನ ಅಪ್ಸರ ಕೊಂಡಾ ಹಾಗೂ ಕುಮಟಾ ತಾಲೂಕಿನ ಯಾಣದಲ್ಲಿ ಕಬ್ಬಿಣದ ಅದಿರಿನ ನಿಕ್ಷೇಪಗಳು ಇವೆ. ಸಹ್ಯಾದ್ರಿ ಪಾದ ಭಾಗಗಳಲ್ಲಿ ಕಬ್ಬಿಣವಲ್ಲದೆ ಇತರ ಲೋಹ ನಿಕ್ಷೇಪಗಳುಂಟು. ಯಾಣ ಮತ್ತಿತರ ಕಡೆ ಸುಣ್ಣದ ಕಲ್ಲು ದೊರೆಯುತ್ತದೆ. ಅಲ್ಲದೆ ಹಲವೇಡೆ ಸ್ವರ್ಣಮಷಿಕೆ, ಬಿಳಿಬೇಡಿ ಇವೆ."[13] ಈ ಜಿಲ್ಲೆಯಲ್ಲಿ ಭತ್ತ, ತೆಂಗು, ಕಬ್ಬು, ಅಡಕೆ, ಮೆಣಸು, ಏಲಕ್ಕಿ, ಬಾಳೆ ಪ್ರಮುಖ ವಾದ

ಬೆಳೆಗಳಾಗಿವೆ. ಇವುಗಳಲ್ಲದೆ ಗೊಡಂಬಿ, ಮಾವು, ಹುಣಸೆ, ನಿಂಬೆ, ಅನಾನಸು, ಹಲಸು, ಪಪ್ಪಾಯಿ, ಬಟಾಣಿ, ಬದನೆ, ಕಲ್ಲಂಗಡಿ, ಹೈಬ್ರಿಡ್ ಜೋಳ, ರಾಗಿ, ಶೇಂಗಾ ಇತ್ಯಾದಿಗಳನ್ನು ಬೆಳೆಯಲಾಗುತ್ತದೆ. ಅಡಕೆಯ ತೋಟದಲ್ಲಿ ಏಲಕ್ಕಿ, ಕಾಳುಮೆಣಸು, ಬಾಳೆ ಬೆಳೆಯುತ್ತಾರೆ. ಗದ್ದೆಯಲ್ಲಿ ರಾಗಿ, ಕಡಲೆ ತೊಗರಿ ಮೊದಲಾದ ಧಾನ್ಯಗಳನ್ನು ಬೆಳೆಯುತ್ತಾರೆ. ಉತ್ತರಕನ್ನಡ ಜಿಲ್ಲೆಯಲ್ಲಿ ಮೀನುಗಾರಿಕೆ ಒಂದು ಪ್ರಮುಖ ಉದ್ಯೋಗವಾಗಿದೆ. ಒಂದು ಕಾಲದಲ್ಲಿ ಹರಿಕಾಂತ, ತಾಂಡೇಲ, ಖಾರ್ವಿ, ಗಾವಿತ, ಅಂಬಿಗ, ಮೊಗೇರ, ಆಗೇರ, ಕ್ರಿಶ್ಚಿಯನ್ ದಾಲಜಿಗಳಷ್ಟೇ ಈ ವೃತ್ತಿಯನ್ನು ಮಾಡುತ್ತಿದ್ದರು. ಇತ್ತೀಚಿಗೆ ಸಾಮಾನ್ಯವಾಗಿ ಎಲ್ಲಾ ಜಾತಿಯವರು ಮೀನ ಉದ್ಯಮದಲ್ಲಿ ತೊಡಗಿಕೊಂಡಿದ್ದಾರೆ. "ಸುಮಾರು 54,763 ಜನ ಈ ವೃತ್ತಿಯಲ್ಲಿದ್ದಾರೆ. ಇವರು ಕರಾವಳಿ ಪ್ರದೇಶದ 118 ಹಳ್ಳಿಗಳಲ್ಲಿದ್ದಾರೆ. ಸಮುದ್ರದಿಂದ ಮೀನು ಹಿಡಿಯುವ ಕೇಂದ್ರಗಳೆಂದರೆ ಅರ್ಗಾ, ಭಟ್ಕಳ, ಬಿಣಗಾ, ಚೆಂಡಿಯೆ, ಗಂಗಾವಳಿ, ಕಾರಾವರ, ಹೊನ್ನಾವರ, ಖಾರವಿ, ಕೇಣಿ, ಕೋಡಾರ, ಕುಮಟಾ, ಮಾಜಾಳಿ, ಮಂಕಿ, ಮುರುಡೇಶ್ವರ, ಶಿರಾಲಿ, ತದಡಿ ಮುಂತಾದವುಗಳು."

### ಜಿಲ್ಲೆಯ ಅರಣ್ಯ ಭಾಗ

ಕರ್ನಾಟಕ ರಾಜ್ಯದ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ ಶೇ. 15%ರಷ್ಟು ಮಾತ್ರ ಅರಣ್ಯಗಳಿಂದ ಆವೃತವಾಗಿದೆ. ಇದು ಭಾರತದ ಸರಾಸರಿಗಿಂತಲೂ(22.07%) ಕಡಿಮೆ ಯಾಗಿದೆ. ರಾಷ್ಟ್ರೀಯ ಅರಣ್ಯನೀತಿಯಲ್ಲಿ ಒಟ್ಟು ಭೌಗೋಳಿಕ ವಿಸ್ತೀರ್ಣದಲ್ಲಿ ಶೇ. 33.3%ರಷ್ಟು ಅರಣ್ಯಗಳಿಂದಾವೃತ ವಾಗಿರಬೇಕೆಂದು ತಿಳಿಸಲಾಗಿದೆ. "ಕರ್ನಾಟಕದಲ್ಲಿ 19,046,836 ಹೆಕ್ಟೇರು ಪ್ರದೇಶವು ಅರಣ್ಯಗಳಿಂದ ಕೂಡಿದೆ. ಜಿಲ್ಲಾವಾರು ಅವಲೋಕನ ಮಾಡಿದಾಗ ಜಿಲ್ಲೆಯಿಂದ ಜಿಲ್ಲೆಗೆ ಭಿನ್ನವಾಗಿದೆ. ಉತ್ತರಕನ್ನಡ ಜಿಲ್ಲೆಯು ಜಿಲ್ಲೆಯ ಭೌಗೋಳಿಕ ವಿಸ್ತೀರ್ಣದಲ್ಲಿ ಶೇ. 79.4%ರಷ್ಟು ಅರಣ್ಯಗಳಿಂದಾವೃತ ವಾಗಿದೆ. ರಾಜ್ಯದ ಒಟ್ಟು ಅರಣ್ಯಕ್ಷೇತ್ರದಲ್ಲಿ ಶೇ. 28ರಷ್ಟು ಪ್ರಮಾಣ ಉತ್ತರಕನ್ನಡ ಜಿಲ್ಲೆ ಹೊಂದಿದೆ. ಅಧಿಕ ಮಳೆ, ಬೆಟ್ಟಗುಡ್ಡಗಳ ಲಕ್ಷಣಗಳಿಂದಾಗಿ ಉತ್ತರಕನ್ನಡ ಜಿಲ್ಲೆಯಲ್ಲಿ ಅರಣ್ಯ ಪ್ರದೇಶವು ವ್ಯಾಪಕವಾಗಿ ಕಂಡುಬರುತ್ತದೆ.

### ಜಿಲ್ಲೆಯಲ್ಲಿರುವ ಉದ್ದಿಮೆಗಳು

ಉತ್ತರ ಕನ್ನಡ ಜಿಲ್ಲೆಯಲ್ಲಿ ಎಂಜಿನಿಯರಿಂಗ್ ಉದ್ಯಮ 14, ರಾಸಾಯನಿಕ ಕಾರ್ಖಾನೆಗಳು 9, ಬಟ್ಟೆ ಕಾರ್ಖಾನೆ 2, ಇತರೆ ಸಣ್ಣ ಪ್ರಮಾಣದ ಕಾರ್ಖಾನೆಗಳು 62 ಇವೆ. ಜಿಲ್ಲೆಯಲ್ಲಿ ಕೆಲವು ಬೃಹತ್ ಮತ್ತು ಮಧ್ಯಮ ಗಾತ್ರದ ಉದ್ದಿಮೆಗಳಿವೆ. 1. ವೆಸ್ಟ್‌ಕೋಸ್ಟ್ ಪೇಪರ್ ಮಿಲ್ಸ್, 2. ದಾಂಡೇಲಿಯ ಇಂಡಿಯನ್ ಪ್ಲೈವುಡ್ ಮ್ಯಾನುಪ್ಯಾಕ್ಚರಿಂಗ್ ಕಂಪನ, 3. ಜೈಹಿಂದ್ ಸಾಮಿಲ್, ಬಳ್ಳಾಪುರ ಇಂಡಸ್ಟ್ರೀಸ್ ಲಿ. ಬಿಣಗಾದ ಬಿಲ್ಟ್ ಕಾರ್ಖಾನೆ, ದಾಂಡೇಲಿ ಫೇರೊ ಅಲಾಯ್ಸ್

ಪ್ರೈ.ಲಿ., ಇವು ಮುಖ್ಯ ಉದ್ದಿಮೆಗಳು. ಇವುಗಳಲ್ಲದೆ ಸಣ್ಣಕೈಗಾರಿಕಾ ಘಟಕಗಳು, ಗ್ರಾಮೋದ್ಯೋಗ ಕರಕುಶಲ ಘಟಕಗಳು, ಮೀನುಗಾರಿಕೆ ಘಟಕಗಳು, ರಾಸಾಯನಿಕ ಘಟಕಗಳು, ಚರ್ಮ ಮತ್ತು ರಬ್ಬರ್ ಘಟಕಗಳು, ನೂಲುವ–ನೈಯುವ ಘಟಕಗಳು, ಮುದ್ರಣ ಘಟಕಗಳು ಜೇನುಸಾಕಾಣಿಕೆ, ಬೆತ್ತ–ಬಿದಿರುಗಳಿಂದ ವಸ್ತುಗಳನ್ನು ತಯಾರಿಸುವ ಘಟಕಗಳು, ಎಣ್ಣೆ ತಯಾರಿಕಾ ಘಟಕಗಳು, ಮಂಜುಗಡ್ಡೆ ತಯಾರಿಕಾ ಕಾರ್ಖಾನೆಗಳು, ಕುಂಬಾರಿಕೆ ಮುಂತಾದ ಅನೇಕ ಉದ್ಯಮಗಳಿವೆ.

### ಉತ್ತರ ಕನ್ನಡ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ

ಕರ್ನಾಟಕವು ಭೌಗೋಳಿಕವಾಗಿ ಒಟ್ಟು 1,91,791 ಚದರ ಕಿಲೋಮೀಟರ್ ವಿಸ್ತೀರ್ಣವನ್ನು ಹೊಂದಿದೆ. ಆದರಲ್ಲಿ ಉತ್ತರಕನ್ನಡ ಜಿಲ್ಲೆಯು ಭೌಗೋಳಿಕವಾಗಿ ಒಟ್ಟು 10,277 ಚದರ ಕಿಲೋಮೀಟರ್ ಇದೆ.

**ಕೋಷ್ಟಕ 2**

**ಉತ್ತರಕನ್ನಡ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣದ ವಿವರ(ಚದರ ಕಿಲೋಮೀಟರ್‌ಗಳಲ್ಲಿ)**

| ಕ್ರಸಂ | ರಾಜ್ಯ | ಜಿಲ್ಲೆ | ಶೇಕಡ |
|---|---|---|---|
| 1 | ಕರ್ನಾಟಕ | ಉತ್ತರ ಕನ್ನಡ | |
| 2 | 191791 | 10277.00 | 5.35 |

ಅಂದರೆ ಒಟ್ಟು ಕರ್ನಾಟಕದ ವಿಸ್ತೀರ್ಣಕ್ಕೆ ಹೋಲಿಸಿದರೆ ಉತ್ತರ ಕನ್ನಡ ಭೌಗೋಳಿಕ ವಿಸ್ತಾರತೆಯು ಶೇಕಡ 5.35ರಷ್ಟಿದೆ.

### ಉತ್ತರ ಕನ್ನಡ ಜಿಲ್ಲೆಯ ತಾಲೂಕುವಾರು ಭೌಗೋಳಿಕ ವಿಸ್ತೀರ್ಣ

ಉತ್ತರಕನ್ನಡ ಜಿಲ್ಲೆಯು ಭೌಗೋಳಿಕವಾಗಿ ಹೆಚ್ಚು ವಿಸ್ತಾರವಾಗಿದೆ ಮತ್ತು ಹನ್ನೊಂದು ತಾಲೂಕುಗಳನ್ನೊಳಗೊಂಡಿದೆ. ಹನ್ನೊಂದು ತಾಲೂಕುಗಳ ಭೌಗೋಳಿಕ ವಿಸ್ತೀರ್ಣವು ಹೆಕ್ಟೇರ್‌ಗಳಲ್ಲಿ ನೋಡಲಾಗಿದೆ. ಕಾರವಾರದ ಒಟ್ಟು ಭೌಗೋಳಿಕ ವಿಸ್ತೀರ್ಣ 68,541.06 ಇದೆ. ಇದರಲ್ಲಿ ಗ್ರಾಮೀಣ ಪ್ರದೇಶ 67,523.06 ಹೆಕ್ಟೇರ್ ಇದೆ. ನಗರ ಪ್ರದೇಶವು 1,018.00 ಹೆಕ್ಟೇರ್ ಇದೆ. ಸೂಪಾದ ಒಟ್ಟು ಭೌಗೋಳಿಕ ವಿಸ್ತೀರ್ಣ 1,77,700.28 ಹೆಕ್ಟೇರ್ ಇದೆ. ಇದು ಪೂರ್ಣವಾಗಿ ಗ್ರಾಮೀಣ ಪ್ರದೇಶದಿಂದ ಕೂಡಿದೆ. ನಗರ ಪ್ರದೇಶವಿರುವುದಿಲ್ಲ. ಹಳಿಯಾಳದ ಒಟ್ಟು ಭೌಗೋಳಿಕ ವಿಸ್ತೀರ್ಣ 82,191.39 ಹೆಕ್ಟೇರ್ ಇದೆ. ಇದರಲ್ಲಿ ಗ್ರಾಮೀಣ ಪ್ರದೇಶ 82,113.39 ಹೆಕ್ಟೇರ್ ಇದೆ. ನಗರ ಪ್ರದೇಶವು 78  ಹೆಕ್ಟೇರ್ ಇದೆ. ಯಲ್ಲಾಪುರದ ಒಟ್ಟು ಭೌಗೋಳಿಕ ವಿಸ್ತೀರ್ಣ 1,22,713.47

ಹೆಕ್ಟೇರ್ ಇದೆ. ಇದು ಪೂರ್ಣ ಗ್ರಾಮೀಣ ಪ್ರದೇಶದಿಂದ ಕೂಡಿದೆ. ಮುಂಡಗೋಡದ ಒಟ್ಟು ಭೌಗೋಳಿಕ ವಿಸ್ತೀರ್ಣ 66,213.14 ಹೆಕ್ಟೇರ್ ಇದೆ. ಇದರಲ್ಲಿ ಗ್ರಾಮೀಣ ಪ್ರದೇಶ 65,609.14 ಹೆಕ್ಟೇರ್ ಇದೆ. ನಗರ ಪ್ರದೇಶವು 604 ಹೆಕ್ಟೇರ್ ಇದೆ. ಶಿರಸಿಯ ಒಟ್ಟು ಭೌಗೋಳಿಕ ವಿಸ್ತೀರ್ಣ 1,31,605.75 ಹೆಕ್ಟೇರ್ ಇದೆ. ಇದರಲ್ಲಿ ಗ್ರಾಮೀಣ ಪ್ರದೇಶ 1,31,605.75 ಹೆಕ್ಟೇರ್ ಇದೆ. ನಗರ ಪ್ರದೇಶದ ವಿವರ ದಾಖಲಾಗಿಲ್ಲ.

**ಕೋಷ್ಟಕ 3**

**ಉತ್ತರಕನ್ನಡ ಜಿಲ್ಲೆಯ ತಾಲೂಕುವಾರು ಭೌಗೋಳಿಕ ವಿಸ್ತೀರ್ಣ**

| ಕ್ರ ಸಂ. | ತಾಲೂಕು | ಭೌಗೋಳಿಕ ವಿಸ್ತೀರ್ಣ ಹೆಕ್ಟೇರ್‌ಗಳಲ್ಲಿ | | |
|---|---|---|---|---|
| | | ಒಟ್ಟು | ಗ್ರಾಮೀಣ ಪ್ರದೇಶ | ನಗರ ಪ್ರದೇಶ |
| 1 | ಕಾರವಾರ | 68,541.06 | 67,523.06 | 1,018.00 |
| 2 | ಸೂಪಾ | 1,77,700.28 | 1,77,700.28 | – |
| 3 | ಹಳಿಯಾಳ | 82,191.39 | 82,113.39 | 78 |
| 4 | ಯಲ್ಲಾಪುರ | 1,22,713.47 | 1,22,713.47 | – |
| 5 | ಮುಂಡಗೋಡು | 66,213.14 | 65,609.14 | 604 |
| 6 | ಶಿರಸಿ | 1,31,605.75 | 1,31,605.75 | – |
| 7 | ಅಂಕೋಲ | 90,476.86 | 89,733.86 | 743 |
| 8 | ಕುಮಟಾ | 56,245.47 | 56,245.47 | – |
| 9 | ಸಿದ್ದಾಪುರ | 84,077.82 | 84,077.82 | – |
| 10 | ಹೊನ್ನಾವರ | 74,555.59 | 74,555.59 | – |
| 11 | ಭಟ್ಕಳ | 34,871.13 | 33,877.13 | 994 |

ಅಂಕೋಲದ ಒಟ್ಟು ಭೌಗೋಳಿಕ ವಿಸ್ತೀರ್ಣ 90,476.86 ಹೆಕ್ಟೇರ್ ಇದೆ. ಇದರಲ್ಲಿ ಗ್ರಾಮೀಣ ಪ್ರದೇಶ 89,733.86 ಹೆಕ್ಟೇರ್ ಇದೆ. ನಗರ ಪ್ರದೇಶ 743 ಹೆಕ್ಟೇರ್ ಇದೆ.

ಕುಮಟಾದ ಒಟ್ಟು ಭೌಗೋಳಿಕ ವಿಸ್ತೀರ್ಣ 56,245.47 ಹೆಕ್ಟೇರ್ ಇದೆ. ಇದರಲ್ಲಿ ಗ್ರಾಮೀಣ ಪ್ರದೇಶ 56,245.47 ಹೆಕ್ಟೇರ್ ಇದೆ. ನಗರ ಪ್ರದೇಶ ದಾಖಲಾಗಿರುವುದಿಲ್ಲ

ಸಿದ್ದಾಪುರದ ಒಟ್ಟು ಭೌಗೋಳಿಕ ವಿಸ್ತೀರ್ಣ 84,077.82 ಹೆಕ್ಟೇರ್ ಇದೆ. ಇದರಲ್ಲಿ ಗ್ರಾಮೀಣ ಪ್ರದೇಶ 84,077.82 ಹೆಕ್ಟೇರ್ ಇದೆ. ನಗರ ಪ್ರದೇಶ ದಾಖಲಾಗಿರುವುದಿಲ್ಲ

ಹೊನ್ನಾವರದ ಒಟ್ಟು ಭೌಗೋಳಿಕ ವಿಸ್ತೀರ್ಣ 74,555.59 ಹೆಕ್ಟೇರ್ ಇದೆ. ಇದರಲ್ಲಿ ಗ್ರಾಮೀಣ ಪ್ರದೇಶ 74,555.59 ಹೆಕ್ಟೇರ್ ಇದೆ. ನಗರ ಪ್ರದೇಶ ದಾಖಲಾಗಿರುವುದಿಲ್ಲ. ಭಟ್ಕಳದ ಒಟ್ಟು ಭೌಗೋಳಿಕ ವಿಸ್ತೀರ್ಣ 34,871.13 ಹೆಕ್ಟೇರ್ ಇದೆ. ಇದರಲ್ಲಿ ಗ್ರಾಮೀಣ ಪ್ರದೇಶ 33,877.13 ಹೆಕ್ಟೇರ್ ಇದೆ. ನಗರ ಪ್ರದೇಶ 994 ಹೆಕ್ಟೇರ್ ಇದೆ. ಹನ್ನೊಂದು ತಾಲೂಕುಗಳಲ್ಲಿ ಶಿರಸಿಯು ಭೌಗೋಳಿಕ ವಿಸ್ತೀರ್ಣದಲ್ಲಿ ಹೆಚ್ಚಿದ್ದು ಭಟ್ಕಳವು ಅತ್ಯಂತ ಕಡಿಮೆ ವಿಸ್ತೀರ್ಣವನ್ನು ಹೊಂದಿದ ತಾಲೂಕಾಗಿದೆ.

ಘಟ್ಟದ ಮೇಲಿನ ತಾಲೂಕುಗಳು ಒಟ್ಟು ವಿಸ್ತೀರ್ಣ 5400 ಚ.ಕಿ.ಮೀ. ಗಳಿಷ್ಟಿದ್ದು, ಇಲ್ಲಿ ವರ್ಷಕ್ಕೆ 200 ರಿಂದ 500 ಸೆಂ.ಮೀ. ಮಳೆ ಬೀಳುತ್ತದೆ. ಈ ಭಾಗದ ಜನಸಾಂದ್ರತೆ ಪ್ರತಿ ಕಿ.ಮೀ.ಗೆ 63ರಷ್ಟಿದೆ. ಇಲ್ಲಿ ಕಾನೂನು ಪ್ರಕಾರ ಶೇ. 83ರಷ್ಟು ಭೂಭಾಗ ಅರಣ್ಯ ಇಲಾಖೆಯ ವಶದಲ್ಲಿದೆ. ನೀರಾವರಿ ವ್ಯವಸ್ಥೆಯಿದೆ.

ಭತ್ತ, ಅಡಿಕೆ, ಬಾಳೆ ಇಲ್ಲಿಯ ಪ್ರಮುಖ ಬೆಳೆಯಾಗಿದ್ದು ಜಾನುವಾರಗಳ ಸಂಖ್ಯೆ 2.34 ಲಕ್ಷದಷ್ಟಿದೆ. ಇಲ್ಲಿ ಅನೇಕ ಮ್ಯಾಗನೀಸ್ ಗಣಿಗಳೂ ಇವೆ. ಪೇಪರ್, ಪ್ಲೈವುಡ್ ಹಾಗೂ ಫೇರೋಮ್ಯಾಂಗನೀಸ್ ಉದ್ದಿಮೆಗಳಿರುವ ದಾಂಡೇಲಿ ಇಲ್ಲಿನ ಪ್ರಮುಖ ಕೈಗಾರಿಕಾ ಪಟ್ಟಣ. ದಾಂಡೇಲಿಯ ಬಹುಪಾಲು ಕಾರ್ಮಿಕ ಜನಸ್ತೋಮ ಹೊರಗಿನಿಂದಲೇ ಬಂದವರಾಗಿದ್ದಾರೆ. ಈ ಭಾಗದಲ್ಲಿ ಬುಟ್ಟಿ ಹೆಣೆಯುವವರು ಗಣನೀಯ ಸಂಖ್ಯೆಯಲ್ಲಿದ್ದಾರೆ.

ದಕ್ಷಿಣದ ಪ್ರಸ್ಥಭೂಮಿಯೊಂದಿಗೆ ವಿಲೀನವಾದ ಹಳಿಯಾಳ ಮತ್ತು ಮುಂಡಗೋಡ ತಾಲೂಕುಗಳಲ್ಲಿ ವರ್ಷಕ್ಕೆ 120 ಸೆಂ.ಮೀ. ಮಳೆಯಾಗುತ್ತದೆ. 1500 ಚದರ ಕಿ.ಮೀ. ವಿಸ್ತೀರ್ಣವಿರುವ ಈ ಪ್ರದೇಶದ ಶೇ. 70ರಷ್ಟು ಭಾಗ ಅರಣ್ಯ ಇಲಾಖೆಯ ನಿಯಂತ್ರಣದಲ್ಲಿದೆ. ಶೇ.19ರಷ್ಟು ಭೂಮಿಯಲ್ಲಿ ಸಾಗುವಳಿ ಮಾಡಲಾಗಿದ್ದು ಒಟ್ಟು ಶೇ. 4ರಷ್ಟು ಕ್ಷೇತ್ರಕ್ಕೆ ನೀರಾವರಿ ವ್ಯವಸ್ಥೆಯಿದೆ. ಭತ್ತ, ಬೇಳೆಕಾಳು, ಕಬ್ಬು ಮತ್ತು ಜೋಳ ಇಲ್ಲಿಯ ಪ್ರಮುಖ ಬೆಳೆಗಳು. ಸುಮಾರು 95 ಸಾವಿರ ಸಾಕುಪ್ರಾಣಿಗಳಲ್ಲಿ ದನಕರುಗಳೇ ಮುಖ್ಯವಾಗಿವೆ. ಯಾವ ಪ್ರಮುಖ ಉದ್ದಿಮೆಗಳಾಗಲಿ, ಪಟ್ಟಣಗಳಾಗಲಿ ಇಲ್ಲದ ಈ ತಾಲೂಕುಗಳ ಜನಸಾಂದ್ರತೆ ಪ್ರತಿ ಚ.ಕಿ.ಮಿ.ಗೆ 107ರಷ್ಟಿದೆ.

ಉತ್ತರಕನ್ನಡವನ್ನು ಅರಣ್ಯ ಜಿಲ್ಲೆಯೆಂದು ಪರಿಗಣಿಸಲಾಗಿದೆ. ಒಟ್ಟು 10300 ಚ.ಕಿ.ಮೀ.ನ ಈ ಭೂಪ್ರದೇಶದ 8300 ಚ.ಕಿ.ಮೀ. ಭಾಗ ಒಂದು ಕಾಲದಲ್ಲಿ(ಈಗಲೂ ಕಾನೂನಿನ ಪ್ರಕಾರ) ಅರಣ್ಯ ಇಲಾಖೆಯ ನಿಯಂತ್ರಣದಲ್ಲಿತ್ತು. ಆದರೆ ಈಗ ಇದರಲ್ಲಿ ಜಲವಿದ್ಯುತ್ ಯೋಜನೆಗೆ, ವಿದ್ಯುತ್ ಸಾಗಣೆ ಮಾರ್ಗಕ್ಕೆ, ಗಣಿಕೆಲಸಕ್ಕೆ ನಗರ ನಿರ್ಮಾಣಕ್ಕೆ ಅಲ್ಲದೆ ಇಲ್ಲಿಯದೆ ಯೋಜನೆಗಳಿಂದ ಮತ್ತು ಟಿಬೇಟಿನಿಂದ ಬಂದ ನಿರಾಶ್ರಿತರ ಪುನರ್ವಸತಿಗೆ

ಹಾಗೂ ಅತಿಕ್ರಮಣ ಬೇಸಾಯವನ್ನು ಕಾನೂನುಬದ್ಧಗೊಳಿಸಲಿಕ್ಕೆಂದು ಇದರಲ್ಲಿ 1050 ಚ.ಕಿ.ಮೀ.ಗಳಷ್ಟು ವಿಶಾಲ ಪ್ರದೇಶವನ್ನು ಬಿಡುಗಡೆ ಮಾಡಲಾಗಿದೆ. ಅರಣ್ಯ ಇಲಾಖೆಯ ವಶದಲ್ಲಿ ಈಗಲೂ ಉಳಿದಿರುವ 7 ಸಾವಿರ ಚ.ಕಿ.ಮೀ. ಪ್ರದೇಶದಲ್ಲಿ 5 ಸಾವಿರ ಚ.ಕಿ.ಮೀ. ಸಂರಕ್ಷಿತ ಅರಣ್ಯ, 1.5 ಸಾವಿರ ಚ.ಕಿ.ಮೀ ಕಿರುಅರಣ್ಯ ಹಾಗೂ 5 ಸಾವಿರ ಪ್ರದೇಶದ ಸೊಪ್ಪಿನ ಬೆಟ್ಟ, ಈ ಅರಣ್ಯದ ಇಂದಿನ ಗತಿಸ್ಥಿತಿಯ ಬಗ್ಗೆ ಅರಣ್ಯ ಇಲಾಖೆಯ ಉತ್ತಮ ವರದಿಯೊಂದನ್ನು ಸಿದ್ಧಪಡಿಸಿದೆ(ರೆಡ್ಡಿ ಮತ್ತಿತ್ತರರು, 1986).

ಈ ವರದಿಯ ಪ್ರಕಾರ ಸಂರಕ್ಷಿತ ಅರಣ್ಯದ ಸುಮಾರು ಶೇ. 20 ಭಾಗ ದುಸ್ಥಿತಿಯಲ್ಲಿದ್ದು ಜನವಸತಿಯ ಸಮೀಪವಿರುವ ಶೇ. 40 ಭಾಗ ಸರಿಸುಮಾರಾಗಿ ಉತ್ತಮ ಸ್ಥಿತಿಯಲ್ಲಿ ಹಾಗೂ ಜನವಸತಿಯಿಂದ ದೂರವಾಗಿ ತೀವ್ರ ಇಳಿಜಾರಿನಲ್ಲಿರುವ ಶೇ. 40 ಭಾಗ ಉತ್ತಮ ಸ್ಥಿತಿಯಲ್ಲಿವೆ. ಕಿರುಅರಣ್ಯ ಹಾಗೂ ಸೊಪ್ಪಿನ ಬೆಟ್ಟಗಳ ಶೇ. 70ರಷ್ಟು ಭಾಗ ಜೀರ್ಣಾವಸ್ಥೆಯಲ್ಲಿದ್ದು, ಇನ್ನುಳಿದ ಶೇ. 30 ಭಾಗ ಮಾತ್ರ ಸುಮಾರಾಗಿ ಉತ್ತಮ ಸ್ಥಿತಿಯಲ್ಲಿದೆ.

**ಕೋಷ್ಟಕ 4**

**ಜಿಲ್ಲೆಯಲ್ಲಿರುವ ಒಟ್ಟು ಗ್ರಾಮ ಹಾಗೂ ಕುಟುಂಬಗಳ ವಿವರ**

| ಕ್ರಸಂ | ಕರ್ನಾಟಕ | ಉತ್ತರ ಕನ್ನಡ |
|---|---|---|
| ಗ್ರಾಮಗಳು | 29,340 | 1,289 |
| ಕುಟುಂಬಗಳು | 1,33,00,790 | 3,23,304 |

2011ರ ಜನಗಣತಿ ವರದಿ, ಭಾರತ ಸರ್ಕಾರ

2011ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿ ಇರುವ ಒಟ್ಟು ಗ್ರಾಮಗಳು 29,340. ಒಟ್ಟು ಕುಟುಂಬಗಳು **1,33,00,790** ಇವೆ. ಉತ್ತರಕನ್ನಡ ಜಿಲ್ಲೆಯಲ್ಲಿರುವ ಒಟ್ಟು ಗ್ರಾಮಗಳು 1,289. ಒಟ್ಟು ಕುಟುಂಬಗಳು **3,23,304** ಇವೆ. ಅಂದರೆ ಕರ್ನಾಟಕದ

ಒಟ್ಟು ಗ್ರಾಮಗಳಿಗೆ ಹೋಲಿಸಿದರೆ ಶೇಕಡ 4.39 ಗ್ರಾಮಗಳು ಹಾಗೂ ಶೇಕಡ 2.34 ರಷ್ಟು ಕುಟುಂಬಗಳು ಉತ್ತರಕನ್ನಡ ಜಿಲ್ಲೆಯಲ್ಲಿವೆ.

2011ರ ಜನಗಣತಿಯ ಪ್ರಕಾರ ಕರ್ನಾಟಕದ ಒಟ್ಟು ಜನಸಂಖ್ಯೆಯು 6,10,95,297 ಇದೆ. ಇದರಲ್ಲಿ ಪುರುಷರು 3,09,66,657 ಹಾಗೂ 3,01,28,640 ಮಹಿಳೆಯರಿದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿನ ಒಟ್ಟು ಜನಸಂಖ್ಯೆಯು 14,37,169 ಇದೆ. ಇದರಲ್ಲಿ ಪುರುಷರು

7,26,256 ಹಾಗೂ 7,10,913 ಮಹಿಳೆಯರಿದ್ದಾರೆ ಈ ಜಿಲ್ಲೆಯಲ್ಲಿ ಒಟ್ಟು 965731ರಷ್ಟು ಜನರು ಗ್ರಾಮೀಣ ಪ್ರದೇಶದಲ್ಲಿ ಒಟ್ಟು 387913ರಷ್ಟು ಜನರು ನಗರ ಪ್ರದೇಶದಲ್ಲಿ ನೆಲೆಸಿದ್ದಾರೆ.

ರಾಜ್ಯದ ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆ 1,04,74,992 ರಷ್ಟಿದೆ. ಇದರಲ್ಲಿ ಪುರುಷರು 52,64,545 ಹಾಗೂ ಮಹಿಳೆಯರು 96,02,481 ಜನರಿದ್ದಾರೆ. ಜಿಲ್ಲೆಯ ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆ 1,16,431ರಷ್ಟಿದೆ. ಇದರಲ್ಲಿ ಪುರುಷರು 57,841(7.96%) ಹಾಗೂ ಮಹಿಳೆಯರು 1,77,961(25.03%) ಜನರಿದ್ದಾರೆ.

ರಾಜ್ಯದ ಪರಿಶಿಷ್ಟ ವರ್ಗದ ಒಟ್ಟು ಜನಸಂಖ್ಯೆ 42,48,987 ರಷ್ಟಿದೆ. ಇದರಲ್ಲಿ ಪುರುಷರು 21,34,754 ಹಾಗೂ ಮಹಿಳೆಯರು 21,14,233 ಜನರಿದ್ದಾರೆ. ಜಿಲ್ಲೆಯ ಪರಿಶಿಷ್ಟ ವರ್ಗದ ಒಟ್ಟು ಜನಸಂಖ್ಯೆ 34,239ರಷ್ಟಿದೆ. ಇದರಲ್ಲಿ ಪುರುಷರು 17,095(2.35%) ಹಾಗೂ ಮಹಿಳೆಯರು 17,144(2.41%) ಜನರಿದ್ದಾರೆ.

2011ರ ಜನಗಣತಿಯ ಪ್ರಕಾರ ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಒಟ್ಟು ಪುರುಷರು ಶೇಕಡ 50.68 ಹಾಗೂ ಶೇಕಡ 49.32 ಮಹಿಳೆಯರಿದ್ದಾರೆ.

ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿಯವರ ಜನಸಂಖ್ಯಾ ಪ್ರಮಾಣವು ಶೇಕಡ 17.14 ಇದೆ. ಪರಿಶಿಷ್ಟ ಪಂಗಡದವರು ಶೇಕಡ 6.95ರಷ್ಟು ಮಾತ್ರ ಇರುವರು.

ಕರ್ನಾಟಕದ ಒಟ್ಟು ಜನಸಂಖ್ಯೆಗೆ ಹೋಲಿಸಿದರೆ ಉತ್ತರಕನ್ನಡದ ಒಟ್ಟು ಜನಸಂಖ್ಯಾ ಪ್ರಮಾಣ ಶೇಕಡ 2.35ರಷ್ಟು ಮಾತ್ರ ಇದೆ. ರಾಜ್ಯದ ಪರಿಶಿಷ್ಟ ಜಾತಿಯ ಜನಸಂಖ್ಯೆಯಲ್ಲಿ ಈ ಜಿಲ್ಲೆಯ ಪರಿಶಿಷ್ಟ ಜಾತಿಯವರ ಒಟ್ಟು ಜನಸಂಖ್ಯಾ ಪ್ರಮಾಣ ಶೇಕಡ 1.11ರಷ್ಟಿದೆ. ಹಾಗೆಯೇ ಪರಿಶಿಷ್ಟ ವರ್ಗದ ಒಟ್ಟು ಜನಸಂಖ್ಯೆ ಶೇಕಡ 0.80ರಷ್ಟು ಮಾತ್ರ ಇದೆ.

**ಕೋಷ್ಟಕ 5**

**ಕರ್ನಾಟಕ ಹಾಗೂ ಉತ್ತರಕನ್ನಡ ಜಿಲ್ಲೆಯ ಜನಸಂಖ್ಯೆ ವಿವರ**

| | ಕರ್ನಾಟಕ ರಾಜ್ಯ | | | ಉತ್ತರಕನ್ನಡ ಜಿಲ್ಲೆ | | |
|---|---|---|---|---|---|---|
| ವಿವರ | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು |
| ಒಟ್ಟು | 6,10,95,297 | 3,09,66,657 | 3,01,28,640 | 14,37,169 | 7,26,256 | 7,10,913 |
| ಪರಿಶಿಷ್ಟ ಜಾತಿ | 1,04,74,992 | 52,64,545 | 96,02,481 | 1,16,431 | 57,841 | 1,77,961 |
| ಪರಿಶಿಷ್ಟ ಪಂಗಡ | 42,48,987 | 21,34,754 | 21,14,233 | 34,239 | 17,095 | 17,144 |

ಹನ್ನೊಂದು ತಾಲೂಕುಗಳಲ್ಲಿ ಕಾರವಾರ ತಾಲೂಕಿನಲ್ಲಿ ಒಟ್ಟು 23,961 ಕುಟುಂಬಗಳು ನೆಲೆಸಿವೆ. ಒಟ್ಟು ಜನಸಂಖ್ಯೆಯು 91,458 ಇದೆ. ಇದರಲ್ಲಿ ಪುರುಷರು 46,041, ಮಹಿಳೆಯರು 45,417 ಇದ್ದಾರೆ. ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆ 3,569 ಇದೆ. ಇದರಲ್ಲಿ ಪುರುಷರು 1,814, ಮಹಿಳೆಯರು 1,755 ಇದ್ದಾರೆ. ಅಂದರೆ, ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಶೇ. 3.90ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ.

ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆ 551 ಇದೆ. ಇದರಲ್ಲಿ ಪುರುಷರು 313, ಮಹಿಳೆಯರು 238 ಇದ್ದಾರೆ. ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡ ಶೇ. 0.60ರಷ್ಟು ಜನಸಂಖ್ಯೆ ಇರುವುದು ತಿಳಿದುಬರುತ್ತದೆ.

ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆ 551 ಇದೆ. ಇದರಲ್ಲಿ ಪುರುಷರು 313, ಮಹಿಳೆಯರು 238 ಇದ್ದಾರೆ. ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡ ಶೇ. 0.60ರಷ್ಟು ಜನಸಂಖ್ಯೆ ಇರುವುದು ತಿಳಿದುಬರುತ್ತದೆ.

ಸೂಪಾ ತಾಲೂಕಿನಲ್ಲಿ 11648 ಕುಟುಂಬಗಳಿವೆ. ತಾಲೂಕಿನಲ್ಲಿ ಒಟ್ಟು ಜನಸಂಖ್ಯೆ 52012 ಆಗಿದೆ. ಇದರಲ್ಲಿ ಲಿಂಗವಾರು ಗಮನಿಸಿದಾಗ ಪುರುಷರ 26167ರಷ್ಟಿದ್ದಾರೆ, 25845ರಷ್ಟು ಮಹಿಳೆಯರಿದ್ದಾರೆ. ಇದರಲ್ಲಿ 3271ರಷ್ಟು ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆಯಾಗಿದ್ದು, ಲಿಂಗವಾರು ಗಮನಿಸಿದಾಗ 1624ರಷ್ಟು ಪುರುಷರು ಹಾಗೂ 1647ರಷ್ಟು ಮಹಿಳೆಯರಿದ್ದಾರೆ. ಅಂದರೆ, ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಶೇ. 6.29ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ.

ತಾಲೂಕಿನಲ್ಲಿ ಪರಿಶಿಷ್ಟ ಪಂಗಡ ಒಟ್ಟು ಜನಸಂಖ್ಯೆ 771ರಲ್ಲಿ ಲಿಂಗವಾರು 398 ಪುರುಷರು ಹಾಗೂ 363 ಮಹಿಳೆಯರಿದ್ದಾರೆ. ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡ ಶೇ. 1.46ರಷ್ಟು ಜನಸಂಖ್ಯೆ ಇರುವುದು ತಿಳಿದುಬರುತ್ತದೆ.

ಹಳಿಯಾಳ ತಾಲೂಕಿನಲ್ಲಿ 20124 ಕುಟುಂಬಗಳು ನೆಲೆಗೊಂಡಿವೆ. ಒಟ್ಟು ಜನಸಂಖ್ಯೆ 95119ರಷ್ಟಿದೆ. ಇದರಲ್ಲಿ ಲಿಂಗವಾರು 48397ರಷ್ಟು ಪುರುಷರು, 46222ರಷ್ಟು ಮಹಿಳೆಯರಿದ್ದಾರೆ. ತಾಲೂಕಿನಲ್ಲಿ 6689ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದ್ದು, ಲಿಂಗವಾರು 3303ರಷ್ಟು ಪುರುಷರು, 3386ರಷ್ಟು ಮಹಿಳೆಯರಿದ್ದಾರೆ. ಅಂದರೆ, ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಶೇ. 7.03ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ.

## ಕೋಷ್ಟಕ 6

## ಉತ್ತರಕನ್ನಡ ಜಿಲ್ಲೆಯ ತಾಲೂಕುವಾರು ಕುಟುಂಬ ಹಾಗೂ ಜನಸಂಖ್ಯೆ ವಿವರ

| ಕ್ರಸಂ | ತಾಲೂಕು | ಕುಟುಂಬಗಳು | ಜನಸಂಖ್ಯೆ | | | | | | | | |
|---|---|---|---|---|---|---|---|---|---|---|---|
| | | | ಒಟ್ಟು | | | ಪ.ಜಾ | | | ಪ.ಪಂಗಡ | | |
| | | | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು |
| 1 | ಕಾರವಾರ | 23,961 | 91,458 | 46,041 | 45,417 | 3,569 | 1,814 | 1,755 | 551 | 313 | 238 |
| 2 | ಸೂಪಾ | 11,648 | 52,012 | 26,167 | 25,845 | 3,271 | 3,271 | 1,647 | 761 | 398 | 363 |
| 3 | ಹಳಿಯಾಳ | 20,124 | 95,119 | 48,397 | 46,722 | 6,689 | 3,303 | 3,386 | 5,702 | 2,812 | 2,890 |
| 4 | ಯಲ್ಲಾಪುರ | 13,350 | 58,210 | 29,563 | 28,647 | 2,465 | 1,262 | 1,203 | 4,907 | 2,408 | 2,499 |
| 5 | ಮುಂಡಗೋಡು | 17,733 | 87,308 | 47,979 | 39,329 | 13,537 | 6,851 | 6,686 | 5,353 | 2,728 | 2,625 |
| 6 | ಶಿರ್ಸಿ | 27,944 | 1,24,026 | 62,680 | 61,346 | 12,721 | 6,393 | 6,328 | 1,100 | 565 | 535 |
| 7 | ಅಂಕೋಲ | 21,897 | 92,023 | 46,416 | 45,607 | 5,953 | 2,869 | 3,084 | 1,146 | 591 | 555 |
| 8 | ಕುಮುಟಾ | 28,325 | 1,25,014 | 63,136 | 61,878 | 7,756 | 3,859 | 3,897 | 163 | 85 | 78 |
| 9 | ಸಿದ್ದಾಪುರ | 19,761 | 83,118 | 41,169 | 41,949 | 5,609 | 2,718 | 2,891 | 154 | 84 | 70 |
| 10 | ಹೊನ್ನಾವರ | 33,327 | 1,47,155 | 73,670 | 73,485 | 7,074 | 3,532 | 3,542 | 323 | 156 | 167 |
| 11 | ಭಟ್ಕಳ | 25,596 | 1,29,576 | 64,336 | 65,240 | 13,678 | 6,850 | 6,828 | 8,835 | 4,358 | 4,477 |

ಮೂಲ: ೨೦೧೧ರ ಜನಗಣತಿ ವರದಿ, ಭಾರತ ಸರ್ಕಾರ

ಪರಿಶಿಷ್ಟ ಪಗಂಡದ ತಾಲೂಕಿನ ಒಟ್ಟು ಜನಸಂಖ್ಯೆ 4907 ಆಗಿದೆ. ಲಿಂಗವಾರು ಪುರುಷರು 2812, 2890ರಷ್ಟು ಮಹಿಳೆಯರಿದ್ದಾರೆ. ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡ ಶೇ. 5.99ರಷ್ಟು ಜನಸಂಖ್ಯೆ ಇರುವುದು ತಿಳಿದುಬರುತ್ತದೆ.

ಯಲ್ಲಾಪುರ ತಾಲೂಕಿನಲ್ಲಿ 13350 ಕುಟುಂಬಗಳಿವೆ. ತಾಲೂಕಿನಲ್ಲಿ ಒಟ್ಟು ಜನಸಂಖ್ಯೆ 58210 ಆಗಿದೆ. ಇದರಲ್ಲಿ ಲಿಂಗವಾರು ಗಮನಿಸಿದಾಗ ಪುರುಷರ 29563ರಷ್ಟಿದ್ದಾರೆ, 28647ರಷ್ಟು ಮಹಿಳೆಯರಿದ್ದಾರೆ. ಇದರಲ್ಲಿ 2465ರಷ್ಟು ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆಯಾಗಿದ್ದು, ಲಿಂಗವಾರು ಗಮನಿಸಿದಾಗ 1262ರಷ್ಟು ಪುರುಷರು ಹಾಗೂ 1203ರಷ್ಟು ಮಹಿಳೆಯರಿದ್ದಾರೆ. ಅಂದರೆ, ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಶೇ. 4.23ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ.

ತಾಲೂಕಿನಲ್ಲಿ ಪರಿಶಿಷ್ಟ ಪಂಗಡ ಒಟ್ಟು ಜನಸಂಖ್ಯೆ 4907ರಲ್ಲಿ ಲಿಂಗವಾರು 2408 ಪುರುಷರು ಹಾಗೂ 2499 ಮಹಿಳೆಯರಿದ್ದಾರೆ. ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡ ಶೇ. 8.43ರಷ್ಟು ಜನಸಂಖ್ಯೆ ಇರುವುದು ತಿಳಿದುಬರುತ್ತದೆ.

ಮುಂಡಗೋಡು ತಾಲೂಕಿನಲ್ಲಿ 17733 ಕುಟುಂಬಗಳು ನೆಲೆಗೊಂಡಿವೆ. ಒಟ್ಟು ಜನಸಂಖ್ಯೆ 87308ರಷ್ಟಿದೆ. ಇದರಲ್ಲಿ ಲಿಂಗವಾರು 47979ರಷ್ಟು ಪುರುಷರು, 39389ರಷ್ಟು ಮಹಿಳೆಯರಿದ್ದಾರೆ. ತಾಲೂಕಿನಲ್ಲಿ 13537ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದ್ದು, ಲಿಂಗವಾರು 6851ರಷ್ಟು ಪುರುಷರು, 6686ರಷ್ಟು ಮಹಿಳೆಯರಿದ್ದಾರೆ. ಅಂದರೆ, ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಶೇ. 15.5ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ.

ಪರಿಶಿಷ್ಟ ಪಗಂಡದ ತಾಲೂಕಿನ ಒಟ್ಟು ಜನಸಂಖ್ಯೆ 5353 ಆಗಿದೆ. ಲಿಂಗವಾರು ಪುರುಷರು 2728, 2625ರಷ್ಟು ಮಹಿಳೆಯರಿದ್ದಾರೆ. ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡ ಶೇ. 6.13ರಷ್ಟು ಜನಸಂಖ್ಯೆ ಇರುವುದು ತಿಳಿದುಬರುತ್ತದೆ.

ಶಿರಸಿ ತಾಲೂಕಿನಲ್ಲಿ 27944 ಕುಟುಂಬಗಳಿವೆ. ತಾಲೂಕಿನಲ್ಲಿ ಒಟ್ಟು ಜನಸಂಖ್ಯೆ 124026 ಆಗಿದೆ. ಇದರಲ್ಲಿ ಲಿಂಗವಾರು ಗಮನಿಸಿದಾಗ ಪುರುಷರ 62680ರಷ್ಟಿದ್ದಾರೆ, 61386ರಷ್ಟು ಮಹಿಳೆಯರಿದ್ದಾರೆ. ಇದರಲ್ಲಿ 12791ರಷ್ಟು ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆಯಾಗಿದ್ದು, ಲಿಂಗವಾರು ಗಮನಿಸಿದಾಗ 6393ರಷ್ಟು ಪುರುಷರು ಹಾಗೂ 6328ರಷ್ಟು ಮಹಿಳೆಯರಿದ್ದಾರೆ. ಅಂದರೆ, ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಶೇ. 10.3ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ.

ತಾಲೂಕಿನಲ್ಲಿ ಪರಿಶಿಷ್ಟ ಪಂಗಡ ಒಟ್ಟು ಜನಸಂಖ್ಯೆ 1100ರಲ್ಲಿ ಲಿಂಗವಾರು 595 ಪುರುಷರು ಹಾಗೂ 535 ಮಹಿಳೆಯರಿದ್ದಾರೆ. ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡ ಶೇ. 0.87ರಷ್ಟು ಜನಸಂಖ್ಯೆ ಇರುವುದು ತಿಳಿದುಬರುತ್ತದೆ.

ಅಂಕೋಲ ತಾಲೂಕಿನಲ್ಲಿ 21897 ಕುಟುಂಬಗಳಿವೆ. ತಾಲೂಕಿನಲ್ಲಿ ಒಟ್ಟು ಜನಸಂಖ್ಯೆ 92023 ಆಗಿದೆ. ಇದರಲ್ಲಿ ಲಿಂಗವಾರು ಗಮನಿಸಿದಾಗ ಪುರುಷರ 46416ರಷ್ಟಿದ್ದಾರೆ, 45607ರಷ್ಟು ಮಹಿಳೆಯರಿದ್ದಾರೆ. ಇದರಲ್ಲಿ 5953ರಷ್ಟು ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆಯಾಗಿದ್ದು, ಲಿಂಗವಾರು ಗಮನಿಸಿದಾಗ 2869ರಷ್ಟು ಪುರುಷರು ಹಾಗೂ 3084ರಷ್ಟು ಮಹಿಳೆಯರಿದ್ದಾರೆ. ಅಂದರೆ, ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಶೇ. 6.47ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ. ತಾಲೂಕಿನಲ್ಲಿ ಪರಿಶಿಷ್ಟ ಪಂಗಡ ಒಟ್ಟು ಜನಸಂಖ್ಯೆ 1146ರಲ್ಲಿ ಲಿಂಗವಾರು 591 ಪುರುಷರು ಹಾಗೂ 555 ಮಹಿಳೆಯರಿದ್ದಾರೆ. ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡ ಶೇ. 1.24ರಷ್ಟು ಜನಸಂಖ್ಯೆ ಇರುವುದು ತಿಳಿದುಬರುತ್ತದೆ.

ಕುಮಟಾ ತಾಲೂಕಿನಲ್ಲಿ 28325 ಕುಟುಂಬಗಳಿವೆ. ತಾಲೂಕಿನಲ್ಲಿ ಒಟ್ಟು ಜನಸಂಖ್ಯೆ 125014 ಆಗಿದೆ. ಇದರಲ್ಲಿ ಲಿಂಗವಾರು ಗಮನಿಸಿದಾಗ ಪುರುಷರ 63136ರಷ್ಟಿದ್ದಾರೆ, 61878ರಷ್ಟು ಮಹಿಳೆಯರಿದ್ದಾರೆ. ಇದರಲ್ಲಿ 7756ರಷ್ಟು ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆಯಾಗಿದ್ದು, ಲಿಂಗವಾರು ಗಮನಿಸಿದಾಗ 3859ರಷ್ಟು ಪುರುಷರು ಹಾಗೂ 3897ರಷ್ಟು ಮಹಿಳೆಯರಿದ್ದಾರೆ. ಅಂದರೆ, ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಶೇ. 6.20ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ. ತಾಲೂಕಿನಲ್ಲಿ ಪರಿಶಿಷ್ಟ ಪಂಗಡ ಒಟ್ಟು ಜನಸಂಖ್ಯೆ 163ರಲ್ಲಿ ಲಿಂಗವಾರು 85 ಪುರುಷರು ಹಾಗೂ 78 ಮಹಿಳೆಯರಿದ್ದಾರೆ. ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡ ಶೇ. 0.13ರಷ್ಟು ಜನಸಂಖ್ಯೆ ಇರುವುದು ತಿಳಿದುಬರುತ್ತದೆ.

ಸಿದ್ಧಾಪುರ ತಾಲೂಕಿನಲ್ಲಿ 19761 ಕುಟುಂಬಗಳಿವೆ. ತಾಲೂಕಿನಲ್ಲಿ ಒಟ್ಟು ಜನಸಂಖ್ಯೆ 83118 ಆಗಿದೆ. ಇದರಲ್ಲಿ ಲಿಂಗವಾರು ಗಮನಿಸಿದಾಗ ಪುರುಷರ 41169ರಷ್ಟಿದ್ದಾರೆ, 41949ರಷ್ಟು ಮಹಿಳೆಯರಿದ್ದಾರೆ. ಇದರಲ್ಲಿ 5609ರಷ್ಟು ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆಯಾಗಿದ್ದು, ಲಿಂಗವಾರು ಗಮನಿಸಿದಾಗ 2718ರಷ್ಟು ಪುರುಷರು ಹಾಗೂ 2891ರಷ್ಟು ಮಹಿಳೆಯರಿದ್ದಾರೆ. ಅಂದರೆ, ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಶೇ. 6.25ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ. ತಾಲೂಕಿನಲ್ಲಿ ಪರಿಶಿಷ್ಟ ಪಂಗಡ ಒಟ್ಟು ಜನಸಂಖ್ಯೆ 154ರಲ್ಲಿ ಲಿಂಗವಾರು 84 ಪುರುಷರು ಹಾಗೂ 70 ಮಹಿಳೆಯರಿದ್ದಾರೆ. ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡ ಶೇ. 0.18ರಷ್ಟು ಜನಸಂಖ್ಯೆ ಇರುವುದು ತಿಳಿದುಬರುತ್ತದೆ.

ಹೊನ್ನಾವರ ತಾಲೂಕಿನಲ್ಲಿ 33327 ಕುಟುಂಬಗಳಿವೆ. ತಾಲೂಕಿನಲ್ಲಿ ಒಟ್ಟು ಜನಸಂಖ್ಯೆ 147155 ಆಗಿದೆ. ಇದರಲ್ಲಿ ಲಿಂಗವಾರು ಗಮನಿಸಿದಾಗ ಪುರುಷರ 73670ರಷ್ಟಿದ್ದಾರೆ, 73485ರಷ್ಟು ಮಹಿಳೆಯರಿದ್ದಾರೆ. ಇದರಲ್ಲಿ 7074ರಷ್ಟು ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆಯಾಗಿದ್ದು, ಲಿಂಗವಾರು ಗಮನಿಸಿದಾಗ 3532ರಷ್ಟು ಪುರುಷರು ಹಾಗೂ 3542ರಷ್ಟು ಮಹಿಳೆಯರಿದ್ದಾರೆ. ಅಂದರೆ, ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಶೇ. 4.81ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ. ತಾಲೂಕಿನಲ್ಲಿ ಪರಿಶಿಷ್ಟ ಪಂಗಡ ಒಟ್ಟು ಜನಸಂಖ್ಯೆ 323ರಲ್ಲಿ ಲಿಂಗವಾರು 156 ಪುರುಷರು ಹಾಗೂ 167 ಮಹಿಳೆಯರಿದ್ದಾರೆ. ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡ ಶೇ. 0.22ರಷ್ಟು ಜನಸಂಖ್ಯೆ ಇರುವುದು ತಿಳಿದುಬರುತ್ತದೆ.

ಭಟ್ಕಳ ತಾಲೂಕಿನಲ್ಲಿ 25596 ಕುಟುಂಬಗಳಿವೆ. ತಾಲೂಕಿನಲ್ಲಿ ಒಟ್ಟು ಜನಸಂಖ್ಯೆ 129576 ಆಗಿದೆ. ಇದರಲ್ಲಿ ಲಿಂಗವಾರು ಗಮನಿಸಿದಾಗ ಪುರುಷರ 64336ರಷ್ಟಿದ್ದಾರೆ, 65240ರಷ್ಟು ಮಹಿಳೆಯರಿದ್ದಾರೆ. ಇದರಲ್ಲಿ 13678ರಷ್ಟು ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆಯಾಗಿದ್ದು, ಲಿಂಗವಾರು ಗಮನಿಸಿದಾಗ 6850ರಷ್ಟು ಪುರುಷರು ಹಾಗೂ 6828ರಷ್ಟು ಮಹಿಳೆಯರಿದ್ದಾರೆ. ಅಂದರೆ, ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಶೇ. 10.60ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದೆ ಎಂದು ತಿಳಿದುಬರುತ್ತದೆ. ತಾಲೂಕಿನಲ್ಲಿ ಪರಿಶಿಷ್ಟ ಪಂಗಡ ಒಟ್ಟು ಜನಸಂಖ್ಯೆ 8835ರಲ್ಲಿ ಲಿಂಗವಾರು 4358 ಪುರುಷರು ಹಾಗೂ 4477 ಮಹಿಳೆಯರಿದ್ದಾರೆ. ಒಟ್ಟಾರೆ ತಾಲೂಕಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡ ಶೇ. 6.82ರಷ್ಟು ಜನಸಂಖ್ಯೆ ಇರುವುದು ತಿಳಿದುಬರುತ್ತದೆ.

**ಜನಸಂಖ್ಯೆಯ ಪ್ರಮಾಣ**

ಜನಸಾಂದ್ರತೆ ಎಂದರೆ ಪ್ರತಿ ಚದರ ಕಿ.ಮೀ. ಪ್ರದೇಶದಲ್ಲಿ ವಾಸಿಸುವ ಸರಾಸರಿ ಜನಸಂಖ್ಯೆಯನ್ನು ಲೆಕ್ಕಹಾಕುವುದೇ ಆಗಿದೆ. ಕರ್ನಾಟಕದಲ್ಲಿರುವ ಒಟ್ಟು ವಿಸ್ತಾರದಲ್ಲಿ ಜನಸಾಂದ್ರತೆಯು ಪ್ರತಿ ಚದರ ಕಿಲೋಮೀಟರಿಗೆ ಸರಾಸರಿ 319 ಇದೆ. ಉತ್ತರಕನ್ನಡ ಜಿಲ್ಲೆಯಲ್ಲಿ ಪ್ರತಿ ಚದರ ಕಿಲೋಮೀಟರಿಗೆ 140 ಜನಸಾಂದ್ರತೆ ಇದೆ.

ಇದು ಬೇರೆ ಜಿಲ್ಲೆಗಳಿಗೆ ಹೋಲಿಕೆ ಮಾಡಿದರೆ ಅತ್ಯಂತ ಕಡಿಮೆ ಜನಸಾಂದ್ರತೆಯನ್ನು ಹೊಂದಿದೆ ಎಂಬುದು ಸ್ಪಷ್ಟವಾಗುತ್ತದೆ. ಇದಕ್ಕೆ ಕಾರಣ ಇದು ಜನವಸತಿಗೆ ಯೋಗ್ಯವಲ್ಲದ ಪ್ರದೇಶವಾಗಿದೆ. ಏಕೆಂದರೆ ಇಲ್ಲಿ ದಟ್ಟವಾದ ಅರಣ್ಯಗಳು ಮತ್ತು ಎತ್ತರದ ಘಟ್ಟಗಳಿವೆ. ಇಂತಹ ಪ್ರದೇಶದಲ್ಲಿ ವಾಸಿಸುವ ಜನರಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಕಷ್ಟವಾಗುತ್ತದೆ. ಅಲ್ಲದೇ ಇಲ್ಲಿ ಸುರಿಯುವ ಭಯಂಕರ ಮಳೆ, ತುಂಬಿ ಹರಿಯುವ ಮತ್ತು

ಪ್ರವಾಹದಿಂದ ಕೂಡಿದ ನದಿಗಳು, ಇಲ್ಲಿರುವ ಕಚ್ಚಾರಸ್ತೆಗಳು ಮತ್ತು ಸಾರಿಗೆ ಸೌಲಭ್ಯಗಳ ಕೊರತೆ ಇತ್ಯಾದಿ ಅಂಶಗಳು ಜನಸಾಂದ್ರತೆ ಕಡಿಮೆ ಇರಲು ಕಾರಣಗಳಾಗಿವೆ.

**ಲಿಂಗಾನುಪಾತ**

ಕರ್ನಾಟಕದಲ್ಲಿ ಲಿಂಗಾನುಪಾತವು ಸರಾಸರಿ 1000 ಪುರುಷರಿಗೆ 973 ಮಹಿಳೆಯರಿದ್ದಾರೆ. ಈ ಲಿಂಗಾನುಪಾತವು ಗ್ರಾಮೀಣ ಪ್ರದೇಶದಲ್ಲಿ ಸರಾಸರಿ 979 ಹಾಗೂ ನಗರ ಪ್ರದೇಶದಲ್ಲಿ 963ರಷ್ಟಿದೆ.

**ಕೋಷ್ಟಕ 7**

**ಉತ್ತರ ಕನ್ನಡ ಲಿಂಗಾನುಪಾತ**

| ವಿವರ | ಕರ್ನಾಟಕ | ಉತ್ತರ ಕನ್ನಡ |
|---|---|---|
| ಒಟ್ಟು | 973 | 979 |
| ಗ್ರಾಮೀಣ | 979 | 977 |
| ನಗರ | 963 | 982 |

ಉತ್ತರಕನ್ನಡ ಜಿಲ್ಲೆಯಲ್ಲಿ ಲಿಂಗಾನುಪಾತವು ಸರಾಸರಿ 1000 ಪುರುಷರಿಗೆ 979 ಮಹಿಳೆಯರಿದ್ದಾರೆ. ಈ ಲಿಂಗಾನುಪಾತವು ಗ್ರಾಮೀಣ ಪ್ರದೇಶದಲ್ಲಿ ಸರಾಸರಿ 977 ಹಾಗೂ ನಗರ ಪ್ರದೇಶದಲ್ಲಿ 982 ರಷ್ಟಿದೆ. ಒಟ್ಟಾರೆ ರಾಜ್ಯದ ಸರಾಸರಿ ಲಿಂಗಾನುಪಾತಕ್ಕೆ ಹೋಲಿಸಿದರೆ ಉತ್ತರಕನ್ನಡದಲ್ಲಿ ಸರಾಸರಿ ಲಿಂಗಾನುಪಾತದ ಪ್ರಮಾಣ ಹೆಚ್ಚಿದೆ. ಆದರೆ ಗ್ರಾಮೀಣ ಭಾಗದಲ್ಲಿ ರಾಜ್ಯದ ಸರಾಸರಿ ಲಿಂಗಾನುಪಾತಕ್ಕಿಂತ ಕಡಿಮೆ ಪ್ರಮಾಣದಲ್ಲಿ ಮಹಿಳೆಯರಿದ್ದಾರೆ. ಆದರೆ ನಗರ ಪ್ರದೇಶದಲ್ಲಿ ರಾಜ್ಯದ ಸರಾಸರಿ ಲಿಂಗಾನುಪಾತಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಮಹಿಳೆಯರಿರುವುದು ಕಂಡುಬರುತ್ತದೆ.

ಈ ಮೇಲಿನ ಅಂಕಿಅಂಶಗಳನ್ನು ಅವಲೋಕಿಸಿದಾಗ, ರಾಜ್ಯದ ಸರಾಸರಿಗಿಂತ ಉತ್ತರಕನ್ನಡ ಜಿಲ್ಲೆಯ ಲಿಂಗಾನುಪಾತವು ಏಕೆ ಹೆಚ್ಚಾಗಿದೆ ಹಾಗೂ ಉತ್ತರಕನ್ನಡ ಜಿಲ್ಲೆಯ ಗ್ರಾಮೀಣ ಪ್ರದೇಶದ ಲಿಂಗಾನುಪಾತವು ರಾಜ್ಯದ ಸರಾಸರಿಗಿಂತ ಏಕೆ ಕಡಿಮೆ ಇದೆ ಎಂಬ ಪ್ರಶ್ನೆಗಳು ಮೂಡುತ್ತವೆ. ಇಲ್ಲಿ ಇವುಗಳಿಗೆ ಉತ್ತರ ಕಂಡುಕೊಳ್ಳುವ ಅಗತ್ಯವಿದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕುಮಟಾ ನಗರದಲ್ಲಿ ಇರುವ ಬಾಳಿಗಾ ಕಾಲೇಜಿಗೆ ಹೋಗಿ ಅಲ್ಲಿಯ ಪ್ರಾಚಾರ್ಯರನ್ನು ಸಂದರ್ಶಿಸಲಾಯಿತು. ಆ ಸಂದರ್ಭದಲ್ಲಿ ಈ ಜಿಲ್ಲೆಯ

ಲಿಂಗಾನುಪಾತ ಜಾಸ್ತಿಯಾಗಿರುವುದಕ್ಕೆ ಕಾರಣವೇನು ಎಂಬ ಪ್ರಶ್ನೆಗೆ ಅವರು ಜಿಲ್ಲೆಯಲ್ಲಿ ಶಿಕ್ಷಿತರ ಸಂಖ್ಯೆ ಜಾಸ್ತಿ ಇರುವುದು, ಆಸ್ಪತ್ರೆ ಮತ್ತು ಆರೋಗ್ಯಕ್ಕೆ ಸಂಬಂಧಿಸಿದ ಸೌಲಭ್ಯಗಳಿವೆ.

ಈ ಜಿಲ್ಲೆಯ ದಟ್ಟವಾದ ಅರಣ್ಯ ಪ್ರದೇಶ ಮತ್ತು ಗುಡ್ಡ ಬೆಟ್ಟಗಳಿಂದ ಆವೃತ್ತವಾದ ಪ್ರದೇಶವಾಗಿದೆ. ಇಲ್ಲಿ ಹಲವಾರು ಬುಡಕಟ್ಟು ಮತ್ತು ಕೆಳವರ್ಗದ ಸಮುದಾಯಗಳು ವಾಸಿಸುತ್ತವೆ. ಅವುಗಳೆಂದರೆ ಹಾಲಕ್ಕಿ ಒಕ್ಕಲಿಗರು, ಕುಣಬಿಗಳು, ಸಿದ್ಧಿಯರು, ಹಳ್ಳೇರು, ಆಗೇರರು, ಮುಕ್ರಿಯರು, ಗೊಂಡರು, ಗೌಳಿಗರು ಇತ್ಯಾದಿ ಸಮುದಾಯಗಳಾಗಿವೆ ಎಂಬುದು ಕ್ಷೇತ್ರಕಾರ್ಯದಿಂದ ತಿಳಿದಿದೆ. ಈ ಸಮುದಾಯಗಳು ಬುಡಕಟ್ಟು ಚಹರೆಗಳನ್ನು ದಟ್ಟವಾಗಿ ಹೊಂದಿದ್ದು, ಇವತ್ತಿಗೂ ಬುಡಕಟ್ಟು ಬದುಕನ್ನು ಸಾಗಿಸುತ್ತಿದ್ದಾರೆ. ಬುಡಕಟ್ಟುಗಳು ಮಹಿಳೆಯರನ್ನು ತುಂಬಾ ಗೌರವಿಸುತ್ತಾರೆ. ಅದೇ ರೀತಿ ಈ ಸಮುದಾಯಗಳು ಹೆಣ್ಣನ್ನು ಗೌರವಿಸುತ್ತಾರೆ ಎಂಬುವುದು ಕ್ಷೇತ್ರಕಾರ್ಯದಲ್ಲಿ ಸಮುದಾಯಗಳ ಆಚರಣೆ, ನಂಬಿಕೆಗಳ ಅವಲೋಕನದಿಂದ ಸ್ಪಷ್ಟವಾಗುತ್ತದೆ ಹಾಗೂ ಬುಡಕಟ್ಟು ಅಧ್ಯಯನಕಾರರ ಹಲವಾರು ಕೃತಿಗಳಲ್ಲಿ ಇದನ್ನು ಉಲ್ಲೇಖಿಸಿದ್ದಾರೆ. ಅಲ್ಲದೇ ಮುಕ್ರಿ ಸಮುದಾಯದ ಸಮೀಕ್ಷೆಯಲ್ಲಿ ಕುಟುಂಬದಲ್ಲಿ ಮಹಿಳೆಯರ ಸಂಖ್ಯೆ ಹೆಚ್ಚಾಗಿರುವುದು ಕಂಡುಬಂದಿದೆ. ಅದಕ್ಕಾಗಿ ಈ ಜಿಲ್ಲೆಯ ಲಿಂಗಾನುಪಾತ ಹೆಚ್ಚಾಗಿರುವುದಕ್ಕೆ ಈ ಸಮುದಾಯಗಳ ಬದುಕು ಕಾರಣವಾಗಿವೆ.

ಉತ್ತರಕನ್ನಡ ಜಿಲ್ಲೆಯ ಗ್ರಾಮೀಣ ಪ್ರದೇಶದ ಲಿಂಗಾನುಪಾತವು ರಾಜ್ಯದ ಸರಾಸರಿಗಿಂತ ಕಡಿಮೆ ಇದೆ. ರಾಜ್ಯದ ಇತರೆ ಕೆಲವು ಜಿಲ್ಲೆಗಳಿಗೆ ಹೋಲಿಸಿದಾಗ ಇದು ವ್ಯತಿರಿಕ್ತ ಅಂಶವಾಗಿದೆ. ಏಕೆಂದರೆ ಕೆಲವು ಜಿಲ್ಲೆಯ ಗ್ರಾಮೀಣ ಭಾಗದ ಲಿಂಗಾನುಪಾತವು ರಾಜ್ಯದ ಸರಾಸರಿಗಿಂತ ಅಧಿಕವಾಗಿದ್ದು, ನಗರದ ಲಿಂಗಾನುಪಾತವು ಕಡಿಮೆ ಇರುವುದು ಕಂಡುಬರುತ್ತದೆ. ಅದರೆ ಈ ವ್ಯತಿರಿಕ್ತಿ ಅಂಶಗಳಿಂದ ಉತ್ತರಕನ್ನಡ ಜಿಲ್ಲೆಯ ಗ್ರಾಮೀಣ ಭಾಗ ಧಾರ್ಮಿಕ ನಂಬಿಕೆ ಮತ್ತು ಪುರುಷ ಪ್ರಧಾನ ಮೌಲ್ಯಗಳ ದಟ್ಟವಾದ ಪ್ರಭಾವಕ್ಕೆ ಒಳಗಾಗುತ್ತಿದೆ ಎಂಬುದು ತಿಳಿಯುತ್ತದೆ.

ಈ ಎಲ್ಲಾ ಅಂಶಗಳು ಗ್ರಾಮೀಣ ಭಾಗದ ಲಿಂಗಾನುಪಾತ ಕುಸಿಯಲು ಹಾಗೂ ಧಾರ್ಮಿಕ ನಂಬಿಕೆ ಮತ್ತು ಪುರುಷತ್ವದ ಮೌಢ್ಯಗಳ ಪ್ರಭಾವಕ್ಕೆ ಗ್ರಾಮೀಣ ಪ್ರದೇಶಗಳು ಒಳಗಾಗುತ್ತವೆ ಎಂದು ತಿಳಿಯುತ್ತದೆ.

ನಗರಗಳಲ್ಲಿ ಸುಶಿಕ್ಷಿತರು ಕಾನೂನಿನ ಅರಿವು ಇರುವವರು ಸಂಖ್ಯೆ ಹೆಚ್ಚಾಗಿರುವುದು ಅದಕ್ಕಾಗಿ ಇವರು ಸೋನೊಗ್ರಾಂ ತಂತ್ರಜ್ಞಾನ ಬಳಸುವುದು ಅಪರಾಧವೆಂದು ತಿಳಿದಿರುತ್ತಾರೆ. ಅಲ್ಲದೇ ಚಿಕ್ಕ ಕುಟುಂಬದ ಬಯಕೆಯನ್ನು ಹೊಂದಿರುವವರ ಸಂಖ್ಯೆ ಹೆಚ್ಚಾಗಿದೆ. ಇದರಿಂದ ಜಿಲ್ಲೆಯ ನಗರ ಪ್ರದೇಶದ ಲಿಂಗಾನುಪಾತ ಹೆಚ್ಚಾಗಲು ಕಾರಣವಾಗಿದೆ.

### ಕೋಷ್ಟಕ 8

### ರಾಜ್ಯ ಹಾಗೂ ಉತ್ತರಕನ್ನಡ ಜಿಲ್ಲೆಯ ಒಟ್ಟು ಸಾಕ್ಷರತೆ ಪ್ರಮಾಣ

| ವಿವರ | ಒಟ್ಟು | ಗಂಡು | ಹೆಣ್ಣು |
|---|---|---|---|
| ರಾಜ್ಯ | 4,06,47,322 | 2,25,08,471 | 1,81,38,851 |
| ಶೇಕಡ | 75.36 | 82.47 | 68.08 |
| ಉತ್ತರಕನ್ನಡ | 10,81,906 | 5,82,099 | 4,99,807 |
| ಶೇಕಡ | 84.06 | 89.63 | 78.39 |

**ಸಾಕ್ಷರತೆ**

ಕರ್ನಾಟಕ ರಾಜ್ಯದಲ್ಲಿ ಸಾಕ್ಷರತೆಯನ್ನು ಹೊಂದಿದ ಒಟ್ಟು ಜನಸಂಖ್ಯೆಯು 4,06,47,322 ಇದೆ. ಇದರಲ್ಲಿ 2,25,08,471 ಪುರುಷರು ಹಾಗೂ 1,81,38,851 ಮಹಿಳೆಯರು ಇದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿ ಸಾಕ್ಷರತೆಯನ್ನು ಹೊಂದಿದ ಒಟ್ಟು ಜನಸಂಖ್ಯೆಯು 10,81,906 ಇದೆ. ಇದರಲ್ಲಿ 5,82,099 ಪುರುಷರು ಹಾಗೂ 4,99,807 ಮಹಿಳೆಯರು ಇದ್ದಾರೆ. ರಾಜ್ಯದ ಒಟ್ಟು ಸಾಕ್ಷರತೆಯ ಪ್ರಮಾಣವು ಶೇಕಡ 75.36 ಇದೆ. ಇದರಲ್ಲಿ ಪುರುಷರು ಶೇಕಡ 82.47 ಹಾಗೂ ಮಹಿಳೆಯರು ಶೇಕಡ 68.08 ಇದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿ ಒಟ್ಟು ಸಾಕ್ಷರತೆಯ ಪ್ರಮಾಣವು ಶೇಕಡ 84.06 ಇದೆ. ಇದರಲ್ಲಿ ಶೇಕಡ 89.63 ಪುರುಷರು ಹಾಗೂ ಶೇಕಡ 78.39 ಮಹಿಳೆಯರು ಇದ್ದಾರೆ. ಅಂದರೆ ರಾಜ್ಯದ ಸರಾಸರಿ ಸಾಕ್ಷರತೆಯ ಪ್ರಮಾಣಕ್ಕಿಂತ ಉತ್ತರಕನ್ನಡದ ಸಾಕ್ಷರತೆಯ ಪ್ರಮಾಣ ಹೆಚ್ಚಿದೆ.

### ಕೋಷ್ಟಕ 9

### ರಾಜ್ಯ ಹಾಗೂ ಉತ್ತರ ಕನ್ನಡ ಜಿಲ್ಲೆಯ ಪರಿಶಿಷ್ಟ ಜಾತಿಯ ಸಾಕ್ಷರತೆ ಪ್ರಮಾಣ

| ವಿವರ | ಒಟ್ಟು | ಗಂಡು | ಹೆಣ್ಣು |
|---|---|---|---|
| ರಾಜ್ಯ | 1,04,74,992 | 52,64,545 | 52,10,447 |
| ಶೇಕಡ | 17.15 | 17 | 17.29 |
| ಉತ್ತರಕನ್ನಡ | 1,16,431 | 57,841 | 58,590 |
| ಶೇಕಡ | 8.10 | 7.96 | 8.24 |

ರಾಜ್ಯದಲ್ಲಿ ಸಾಕ್ಷರತೆಯನ್ನು ಹೊಂದಿದ ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆಯು 1,04,74,992 ಇದೆ. ಇದರಲ್ಲಿ 52,64,545 ಪುರುಷರು ಹಾಗೂ 52,10,447 ಮಹಿಳೆಯರು ಇದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿ ಸಾಕ್ಷರತೆಯನ್ನು ಹೊಂದಿದ ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆಯು 1,16,431 ಇದೆ. ಇದರಲ್ಲಿ 57,841 ಪುರುಷರು ಹಾಗೂ 58,590 ಮಹಿಳೆಯರು ಇದ್ದಾರೆ.

ರಾಜ್ಯದ ಪರಿಶಿಷ್ಟ ಜಾತಿಯ ಒಟ್ಟು ಸಾಕ್ಷರತೆಯ ಪ್ರಮಾಣವು ಶೇಕಡ 17.15 ಇದೆ. ಇದರಲ್ಲಿ ಪುರುಷರು ಶೇಕಡ 17 ಹಾಗೂ ಮಹಿಳೆಯರು ಶೇಕಡ 17.29 ಇದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯ ಒಟ್ಟು ಸಾಕ್ಷರತೆಯ ಪ್ರಮಾಣವು ಶೇಕಡ 8.10 ಇದೆ. ಇದರಲ್ಲಿ ಶೇಕಡ 7.96 ಪುರುಷರು ಹಾಗೂ ಶೇಕಡ 8.24 ಮಹಿಳೆಯರು ಇದ್ದಾರೆ. ಅಂದರೆ ರಾಜ್ಯದ ಸರಾಸರಿ ಸಾಕ್ಷರತೆಯ ಪ್ರಮಾಣಕ್ಕೆ ಹೋಲಿಸಿದರೆ ಉತ್ತರಕನ್ನಡದ ಸಾಕ್ಷರತೆಯ ಪ್ರಮಾಣವು ಅತ್ಯಂತ ಕಡಿಮೆ ಇದೆ.

**ಕೋಷ್ಟಕ 10**

**ರಾಜ್ಯ ಹಾಗೂ ಉತ್ತರ ಕನ್ನಡ ಜಿಲ್ಲೆಯ ಪರಿಶಿಷ್ಟ ಪಂಗಡದ ಸಾಕ್ಷರತೆ ಪ್ರಮಾಣ**

| ವಿವರ | ಒಟ್ಟು | ಗಂಡು | ಹೆಣ್ಣು |
|---|---|---|---|
| ರಾಜ್ಯ | 42,48,987 | 21,34,754 | 21,14,233 |
| ಶೇಕಡ | 6.95 | 6.89 | 7.02 |
| ಉತ್ತರಕನ್ನಡ | 34,239 | 17,095 | 17,144 |
| ಶೇಕಡ | 2.38 | 2.35 | 2.41 |

**ಆಧಾರ:** 2011ರ ಜನಗಣತಿ ವರದಿ, ಭಾರತ ಸರ್ಕಾರ

ರಾಜ್ಯದಲ್ಲಿ ಸಾಕ್ಷರತೆಯನ್ನು ಹೊಂದಿದ ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆಯು 42,48,987 ಇದೆ. ಇದರಲ್ಲಿ 21,34,754 ಪುರುಷರು ಹಾಗೂ 21,14,233 ಮಹಿಳೆಯರು ಇದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿ ಸಾಕ್ಷರತೆಯನ್ನು ಹೊಂದಿದ ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆಯು 34,239 ಇದೆ. ಇದರಲ್ಲಿ 17,095 ಪುರುಷರು ಹಾಗೂ 17,144 ಮಹಿಳೆಯರು ಇದ್ದಾರೆ.

ರಾಜ್ಯದ ಪರಿಶಿಷ್ಟ ಪಂಗಡದ ಒಟ್ಟು ಸಾಕ್ಷರತೆಯ ಪ್ರಮಾಣವು ಶೇಕಡ 6.95 ಇದೆ. ಇದರಲ್ಲಿ ಪುರುಷರು ಶೇಕಡ 6.89 ಹಾಗೂ ಮಹಿಳೆಯರು ಶೇಕಡ 7.02 ಇದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿ ಪರಿಶಿಷ್ಟ ಪಂಗಡದ ಒಟ್ಟು ಸಾಕ್ಷರತೆಯ ಪ್ರಮಾಣವು ಶೇಕಡ 2.38 ಇದೆ. ಇದರಲ್ಲಿ ಶೇಕಡ 2.35 ಪುರುಷರು ಹಾಗೂ ಶೇಕಡ 2.41 ಮಹಿಳೆಯರು ಇದ್ದಾರೆ. ಅಂದರೆ ರಾಜ್ಯದ ಸರಾಸರಿ ಸಾಕ್ಷರತೆಯ ಪ್ರಮಾಣಕ್ಕೆ ಹೋಲಿಸಿದರೆ ಉತ್ತರಕನ್ನಡದ ಪರಿಶಿಷ್ಟ ಪಂಗಡದ ಸಾಕ್ಷರತೆಯ ಪ್ರಮಾಣವು ಅತ್ಯಂತ ಕಡಿಮೆ ಇದೆ.

**ಕೋಷ್ಟಕ: 11**

**ತಾಲೂಕುವಾರು ಸಾಕ್ಷರತೆಯ ಪ್ರಮಾಣ**

| ಕ್ರಸಂ | ತಾಲೂಕು | ತಾಲೂಕುವಾರು ಸಾಕ್ಷರತೆ ಸಂಖ್ಯೆ | | |
|---|---|---|---|---|
| | | ಒಟ್ಟು | ಗಂಡು | ಹೆಣ್ಣು |
| 1 | ಕಾರವಾರ | 72,379 | 38,998 | 33,381 |
| 2 | ಸೂಪಾ | 34,344 | 19,254 | 15,090 |
| 3 | ಹಳಿಯಾಳ | 57,822 | 32,956 | 24,866 |
| 4 | ಯಲ್ಲಾಪುರ | 40,504 | 22,120 | 18,384 |
| 5 | ಮುಂಡಗೋಡು | 59,682 | 36,118 | 23,564 |
| 6 | ಶಿರ್ಸಿ | 96,088 | 50,798 | 45,290 |
| 7 | ಅಂಕೋಲ | 70,202 | 38,167 | 32,035 |
| 8 | ಕುಮುಟಾ | 97,286 | 52,240 | 45,046 |
| 9 | ಸಿದ್ದಾಪುರ | 63,128 | 33,393 | 29,735 |
| 10 | ಹೊನ್ನಾವರ | 1,10,449 | 59,046 | 51,403 |
| 11 | ಭಟ್ಕಳ | 93,469 | 49,869 | 43,600 |

ಆಧಾರ: 2011ರ ಜನಗಣತಿ ವರದಿ, ಭಾರತ ಸರ್ಕಾರ

## ಉತ್ತರ ಕನ್ನಡದ ತಾಲೂಕುವಾರು ಸಾಕ್ಷರತೆಯ ಪ್ರಮಾಣ

ಉತ್ತರಕನ್ನಡ ಜಿಲ್ಲೆಯಲ್ಲಿರುವ 11 ತಾಲೂಕುಗಳಲ್ಲಿ ಕಾರವಾರದ ಒಟ್ಟು ಜನಸಂಖ್ಯೆಯಲ್ಲಿ ಸಾಕ್ಷರತೆಯನ್ನು ಹೊಂದಿದವರು ಒಟ್ಟು 72,379,ಇದರಲ್ಲಿ 38998 ಪುರುಷರು ಹಾಗೂ 33381 ಮಹಿಳೆಯರಿದ್ದಾರೆ.

ಸೂಫಾ ತಾಲೂಕಿನಲ್ಲಿ 34,344 ಒಟ್ಟು ಸಾಕ್ಷರರಿದ್ದಾರೆ. ಇದರಲ್ಲಿ 19,254 ಪುರುಷರು ಹಾಗೂ 15,090 ಮಹಿಳೆಯರಿದ್ದಾರೆ.

ಹಳಿಯಾಳ ತಾಲೂಕಿನಲ್ಲಿ 57,822 ಒಟ್ಟು ಸಾಕ್ಷರರಿದ್ದಾರೆ. ಇದರಲ್ಲಿ 32,956 ಪುರುಷರು ಹಾಗೂ 24,866 ಮಹಿಳೆಯರಿದ್ದಾರೆ.

ಯಲ್ಲಾಪುರ ತಾಲೂಕಿನಲ್ಲಿ 40,504 ಒಟ್ಟು ಸಾಕ್ಷರರಿದ್ದಾರೆ. ಇದರಲ್ಲಿ 22,120 ಪುರುಷರು ಹಾಗೂ 18,384 ಮಹಿಳೆಯರಿದ್ದಾರೆ.

ಮುಂಡಗೋಡ ತಾಲೂಕಿನಲ್ಲಿ 59,682 ಒಟ್ಟು ಸಾಕ್ಷರರಿದ್ದಾರೆ. ಇದರಲ್ಲಿ 36,118 ಪುರುಷರು ಹಾಗೂ 23,564 ಮಹಿಳೆಯರಿದ್ದಾರೆ.

ಶಿರಸಿ ತಾಲೂಕಿನಲ್ಲಿ 96,088 ಒಟ್ಟು ಸಾಕ್ಷರರಿದ್ದಾರೆ. ಇದರಲ್ಲಿ 50,798 ಪುರುಷರು ಹಾಗೂ 45,290 ಮಹಿಳೆಯರಿದ್ದಾರೆ.

ಅಂಕೋಲ ತಾಲೂಕಿನಲ್ಲಿ 70,202 ಒಟ್ಟು ಸಾಕ್ಷರರಿದ್ದಾರೆ. ಇದರಲ್ಲಿ 38,167 ಪುರುಷರು ಹಾಗೂ 32,035 ಮಹಿಳೆಯರಿದ್ದಾರೆ.

ಕುಮಟಾ ತಾಲೂಕಿನಲ್ಲಿ 97,286 ಒಟ್ಟು ಸಾಕ್ಷರರಿದ್ದಾರೆ. ಇದರಲ್ಲಿ 52,240 ಪುರುಷರು ಹಾಗೂ 45,046 ಮಹಿಳೆಯರಿದ್ದಾರೆ.

ಸಿದ್ದಾಪುರ ತಾಲೂಕಿನಲ್ಲಿ 63,128 ಒಟ್ಟು ಸಾಕ್ಷರರಿದ್ದಾರೆ. ಇದರಲ್ಲಿ 33,393 ಪುರುಷರು ಹಾಗೂ 29,735 ಮಹಿಳೆಯರಿದ್ದಾರೆ.

ಹೊನ್ನಾವರ ತಾಲೂಕಿನಲ್ಲಿ 1,10,449 ಒಟ್ಟು ಸಾಕ್ಷರರಿದ್ದಾರೆ. ಇದರಲ್ಲಿ 59,046 ಪುರುಷರು ಹಾಗೂ 51,403 ಮಹಿಳೆಯರಿದ್ದಾರೆ.

ಭಟ್ಕಳ ತಾಲೂಕಿನಲ್ಲಿ 93,469 ಒಟ್ಟು ಸಾಕ್ಷರರಿದ್ದಾರೆ. ಇದರಲ್ಲಿ 49,869 ಪುರುಷರು ಹಾಗೂ 43,600 ಮಹಿಳೆಯರಿದ್ದಾರೆ.

**ಕೋಷ್ಟಕ: 12**

**ರಾಜ್ಯ ಹಾಗೂ ಉತ್ತರಕನ್ನಡ ಜಿಲ್ಲೆಯ ಒಟ್ಟು ಕಸುಬುದಾರರು**

| ಕ್ರ ಸಂ | | ರಾಜ್ಯ | | ಜಿಲ್ಲೆ | |
|---|---|---|---|---|---|
| 1 | ಒಟ್ಟು | 2,78,72,597 | 45.62% | 6,08,526 | 42.34% |
| 2 | ಗಂಡು | 1,82,70,116 | 59% | 4,30,565 | 59.29% |
| 3 | ಹೆಣ್ಣು | 96,02,481 | 31.87% | 1,77,961 | 25.03% |

**ಆಧಾರ:** 2011ರ ಜನಗಣತಿ ವರದಿ, ಭಾರತ ಸರ್ಕಾರ

2011ರ ಜನಗಣತಿ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಮುಖ್ಯ ಕಸುಬುದಾರರು ಹಾಗೂ ಕೂಲಿ ಕಾರ್ಮಿಕರೆಲ್ಲಾ ಸೇರಿ ಒಟ್ಟು 2,78,72,597 ಜನರಿದ್ದಾರೆ ಇದರಲ್ಲಿ 1,82,70,116 ಪುರುಷರು ಹಾಗೂ 96,02,481 ಮಹಿಳೆಯರಿದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿ ಮುಖ್ಯ ಕಸುಬುದಾರರು ಹಾಗೂ ಕೂಲಿ ಕಾರ್ಮಿರು ಒಟ್ಟು 6,08,526 ಜನರಿದ್ದಾರೆ ಇದರಲ್ಲಿ 4,30,565 ಪುರುಷರು ಹಾಗೂ 1,77,961 ಮಹಿಳೆಯರಿದ್ದಾರೆ.

ರಾಜ್ಯದ ಒಟ್ಟು ಕಸುಬುದಾರರ ಪ್ರಮಾಣ ಶೇಕಡವಾರುಗಳಲ್ಲಿ ಹೇಳುವುದಾದರೆ ರಾಜ್ಯದಲ್ಲಿ ಇರುವ ಒಟ್ಟು ಕೆಲಸಗಾರರ ಪ್ರಮಾಣವು ಶೇಕಡ 45.62 ಇದೆ. ಇದು ಉತ್ತರಕನ್ನಡದಲ್ಲಿ ಶೇಕಡ 42.34 ಇದೆ. ರಾಜ್ಯದ ಒಟ್ಟು ಕೆಲಸಗಾರರಿಗೆ ಹೋಲಿಸಿದರೆ ಉತ್ತರಕನ್ನಡದ ಸರಾಸರಿ ಕೆಲಸಗಾರರ ಪ್ರಮಾಣವು ಶೇಕಡ 3.28ರಷ್ಟು ಕಡಿಮೆ ಇದೆ. ಪುರುಷ ಕೆಲಸಗಾರರು ರಾಜ್ಯದಲ್ಲಿ ಶೇಕಡ 59 ರಷ್ಟಿದ್ದಾರೆ.

**2.11 ಉತ್ತರ ಕನ್ನಡ ಜಿಲ್ಲೆಯ ಒಟ್ಟು ಕಸುಬುದಾರರ ಪ್ರಮಾಣ**

ಜಿಲ್ಲೆಯಲ್ಲಿ ಶೇಕಡ 59.29 ರಷ್ಟಿದ್ದಾರೆ. ಮಹಿಳಾ ಕೆಲಸಗಾರರು ರಾಜ್ಯದಲ್ಲಿ ಶೇಕಡ 31.87 ರಷ್ಟಿದ್ದಾರೆ. ಜಿಲ್ಲೆಯಲ್ಲಿ ಶೇಕಡ 25.03ರಷ್ಟಿದ್ದಾರೆ. ರಾಜ್ಯದ ಒಟ್ಟು ಪುರುಷ ಕೆಲಸಗಾರರ ಪ್ರಮಾಣಕ್ಕೆ ಹೋಲಿಸಿದರೆ ಶೇಕಡ 0.29ರಷ್ಟು ಉತ್ತರಕನ್ನಡದಲ್ಲಿ ಹೆಚ್ಚಿದೆ. ರಾಜ್ಯದ ಸರಾಸರಿ ಮಹಿಳೆಯರ ಪ್ರಮಾಣಕ್ಕಿಂತ ಜಿಲ್ಲೆಯ ಸರಾಸರಿ ಮಹಿಳಾ ಕೆಲಸಗಾರರ ಪ್ರಮಾಣವು ಶೇಕಡ 6.84ರಷ್ಟು ಕಡಿಮೆ ಇದೆ.

**ಕೋಷ್ಟಕ: 13**

**ಮುಖ್ಯ ಕಸುಬುದಾರರು**

| ಕ್ರಸಂ | | ರಾಜ್ಯ | | ಜಿಲ್ಲೆ | |
|---|---|---|---|---|---|
| 1 | ಒಟ್ಟು | 2,33,97,181 | 38.3% | 4,98,304 | 34.67% |
| 2 | ಗಂಡು | 1,63,49,837 | 52.8% | 3,80,745 | 52.43% |
| 3 | ಹೆಣ್ಣು | 70,47,344 | 23.39% | 1,17,559 | 16.54% |

ಆಧಾರ: 2011ರ ಜನಗಣತಿ ವರದಿ, ಭಾರತ ಸರ್ಕಾರ

2011ರ ಜನಗಣತಿ ಪ್ರಕಾರ ರಾಜ್ಯದ ಮುಖ್ಯ ಕಸುಬುದಾರರು ಒಟ್ಟು 2,33,97,181 ಜನರಿದ್ದಾರೆ. ಇದರಲ್ಲಿ 1,63,49,837 ಪುರುಷರು ಹಾಗೂ 70,47,344 ಮಹಿಳೆಯರಿದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿರುವ ಮುಖ್ಯ ಕಸುಬುದಾರರು ಒಟ್ಟು 4,98,304, ಇದರಲ್ಲಿ 3,80,745 ಪುರುಷರು ಹಾಗೂ 1,17,559 ಮಹಿಳೆಯರಿದ್ದಾರೆ.

**ರಾಜ್ಯದ ಮುಖ್ಯ ಕಸುಬುದಾರರ ಪ್ರಮಾಣ**

ಕರ್ನಾಟಕ ರಾಜ್ಯದಲ್ಲಿ ಇರುವ ಒಟ್ಟು ಮುಖ್ಯ ಕಸಬುದಾರರ ಪ್ರಮಾಣವು ಶೇಕಡ 38.3 ಇದೆ. ಇದು ಉತ್ತರಕನ್ನಡದಲ್ಲಿ ಶೇಕಡ 34.67 ಇದೆ. ರಾಜ್ಯದ ಒಟ್ಟು ಕೆಲಸಗಾರರಿಗೆ ಹೋಲಿಸಿದರೆ ಉತ್ತರಕನ್ನಡದ ಸರಾಸರಿ ಕೆಲಸಗಾರರ ಪ್ರಮಾಣವು ಶೇಕಡ 3.63 ರಷ್ಟು ಕಡಿಮೆ ಇದೆ. ಪುರುಷ ಕೆಲಸಗಾರರು ರಾಜ್ಯದಲ್ಲಿ ಶೇಕಡ 52.8 ರಷ್ಟಿದ್ದಾರೆ. ಜಿಲ್ಲೆಯಲ್ಲಿ ಶೇಕಡ 52.43 ರಷ್ಟಿದ್ದಾರೆ. ಮಹಿಳಾ ಕೆಲಸಗಾರರು ರಾಜ್ಯದಲ್ಲಿ ಶೇಕಡ 23.39 ರಷ್ಟಿದ್ದಾರೆ. ಜಿಲ್ಲೆಯಲ್ಲಿ ಶೇಕಡ 16.54 ರಷ್ಟಿದ್ದಾರೆ. ರಾಜ್ಯದ ಒಟ್ಟು ಪುರುಷ ಕೆಲಸಗಾರರ ಪ್ರಮಾಣಕ್ಕೆ ಹೋಲಿಸಿದರೆ ಶೇಕಡ 0.37ರಷ್ಟು

**ಉತ್ತರಕನ್ನಡ ಜಿಲ್ಲೆಯ ಮುಖ್ಯಕಸುಬುದಾರರ ಪ್ರಮಾಣ**

ರಾಜ್ಯದ ಸರಾಸರಿ ಮಹಿಳೆಯರ ಪ್ರಮಾಣಕ್ಕಿಂತ ಜಿಲ್ಲೆಯ ಸರಾಸರಿ ಮಹಿಳಾ ಕೆಲಸಗಾರರ ಪ್ರಮಾಣವು ಶೇಕಡ 6.84ರಷ್ಟು ಕಡಿಮೆ ಇದೆ.

**ಕೋಷ್ಟಕ: 14**

**ಉತ್ತರ ಕನ್ನಡ ಜಿಲ್ಲೆಯ ಕೂಲಿ ಕಾರ್ಮಿಕರು**

| ಕ್ರಸಂ | | ರಾಜ್ಯ | | ಜಿಲ್ಲೆ | |
|---|---|---|---|---|---|
| 1 | ಒಟ್ಟು | 44,75,416 | 7.33% | 1,10,222 | 7.67% |
| 2 | ಗಂಡು | 19,20,279 | 6.2% | 49,820 | 6.86% |
| 3 | ಹೆಣ್ಣು | 25,55,137 | 8.48% | 60,402 | 8.50% |

**ಆಧಾರ:** 2011ರ ಜನಗಣತಿ ವರದಿ, ಭಾರತ ಸರ್ಕಾರ

2011ರ ಜನಗಣತಿ ಪ್ರಕಾರ ರಾಜ್ಯದ ಕೂಲಿಕಾರ್ಮಿಕರು ಒಟ್ಟು 44,75,416 ಜನರಿದ್ದಾರೆ. ಇದರಲ್ಲಿ 19,20,279 ಪುರುಷರು ಹಾಗೂ 25,55,137 ಮಹಿಳೆಯ ರಿದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿರುವ ಕೂಲಿಕಾರ್ಮಿಕರು ಒಟ್ಟು 1,10,222, ಇದರಲ್ಲಿ 49,820 ಪುರುಷರು ಹಾಗೂ 60,402 ಮಹಿಳೆಯರಿದ್ದಾರೆ.

**ರಾಜ್ಯದಲ್ಲಿರುವ ಕೂಲಿಕಾರರ ಪ್ರಮಾಣ**

ರಾಜ್ಯದಲ್ಲಿ ಇರುವ ಒಟ್ಟು ಕೂಲಿಕಾರರ ಪ್ರಮಾಣವು ಶೇಕಡ 7.33 ಇದೆ. ಇದರಲ್ಲಿ ಪುರುಷರು ಶೇಕಡ 6.2, ಮಹಿಳೆಯರು ಶೇಕಡ 8.48 ಜನರಿದ್ದಾರೆ. ರಾಜ್ಯದ ಒಟ್ಟು ಕೂಲಿಕಾರ್ಮಿಕರಲ್ಲಿ ಪುರುಷರ ಪ್ರಮಾಣಕ್ಕಿಂತ ಮಹಿಳೆಯರ ಪ್ರಮಾಣ ಅಧಿಕವಾಗಿದೆ. ಇದು ಉತ್ತರಕನ್ನಡದಲ್ಲಿ ಶೇಕಡ 7.67 ಇದೆ. ಇದರಲ್ಲಿ ಪುರುಷ ಕೂಲಿಕಾರರ ಪ್ರಮಾಣ ಶೇಕಡ 6.86, ಮಹಿಳಾ ಕೂಲಿಕಾರರು ಶೇಕಡ 8.50 ರಷ್ಟಿದ್ದಾರೆ. ಜಿಲ್ಲೆಯಲ್ಲಿಯೂ ಪುರುಷರಿಗಿಂತ ಮಹಿಳಾ ಕೂಲಿಕಾರರ ಪ್ರಮಾಣವೇ ಹೆಚ್ಚಾಗಿದೆ.

**ಕೋಷ್ಟಕ 15**

**ಉತ್ತರ ಕನ್ನಡ ಜಿಲ್ಲೆಯ ಕೃಷಿಕರು**

| ಕ್ರಸಂ | | ರಾಜ್ಯ | | ಜಿಲ್ಲೆ | |
|---|---|---|---|---|---|
| 1 | ಒಟ್ಟು | 65,80,649 | 23.61% | 1,11,581 | 18.34 |
| 2 | ಗಂಡು | 47,53,708 | 26.02% | 80,891 | 18.79 |
| 3 | ಹೆಣ್ಣು | 18,26,941 | 19.03 % | 30,690 | 17.25 |

**ಆಧಾರ:** 2011ರ ಜನಗಣತಿ ವರದಿ, ಭಾರತ ಸರ್ಕಾರ

ಕರ್ನಾಟಕವು ವೈವಿಧ್ಯವಾದ ಪರಿಸರವನ್ನು ಹೊಂದಿದ ನಾಡು. ಒಂದು ಕಡೆ ಹೆಚ್ಚು ಉಷ್ಣದಿಂದ ಕೂಡಿದ ಬಯಲು ಸೀಮೆ, ಮತ್ತೊಂದು ಕಡೆ ಪಶ್ಚಿಮ ಘಟ್ಟಗಳಿಂದ ಕೂಡಿದ ಮಳೆಕಾಡಿನ ಪ್ರದೇಶ, ಮಗುದೊಂದು ಕಡೆ ಸಮುದ್ರದ ಅಂಚಿನ ಉದ್ದಕ್ಕೂ ಇರುವ ಕರಾವಳಿ ಪ್ರದೇಶ ಹೀಗೆ ನಾನಾ ವಾತಾವರಣ, ಮೇಲ್ಮೈ ಮಣ್ಣುಗಳಿಂದ ಕೂಡಿದೆ. ಆಯಾ ಪರಿಸರಕ್ಕೆ ಹೊಂದುವಂತೆ ವಿವಿಧ ರೀತಿಯ ಬೆಳೆಯನ್ನು ಕೃಷಿಕರು ಬೆಳೆಯುತ್ತಾರೆ. 2011ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿರುವ ಒಟ್ಟು ಕೃಷಿಕರು 65,80,649 ಇದರಲ್ಲಿ ಪುರುಷರು 47,53,708 ಹಾಗೂ 18,26,941 ಮಹಿಳೆಯರಿದ್ದಾರೆ. ಉತ್ತರಕನ್ನಡದಲ್ಲಿರುವ ಒಟ್ಟು ಕೃಷಿಕರು 1,11,581 ಇದರಲ್ಲಿ ಪುರುಷರು 80,891, ಹಾಗೂ 30,690 ಮಹಿಳೆಯರಿದ್ದಾರೆ.

ಶೇಕಡವಾರುಗಳಲ್ಲಿ ಹೇಳುವುದಾದರೆ ರಾಜ್ಯದಲ್ಲಿರುವ ಒಟ್ಟು ಕೃಷಿಕರು ಶೇಕಡ 23.61ರಷ್ಟು, ಇದರಲ್ಲಿ ಪುರುಷರು 26.02ರಷ್ಟಿದ್ದರೆ ಮಹಿಳಾ ಕೃಷಿಕರು ಶೇಕಡ 19.03ರಷ್ಟಿದ್ದಾರೆ. ಉತ್ತರಕನ್ನಡದಲ್ಲಿರುವ ಒಟ್ಟು ಕೃಷಿಕರ ಪ್ರಮಾಣವು ಶೇಕಡ 18.34. ಇದರಲ್ಲಿ ಪುರುಷರು ಶೇಕಡ 18.79 ಹಾಗೂ ಮಹಿಳೆಯರು ಶೇಕಡ 17.25ರಷ್ಟಿದ್ದಾರೆ.

**ಕೋಷ್ಟಕ 16**

**ಉತ್ತರ ಕನ್ನಡ ಜಿಲ್ಲೆಯ ಕೃಷಿ ಕೂಲಿಗಳು**

| ಕ್ರಸಂ | | ರಾಜ್ಯ | | ಜಿಲ್ಲೆ | |
|---|---|---|---|---|---|
| 1 | ಒಟ್ಟು | 71,55,963 | 25.67% | 1,16,336 | 19.12% |
| 2 | ಗಂಡು | 32,83,279 | 17.97% | 61,302 | 14.24% |
| 3 | ಹೆಣ್ಣು | 38,72,684 | 40.33% | 55,034 | 30.92% |

**ಆಧಾರ:** 2011ರ ಜನಗಣತಿ ವರದಿ, ಭಾರತ ಸರ್ಕಾರ

2011ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿರುವ ಒಟ್ಟು ಕೃಷಿ ಕೂಲಿಕಾರರು 71,55,963 ಇದರಲ್ಲಿ ಪುರುಷರು 32,83,279 ಹಾಗೂ 38,72,684 ಮಹಿಳೆಯರಿದ್ದಾರೆ. ಉತ್ತರಕನ್ನಡದಲ್ಲಿರುವ ಒಟ್ಟು ಕೃಷಿ ಕೂಲಿಕಾರರು 1,16,336 ಇದರಲ್ಲಿ ಪುರುಷರು 61,302 ಹಾಗೂ 55,034 ಮಹಿಳೆಯರಿದ್ದಾರೆ.

ಶೇಕಡವಾರುಗಳಲ್ಲಿ ಹೇಳುವುದಾದರೆ ರಾಜ್ಯದಲ್ಲಿರುವ ಒಟ್ಟು ಕೃಷಿ ಕೂಲಿಕಾರರು ಶೇಕಡ 25.67ರಷ್ಟು, ಇದರಲ್ಲಿ ಪುರುಷರು 17.97ರಷ್ಟಿದ್ದರೆ ಮಹಿಳಾ ಕೃಷಿಕರು ಶೇಕಡ 40.33

ರಷ್ಟಿದ್ದಾರೆ. ಅಂದರೆ ರಾಜ್ಯದಲ್ಲಿರುವ ಪುರುಷ ಕೂಲಿಕಾರರಿಗಿಂತ ಶೇಕಡ 22.36 ರಷ್ಟು ಹೆಚ್ಚಿನ ಪ್ರಮಾಣದಲ್ಲಿ ಮಹಿಳೆಯರು ಕೃಷಿಯನ್ನು ಅವಲಂಭಿಸಿದ್ದಾರೆ. ಉತ್ತರಕನ್ನಡದಲ್ಲಿರುವ ಒಟ್ಟು ಕೃಷಿಕರ ಪ್ರಮಾಣವು ಶೇಕಡ 19.12, ಇದರಲ್ಲಿ ಪುರುಷರು ಶೇಕಡ 14.24 ಹಾಗೂ ಮಹಿಳೆಯರು ಶೇಕಡ 30.92ರಷ್ಟಿದ್ದಾರೆ. ಶೇಕಡ 16.68ರಷ್ಟು ಮಹಿಳೆಯರು ಪುರುಷ ಕೃಷಿಕೂಲಿಕಾರರಿಗಿಂತ ಹೆಚ್ಚಿನ ಪ್ರಮಾಣದಲ್ಲಿದ್ದಾರೆ.

**ಕೋಷ್ಟಕ 17**

**ಉತ್ತರ ಕನ್ನಡ ಜಿಲ್ಲೆಯ ಗೃಹಕೃತ್ಯದಲ್ಲಿ ತೊಡಗಿದವರು**

| ಕ್ರಸಂ | | ರಾಜ್ಯ | | ಜಿಲ್ಲೆ | |
|---|---|---|---|---|---|
| 1 | ಒಟ್ಟು | 9,13,227 | 3.28% | 9 ,492 | 1.56 |
| 2 | ಗಂಡು | 4,38,983 | 2.4% | 7 ,133 | 1.66 |
| 3 | ಹೆಣ್ಣು | 4,74,244 | 4.94% | 2 ,359 | 1.33 |

**ಆಧಾರ:** 2011ರ ಜನಗಣತಿ ವರದಿ, ಭಾರತ ಸರ್ಕಾರ

ಗೃಹಕೃತ್ಯವನ್ನು ಕೆಲಸವೆಂದು ಪರಿಗಣಿಸುವುದಿಲ್ಲ. ಆ ಕಾರಣಕ್ಕಾಗಿಯೇ ಮನೆಯಲ್ಲಿ ಮಕ್ಕಳ ಪಾಲನೆ ಪೋಷಣೆ, ಅಡುಗೆ ಇತ್ಯಾದಿ ಮಾಡುವ ಮಹಿಳೆಯರನ್ನು ಕೆಲಸಗಾರರೆಂದೇ ಪರಿಗಣಿಸುವುದಿಲ್ಲ. ಆದರೆ ಇತ್ತೀಚೆಗೆ ಇತರೆ ಮನೆಗಳಲ್ಲಿ ಕಸ ಮುಸುರೆ, ಬಟ್ಟೆ ತೊಳೆಯುವ ಇತ್ಯಾದಿ ಕೆಲಸದಲ್ಲಿ ತೊಡಗಿದವರನ್ನು ಗೃಹಕೃತ್ಯದಲ್ಲಿ ತೊಡಗಿದ ಕೂಲಿಕಾರರೆಂದು ಪರಿಗಣಿಸಲಾಗಿದೆ. 2011ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿರುವ ಒಟ್ಟು ಗೃಹಕೃತ್ಯದಲ್ಲಿ ತೊಡಗಿದವರು ಒಟ್ಟು 9,132271 ಜನರಿದ್ದಾರೆಂದು ದಾಖಲಿಸಲಾಗಿದೆ. ಇದರಲ್ಲಿ ಪುರುಷರು 4,38,983 ಹಾಗೂ 4,74,244 ಮಹಿಳೆಯರಿದ್ದಾರೆ. ಉತ್ತರಕನ್ನಡದಲ್ಲಿರುವ ಒಟ್ಟು ಗೃಹಕೃತ್ಯದಲ್ಲಿ ತೊಡಗಿದವರು 9,492 ಇದರಲ್ಲಿ ಪುರುಷರು 7,133 ಹಾಗೂ 2,359 ಮಹಿಳೆಯರಿದ್ದಾರೆ.

ಶೇಕಡವಾರುಗಳಲ್ಲಿ ಹೇಳುವುದಾದರೆ ರಾಜ್ಯದಲ್ಲಿರುವ ಒಟ್ಟು ಗೃಹಕೃತ್ಯದಲ್ಲಿ ತೊಡಗಿದವರು ಶೇಕಡ 3.28 ರಷ್ಟು, ಇದರಲ್ಲಿ ಪುರುಷರು 2.4ರಷ್ಟಿದ್ದರೆ ಮಹಿಳೆಯರು ಶೇಕಡ 4.94 ರಷ್ಟಿದ್ದಾರೆ. ಅಂದರೆ ರಾಜ್ಯದಲ್ಲಿರುವ ಗೃಹಕೃತ್ಯದಲ್ಲಿ ತೊಡಗಿದ ಪುರುಷರಿಗಿಂತ ಮಹಿಳೆಯರು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿ ಮಹಿಳೆಯರಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಪುರುಷರು ಗೃಹಕೃತ್ಯದಲ್ಲಿ ತೊಡಗಿರುವುದು ತಿಳಿದುಬರುತ್ತದೆ.

**ಕೋಷ್ಟಕ 18**

**ಇತರೆ ಕೆಲಸವನ್ನು ನಿರ್ವಹಿಸುವವರು**

| ಕ್ರಸಂ | | ರಾಜ್ಯ | | ಜಿಲ್ಲೆ | |
|---|---|---|---|---|---|
| 1 | ಒಟ್ಟು | 1,32,22,758 | 47.44% | 3,71,117 | 60.99% |
| 2 | ಗಂಡು | 97,94,146 | 53.61% | 2,81,239 | 65.32% |
| 3 | ಹೆಣ್ಣು | 34,28,612 | 35.71% | 89,878 | 50.50% |

**ಆಧಾರ:** 2011ರ ಜನಗಣತಿ ವರದಿ, ಭಾರತ ಸರ್ಕಾರ

ಕೃಷಿಕೂಲಿ ಹಾಗೂ ಗೃಹಕೃತ್ಯಗಳಿಗಿಂತ ಹೊರತಾದ ಇತರೆ ಕೆಲಸಗಳನ್ನು ನಿರ್ವಹಿಸುವವರೂ ಇಲ್ಲಿದ್ದಾರೆ. 2011ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿ ಇತರೆ ಕೆಲಸದಲ್ಲಿ ತೊಡಗಿದವರು ಒಟ್ಟು 1,32,22,758 ಜನರಿದ್ದಾರೆ. ಇದರಲ್ಲಿ ಪುರುಷರು 97,94,146 ಹಾಗೂ 34,28,612 ಮಹಿಳೆಯರಿದ್ದಾರೆ. ಉತ್ತರಕನ್ನಡದಲ್ಲಿರುವ ಒಟ್ಟು ಇತರೆ ಕೆಲಸ ನಿರ್ವಹಿಸುತ್ತಿರುವವರು ಒಟ್ಟು 3,71,117, ಇದರಲ್ಲಿ ಪುರುಷರು 2,81,239 ಹಾಗೂ 89,878 ಮಹಿಳೆಯರಿದ್ದಾರೆ.

ಶೇಕಡವಾರುಗಳಲ್ಲಿ ಹೇಳುವುದಾದರೆ ರಾಜ್ಯದಲ್ಲಿರುವ ಒಟ್ಟು ಇತರೆ ಕೆಲಸದಲ್ಲಿ ತೊಡಗಿದವರು ಶೇಕಡ 47.44ರಷ್ಟು. ಇದರಲ್ಲಿ ಪುರುಷರು 53.61ರಷ್ಟಿದ್ದರೆ ಮಹಿಳೆಯರು ಶೇಕಡ 35.71 ರಷ್ಟಿದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿ ಇತರೆ ಕೆಲಸದಲ್ಲಿ ತೊಡಗಿದವರು ಶೇಕಡ 60.99ರಷ್ಟು. ಇದರಲ್ಲಿ ಪುರುಷರು 65.32ರಷ್ಟಿದ್ದರೆ ಮಹಿಳೆಯರು ಶೇಕಡ 50.50 ರಷ್ಟಿದ್ದಾರೆ. ರಾಜ್ಯದಲ್ಲಿ ಇತರೆ ಕೆಲಸದಲ್ಲಿ ತೊಡಗಿದ ಪುರುಷರಿಗಿಂತ ಮಹಿಳೆಯರು ಕಡಿಮೆ ಪ್ರಮಾಣದಲ್ಲಿದ್ದಾರೆ. ಉತ್ತರಕನ್ನಡ ಜಿಲ್ಲೆಯಲ್ಲಿಯೂ ಇತರೆ ಕೆಲಸದಲ್ಲಿ ತೊಡಗಿದ ಪುರುಷರಿಗಿಂತ ಮಹಿಳೆಯರ ಪ್ರಮಾಣ ಕಡಿಮೆ ಇರುವುದು ಕಂಡುಬರುತ್ತದೆ.

ಡಾ. ಹಿ.ಚಿ. ಬೋರಲಿಂಗಯ್ಯ ಅವರು ಕುಣಬಿಯರು ಎಂಬ ಕೃತಿಯಲ್ಲಿ ಉತ್ತರಕನ್ನಡ ಒಂದು ಟಿಪ್ಪಣಿ ಅಧ್ಯಯನದಲ್ಲಿ ಉತ್ತರಕನ್ನಡದ ಭೌಗೋಳಿಕ ಮತ್ತು ನೈಸರ್ಗಿಕ ಸಂಪತ್ತಿನ ವಿವರಗಳನ್ನು ಉಲ್ಲೇಖಿಸುತ್ತಾರೆ. ಇದು ಕರ್ನಾಟಕ ಪರಿಸರ ಪರಿಸ್ಥಿತಿ ಅಧ್ಯಯನ ವರದಿಯಲ್ಲಿನ ವಿವರಣೆಯಾಗಿದೆ. ಅದು ಈ ಕೆಳಗಿನಂತಿದೆ. "ಕರ್ನಾಟಕದ ಉತ್ತರದ ತುತ್ತತುದಿಯ ಕರಾವಳಿ ಜಿಲ್ಲೆಯಾದ ಉತ್ತರಕನ್ನಡ, ಗೋವಾದ ದಕ್ಷಿಣಕ್ಕೆ, ಧಾರವಾಡದ ಪೂರ್ವಕ್ಕೆ ಹಾಗೂ ದಕ್ಷಿಣಕನ್ನಡದ ಉತ್ತರಕ್ಕೆ, ಉತ್ತರ ಅಕ್ಷಾಂಶ 13".55' ಮತ್ತು 15".31' ಹಾಗೂ ಪೂರ್ವರೇಖಾಂಶ 74".09'

ಮತ್ತು 75".10ರ ನಡುವೆ ಇದೆ". ನವಿರಾಗಿ ಏರಿಳಿಯುವ ಈ ಪ್ರಾಂತದ ಗುಡ್ಡಗಳು ಪೂರ್ವಕ್ಕೆ 500 ಮೀಟರ್ ಎತ್ತರದ ದಕ್ಷಿಣ ಪ್ರಸ್ಥಭೂಮಿಯೊಂದಿಗೆ ವಿಲೀನವಾಗುತ್ತವೆ. ಗುಡ್ಡಗಾಡುಗಳ ಶೃಂಗಭಾಗ 500 ಮೀಟರ್‌ಗಿಂತ ಎತ್ತರಕ್ಕೇರುತ್ತವೆ. ಗುಡ್ಡಗಳು ಸಮುದ್ರದ ವರೆಗೂ ಚಾಚಿಕೊಂಡಿದ್ದು, ಕರಾವಳಿಯ ಬಳಿ ಚಿಕ್ಕ ಪಟ್ಟಿಯೊಂದಕ್ಕೆ ಮಾತ್ರ ಅವಕಾಶವಿತ್ತಿವೆ. ಒಟ್ಟು 11 ತಾಲೂಕುಗಳು ಹಾಗೂ 13,038 ಹಳ್ಳಿಗಳಿರುವ ಈ ಜಿಲ್ಲೆಯ ವಿಸ್ತೀರ್ಣ 10,220 ಚದರ ಕಿಲೋಮೀಟರ್‌ಗಳಷ್ಟಿದೆ. ಭೌಗೋಳಿಕವಾಗಿ ಈ ಜಿಲ್ಲೆಗೆ ಮೂರು ವಲಯಗಳಿವೆ; ಕಾರವಾರ, ಅಂಕೋಲಾ, ಕುಮಟಾ, ಹೊನ್ನಾವರ ಮತ್ತು ಭಟ್ಕಳ ತಾಲೂಕುಗಳ ಕರಾವಳಿ ವಲಯ ಸೂಫಾ, ಯಲ್ಲಾಪುರ, ಶಿರಸಿ ಹಾಗೂ ಸಿದ್ಧಾಪುರ ತಾಲೂಕುಗಳ ಶೃಂಗ ವಲಯ ಹಾಗೂ ಹಳಿಯಾಳ ಮತ್ತು ಮುಂಡಗೋಡ ತಾಲೂಕುಗಳ ಮೈದಾನ ವಲಯ.

3300 ಚದರ ಕಿಲೋಮೀಟರ್ ವಿಸ್ತೀರ್ಣದ ಕರಾವಳಿ ಪಟ್ಟಿಯಲ್ಲಿ ವರ್ಷಕ್ಕೆ 350 ಸೆಂಟಿಮೀಟರ್ ಮಳೆ ಬೀಳುತ್ತದೆ. ಈ ಪಟ್ಟಿಯ ಶೇ. 76% ರಷ್ಟು ಭೂಭಾಗ ಅರಣ್ಯ ಇಲಾಖೆಯ ವಶದಲ್ಲಿದೆ. ಶೇ. 2.84ರಷ್ಟು ನೀರಾವರಿ ಕ್ಷೇತ್ರವಿರುವ ಇಲ್ಲಿ ಶೇ. 12.3ರಷ್ಟು ಭೂಮಿಯನ್ನು ಸಾಗುವಳಿ ಮಾಡಲಾಗುತ್ತದೆ. ಭತ್ತ, ತೆಂಗು ಮತ್ತು ಶೇಂಗಾ ಇಲ್ಲಿಯ ಮುಖ್ಯ ಬೆಳೆಯಾಗಿದ್ದು ಇಲ್ಲಿ 1.8 ಲಕ್ಷ ದನಕರುಗಳೇ ಪ್ರಮುಖ ಸಾಕು ಪ್ರಾಣಿಗಳು. ಮೀನುಗಾರಿಕೆ ಸಮೃದ್ಧವಾಗಿವೆ. ಕಾರವಾರ ಮುಖ್ಯಪಟ್ಟಣವಾಗಿರುವ ಈ ಕರಾವಳಿ ಪಟ್ಟಿಯೇ ಜಿಲ್ಲೆಯ ಅತ್ಯಂತ ಹೆಚ್ಚಿನ ಜನಸಾಂದ್ರತೆ(ಪ್ರತಿ ಚದರ ಕಿ.ಮೀ.ಗೆ 171) ಇರುವ ಪ್ರದೇಶವಾಗಿದೆ. ಕಾರವಾರದ ಬಳಿ ಒಂದು ಕಾಸ್ಟಿಕ್ ಸೋಡಾ ಫ್ಯಾಕ್ಟರಿ ಹಾಗೂ ಕರಾವಳಿ ತೀರದುದ್ದಕ್ಕೂ ಅನೇಕ ಇಟ್ಟಿಗೆ ಮತ್ತು ಹೆಂಚಿನ ಕಾರ್ಖಾನೆಗಳಿವೆ. ಅಲ್ಲಲ್ಲಿ ಸಿಂಪಿ, ಮೀನು–ಶಿಗಡಿಗಳನ್ನು ಡಬ್ಬಿ ತುಂಬುವ ಹಾಗೂ ದೈತ್ಯ ಶೇಖರಣೆ ಮಾಡುವ ಫ್ಯಾಕ್ಟರಿಗಳೂ ಇವೆ. ಕರಾವಳಿ ಪಟ್ಟಿಯಿಂದ ಸುಶಿಕ್ಷಿತರು ಭಾರೀ ಪ್ರಮಾಣದಲ್ಲಿ ನಗರಗಳಿಗೆ ವಲಸೆ ಹೋಗುತ್ತಿದ್ದು, ವರ್ಷದ ಕೆಲವು ಕಾಲದಲ್ಲಿ ಕೂಲಿಕಾರರು ಘಟ್ಟದ ಮೇಲೆ ರೈತಾಪಿ ಕೆಲಸಕ್ಕೆಂದು ತಾತ್ಕಾಲಿಕವಾಗಿ ವಲಸೆ ಬರುತ್ತಾರೆ.

ರಾಷ್ಟ್ರೀಯ ದೂರ ಸಂವೇದಿ ನಿಗಮ (1983, 1985) ಹಾಗೂ ದಿ ಫ್ರೆಂಚ್ ಇನ್‌ಸ್ಟಿಟ್ಯೂಟ್(ಬೆಲ್ಲನ್ 1985) ಇವರು ವಿಶ್ಲೇಷಿಸಿರುವ ದೂರ ಸಂವೇದಿ ಚಿತ್ರಗಳಲ್ಲಿ ಉತ್ತರ ಕನ್ನಡ ಜಿಲ್ಲೆ ಹೇಗೆ ಕಾಣುತ್ತದೆಂಬುದನ್ನು ಡಾ. ಹಿ.ಚಿ. ಬೋರಲಿಂಗಯ್ಯ ಅವರು ಅಧ್ಯಯನ ಮಾಡಿದ್ದಾರೆ. ಈ ಅಧ್ಯಯನದ ವಿಶ್ಲೇಷಣೆಯ ಪ್ರಕಾರ ಒಟ್ಟು 7100 ಚ.ಕಿ.ಮೀ. ಪ್ರದೇಶದಲ್ಲಿ ದುಸ್ಥಿತಿಯ ವಿವಿಧ ಅವಸ್ಥೆಗಳಲ್ಲಿರುವ ಅರಣ್ಯ ಮತ್ತು ಅಡಿಕೆ ತೆಂಗುಗಳಂಥ

ತೋಟದ ಬೆಳೆಗಳಿವೆ. ಇದರಲ್ಲಿ ತೋಟದ ಬೆಳೆಗಳ 130 ಚ.ಕಿ.ಮೀ. ಪ್ರದೇಶ ಈಗಲೂ ಅರಣ್ಯ ಇಲಾಖೆಗೆ ಒಳಪಟ್ಟಿದ್ದಾಗಿದೆ. ಇದರ ಬಹಳಷ್ಟು ಭಾಗ ಕನಿಷ್ಠ ಪಕ್ಷ ಗಿಡಗಂಟಿಗಳಿಂದಾದರೂ ಆವೃತವಾಗಿದೆ. ಇದೇ ದೂರ ಸಂವೇದಿ ಚಿತ್ರಣದಲ್ಲಿ 200 ಚ.ಕಿ.ಮೀ. ಕಲ್ಲು ಮಣ್ಣುಗಳ ಖಾಲಿ ಪ್ರದೇಶವಾಗಿದ್ದು, ಇನ್ನುಳಿದ 1790 ಚ.ಕಿ.ಮೀ. ಭಾಗ ಕಂದಾಯ ಇಲಾಖೆಯ ದಾಖಲೆಗಳ ಪ್ರಕಾರ ಬೇಸಾಯ ಯೋಗ್ಯ ಬಂಜರು ಭೂಮಿ ಇಲ್ಲವೆ ನಿರುಪಯೋಗಿ ಪಾಳು ಭೂಮಿಯಾಗಿದೆ. ಡಾ. ಹಿ.ಚಿ. ಬೋರಲಿಂಗಯ್ಯ ಅವರು ಈ ವರದಿಯನ್ನು ಆಧರಿಸಿ ಉತ್ತರಕನ್ನಡದ ಭೌಗೋಳಿಕತೆಯ ಚಿತ್ರಣವನ್ನು ವಿವರಿಸುವುದರ ಜೊತೆಗೆ ಸಾಮಾಜಿಕತೆಯನ್ನು ವಿವರಿಸಿದ್ದಾರೆ.

**ಅಡಿ ಟಿಪ್ಪಣಿಗಳು**

1. Kincaid C A, Rao Bahadue D B Parasnis, The History of Maratha People, Vol 1, Humpherey Milford, Oxford University Press, London, 1918
2. Russel, R. V, Hiralal, Tribes and Castes of the Central, Provinces of India. Vol. p. 172. IV, Cosmo Pub. Delhi, 1916 (Reprint 1975
3. Vijay M.Gawas, Mahesh Velip, TRIBES OF GOA: THEIR INSTITUTION AND MOVEMENT, Scholarly Research journal for Interdisciplinary Studies, Centre for the Study of Social Exclusion and Inclusive Policy,Goa University. 2014
4. ವಿಠಲ್ ಭಂಡಾರಿ, ಯಮುನಾ ಗಾಂವ್ಕರ್, ಜೋಯ್ಡಾ ಕಾಡೊಳಗಿನ ಒಡಲು, ಪು 26, 2017
5. ಅದೇ ಪು 28
6. Mascarenhas Antonia, 'The Kudubies', Goa from Pre-historic Times, Post Box No. 7, Vasco, 1987.
7. Fuch Stephen, 'The Aboriginal Tribes of India', p. 246, 1973
8. Havanur. L G, Karnataka Backward Classes Commission (Constituted under the Commissions of Inquiry Act, 1952) (Central Act 60 of 1952) Report, (In Four Volumes) Volume I, Part I, Main Report, Government. Of Karnataka, 1975

9. Ravindranath Rao Y., 'Tribal Tradition and Change – A Study of Kudubis of South India', Managlore Publication, Managlore 2003.

10. ಬೋರಲಿಂಗಯ್ಯ, ಹಿ.ಚಿ, ಕುಣಬಿಯರು–ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ 2010.)

11. ರಾಮಕೃಷ್ಣ, ಆರ್, ಕರ್ನಾಟಕದ ಬುಡಕಟ್ಟುಗಳು–ಪ್ರಸಾರಾಂಗ, ಮೈಸೂರು, ವಿಶ್ವವಿದ್ಯಾಲಯ, 2007.)

12. ಮೋಹನ್, ಎಸ್, ಮರಾಠಿ ನಾಯ್ಕರು, ಅಂಶು ಪ್ರಕಾಶನ, ಹೊಸಪೇಟೆ, 2008.)

13. ಗೆಝೆಟೀಯರ್ ಆಫ್ ಇಂಡಿಯ, 1985, ಪು. 1

14. Suryanath U. Kamath, Gazetteer of India, Karnataka State Gazetteer, Uttara Kannada District, pp. 245-246, 1985.

15. Ibid 436-438

16. ಉತ್ತರ ಕನ್ನಡ ಜಿಲ್ಲೆಯ ಅಂಕಿ–ಅಂಶಗಳ ನೋಟ, ಪುಟ 46–47, 2008–09.

17. ಮೊಹನ್‌ಕೃಷ್ಣ ರೈ, ಕೆನರಾದ ವಿಭಜನೆ, ಹತ್ತಿ ರಾಜಕೀಯದ ವಿಶ್ಲೇಷಣೆ, ಪು. 24, 2010,

18 Census of India-2011, District Population Booklet, Uttara Kannada, Directorate of Census Operations, Karnataka., P 25, 2015

19. Ibid 26-27

20. Ibid 29

21. Ibid 16

# ಅಧ್ಯಾಯ: ಮೂರು

# ಕುಂಬ್ರಿ ಮರಾಠಿಗರ ಸಾಮಾಜಿಕ ಸ್ಥಿತಿಗತಿಗಳು

1. ಕುಂಬ್ರಿ ಮರಾಠಿಗರ ಸಾಮಾಜಿಕ ಸಂಕಥನ
2. ಕುಂಬ್ರಿ ಮರಾಠಿಗರ ಕುಟುಂಬ ವ್ಯವಸ್ಥೆ
3. ಕುಂಬ್ರಿ ಮರಾಠಿಗರಲ್ಲಿ ಲಿಂಗಸಂಬಂಧಗಳು
4. ಕುಂಬ್ರಿ ಮರಾಠಿ ಸಮುದಾಯದ ಒಳಾಡಳಿತ ಮತ್ತು ಬಳಿಗಳು
5. ಕುಂಬ್ರಿ ಮರಾಠಿ ಸಮುದಾಯದ ಶೈಕ್ಷಣಿಕ ಸ್ಥಿತಿಗತಿ ಮತ್ತು ಆರೋಗ್ಯ

## ಅಧ್ಯಾಯ: ಮೂರು

# ಕುಂಬ್ರಿ ಮರಾಠಿಗರ ಸಾಮಾಜಿಕ ಸ್ಥಿತಿಗತಿಗಳು

### 1. ಕುಂಬ್ರಿ ಮರಾಠಿಗರ ಸಾಮಾಜಿಕ ಸಂಕಥನ

**ಪೀಠಿಕೆ**

ಬುಡಕಟ್ಟು ಸಮುದಾಯಗಳ ಸಾಮಾಜಿಕ ಸಂರಚನೆಯ ಕುರಿತು ನಡೆದ ಅಧ್ಯಯನಗಳು ಅರ್ಧ ಸತ್ಯಗಳನ್ನು ಮುಂದು ಮಾಡುತ್ತ ಬಂದಿವೆ. ಬುಡಕಟ್ಟು ಸಮುದಾಯಗಳನ್ನು ಅಧ್ಯಯನ ಮಾಡಿದ ಸಂಶೋಧಕರು ಎಷ್ಟೋ ಸಲ ಈ ಸಮುದಾಯಗಳ ಮೇಲ್‌ಸ್ತರದ ವಿವರಗಳನ್ನೇ ಅತ್ಯಂತಿಕ ಎಂದು ಭಾವಿಸಿದರು. ಇವರ ಶೈಕ್ಷಣಿಕ ರೋಮಾಂಚನಗಳು ಇರದೇ ಇರುವ ಅನೇಕ ಸಂಗತಿಗಳನ್ನು ಇವೇ ಎಂದು ತಪ್ಪಾಗಿ ಭಾವಿಸುವಂತೆ ಮಾಡಿವೆ. ಅದರಲ್ಲೂ ಬುಡಕಟ್ಟು ಸಮುದಾಯಗಳ ಸಾಮಾಜಿಕ ಸಂರಚನೆಯ ಕುರಿತಂತೆ ವಿದ್ವಾಂಸರ ಗ್ರಹಿಕೆಗಳು ಅನೇಕ ಮೂಢನಂಬಿಕೆಗಳನ್ನು ಪ್ರಚಲಿತಗೊಳಿಸಿವೆ. ನಮಗೆ ತೀರಾ ಅಪರಿಚಿತವಿರುವ, ಮುಖ್ಯವಾಹಿನಿಗೆ ಬಹುತೇಕ ತೆರೆದುಕೊಳ್ಳದ ಆದಿವಾಸಿ ಸಮುದಾಯಗಳ ಕುರಿತ ಬೀಸು ಹೇಳಿಕೆಗಳು ಆಯಾ ಸಮುದಾಯಗಳನ್ನು ಅರ್ಥ ಮಾಡಿಕೊಳ್ಳಲು ತೊಡಕುಂಟು ಮಾಡುತ್ತವೆ. ಅಂತಹ ಒಂದು ಅಪರಿಚಿತ ಬುಡಕಟ್ಟಾದ ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸಂರಚನೆಯನ್ನು ಈ ಅಧ್ಯಾಯದಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

**ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸಂರಚನೆ**

ಪಶ್ಚಿಮ ಘಟ್ಟಗಳ ದಟ್ಟಾರಣ್ಯದ ಕಡಿದಾದ ಕೊಳ್ಳಗಳು ಹಾಗೂ ಇಳಿಜಾರು ಪ್ರದೇಶಗಳಲ್ಲಿ ನೆಲೆ ನಿಂತು ಬೇಸಾಯ, ಪಶು ಸಂಗೋಪನೆ, ಅರಣ್ಯ ಉತ್ಪನ್ನಗಳ ಸಂಗ್ರಹದೊಡನೆ ಬದುಕು ಕಟ್ಟಿಕೊಂಡ ಕುಂಬ್ರಿ ಮರಾಠಿ ಸಮುದಾಯ ನಾಗರಿಕ ಸಮಾಜದಿಂದ ದೂರವೇ ಇದ್ದು

ಬದುಕುತ್ತಿದೆ. ದಟ್ಟ ಕಾಡುಗಳ ಮಧ್ಯೆ ನೆಲೆನಿಂತಿರುವ ಈ ಸಮುದಾಯ ಸಾಮಾಜಿಕವಾಗಿ ತನ್ನ ಅನನ್ಯತೆಗಳನ್ನು ಇನ್ನೂ ಉಳಿಸಿಕೊಂಡು ಬಂದಿದೆ. ಪಶ್ಚಿಮ ಘಟ್ಟ ಕಾಡುಗಳಲ್ಲಿಯೇ ನೆಲೆನಿಂತ ಕಾರಣಕ್ಕಾಗಿ ಈ ಸಮುದಾಯದ ಸಾಮಾಜಿಕ ಚಹರೆಗಳು ಉಳಿದುಕೊಂಡು ಬಂದಿವೆಯೇ? ಹಲವಾರು ಸಮುದಾಯಗಳು ಆಧುನಿಕತೆಯ ಪ್ರಭಾವಕ್ಕೊಳಗಾಗಿ ತಮ್ಮ ಮೂಲ ಚರ್ಯೆಯನ್ನು ಬದಲಿಸಿಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಕುಂಬ್ರಿ ಮರಾಠಿಗರು ಏಕೆ ಇನ್ನೂ ಕಾಡು ವಾಸವನ್ನೇ ಅವಲಂಬಿಸಿದ್ದಾರೆ? ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರ ಹುಡುಕುತ್ತಾ ಉತ್ತರ ಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ ಕಾಣಸಿಗುವ ಈ ಸಮುದಾಯದ ಸ್ಥಿತಿಗತಿಗಳನ್ನು ಅರ್ಥೈಸುವ ಅವರ ಸಾಮಾಜಿಕ ಸಂಕಥನವನ್ನು ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಈ ಸಮುದಾಯವು ತನ್ನದೇ ಆದ ಪ್ರತ್ಯೇಕ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ವ್ಯವಸ್ಥೆಯನ್ನು ಹೊಂದಿದ್ದು ವಿವಿಧ ಬುಡಕಟ್ಟು ಸಮುದಾಯಗಳಲ್ಲಿರುವಂತೆ ಒಳಾಡಳಿತ ವ್ಯವಸ್ಥೆಯನ್ನು ಹೊಂದಿರುವ, ಕಾಡುಗಳ ಮಧ್ಯೆ ಉಳಿದು ಬದುಕನ್ನು ನಡೆಸುತ್ತಿರುವ ಸಮುದಾಯವಾಗಿರುತ್ತದೆ.

ಮರಾಠಿ, ಕೊಂಕಣಿ, ಕನ್ನಡ ಮಿಶ್ರಿತ ಮರಾಠಿ ಮಾತನಾಡುವ ಇವರು ಜೀವನಾಧಾರಕ್ಕಾಗಿ 'ಕುಮರಿ' ಬೇಸಾಯವನ್ನು, ಪಶುಪಾಲನೆಯನ್ನು ಹಾಗೂ ಅರಣ್ಯದ ಕಿರುಉತ್ಪನ್ನಗಳ ಸಂಗ್ರಹಣೆಯನ್ನು ಅವಲಂಬಿಸಿಕೊಂಡು ಬಂದಿದ್ದು ಇತ್ತಿತ್ತಲಾಗಿ ಜಾಗತೀಕರಣ, ಆಧುನೀಕರಣ, ಕೈಗಾರಿಕೀಕರಣದ ಪರಿಣಾಮವಾಗಿ ಬಂದ ವಿವಿಧ ಯೋಜನೆಗಳು ಹಾಗೂ ಅರಣ್ಯ ಕಾಯ್ದೆಗಳು ಕುಂಬ್ರಿ ಮರಾಠಿಗರ ಮೇಲೆ ಪರಿಣಾಮ ಬೀರಿದ್ದರಿಂದ ಬದುಕಿಗಾಗಿ ಕೃಷಿ, ಪಶುಪಾಲನೆ, ಅರಣ್ಯೇತರ ಸಣ್ಣ ಪುಟ್ಟ ವ್ಯಾಪಾರ, ಕೂಲಿ ಇತ್ಯಾದಿಗಳನ್ನು ಈ ಸಮುದಾಯ ಅವಲಂಬಿಸಿದೆ. ವಿಶೇಷವಾಗಿ ಕುಂಬ್ರಿ ಮರಾಠಿಗರು ಪ್ರಕೃತಿ ಆರಾಧಕರಾಗಿದ್ದು ಇವರ ಭಾಷೆ, ದೈವಾರಾಧನೆ, ಆಹಾರ ಕ್ರಮ, ಉಡುಗೆ ತೊಡುಗೆಗಳು, ಜೀವನ ಶೈಲಿಯನ್ನು ಗಮನಿಸಿದಾಗ ಇವರು ಗೋವಾ, ಮಹಾರಾಷ್ಟ್ರ, ಗುಜರಾತ ಪ್ರದೇಶಗಳಿಂದ ರಕ್ಷಣೆ ಮತ್ತು ಆಹಾರಕ್ಕಾಗಿ ಕರ್ನಾಟಕದ ಕರಾವಳಿ ಹಾಗೂ ಪಶ್ಚಿಮ ಘಟ್ಟಗಳ ಕಡೆ ವಲಸೆ ಬಂದಂತೆ ಕಂಡು ಬರುತ್ತದೆ. ಏಕೆಂದರೆ ಈ ಸಮುದಾಯಗಳಲ್ಲಿ ಕರ್ನಾಟಕ ಹಾಗೂ ರತ್ನಗಿರಿ ಮರಾಠಿಗರ ನಡುವೆ ವೈವಾಹಿಕ ಸಂಬಂಧಗಳು ನಡೆದಿರುವ ಬಗ್ಗೆ ಉದಾಹರಣೆಗಳಿವೆ. ಇದು ಕೇವಲ ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸಂರಚನೆ ಮಾತ್ರವಲ್ಲ. ಇದೆ ಬಗೆಯ ಸಾಮಾಜಿಕ ಸ್ಥಿತಿಗತಿಗಳುಳ್ಳ ಅನೇಕ ಸಮುದಾಯಗಳು ಉತ್ತರ ಕನ್ನಡ ಜಿಲ್ಲೆಯಲ್ಲಿವೆ. ಇಂತಹ ಕೆಳಜಾತಿ ಮತ್ತು ಆದಿವಾಸಿ ಸಮುದಾಯಗಳ ಸಾಮಾಜಿಕ ಸಂರಚನೆಯನ್ನು ಕುರಿತು ಅಧ್ಯಯನ ಮಾಡುವಾಗ ಸಾಮಾನ್ಯವಾಗಿ ಎರಡು ಮುಖ್ಯವಾದ ಸಂಗತಿಗಳು ಪ್ರಧಾನವಾಗಿ ಚರ್ಚಿಸಲ್ಪಡುತ್ತವೆ.

1. ಸಾಮಾನ್ಯವಾಗಿ ಕೆಳಜಾತಿ ಮತ್ತು ಆದಿವಾಸಿ ಸಮುದಾಯಗಳಲ್ಲಿ ಸ್ತ್ರೀ-ಪುರುಷರಿಬ್ಬರೂ ದುಡಿಯುತ್ತಾರೆ. ಕುಟುಂಬ ನಿರ್ವಹಣೆ ಮತ್ತು ಸಾಮಾಜಿಕಾಧಿಕಾರದ ಪ್ರಶ್ನೆ ಬಂದಾಗ ಬೇರೆ ಸಮಾಜದ ಮಹಿಳೆಗಿಂತ ಕೆಳಜಾತಿ ಮತ್ತು ಆದಿವಾಸಿ ಸಮುದಾಯದ ಮಹಿಳೆ ಹೆಚ್ಚು ಸ್ವತಂತ್ರಳು. ಜೊತೆಗೆ ಹೆಣ್ಣು ಗಂಡುಗಳ ಲೈಂಗಿಕ ಸಂಬಂಧಗಳು ಕೆಳಜಾತಿ ಮತ್ತು ಆದಿವಾಸಿಗಳಲ್ಲಿ ಅತ್ಯಂತ ಸಡಿಲವಾಗಿರುತ್ತವೆ. ಲಿಂಗಸಂಬಂಧಗಳಲ್ಲಿ ಈ ಸಮುದಾಯಗಳು ಹೆಚ್ಚು ಅಸಮಾನತೆಯನ್ನು ಆಚರಿಸುವುದಿಲ್ಲ.

2. ಕೆಳಜಾತಿ ಮತ್ತು ಆದಿವಾಸಿ ಸಮಾಜಗಳಲ್ಲಿ ಪಾರಂಪರಿವಾಗಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಅಸ್ತಿತ್ವದಲ್ಲಿರುತ್ತದೆ. ಮಹಿಳಾ ಪರವಾದ ಆಶಯಗಳು ಈ ಸಮುದಾಯಗಳ ಸಾಮಾಜಿಕ ವ್ಯವಸ್ಥೆಯ ಕುರಿತ ಆಶಯಗಳ ಅಂತರ್ಗತವಾಗಿರುತ್ತವೆ. ಈ ಆಶಯಗಳು ಈ ಸಮುದಾಯಗಳ ಸಾಹಿತ್ಯ, ದೈನಂದಿನ ಬದುಕು, ಮತ್ತು ಆಚರಣಗೆಳಲ್ಲಿ ಸಂಕೇತದ ಮಟ್ಟದಲ್ಲಿ ಪ್ರಚಲಿತದಲ್ಲಿರುತ್ತವೆ. ಇದರಿಂದಾಗಿ ಈ ಸಮುದಾಯಗಳಲ್ಲಿ ಮಾತೃಪ್ರಧಾನತೆಯು ವರ್ತಮಾನದಲ್ಲಿ ಸಾಂಕೇತಿಕವಾಗಿಯಾದರೂ ಆಚರಣೆಯಲ್ಲಿದೆ.

ಈ ಎರಡು ಅಂಶಗಳನ್ನು ಮುಖ್ಯವಾಗಿಟ್ಟುಕೊಂಡು ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸಂರಚನೆಯನ್ನು ಗಮನಿಸೋಣ.

ಆದಿವಾಸಿಗಳ ಸಾಮಾಜಿಕ ಸಂರಚನೆಯನ್ನು ವಿಶ್ಲೇಷಿಸುವಾಗ ಬಹುಪಾಲು ಅಧ್ಯಯನಕಾರರು ಸ್ಥೂಲವಾಗಿ ಮೇಲಿನ ಎರಡು ಸಂಗತಿಗಳನ್ನು ಪದೇ ಪದೇ ಚರ್ಚಿಸಿರುವುದುಂಟು. ಈ ಸಂಬಂಧದ ಚರ್ಚೆಗೆ ಅನೇಕ ಅಧ್ಯಯನಕಾರರು ಕೆಳಜಾತಿ ಮತ್ತು ಆದಿವಾಸಿ ಸಮುದಾಯಗಳ ಆಚರಣೆ ಮತ್ತು ಮೌಖಿಕ ಸಾಹಿತ್ಯಗಳನ್ನು ಉದಾಹರಿಸುತ್ತಾರೆ. ಮೇಲೆ ಉಲ್ಲೇಖಿಸಲ್ಪಟ್ಟಿರುವ ಎರಡು ಬಹು ಚರ್ಚಿತ ಸಂಗತಿಗಳನ್ನು ಸೂಕ್ಷ್ಮವಾಗಿ ಗಮನಿಸುವ ಅವಶ್ಯಕತೆ ಇದೆ. ಮೊದಲನೆಯದಾಗಿ, ಆದಿವಾಸಿ ಮತ್ತು ಕೆಳಜಾತಿ ಸಮುದಾಯಗಳಲ್ಲಿ ಹೆಣ್ಣು ಗಂಡಿನ ಸಾಮಾಜಿಕ ಮತ್ತು ಕೌಟುಂಬಿಕ ಸಂಬಂಧಗಳು ಸರಳವಾಗಿರುವುದಿಲ್ಲ. ಅವು ಅತ್ಯಂತ ಸಂಕೀರ್ಣವೂ ಮತ್ತು ಜಟಿಲವೂ ಆಗಿರುತ್ತವೆ. ಈ ಸಮುದಾಯಗಳಲ್ಲಿ ಶೋಷಕ ಮತ್ತು ಶೋಷಿತರ ನಡುವೆ ನಿತ್ಯ ಮುಖಾಮುಖಿ ಇದ್ದೇ ಇರುತ್ತದೆ. ಅದು ಜೀತಕ್ಕಿಟ್ಟುಕೊಂಡಿರುವ ಜಮೀನ್ದಾರ, ಕೂಲಿ ಕೊಡುವ ಧಣಿ ಮತ್ತು ಬೆದರಿಸುತ್ತಲೇ ಹೆಣ್ಣುಗಳಿಗೆ ಹಪಹಪಿಸುವ ಸೆರೇಗಾರರಿಬಹುದು. ಕೆಳಜಾತಿ ಮತ್ತು ಆದಿವಾಸಿ ಮಹಿಳೆಯರು ದಿನನಿತ್ಯ ಈ ಜಟಿಲ ಸಂದಿಗ್ಧತೆಗಳನ್ನು ಮುಖಾಮುಖಿ ಮಾಡಲೇ ಬೇಕು. ಇದರ ಜೊತೆಗೆ ಮನೆಯಲ್ಲಿ ಸಾಮಾನ್ಯವಾಗಿ

ಕುಡಿದು ಬರುವ ಮತ್ತು ದಿನದ ಕೂಲಿಯನ್ನು ಮತ್ತೆ ಮತ್ತೆ ತನ್ನ ಚಟಕ್ಕೆ ವಿನಿಯೋಗಿಸಲು ಹಾತೊರೆಯುವ ಗಂಡ ಈ ಎಲ್ಲರನ್ನು ಕೆಳಜಾತಿ ಮತ್ತು ಆದಿವಾಸಿ ಮಹಿಳೆಯರು ದಿನನಿತ್ಯ ಅನುಸಂಧಾನ ಮಾಡಬೇಕಾಗುತ್ತದೆ. ಹಸಿದುಕೊಂಡೇ ತನ್ನೊಡನೆ ಬಿಸಿಲು ಮಳೆಗಳಲ್ಲೂ ದುಡಿವ ತನ್ನ ಮಕ್ಕಳೊಂದಿಗೆ ಅವರ ಭವಿಷ್ಯವನ್ನು ಕುರಿತು ಆತಂಕಮಯ ಸಂದಿಗ್ಧತೆಗಳನ್ನು ಎದುರಿಸುತ್ತಾ ಈ ಸಮುದಾಯಗಳ ಮಹಿಳೆಯರು ನಿತ್ಯ ವರ್ತಮಾನವನ್ನು ಎದುರಿಸುತ್ತಾರೆ. ಅಲ್ಲಿ ಮದುವೆಯಾದ ಗಂಡ, ಜೀತಕ್ಕಿಟ್ಟುಕೊಂಡ ಒಡೆಯ, ಕೂಲಿ ಕೊಡುವ ಧಣಿ ಮತ್ತು ರಣಹದ್ದಿನಂತೆ ಕಾಯುತ್ತಾ ಕುಳಿತುಕೊಳ್ಳುವ ಸೆರೇಗಾರ ಎಲ್ಲರೂ ಸಮಾನ ಶೋಷಕರೇ ಆಗಿರುತ್ತಾರೆ. ಈ ಸಮುದಾಯಗಳ ಮಹಿಳೆಗೆ ಶೋಷಣೆಗೊಳಪಡುವುದು ನಿತ್ಯದ ಬದುಕಿನ ಒಂದು ಭಾಗವಾಗಿದೆ. ಈ ಶೋಷಣೆ ಅವಳಿಗೆ ನಿತ್ಯ ಕೊರಳಿಗೆ ಸುತ್ತಿಕೊಂಡೆ ಇರುವ ಶಾಶ್ವತ ಉರುಳು. ಬದುಕು ಆಯಾ ತಪ್ಪಿದರೆ ಸುತ್ತಿಕೊಂಡಿರುವ ಉರುಳ ಮತ್ತು ಅವಳ ಕಾಲಡಿಯ ಪ್ರಪಾತಗಳೆರಡೂ ಅವಳ ಉಸಿರನ್ನು ನುಂಗಿ ಹಾಕಲು ಹಸಿವಿನಿಂದ ಕಾದಿರುತ್ತವೆ.

ಕುಂಬ್ರಿ ಮರಾಠಿಗರು, ಸಹ್ಯಾದ್ರಿಯ ಕಣಿವೆ ಮತ್ತು ಕರಾವಳಿಯ ಅಗಮ್ಯ ಕಾಡುಗಳಲ್ಲಿ ವಾಸಿಸುತ್ತಿದ್ದರು ಸಹ 'ಮುಖ್ಯವಾಹಿನಿ' ಎಂದು ಕರೆಯಲ್ಪಡುವ ಸಮಾಜದಿಂದ ದೂರ ಉಳಿದಿಲ್ಲ. ತಮ್ಮ ಪಾರಂಪರಿಕ ಉಡುಗೆ-ತೊಡುಗೆ, ಜೀವನ ವಿಧಾನಗಳಲ್ಲಿ ಕಾಣಿಸಿಕೊಂಡರೂ ಸಹ ಕುಂಬ್ರಿ ಮರಾಠಿಗರಲ್ಲಿ 'ಮುಖ್ಯವಾಹಿನಿ'ಯ ಸಾಮಾಜಿಕ ಮೌಲ್ಯಗಳ ಅಂತರ್ಗತವಾಗಿವೆ. ಈ ಕಾರಣದಿಂದಾಗಿ ಮರಾಠಿಗರ ಸಾಮಾಜಿಕ ಸಂರಚನೆ, ಆರ್ಥಿಕ ಮತ್ತು ರಾಜಕೀಯ ಚಟುವಟಿಕೆಗಳನ್ನು ಪ್ರತ್ಯೇಕವಾಗಿ ನೋಡಲು ಸಾಧ್ಯವಿಲ್ಲ. ಜೊತೆಗೆ ಮರಾಠಿಗರ ಸಮಾಜದ ಲಿಂಗಸಂಬಂಧಿ ವ್ಯವಸ್ಥೆಯನ್ನು 'ಪ್ರತ್ಯೇಕಿತ ಬುಡಕಟ್ಟಿನ' ಸಾಮಾಜಿಕ ವ್ಯವಸ್ಥೆಯಾಗಿ ನೋಡಲು ಬರುವುದಿಲ್ಲ. ಏಕೆಂದರೆ ಸಾಮಾಜಿಕ ಬಾಹ್ಯ ಶ್ರೇಣೀಕರಣವಾಗಲಿ ಮತ್ತು ಆಂತರಿಕ ಶ್ರೇಣೀಕರಣವಾಗಲಿ 'ಮುಖ್ಯವಾಹಿನಿ' ಸಮಾಜದಲ್ಲಿದ್ದಂತೆ ಕುಂಬ್ರಿ ಮರಾಠಿಗರಲ್ಲೂ ಆಚರಣೆ ಯಲ್ಲಿದೆ. ಜೊತೆಗೆ ಹೊರಜಗತ್ತಿನ ಸಮಾಜಗಳಲ್ಲಿದ್ದಂತೆ ಲಿಂಗತಾರತಮ್ಯತೆ ಮತ್ತು ಮಹಿಳೆಯರ ಮೇಲಿನ ದಬ್ಬಾಳಿಕೆಗಳು ಮರಾಠಿಗರಲ್ಲೂ ಇವೆ. ಕುಂಬ್ರಿ ಮರಾಠಿಗರಲ್ಲಿ ಅಸಮಾನತೆಯ ಸ್ವರೂಪ ಮತ್ತು ತಾರತಮ್ಯ ವ್ಯವಸ್ಥೆಯು ಸೈದ್ಧಾಂತಿಕವಾಗಿ 'ಮುಖ್ಯವಾಹಿನಿಗಿಂತ' ಭಿನ್ನವಾಗೇನು ಇಲ್ಲ. ಈ ಕಾರಣದಿಂದಾಗಿ ಕುಂಬ್ರಿ ಮರಾಠಿಗರಲ್ಲಿ ಸಾಮಾಜಿಕ ಸಂರಚನೆಯನ್ನು ಪ್ರತ್ಯೇಕವಾಗಿ ನೋಡುವ ಅಗತ್ಯವಿಲ್ಲ.

ಸಾಮಾಜಿಕ ಮತ್ತು ಲಿಂಗಸಂಬಂಧಿ ಅಸಮಾನತೆಯ ನಿವಾರಣೆಗೆ ಮತ್ತು ಸಮಾನತೆಯ ಸಮಾಜ ರೂಪುಗೊಳ್ಳಲು ಸಮಾಜದ ಎಲ್ಲ ದುರ್ಬಲ ಪಂಗಡಗಳು ಮತ್ತು ಮಹಿಳೆಯರು

ಆರ್ಥಿಕವಾಗಿ ಸ್ವಾವಲಂಬಿಗಳಾಗಬೇಕು ಮತ್ತು ಸಂಪತ್ತು ಸಮಾನ ಹಂಚಿಕೆಯಾಗಬೇಕು ಎಂಬ ವಾದವು ಜನಪ್ರಿಯವಾಗಿದೆ. ಮೇಲ್ನೋಟಕ್ಕೆ ಇದು ಸರಿ ಕೂಡ ಹೌದು. ಮಹಿಳೆಯು ಪುರುಷನಂತೆ ಎಲ್ಲ ರಂಗಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಆರ್ಥಿಕವಾಗಿ ಸ್ವಾವಲಂಬಿಯಾದಾಗ ಮಾತ್ರ ಸಮಾಜದಲ್ಲಿ ಲಿಂಗ ತಾರತಮ್ಯವು ಇಲ್ಲವಾಗುತ್ತದೆ ಎಂದು ನಂಬಲಾಗಿದೆ. ಇದು ಆಂಶಿಕ ಸತ್ಯ ಮಾತ್ರ. ಕುಂಬ್ರಿ ಮರಾಠಿ ಸಮಾಜದಲ್ಲಿ ಮಹಿಳೆಯು ಪುರುಷನಷ್ಟೆ ಅಥವಾ ಅವನಿಗಿಂತ ಹೆಚ್ಚು ದುಡಿಯುತ್ತಾಳೆ. ಕುಟುಂಬದ ಆರ್ಥಿಕ ನಿರ್ವಹಣೆಯಲ್ಲಿ ಮಹಿಳೆ ಪ್ರಧಾನ ಪಾತ್ರ ವಹಿಸುತ್ತಾಳೆ. ಪುರುಷನಷ್ಟೇ ಬುದ್ಧಿ ಮತ್ತು ಭೌತಿಕ ಬಲವನ್ನು ವಿನಿಯೊಗಿಸಿ ದುಡಿದ ಫಲಿತದ ಮೇಲೆ ಅವಳಿಗೆ ಯಾವ ಹಕ್ಕು ಇಲ್ಲ. ಜೊತೆಗೆ ಕುಟುಂಬ ನಿರ್ವಹಣೆಯಲ್ಲೂ ತನ್ನ ಅಸೀಮ ತನ್ಮಯತೆ ಮತ್ತು ಸಹನೆಗಳಿಂದ ತೊಡಗಿ ಕೊಂಡರೂ ಸಹ ಕುಂಬ್ರಿ ಮರಾಠಿ ಮಹಿಳೆ ಪರಾಧಿನಳಾಗಿಯೇ ಬದುಕುತ್ತಿದ್ದಾಳೆ. ಹೀಗಾಗಿ ಮಹಿಳೆಗೆ ಆರ್ಥಿಕ ಸ್ವಾವಲಂಬನೆಯು ಅಂತಿಮವಾಗಿ ಸಾಮಾಜಿಕ ಮತ್ತು ರಾಜಕೀಯ ಸ್ವಾತಂತ್ರ್ಯವನ್ನು ದಕ್ಕಿಸಿ ಕೊಡುತ್ತದೆ ಎಂದು ಖಚಿತವಾಗಿ ಹೇಳಲಾಗುವುದಿಲ್ಲ. ಅಸಮಾನತೆಯು ಕೇವಲ ಆರ್ಥಿಕ ಪರಾವಲಂಬಿತನಕ್ಕೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ. ಆರ್ಥಿಕತೆಯನ್ನೂ ಒಳಗೊಂಡಂತೆ ಸಾಂಸ್ಕೃತಿಕ ಮತ್ತು ರಾಜಕೀಯ ಸಂಗತಿಗಳಿಗೂ ಸಂಬಂಧಿಸಿದೆ. ಏಕೆಂದರೆ ಇಂಡಿಯಾದ ಶೋಷಣೆಯ ವಿವಿಧ ಆಯಾಮಗಳು ಹೆಚ್ಚು ಸಂಕೀರ್ಣವಾಗಿವೆ ಮತ್ತು ಕಾಲದಿಂದ ಕಾಲಕ್ಕೆ ಈ ಆಯಾಮಗಳ ಸ್ವರೂಪ ಮತ್ತು ತೀವ್ರತೆಯಲ್ಲಿ ಅನೇಕ ಬದಲಾವಣೆಗಳು ಸಂಭವಿಸಿವೆ. ಈ ಕಾರಣದಿಂದಾಗಿ ಜಾತಿ ಮತ್ತು ಲಿಂಗಸಂಬಂಧೀ ಅಸಮಾನತೆಗಳು ಇಂಡಿಯಾದ ಬಹುಮುಖೀ ಶ್ರೇಣೀಕರಣ ಮತ್ತು ಅಸಮಾನ ವ್ಯವಸ್ಥೆಗಳು ಇಲ್ಲಿ ಬದುಕುತ್ತಿರುವ ವೈವಿಧ್ಯಮಯ ಸಮಾಜಗಳಲ್ಲಿ ಅತ್ಯಂತ ಸಂಕೀರ್ಣಗೊಂಡು ಅಂತರ್ಗತವಾಗಿವೆ. ಈ ದೇಶದ ಶ್ರೇಣೀಕರಣ ಮತ್ತು ಅಸಮಾನ ವ್ಯವಸ್ಥೆಗಳು ದುಡಿವ ವರ್ಗ ಮತ್ತು ಮಹಿಳೆಯರನ್ನು ವಸ್ತುಗಳನ್ನಾಗಿ ಪರಿಭಾವಿಸಿವೆ. ವಸ್ತುಗಳೆಂದರೆ ಜೀವವಿಲ್ಲದ, ಸಂವೇದನೆ ಮತ್ತು ಭಾವನೆಗಳೇ ಇಲ್ಲದ ಕೇವಲ ಬಳಸಲ್ಪಡುವ ಉಪಕರಣಗಳಂತೆ ಮಹಿಳೆಯರು ಪರಿಗಣಿಸಲ್ಪಟ್ಟಿದ್ದಾರೆ. ಇದಕ್ಕೆ ಇಂಡಿಯಾದ ಪಾರಂಪರಿಕ ಸಮಾಜದ ಮೂಲಭೂತ ನಿಯಮಗಳೇ ಕಾರಣ. ಮಹಿಳೆಯ ಅತ್ಯಂತ ಮೂಲಭೂತ ಸಮಸ್ಯೆ ಸಾಮಾಜಿಕಾರ್ಥಿಕ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ್ದಾಗಿದೆ. ಆದರೆ ಈ ದೇಶದ ಪುರೋಹಿತಶಾಹಿ ಮತ್ತು ಊಳಿಗಮಾನ್ಯ ಆರ್ಥಿಕತೆಯು ಹೆಣ್ಣಿಗೆ ಎಲ್ಲ ಬಗೆಯ ಸ್ವಾವಲಂಬನೆ ಮತ್ತು ಸ್ವಾತಂತ್ರ್ಯಗಳನ್ನು ನಿರಾಕರಿಸುತ್ತಾ ಬಂದಿವೆ.

**ಕೋಷ್ಟಕ 1**

**ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ತಾಲೂಕುವಾರು, ಕುಟುಂಬ ಹಾಗೂ ಲಿಂಗವಾರು ಜನಸಂಖ್ಯೆ ಪ್ರಮಾಣ ಮತ್ತು ಲಿಂಗಾನುಪಾತ, ಕುಟುಂಬ ಗಾತ್ರ**

| ಕ್ರ ಸಂ. | ತಾಲೂಕು | ಕುಟುಂಬ ಗಳು | ಜನಸಂಖ್ಯೆ | | | ಲಿಂಗಾನು ಪಾತ | ಕುಟುಂಬ ಗಾತ್ರ | ಶೇಕಡ |
|---|---|---|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು | | | |
| 1 | ಅಂಕೋಲಾ | 247 | 845 | 737 | 1582 | 872.2 | 6.405 | 6.64 |
| 2 | ಕುಮಟಾ | 399 | 1180 | 1281 | 2461 | 1086 | 6.168 | 10.33 |
| 3 | ಹೊನ್ನಾವರ | 328 | 989 | 1438 | 2427 | 1454 | 7.399 | 10.19 |
| 4 | ಭಟ್ಕಳ | 401 | 1871 | 1906 | 3777 | 1019 | 9.419 | 15.86 |
| 5 | ಶಿರಸಿ | 1282 | 3984 | 4146 | 8130 | 1041 | 6.342 | 34.14 |
| 6 | ಸಿದ್ದಾಪುರ | 429 | 1593 | 1761 | 3354 | 1105 | 7.818 | 14.08 |
| 7 | ಯಲ್ಲಾಪುರ | 188 | 695 | 713 | 1408 | 1026 | 7.489 | 5.91 |
| 8 | ಮುಂಡಗೊಡ | 113 | 312 | 365 | 677 | 1170 | 5.991 | 2.84 |
| | **ಒಟ್ಟು** | **3387** | **11469** | **12347** | **23816** | 1077 | 7.032 | |

ಉತ್ತರಕನ್ನಡ ಜಿಲ್ಲೆಯ 8 ತಾಲೂಕುಗಳಲ್ಲಿ ನೆಲೆಸಿರುವ ಕುಂಬ್ರಿ ಮರಾಠಿಯರ ಸಂಖ್ಯೆ ಕಡಿಮೆ ಇರುವುದರಿಂದ ಮಾರ್ಗದರ್ಶಕರ ನಿರ್ದೇಶನದಂತೆ ನಿರಂತರ ಕ್ಷೇತ್ರಕಾರ್ಯವನ್ನು ಕೈಗೊಂಡು ಎಲ್ಲಾ ಗ್ರಾಮಗಳಿಗೂ ಭೇಟಿ ನೀಡಿ ಕೌಟುಂಬಿಕ ಸಮೀಕ್ಷೆ ಮಾಡಲಾಯಿತು. ಈ ಸಮೀಕ್ಷೆಯ ಪ್ರಕಾರ 11,469 ಗಂಡು 12,347 ಮಹಿಳೆಯರೂ ಸೇರಿದಂತೆ ಒಟ್ಟು ಸುಮಾರು 23,816 ಜನಸಂಖ್ಯೆಯನ್ನು ಹೊಂದಿದವರಾಗಿರುತ್ತಾರೆ ಎಂಬ ಮಾಹಿತಿ ಸಮೀಕ್ಷೆಯಿಂದ ತಿಳಿಯಿತು.ಈ ಅಂಕಿ ಅಂಶಗಳನ್ನು ಗಮನಿಸಿದಾಗ ಜಿಲ್ಲೆಯ ಒಟ್ಟು ಜನಸಂಖ್ಯೆಯ ಶೇ 1.66 ಮಾತ್ರ ಈ ಸಮುದಾಯದ ಜನಸಂಖ್ಯೆಯಿದ್ದು ಇದರಲ್ಲಿ ಗಂಡಸರಿಗಿಂತ ಹೆಂಗಸರ ಸಂಖ್ಯೆಯೆ ಹೆಚ್ಚಾಗಿರುವುದನ್ನು ಗಮನಿಸಲಾಯಿತು.

ಪುರುಷರಿಗಿಂತ ಮಹಿಳೆಯರ ಸಂಖ್ಯೆ ಹೆಚ್ಚಾಗಿದ್ದರೂ ಸಹ ಪುರುಷ ಪ್ರಧಾನ ಅಥವಾ ಪಿತೃಪ್ರಧಾನ ವ್ಯವಸ್ಥೆಯೇ ಈ ಸಮುದಾಯದಲ್ಲಿದೆ. ಅಲ್ಲದೇ ಮಹಿಳೆಯರ ಸಂಖ್ಯೆ ಹೆಚ್ಚಾಗಿರಲು ಮಹಿಳೆಯರ ಜೀವಿತ ಅವಧಿ, ಜನನ ಹೆಚ್ಚಾಗಿರುವುದೇ ಕಾರಣ ಎಂದು ಸಮುದಾಯದ ಹಿರಿಯರು ಹೇಳುತ್ತಾರೆ, ಅಲ್ಲದೇ ಗಂಡಸರು ಯಾವಾಗಲೂ ಅರಣ್ಯಗಳಲ್ಲಿ ಸುತ್ತುತ್ತಾ, ಶ್ರಮದಾಯಕ ಕೆಲಸಗಳಲ್ಲಿ ತೊಡಗಿರುವುದರಿಂದಲೂ, ಮಹಿಳೆಯರಿಗಿಂತ ಬೇಗ ಹಾಗೂ ಆಕಸ್ಮಿಕ ಸಾವು ಕಾಣುವುದರಿಂದಲೂ ಸಂಖ್ಯೆ ಕಡಿಮೆ ಆಗಲು ಕಾರಣವೆಂದು ಹೇಳುತ್ತಾರೆ.

ಅಷ್ಟೇ ಅಲ್ಲದೇ ವಿಧುರ ಮತ್ತು ವಿಧವೆಯರ ಸಂಖ್ಯೆಯನ್ನು ಗಮನಿಸಲಾಗಿ ವಿಧವೆಯರ ಸಂಖ್ಯೆಯೇ ಹೆಚ್ಚಾಗಿರುವುದನ್ನು ಕಾಣಬಹುದು.

ಇಂದು ಮಹಿಳೆಯ ಅಭಿವೃದ್ಧಿ, ಸಬಲೀಕರಣ ಮುಂತಾದ ಆಧುನಿಕ ಪರಿಕಲ್ಪನೆಗಳ ಕುರಿತು ಚರ್ಚಿಸುವುದು ಮಧ್ಯಮವರ್ಗದ ಚಿಂತನೆಯಂತೆ ಭಾಸವಾಗುತ್ತಿದೆ. ಮಹಿಳೆಗೆ ಇನ್ನೂ ಸ್ವಾತಂತ್ರ್ಯ ಲಭ್ಯವಾಗಿಲ್ಲ. ಮತ್ತು ಸ್ವಾವಲಂಬನೆಯೂ ಸಾಧ್ಯವಾಗಿಲ್ಲ. ಈ ಕುರಿತು ಚರ್ಚಿಸುವುದು ಇಂದಿನ ಪ್ರಾಥಮಿಕ ಅಗತ್ಯವಾಗಿದೆ. ಹೆಣ್ಣು ಶಿಶುಹತ್ಯ, ವರದಕ್ಷಿಣೆ ಸಾವುಗಳು ಈ ದೇಶದಲ್ಲಿ ದಿನನಿತ್ಯ ಸರ್ವೇ ಸಾಮಾನ್ಯ ಸಂಗತಿಗಳಾಗಿವೆ. 1951 ರಿಂದ ಈಚೆಗೆ ಭಾರತದಲ್ಲಿ ಲಿಂಗ ಪರಿಮಾಣ ಇನ್ನಿಲ್ಲದಂತೆ ಕುಸಿಯುತ್ತಿದೆ. ಹೆಣ್ಣನ್ನು ಹುಟ್ಟುವ ಮೊದಲೇ ಕೊಲ್ಲುವ ಸಮಾಜದಲ್ಲಿ,




ಹೆಣ್ಣಿನ ಅಭಿವೃದ್ಧಿ ಮತ್ತು ಸಬಲೀಕರಣದ ಮಾತುಗಳು ಕೇವಲ ಕ್ಲೀಷೆಯ ಸಂಗತಿಗಳಾಗಿವೆ. ಹೀಗಾಗಿ ಸಮಾಜದ ಮುಖ್ಯವಾಹಿನಿಯಲ್ಲಿ ಹೆಣ್ಣಿಗೆ ಜೀವಿಸುವ ಮೂಲಭೂತ ಹಕ್ಕಿನ ಕುರಿತು ಇಂದು ಚಿಂತಿಸಬೇಕಿದೆ. ಹಾಲಕ್ಕಿ ಸಮಾಜದಲ್ಲಿ ಹೆಣ್ಣು ಗಂಡಿನ ಪರಿಮಾಣ ಆಘಾತಕಾರಿಯಾಗಿದೆ. ಜೊತೆಗೆ ಬಡತನದಲ್ಲಿಯೂ ವರದಕ್ಷಿಣೆ ಪಿಡುಗು ಇವರನ್ನು ಇನ್ನಿಲ್ಲದಂತೆ ಕಾಡುತ್ತಿದೆ. ಈ ಸಮುದಾಯದ ಮಹಿಳೆಯರು 30–38 ವರ್ಷವಾದರೂ ಮದುವೆಯಾಗದೇ ವರದಕ್ಷಿಣೆಗೆ ದುಡ್ಡು ಹೊಂದಿಸಲು ನಿತ್ಯ ಕೂಲಿಯಲ್ಲಿ ತೊಡಗಿರುವುದನ್ನು ಕಾಣಬಹುದಾಗಿದೆ. ಮೇಲ್ನೋಟಕ್ಕೆ ಕುಂಬ್ರಿ ಮರಾಠಿಗಳಂತಹ ಆದಿವಾಸಿ ಸಮುದಾಯಗಳಲ್ಲಿ ಮಹಿಳೆ ಅಸಮಾನತೆಗಳಿಂದ ಮುಕ್ತಳು ಎಂಬಂತೆ ಕಂಡುಬಂದರೂ ಸಹ, ಇಂಡಿಯಾದ ಊಳಿಗಮಾನ್ಯ ವ್ಯವಸ್ಥೆಯು ಸಾಮಾಜಿಕಾರ್ಥಿಕ ಮತ್ತು ಲಿಂಗಸಂಬಂಧೀ ಅಸಮಾನತೆಗಳನ್ನು ಈ ದೇಶದ ಎಲ್ಲ ಸಮುದಾಯಗಳಲ್ಲಿ ಅಂತರ್ಗತವಾಗಿಸಿಬಿಟ್ಟಿದೆ. ಹೀಗಾಗಿ ಆದಿವಾಸಿ ಸಮುದಾಯಗಳಲ್ಲೂ ಸಹ ಮಹಿಳೆ 'ಮುಖ್ಯ ವಾಹಿನಿ'ಯ ಮಹಿಳೆಯರಂತೆಯೇ ಶೋಷಿತಳಾಗಿಯೇ ಬದುಕುತ್ತಿದ್ದಾಳೆ.

**ಕೋಷ್ಟಕ 2**

**ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ಲಿಂಗವಾರು ಕಸುಬುಗಳ ಪ್ರಮಾಣ**

| ಕಸುಬುಗಳು | ಗಂಡು | ಹೆಣ್ಣು | ಒಟ್ಟು | ಶೇಕಡ |
|---|---|---|---|---|
| ಕೃಷಿ/ಕೃಷಿಕೂಲಿ | 4760 | 4736 | 9496 | 82.65 |
| ದಿನಗೂಲಿ | 680 | 630 | 1310 | 11.4 |
| ಮನೆಕೆಲಸ | 68 | 279 | 347 | 3.02 |
| ತರಕಾರಿ ವ್ಯಾಪಾರ | 51 | 149 | 200 | 1.741 |
| ಹೂವಿನ ವ್ಯಾಪಾರ | 12 | 40 | 52 | 0.453 |
| ಕಾಡುಜನ್ಯ ಮಾರಾಟ | 85 | 0 | 85 | 0.74 |
| ಕಟ್ಟಿಗೆ ಮಾರಾಟ | 0 | 0 | 0 | 0 |
| **ಒಟ್ಟು** | **5656** | **5834** | **11490** | |

ಮೇಲ್ಕಾಣಿಸಿದ ಕೋಷ್ಟವನ್ನು ಗಮನಿಸಿದರೆ ಕುಂಬ್ರಿ ಮರಾಠಿ ಸಮುದಾಯದ ಸ್ತ್ರೀಪುರುಷರ ದುಡಿಮೆಯ ಸ್ವರೂಪವನ್ನು ಗಮನಿಸಬಹುದು. ಕೃಷಿ ಮತ್ತು ಕೃಷಿಕೂಲಿ ದುಡಿಮೆಯಲ್ಲಿ 4760 ಪುರುಷರು ಮತ್ತು 4736 ಮಹಿಳೆಯರು ತೊಡಗಿಕೊಂಡಿದ್ದಾರೆ. ದಿನಗೂಲಿಯಲ್ಲಿ 680 ಪರುಷರು 630 ಮಹಿಳೆಯರು ತೊಡಗಿದ್ದಾರೆ. ಮನೆಕೆಲಸದಲ್ಲಿ ಕೇವಲ 68 ಪುರುಷರು ಮಾತ್ರ.

ಬೆಳಗಿನ ನಾಲ್ಕು ಗಂಟೆಯಿಂದ ಪ್ರಾರಂಭವಾಗುವ ಅವಳ ದುಡಿಮೆ ಆತಂಕ, ಸಂದಿಗ್ಧತೆ, ಅನಿಶ್ಚಿತತೆ ಮತ್ತು ಮುತ್ತಿ ಕಾಡುವ ಅಸಹಾಯಕತೆಯಲ್ಲಿ ರಾತ್ರಿ ಮಲಗುವ ವರೆಗೂ ಸಾಗುತ್ತದೆ. ಬೆಳಗಿನಿಂದಲೇ ಶುರುವಾಗುವ ಮನೆಕೆಲಸ ಮತ್ತು ಹೊತ್ತು ಹುಟ್ಟುವ ನಂತರ ಪ್ರಾರಂಭವಾಗುವ ಕೂಲಿ ಕೆಲಸ, ಹೊತ್ತು ಮುಳುಗಿದ ನಂತರ ಮತ್ತೆ ನಿರ್ವಹಿಸಲೇ ಬೇಕಾದ ನಿತ್ಯದ ಮನೆಕೆಲಸಗಳ ಮಧ್ಯೆ ಈ ಸಮುದಾಯಗಳ ಮಹಿಳೆ 'ಇದು ನನ್ನ ಸ್ವಾತಂತ್ರ್ಯ' ಎಂದು ಯಾವುದನ್ನು ಸಂಭ್ರಮ ದಿಂದ ಆಚರಿಸುತ್ತಾಳೆ ಎಂಬುದನ್ನು ಇನ್ನೂ ಕಂಡುಕೊಳ್ಳಬೇಕಿದೆ.

ಹೀಗಾಗಿ ಮೇಲ್ವರ್ಗ ಮತ್ತು ಮೇಲ್‌ಮಧ್ಯಮ ವರ್ಗದ ಮಹಿಳೆರಿಗೆ ಲಭ್ಯವಾಗಬಹುದಾದ ನಿರುಮ್ಮಳ ಹಗಲು ರಾತ್ರಿಗಳು ದುಡಿವ ವರ್ಗದ ಮಹಿಳೆಗೆ ಸಾಧ್ಯವಾಗುವುದಿಲ್ಲ. ಆಳುವ ವರ್ಗದ ಬಹುಪಾಲು ಮಹಿಳೆಯರಿಗೆ ತಮ್ಮ ದುಡಿಮೆ ಮತ್ತು ಕುಟುಂಬದ ನಿರ್ವಹಣೆಯ

ಮೇಲೆ ಅಲ್ಪಸ್ವಲ್ಪ ನಿಯಂತ್ರಣ ಸಾಧ್ಯವಾಗಬಹುದು. ಅನಿಶ್ಚಿತ ಭವಿಷ್ಯ ಈ ವರ್ಗದ ಮಹಿಳೆಯರನ್ನು ಅಷ್ಟಾಗಿ ಬಾಧಿಸದು. ಈ ವರ್ಗದ ಮಹಿಳೆ ಒಂದು ಬಗೆಯಲ್ಲಿ 'ಸುರಕ್ಷಿತಳು'(ಅದು ಮನೆಯೆಂಬ ಕೋಟೆಯಲ್ಲಿ) ಈ ಅತಿ ಸಂರಕ್ಷಣೆ ಅವಳ ಸ್ವಾತಂತ್ರ್ಯವನ್ನು ಹರಣ ಮಾಡಿದೆ. ಈ ಬಗೆಯ ಸ್ವಾತಂತ್ರ್ಯವಿಲ್ಲದಿರುವಿಕೆ ದುಡಿವ ವರ್ಗದ ಮಹಿಳೆಯರ ನಿತ್ಯದ ಚಟುವಟಿಕೆಗಳನ್ನು ರಮ್ಯವಾಗಿ ನೋಡುವಂತೆ ಮಾಡಿದೆ. ಆದರೆ ವಾಸ್ತವವಾಗಿ ದುಡಿವ ವರ್ಗದ ಮಹಿಳೆ ನಿತ್ಯ ದುಡಿದೂ




ಪರಾವಲಂಬಿ. 'ಮುಖ್ಯವಾಹಿನಿ' ಎಂದು ಕರೆಯಲ್ಪಡುವ ಸಮಾಜದ ಮಹಿಳೆಯಷ್ಟೇ ಆದಿವಾಸಿ ಸಮುದಾಯದ ಮಹಿಳೆಯೂ ಪರಾಧೀನಳು. ಇನ್ನು ಲೈಂಗಿಕ ಸಂಬಂಧಗಳು ಸಡಿಲವಾಗಿರುತ್ತವೆ ಎಂಬ ನಂಬಿಕೆಯೂ ಸಹ ನಿಜವಲ್ಲ. ಆದಿವಾಸಿ ಸಮಾಜಗಳಲ್ಲಿ ಏಕಪತಿತ್ವ ಕಟ್ಟುನಿಟ್ಟಾಗಿ ಆಚರಣೆಯಲ್ಲಿದೆ. ಈ ಹಿಂದೆ ಇದ್ದಿರಬಹುದಾದ ವಿಧವಾ ವಿವಾಹಗಳು ಈಗಿಲ್ಲ. ಅಂತರ್ಜಾತಿ ವಿವಾಹಗಳು 'ಮುಖ್ಯವಾಹಿನಿ' ಸಮಾಜದಲ್ಲಿ ಸಹಜವಾಗಿ ನೆರವೇರುತ್ತವೆ. ಆದರೆ ಆದಿವಾಸಿಗಳಲ್ಲಿ ಈ ಮದುವೆಗಳು ನಿಷಿದ್ಧ. ಒಟ್ಟಿನಲ್ಲಿ ಮಹಿಳೆಯನ್ನು ಕುರಿತು 'ಮುಖ್ಯವಾಹಿನಿ'ಯ ಊಳಿಗಮಾನ್ಯ ಸಮಾಜ ಪಾರಂಪರಿಕವಾಗಿ ಯಾವ ಯಾವ ಸಾಮಾಜಿಕ ನಿಯಮಗಳನ್ನು ಜಾರಿಯಲ್ಲಿಟ್ಟಿದೆಯೋ, ಆದಿವಾಸಿ ಸಮಾಜಗಳೂ ಸಹ ಈ ನಿಯಮಗಳನ್ನು ಜಾರಿಯಲ್ಲಿಟ್ಟಿವೆ. ಜೊತೆಗೆ ಅತ್ಯಂತ ಕಟ್ಟುನಿಟ್ಟಾಗಿ ಈ ನಿಯಮಗಳನ್ನು ಪಾಲಿಸುತ್ತಿವೆ. ಹೀಗಾಗಿ ಆದಿವಾಸಿ ಸಮುದಾಯಗಳಲ್ಲಾಗಲಿ, ಕೆಳಜಾತಿ ಸಮಾಜಗಳಲ್ಲಾಗಲಿ ಲೈಂಗಿಕ ಸಂಬಂಧಗಳು ಸಡಿಲವಾಗಿಲ್ಲ.

ಇನ್ನು ಕೆಳಜಾತಿ ಮತ್ತು ಆದಿವಾಸಿ ಸಮುದಾಯದಲ್ಲಿ ಮಾತೃಪ್ರಧಾನತೆಯು ಆಚರಣೆ ಯಲ್ಲಿದೆ. ಸಾಂಕೇತಿಕ ಮಟ್ಟದಲ್ಲಾದರೂ ಈ ಸಮುದಾಯಗಳಲ್ಲಿ ಮಾತೃಪ್ರಧಾನತೆ ಜೀವಂತವಾಗಿದೆ

ಎಂಬ ವಾದಗಳು ಪ್ರಚಲಿತದಲ್ಲಿವೆ. ಡಿ.ಆರ್.ನಾಗರಾಜ್ ಅವರು ಆದಿಮ ಸಮುದಾಯಗಳಲ್ಲಿ ಮಾತೃಪ್ರಧಾನತೆ ಎಂಬುದು ಇಲ್ಲ. ಅದು ಸಾಂಕೇತಿಕವಾಗಿ ಮಾತ್ರ ಗೋಚರಿಸುತ್ತದೆ ಎಂದು ಹೇಳುತ್ತಾರೆ.[1] ಆದರೆ ಪ್ರೊ. ಬೋರಲಿಂಗಯ್ಯನವರು ಬುಡಕಟ್ಟು ಸಮುದಾಯಗಳಲ್ಲಿ ಮಾತೃಪ್ರಧಾನ ವ್ಯವಸ್ಥೆ ಇಂದಿಗೂ ಜಾರಿಯಾಲ್ಲಿದೆ ಎನ್ನುತ್ತಾರೆ.[2] ಇದೇ ವಾದವನ್ನು ಪ್ರೊ. ಎನ್ ಆರ್ ನಾಯಕ್ ಅವರು ವಿಸ್ತರಿಸುತ್ತಾರೆ. ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿ ಒಕ್ಕಲಿಗ ಸಮುದಾಯವನ್ನು ಅಧ್ಯಯನ ಮಾಡಿರುವ ಈ ಇಬ್ಬರೂ ಹಿರಿಯ ಪ್ರಾಧ್ಯಾಪಕರು ಹಾಲಕ್ಕಿಗಳ ಆಚರಣೆ ಮತ್ತು ಮೌಖಿಕ ಸಾಹಿತ್ಯವನ್ನು ತಮ್ಮ ವಾದಕ್ಕೆ ಉದಾಹರಿಸುತ್ತಾರೆ.[3] ಈ ವಾದಗಳು ಮೇಲ್ನೋಟಕ್ಕೆ ಸತ್ಯವಾದರೂ ಪೂರ್ಣ ಸತ್ಯವಲ್ಲ. ಪುರಾಣ ಕಾವ್ಯ ಮತ್ತು ಆಚರಣೆಗಳಲ್ಲಿ ವ್ಯಕ್ತವಾಗುವ ಮಹಿಳೆಗಿರುವ ಸಾಂಕೇತಿಕ ಮಹತ್ವವು ಆ ಸಮುದಾಯದ ಸಾಮಾಜಿಕ ಪರಂಪರೆಯಲ್ಲಿ ಜೀವಂತವಾಗಿದ್ದುದರ ಕುರಿತು ಪುರಾವೆಗಳು ಲಭ್ಯವಾಗುವುದಿಲ್ಲ. ಆರಾಧನಾ ನೆಲೆಯ ಸಂಕೇತಗಳೆಲ್ಲವೂ ಚಾರಿತ್ರಿಕ ಸತ್ಯಗಳನ್ನು ಪ್ರತಿನಿಧಿಸುತ್ತವೆ ಎಂಬುದು ಮುಗ್ಧ ನಂಬಿಕೆ ಮಾತ್ರ.

**ಕೌಟುಂಬಿಕ ರಚನೆ**

ಕುಟುಂಬ ಸಮಾಜದ ಮೂಲ ಘಟಕ. ಸಮಾಜ ಕೇಂದ್ರವೂ ಹೌದು. ಸಮುದಾಯದ ಸಮಗ್ರ ಚಟುವಟಿಕೆಯ ಮೂಲ ಸ್ಥಾನವೇ ಕುಟುಂಬ ಆದಿವಾಸಿಗಳ ಸಾಮಾಜಿಕ ಸಂರಚನೆಯು ಅದರ ಕುಟುಂಬವನ್ನು ಅವಲಂಭಿಸಿರುತ್ತದೆ. ಅಂದರೆ ಕುಟುಂಬವು ಯಾವುದೇ ಆದಿವಾಸಿ ಸಾಮಾಜಿಕ ರಚನೆಗೆ ಅತಿಮುಖ್ಯ ಅಂಶವಾಗಿದೆ. ವಿದ್ಯಾರ್ಥಿ ಮತ್ತು ರೈ ಇವರ ಪ್ರಕಾರ 'Clan and Family' ಇವು ದಕ್ಷಿಣ ಭಾರತದ ಆದಿವಾಸಿಗಳಲ್ಲಿರುವ ಅತಿ ಜನಪ್ರಿಯ ಸಾಮಾಜಿಕ ಘಟಕಗಳಾಗಿವೆ.

ವಿದ್ಯಾರ್ಥಿ ಅವರು ಹೇಳುವಂತೆ 'Monogomous Family with a Nuclear Structure is the main feature of the Indian tribes'[4] ಅಂದರೆ ಏಕ ಪತಿತ್ವವು ಭಾರತೀಯ ಆದಿವಾಸಿ ಕುಟುಂಬದ ಪ್ರಮುಖ ಲಕ್ಷಣವಾಗಿದ್ದು, ನ್ಯೂಕ್ಲಿಯರ್ ರಚನೆಯನ್ನು ಹೊಂದಿದೆ. ಆದರು ಬಹುಸಂಖ್ಯಾತ ಆದಿವಾಸಿಗಳು ಯಾವ ಆಶಾ ಭಾವನೆಯನ್ನು ಹೊಂದಿದ್ದಾರೆಂದರೆ, ಅವರ ಆರ್ಥಿಕತೆಯು ಅವಿಭಕ್ತ ಕುಟುಂಬ ಅಥವಾ ವಿಸ್ತೃತ ಕುಟುಂಬಗಳನ್ನು ಹೊಂದಲು ಅನುಮತಿಸಿದೆ. ಅಲ್ಲದೆ ದಕ್ಷಿಣ ಭಾರತದಲ್ಲಿ ಮಾತೃಪ್ರಧಾನ ಮತ್ತು ಪಿತೃಪ್ರಧಾನ ರೂಪದ ಕುಟುಂಬಗಳು ಹೆಚ್ಚಿನ ಸಂಖ್ಯೆಯಲ್ಲಿವೆ.

ಕುಂಬ್ರಿ ಮರಾಠಿಗರಲ್ಲಿ ಕುಟುಂಬವೇ ಸಾಮಾಜಿಕ ಸಂಘಟನೆಯ ಮೂಲ ಘಟಕ. ಆದ್ದರಿಂದ ಪ್ರತಿ ವ್ಯಕ್ತಿಯೂ ತನ್ನ ಕುಟುಂಬಕ್ಕೆ ಜವಾಬ್ದಾರನಾಗಿರುತ್ತಾನೆ. ವ್ಯಕ್ತಿಯ ಜನ್ಮದಿಂದ ಹಿಡಿದು ಮರಣದವರೆಗೂ ಪ್ರತಿ ಸಂಗತಿಯಲ್ಲೂ ಕುಟುಂಬದ ಜವಾಬ್ದಾರಿಯು ಮಹತ್ವದ ಪಾತ್ರ ವಹಿಸುತ್ತದೆ. ಕುಣಬಿ ಸಮುದಾಯದಲ್ಲಿ ಅವಿಭಕ್ತ ಕುಟುಂಬವು ಪ್ರಧಾನ ಪಾತ್ರವಹಿಸುತ್ತದೆ. ಅದಾಗ್ಯೂ ಇತ್ತೀಚೆಗೆ ಅಂದರೆ ವರ್ತಮಾನದಲ್ಲಿ ಅದು ಪರಮಾಣು ರೀತಿಯ ಬದಲಾವಣೆ – ಪರಿವರ್ತನೆಯನ್ನು ಹೊಂದುತ್ತದೆ. ಗಣ ಸಮಾಜದ ಕಾಲದಲ್ಲಿ ಒಂದೇ ಕುಟುಂಬದಲ್ಲಿ ಒಂದು ಸಮುದಾಯದವರು 20 ರಿಂದ 100 ಜನ ಸದಸ್ಯರು ಒಟ್ಟಿಗೆ ಕೂಡಿ ವಾಸಿಸುತ್ತಿದ್ದರು. ಇವು ಪಿತೃಪ್ರಧಾನ ಕುಟುಂಬಗಳಾಗಿದ್ದವು. ಕುಟುಂಬಗಳ ಚೌಕಟ್ಟು ಬಿಗಿ ಇದ್ದುದರಿಂದ ಒಟ್ಟಾರೆ ಕುಟುಂಬದ ಆಸ್ತಿಯನ್ನು ವಿಭಜಿಸುವಂತಿರಲಿಲ್ಲ. ಹಣಕಾಸಿನ ಖರ್ಚುವೆಚ್ಚ, ಹಬ್ಬ ಹರಿದಿನಗಳ ಆಚರಣೆ, ಮದುವೆ–ಮುಂಜಿ ವ್ಯವಸ್ಥೆ ಮತ್ತು ಕುಟುಂಬದಲ್ಲಿ ಇತರ ಸಂಬಂಧಗಳಿದ್ದರೆ, ಅಲ್ಲಿ ಪುರುಷನೆ ಪ್ರಧಾನ ಪಾತ್ರ ವಹಿಸುತ್ತಿದ್ದ.

ಕುಂಬ್ರಿ ಮರಾಠಿಗರಲ್ಲಿ ಕೂಡು ಕುಟುಂಬಗಳು ಇತ್ತೀಚೆಗೆ ಕಡಿಮೆಯಾಗಿತ್ತಿವೆ. ಆದಿವಾಸಿ ಸಮುದಾಯವೊಂದು ಎಲ್ಲಿಯವರೆಗೆ ಪಾರಂಪರಿಕ ಕಸುಬುಗಳಲ್ಲಿ ತೊಡಗಿಕೊಂಡಿರುತ್ತದೊ, ಎಲ್ಲಿಯವರೆಗೆ ಸಮುದಾಯದ ಒಪ್ಪಂದದ ಸಾಮಾಜಿಕ ಸಂಬಂಧಗಳನ್ನು ಸಾಂಪ್ರದಾಯಿಕ ಕುಲಮೂಲದ ವೃತ್ತಿಗಳು ನಿಯಂತ್ರಿಸುವವೂ ಅಲ್ಲಿಯವರೆಗೆ ಕುಟುಂಬಗಳು ಅವಿಭಕ್ತವಾಗಿರುತ್ತವೆ. ಕುಟುಂಬದ ಸದಸ್ಯರು ಹೊಸ ಉತ್ಪಾದನಾ ವ್ಯವಸ್ಥೆಯನ್ನು ಕಂಡುಕೊಂಡಾಕ್ಷಣ, ಆ ಉತ್ಪಾದನಾ ವ್ಯವಸ್ಥೆಯು ಕುಟುಂಬದ ಸ್ವರೂಪವನ್ನು ಮತ್ತು ಸಾಮಾಜಿಕ ಸಂಬಂಧಗಳನ್ನು ರೂಪಿಸುತ್ತ ಹೋಗುತ್ತದೆ. ಕುಂಬ್ರಿ ಮರಾಠಿ ಸಮುದಾಯದ ಜನ ತಮ್ಮ ಪಾರಂಪರಿಕ ಕೃಷಿ ಚಟುವಟಿಕೆಗಳ ಜೊತೆಯಲ್ಲಿಯೇ ಆಧುನಿಕ ಉದ್ಯೋಗಗಳನ್ನು ಹೊಂದಲಾರಂಭಿಸಿದ್ದಾರೆ. ಇದರಿಂದಾಗಿ ಕುಂಬ್ರಿ ಮರಾಠಿ ಕುಟುಂಬಗಳ ಸ್ವರೂಪವೂ ಬದಲಾಗುತ್ತಿದೆ. ಈಗ ಪಟ್ಟಣಗಳಿಂದ ದೂರ ಇರುವ ಮತ್ತು ಅರಣ್ಯಗಳ ಅಂಚಿನಲ್ಲಿರುವ ಮತ್ತು ಪಾರಂಪರಿಕ ಕೃಷಿ ಉತ್ಪಾದನೆಯಲ್ಲಿ ತೊಡಗಿರುವ ಕುಂಬ್ರಿ ಮರಾಠಿಗರ ಗ್ರಾಮಗಳಲ್ಲಿ ಹಲವು ಕಡೆ ಕೂಡು ಕುಟುಂಬಗಳಿವೆ.

ಆದರೆ ಪಟ್ಟಣಕ್ಕೆ ಹತ್ತಿರವಿರುವ ಮತ್ತು ಪಟ್ಟಣಗಳೊಳಗೆ ಸೇರಿಕೊಂಡಿರುವ ಮತ್ತು ಆಧುನಿಕವಾದ ವಿವಿಧ ಉದ್ಯೋಗಗಳಲ್ಲಿ ತೊಡಗಿಕೊಂಡಿರುವ ಕುಂಬ್ರಿ ಮರಾಠಿ ಗ್ರಾಮಗಳಲ್ಲಿ ಅಥವಾ ಊರುಗಳಲ್ಲಿ ವಿಭಕ್ತ ಕುಟುಂಬಗಳು ಕಂಡು ಬರುತ್ತಿವೆ. ಅಂತಹ ಮನೆಗಳಲ್ಲಿ ವಿಭಕ್ತ (Nuclear) ಕುಟುಂಬಗಳು ಕೆಲವು ಭಾಗ ಭೂಪ್ರದೇಶವನ್ನು (ಹೊಲ) ಪ್ರತ್ಯೇಕವಾಗಿ, ಕೃಷಿ ಚಟುವಟಿಕೆಗಳಿಗಾಗಿ ಬಳಸುತ್ತಿದ್ದಾರೆ. ಆಹಾರವನ್ನು ಪ್ರತ್ಯೇಕವಾಗಿ ತಯಾರಿಸಿ, ಪ್ರತ್ಯೇಕವಾಗಿಯೇ

ಆಹಾರ ಸೇವಿಸುತ್ತಾರೆ. ಆದರೆ ಅವರು ಉಳುವ ಭೂಮಿಯನ್ನು ಮಾತ್ರ ಅಧಿಕೃತವಾಗಿ ವಿಭಜನೆ ಮಾಡಿಲ್ಲ. ಸಹೋದರರಲ್ಲಿ ಈ ಭೂಮಿಯನ್ನು ಮೌಖಿಕವಾಗಿ ವಿಭಜನೆ ಮಾಡಿ-ಅವರವರು ತಮ್ಮ ಜಮೀನನ್ನು ಪ್ರತ್ಯೇಕವಾಗಿ ಉಳಲಾಗುತ್ತಿದೆ. ಅನೇಕ ಕುಟುಂಬಗಳಲ್ಲಿ ಸಹೋದರರು ಮದುವೆಯಾದ ಮೇಲೆ ಅಲ್ಲಿಯೆ ಪ್ರತ್ಯೇಕ ಮನೆ ಮಾಡಿಕೊಂಡು ವಾಸಿಸುತ್ತಾರೆ. ಮನೆ ಚಿಕ್ಕದಾಗಿದ್ದಲ್ಲಿ ಮಾತ್ರ ಕೆಲ ಸಹೋದರರು ಹೊರಗೆ ಮನೆ ಮಾಡುತ್ತಾರೆ. ಪೂರ್ವಜರ ಮನೆಯ ಸುತ್ತಮುತ್ತ ಈ ತರಹದ ನ್ಯೂಕ್ಲಿಯರ್ ಕುಟುಂಬಗಳು ಹುಟ್ಟಿಕೊಂಡಿವೆ.

ಈ ಎಲ್ಲ ಕುಟುಂಬಗಳು ಸಾಮಾನ್ಯವಾಗಿ ಪುರುಷ ಪ್ರಧಾನ ಕುಟುಂಬಗಳೇ ಆಗಿವೆ. ನನ್ನ ಅಧ್ಯಯನಕ್ಕಾಗಿ ನಡೆಸಿದ 50 ಜನರ ವ್ಯಕ್ತಿ ಅಧ್ಯಯನ (Case Studies) ಸಮೀಕ್ಷೆಯಲ್ಲಿ ಶೇ.70 ಬಿಡಿ ಕುಟುಂಬ (ವಿಭಕ್ತ)ಗಳಿದ್ದರೆ ಕೇವಲ ಶೇ.30 ಮಾತ್ರ ಅವಿಭಕ್ತ ಕೂಡು ಕುಟುಂಬಗಳು ಕಂಡುಬಂದವು. ಈಗಾಗಲೇ ಕುಂಬ್ರಿ ಮರಾಠಿಗರಲ್ಲಿ ಪ್ರತಿಶತ ಶೇ.70ರಷ್ಟು ಕುಟುಂಬಗಳು ವಿಭಕ್ತ ಕುಟುಂಬಗಳೇ ಆಗಿವೆ. ಈ ಎಲ್ಲಾ ಕುಟುಂಬಗಳಲ್ಲಿ ಪುರುಷನೆ ಮನೆಯ ಯಜಮಾನ. ಕುಟುಂಬದ ಮುಖ್ಯ ತೀರ್ಮಾನಗಳನ್ನು ತೆಗೆದುಕೊಳ್ಳುವವನು ಪುರುಷನೆ. ನಾನು ಸಂದರ್ಶಿಸಿದ ಕುಟುಂಬಗಳನ್ನು, ಈ ಹಿಂದೆ ಕುಟುಂಬದ ಮುಖ್ಯ ತೀರ್ಮಾನಗಳನ್ನು ಯಾರು ತೆಗೆದುಕೊಳ್ಳುತ್ತಿದ್ದರು? ಎಂದು ಪ್ರಶ್ನಿಸಲಾಗಿತ್ತು. ಬಹುಪಾಲು ಸಂದರ್ಶಿತ ಕುಟುಂಬಗಳು, ಈ ಹಿಂದೆ ಮನೆಯ ಹಿರಿಯರು, ತಂದೆ-ತಾಯಿ ಎಲ್ಲರೂ ಸೇರಿ ಚರ್ಚಿಸುತ್ತಿದ್ದೆವು. ನಿರ್ಣಯಗಳನ್ನು ತೆಗೆದುಕೊಳ್ಳುವ ತೀರ್ಮಾನ ಅಂತಿಮವಾಗಿ ಮನೆಯ ಯಜಮಾನಿಕೆ ಪುರುಷನದೇ ಆಗಿರುತ್ತಿತ್ತು ಎಂದು ಉತ್ತರಿಸಿದರು.

ಕುಂಬ್ರಿ ಮರಾಠಿ ಕುಟುಂಬಗಳಲ್ಲಿ ಕುಟುಂಬದ ಮುಖ್ಯಸ್ಥನೇ ಮನೆಯ ಸದಸ್ಯರಿಗೆ ಬೇಕಾದ ವಸ್ತು ಕೊಳ್ಳುತ್ತಾನೆ. ಸೊಸೆಗೆ ಸೀರೆ ತರುವುದು ಸೇರಿ. ತಂದೆ ಬದುಕಿರುವಾಗ ಮಗ ಯಜಮಾನಿಕೆ ಮಾಡುವಂತಿಲ್ಲ, ಆದರೆ ಮೊದಲೆ ತಂದೆಯ ಅನುಮತಿ ಪಡೆದು ಮಗ ಕೆಲವು ಕಾರ್ಯ ನಿರ್ವಹಿಸಬಹುದು. ಕೃಷಿಗೆ ಸಂಬಂಧಿಸಿದ ಕೆಲಸದಲ್ಲೂ ತಂದೆಯದೆ ಅಂತಿಮ ತೀರ್ಮಾನ. ಕುಟುಂಬದ ಮುಖ್ಯಸ್ಥನೆ ಪ್ರತಿವರ್ಷ ಪ್ರಥಮವಾಗಿ ಭೂಮಿಗೆ ಬೀಜ ಬಿತ್ತುವ ಕಾರ್ಯ ಮಾಡುತ್ತಾನೆ. ಈ ರೀತಿ ಮುಖ್ಯಸ್ಥನು ಮಾಡದಿದ್ದರೆ, ಇತರ ಸದಸ್ಯರು ಕೃಷಿ ಚಟುವಟಿಕೆ ಮಾಡುವಂತಿಲ್ಲ. ಕುಟುಂಬದಲ್ಲಿ ಜನನ, ಮರಣ, ಪೂಜೆ, ಪುನಸ್ಕಾರ ಮುಂತಾದ ಕಾರ್ಯಗಳಲ್ಲಿ ಕುಟುಂಬದ ಮುಖ್ಯಸ್ಥನೆ ಉಚ್ಚ ಸ್ಥಾನಮಾನ ಹೊಂದಿರುತ್ತಾನೆ. ಒಂದು ವೇಳೆ ತನ್ನ ಅಸಮರ್ಥತೆಯಿಂದ ಅಥವಾ ನಿರುದ್ಯೋಗದಿಂದ ತನ್ನ ಜವಾಬ್ದಾರಿ ಸರಿಯಾಗಿ

ನಿರ್ವಹಿಸದಿದ್ದಲ್ಲಿ, ಆ ಮನೆಯ ಸ್ತ್ರೀಯು ತನ್ನ ಕುಟುಂಬದ ಏಳಿಗೆಗಾಗಿ ಮತ್ತು ರಕ್ಷಣೆಗಾಗಿ ಜವಾಬ್ದಾರಿಯನ್ನು ನಿಭಾಯಿಸಬೇಕಾಗುತ್ತದೆ. ಹಾಗೆಯೇ ಒಂದು ವೇಳೆ ಪುರುಷ ಕೆಲಸದ ಮೇಲೆ ಬಹಳ ದಿನ ಹೊರಗೆ ಹೋಗಬೇಕಾಗಿ ಬಂದಲ್ಲಿ ಸ್ತ್ರೀಯೇ ಜವಾಬ್ದಾರಿ ಹೊರುತ್ತಾಳೆ.

ಆದರೆ ಇಂದು ಮನೆಯ ಯಜಮಾನ ಕುಟುಂಬದ ಮುಖ್ಯ ಸಂಗತಿಗಳ ಕುರಿತು ನಿರ್ಣಯ ತೆಗೆದುಕೊಳ್ಳುವಾಗ ಮನೆಯ ಹೆಣ್ಣುಮಕ್ಕಳ ಅಭಿಪ್ರಾಯವನ್ನು ಪಡೆಯುತ್ತಾರಾ? ಎಂದು ಪ್ರಶ್ನಿಸಲಾಗಿತ್ತು. ಪ್ರತಿಶತ 75ರಷ್ಟು ಜನ ಹೆಣ್ಣು ಮಕ್ಕಳು ಮನೆಯ ಯಜಮಾನ ಅಭಿಪ್ರಾಯವನ್ನು ಕೇಳುವುದಿಲ್ಲ ಅಂದರೆ, 25 ಪ್ರತಿಶತ ರಷ್ಟು ಹೆಂಗಸರು ತಮ್ಮ ಮನೆಯ ಯಜಮಾನ ಮುಖ್ಯ ನಿರ್ಣಯಗಳನ್ನು ತೆಗೆದುಕೊಳ್ಳುವಾಗ ಹೆಣ್ಣು ಮಕ್ಕಳ ಅಭಿಪ್ರಾಯವನ್ನು ಕೇಳುತ್ತಾರೆ ಎಂದು ಉತ್ತರಿಸುತ್ತಾರೆ. ಆದರೆ ಹೀಗೆ ಹೆಣ್ಣು ಮಕ್ಕಳ ಅಭಿಪ್ರಾಯಗಳನ್ನು ಕೇಳುವ ಮನೆಯ ಯಜಮಾನರು ಅಂತಿಮವಾಗಿ ತಮಗೆ ತಿಳಿದ ನಿರ್ಣಯಗಳನ್ನೆ ತೆಗೆದುಕೊಳ್ಳುತ್ತಾರೆ ಎಂದು ಪ್ರತಿಶತ 40ರಷ್ಟು ಮಹಿಳೆಯರು ಉತ್ತರಿಸಿದ್ದಾರೆ, ಆದರೆ ಪ್ರತಿಶತ 60ರಷ್ಟು ಕುಟುಂಬಗಳಲ್ಲಿ ಮಹಿಳೆಯ ಅಭಿಪ್ರಾಯಗಳನ್ನು ನಿರ್ಲಕ್ಷಿಸಲಾಗುತ್ತಿದೆ ಎಂದು ಉತ್ತರಿಸಿದ್ದಾರೆ.

ನಾನು ಸಂದರ್ಶಿಸಿದ ಪ್ರತಿಶತ 60ರಷ್ಟು ಕುಟುಂಬದ ಮಹಿಳೆಯರು ಈ ಮೇಲಿನಂತೆ ಕುಟುಂಬದ ಯಜಮಾನನ ನಿರ್ಣಯಾಧಿಕಾರದ ಕುರಿತು ಪ್ರತಿಕ್ರಿಯಿಸಿದರು. ಕೂಡು ಕುಟುಂಬಗಳಲ್ಲಿಯೂ ಸಹ ಮುಖ್ಯ ನಿರ್ಣಯಗಳನ್ನು ತೆಗೆದುಕೊಳ್ಳುವ ಕುಟುಂಬದ ಗಂಡಸರೇ ಹೊರತು ಹೆಂಗಸರಲ್ಲ. ಪ್ರತಿಶತ 19ರಷ್ಟು ಕೂಡು ಕುಟುಂಬಗಳ ಹೆಂಗಸರು ಸಹ ವಿಭಕ್ತ ಕುಟುಂಬದ ಹೆಂಗಸರ ಅಭಿಪ್ರಾಯಗಳನ್ನೇ ಪುನರಾವರ್ತಿಸಿದ್ದಾರೆ. ಅಕಸ್ಮಾತ್ ಹೆಂಗಸರು ಮನೆಯ ಯಜಮಾನ ತೆಗೆದುಕೊಳ್ಳುವ ತೀರ್ಮಾನಗಳನ್ನು ಅಪೇಕ್ಷಿಸಿದಲ್ಲಿ ಯಜಮಾನ ಆ ಅಪೇಕ್ಷೆಯನ್ನು ಕ್ಷುದ್ರವಾಗಿ ಕಾಣುತ್ತಾರೆ, ಅಲ್ಲದೆ ತನ್ನ ತೀರ್ಮಾನಗಳನ್ನು ಕುಟುಂಬದ ಸದಸ್ಯರು ತಮ್ಮ ಜವಾಬ್ದಾರಿಗಳನ್ನು ನಿರ್ವಹಿಸುವ ಮೂಲಕ ಜಾರಿಗೆ ತರುವ ಅನಿವಾರ್ಯತೆಯನ್ನು ಸೃಷ್ಟಿಸುತ್ತಾನೆ. ಈ ಕಾರಣದಿಂದ ಕುಟುಂಬದ ಮುಖ್ಯ ನಿರ್ಣಯಗಳನ್ನು ತೆಗೆದುಕೊಳ್ಳುವಾಗ ಯಜಮಾನ ಮನೆಯ ಹೆಂಗಸರ ಅಭಿಪ್ರಾಯ ಕೇಳಬೇಕೆಂಬುದು ಮಹಿಳೆಯರ ಅಪೇಕ್ಷೆಯಾದರೂ ಸಹ ಪುರುಷರಾಧಿಕಾರದ ಕಾರಣಕ್ಕಾಗಿ ಔಪಚಾರಿಕ ಚರ್ಚೆಗಳು ಉಪಯುಕ್ತವಲ್ಲ ಎಂದು ಸಂದರ್ಶಿತ ಮಹಿಳೆಯರು ಅಭಿಪ್ರಾಯಪಟ್ಟಿದ್ದಾರೆ.

**ಲಿಂಗಾಧಾರಿತ ದುಡಿಮೆ ಮತ್ತು ಕುಟುಂಬದ ಯಜಮಾನಿಕೆ**

ಪಾರಂಪರಿಕ ಪಶುಪಾಲಕರು, ಕೃಷಿಕರೂ ಆದ ಕುಂಬ್ರಿ ಮರಾಠಿಗರು ಬಹುಪಾಲು ಕೃಷಿ ಕಾರ್ಮಿಕರಾಗಿ ಬದುಕುತ್ತಿದ್ದಾರೆ. ಕೆಲವರು ಮಾತ್ರ ಅತಿ ಚಿಕ್ಕ ಹಿಡುವಳಿದಾರರಾಗಿದ್ದಾರೆ.

ಬಹುಸಂಖ್ಯಾತ ಕುಣಬಿಗಳು ಭೂರಹಿತರು. ಹೆಣ್ಣು ಗಂಡುಗಳೆಲ್ಲ ತಮ್ಮ ದಣಿಗಳ ಗದ್ದೆ ಮತ್ತು ತೋಟಗಳಲ್ಲಿ ಕೃಷಿ ಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ. ಪುರುಷರಿಗೆ ಸಾಮಾನ್ಯವಾಗಿ ಮನೆಯ ಹೊರಗಿನ ಕೆಲಸ/ಚಟುವಟಿಕೆಗಳನ್ನು ವಹಿಸಿಕೊಡಲಾಗುತ್ತಿದೆ. ಪುರುಷರು, ಕೃಷಿ ಕೆಲಸ, ಬೇಟೆಯಾಡುವುದು ಇವುಗಳನ್ನು ಮಾಡುತ್ತಾರೆ. ಕೃಷಿ ಭೂಮಿಯಲ್ಲಿ ಕೂಲಿ ಕೆಲಸವನ್ನು/ ಕಾರ್ಮಿಕರಾಗಿ ಮಾಡುತ್ತಾರೆ. ಇಲ್ಲಿ ಗಂಡಸರಿಗಿಂತ ಹೆಣ್ಣಿನ ದುಡಿಮೆಯ ಸಮಯವೆ ಹೆಚ್ಚು. ಬೆಳಗಿನ ಒಂದ್ಹೊತ್ತಿನ ಜಾವದಿಂದ ಹಿಡಿದು ಮಲಗುವ ಮಧ್ಯರಾತ್ರಿಯ ವರೆಗೆ ಈ ಸಮುದಾಯದ ಮಹಿಳೆ ನಿರಂತರವಾಗಿ ದುಡಿಯುತ್ತಾಳೆ. ಬೆಳಗಿನ ಹೊತ್ತು ಮನೆಗೆಲಸ, ಅದು ದೈನಂದಿನ ಗೃಹಕೃತ್ಯದ ಭಾಗ. ಇದರ ನಂತರ ಕುಟುಂಬದ ನಿರ್ವಹಣೆಗಾಗಿ ಮಾಡುವ ಕೂಲಿ ಕೆಲಸ. ಅದು ಕೂಲಿ ಸಂಪಾದನೆಗಾಗಿ ಅಥವಾ ವಸ್ತು ರೂಪದ ಸಂಬಳದ ಕಾರಣಕ್ಕಾಗಿ ಮಾಡುವ ದಿನಗೂಲಿ, ಆನಂತರ ಮತ್ತೆ ಸಂಜೆಯ ವೇಳೆ ಗೃಹಕೃತ್ಯದ ದಿನವಿಡಿ ಕೆಲಸಕಾರ್ಯಗಳು. ದೈಹಿಕವಾಗಿ ಮತ್ತು ಮಾನಸಿಕವಾಗಿ ಮಹಿಳೆ ಪುರುಷರಿಗಿಂತ ಹೆಚ್ಚಾಗಿ ದಿನನಿತ್ಯ ತನ್ನನ್ನು ತೊಡಗಿಸಿಕೊಳ್ಳುತ್ತಾಳೆ. ದುಡಿದ ಇವಳ ಎಲ್ಲಾ ಪ್ರತಿಫಲವು ಕುಟುಂಬ ನಿರ್ವಹಣೆಗೆ ಮತ್ತು ಮನೆಯ ಯಜಮಾನನ ಹೆಚ್ಚುವರಿ ಖರ್ಚುಗಳಿಗೆ ವ್ಯಯವಾಗುತ್ತದೆ. ಇಷ್ಟಿದ್ದರೂ ಸಹ ಕುಣಬಿ ಕುಟುಂಬಗಳಲ್ಲಿ ಹೆಣ್ಣಿಗೆ ಯಾವ ಬಗೆಯ ನಿರ್ಣಯಾಧಿಕಾರಗಳಿಲ್ಲ. ಕುಂಬ್ರಿ ಮರಾಠಿ ಆರ್ಥಿಕ ಸಬಲೀಕರಣವು ಮಹಿಳೆಗೆ ಸಾಮಾಜಿಕ ಮತ್ತು ರಾಜಕೀಯ ಅಧಿಕಾರಿಗಳನ್ನು ನೀಡುತ್ತದೆ ಎಂಬ ಸಂಪ್ರದಾಯಿಕ ಸಮೀಕರಣವು ಇಲ್ಲಿ ತಲೆಕೆಳಗಾಗುತ್ತದೆ.

ಬೆಳಗಿನ ಜಾವ ಹೊತ್ತು ಹುಟ್ಟುವ ಮುನ್ನ ಪ್ರಾರಂಭವಾಗುವ ಹೆಣ್ಣಿನ ದುಡಿಮೆ ರಾತ್ರಿ ಮಲಗುವ ತನಕ ನಿರಂತರವಾಗಿರುತ್ತದೆ, ಆದರೆ ಗಂಡಸರ ದುಡಿಮೆ ಇಷ್ಟು ಸುದೀರ್ಘ ವಾಗಿರುವುದಿಲ್ಲ. ದಣಿದರೆ ಸಂಜೆಯ ವೇಳೆ ಗೆಳೆಯರ ಜೊತೆ ಆಯಾಸದ ಪರಿಹಾರಕ್ಕೆ ಅನೇಕ ಮಾರ್ಗಗಳನ್ನು ಕಂಡುಕೊಳ್ಳುವ ಅವಕಾಶ ಪುರುಷರಿಗಿದೆ. ಆದರೆ ಮನೆಗೆ ಬಂದ ತಕ್ಷಣ ಅಡುಗೆ, ಮಕ್ಕಳ ಪಾಲನೆ, ದನ ಕರು ಸಾಕಾಣಿಗೆ, ಭತ್ತದ ಸುಗ್ಗಿಯಲ್ಲಿ ರಾಶಿ ಮಾಡುವುದು, ಕಟ್ಟಿಗೆ ತರುವುದು, ತರಕಾರಿ ಬೆಳೆಯುವುದು, ಚಾಪೆ ತಯಾರಿಕೆ, ಕೆಲವು ಮಹಿಳೆಯರು ಪುರುಷರಿಗೆ ಕೃಷಿ ಕೆಲಸಗಳಲ್ಲಿ ಸಹಾಯಕರಾಗುತ್ತಾರೆ. ಮನೆಯಲ್ಲಿ ವಯಸ್ಸಾದ ಹಿರಿಯರ ಪೋಷಣೆಗಳೆಲ್ಲ ಇತ್ಯಾದಿ ಮಹಿಳೆಯರ ಹೆಗಲೇರುತ್ತವೆ. ಇದು ಪುರುಷ ಮತ್ತು ಮಹಿಳೆಯರ ನಡುವೆ ಅಸಮಾನವಾಗಿ ಹಂಚಿಕೆಯಾದ ಶ್ರಮ ವಿಭಜನೆ. ಜೊತೆಗೆ ಮಹಿಳೆಯು ಪುರುಷನಿಗಿಂತ ದೈಹಿಕವಾಗಿ ಸಬಲಳು ಎಂದು ಸಾಬೀತಾದಂತಾಗುತ್ತದೆ. ಗಂಡ ಬೇಕೆಂದಾಗ ಮಕ್ಕಳಿಗೆ ಜನ್ಮ ನೀಡುವದು ಮತ್ತು ಅವನ ಸಂತಾನದ ಸಾತತ್ಯಕ್ಕೆ ಕಾರಣವಾಗುವುದು. ಯಾವ

ಬಗೆಯ ಅಧಿಕಾರವೂ ಇಲ್ಲದಂತೆ ಬದುಕುವುದು ಕುಂಬಿ ಮಹಿಳೆಯರ ಸ್ಥಿತಿಗತಿಯಾಗಿದೆ. ದೈಹಿಕವಾಗಿ, ಕೌಟುಂಬಿಕವಾಗಿ ಮತ್ತು ಆರ್ಥಿಕವಾಗಿ ಮಹಿಳೆ ಗಂಡಸಿಗೂ ಹೆಚ್ಚು ಸಬಲಳಾಗಿದ್ದಾಳೆ ಎಂಬುದು ಮೇಲ್ನೋಟಕ್ಕೆ ಗೊತ್ತಾಗುತ್ತದೆ. ಆದರೆ ಕುಟುಂಬದ ಒಳಗೆ ಮಹಿಳೆ ಲಿಂಗಸಂಬಂಧಿ ಅಸಮಾನತೆಯನ್ನು ತೀವ್ರವಾಗಿ ಅನುಭವಿಸುತ್ತಿದ್ದಾಳೆ. ಶಿಕ್ಷಣ, ಆಸ್ತಿಯಲ್ಲಿನ ಪಾಲಿನ ಅಧಿಕಾರಕ್ಕೆ ಸಂಬಂಧಿಸಿದಂತೆ ಮಹಿಳೆ ಯಾವತ್ತೂ ಅಸಮಾನತೆಯನ್ನು ಅನುಭವಿಸುತ್ತ ಬಂದಿದ್ದಾಳೆ. ಕುಂಬ್ರಿ ಮರಾಠಿಗರ ಕುಟುಂಬದಲ್ಲಿ ಹೆಚ್ಚಿನ ದುಡಿಮೆಯ ಪಾಲು ಮಹಿಳೆಯದೆ ಆಗಿದ್ದರೂ ಸಹ ಕುಟುಂಬದ ಮೇಲಿನ ಅಧಿಕಾರ ಮತ್ತು ಕುಟುಂಬವನ್ನು ಸಾಮುದಾಯಿಕವಾಗಿ ಪ್ರತಿನಿಧಿಸುವ ಅಧಿಕಾರ ಇರುವುದು ಗಂಡಿಗೆ. ಅವಳಿಗೆ ನಿತ್ಯದ ಬದುಕಲ್ಲಿ ಯಾವ ಬಗೆಯ ಅಧಿಕಾರವಿಲ್ಲ, ಏಕೆಂದರೆ ಅವಳು ಹೆಣ್ಣು. ಇಷ್ಟಾದರೂ ಸಮಾಜ ಗಂಡು ಮಕ್ಕಳನ್ನು ಬಯಸುತ್ತದೆ. ಆದರೆ ಕುಂಬ್ರಿ ಮರಾಠಿಗರಲ್ಲಿ ಗಂಡು ಹೆಣ್ಣಿನ ಅನುಪಾತದಲ್ಲಿ ಹೆಣ್ಣಿನ ಸಂಖ್ಯೆ ಅಧಿಕವಾಗಿದೆ. ಇದಲ್ಲದೆ, ಚಿಕ್ಕಮಕ್ಕಳ ಸಾವಿನ ಸಂಖ್ಯೆಯೂ ಕಡಿಮೆ ಇದೆ. ಅಚ್ಚರಿಯ ಸಂಗತಿಯೆಂದರೆ 1 ರಿಂ 5 ಮತ್ತು 6 ರಿಂದ 17 ವರ್ಷದ ವಯೋಮನದವರಲ್ಲಿ ಹೆಣ್ಣಿನ ಸಂಖೆ ಅಧಿಕವಾಗಿದೆ.

**ಕೋಷ್ಟಕ 3**

**ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ಲಿಂಗವಾರು ವಯೋಗುಂಪು ಪ್ರಮಾಣ**

| ವಯೋಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| 0–5 | 1254 | 1293 | 2547 |
| 6–17 | 1663 | 1746 | 3409 |
| 18–40 | 2380 | 2641 | 5021 |
| 41–60 | 3124 | 3356 | 6480 |
| 61+ರ ಮೇಲ್ಪಟ್ಟ | 3048 | 3311 | 6359 |
| ಒಟ್ಟು | **11469** | **12347** | **23816** |

ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಂಖ್ಯೆ 23816, ಇದರಲ್ಲಿ ಗಂಡಸರ ಸಂಖ್ಯೆ 11469 ಇದ್ದರೆ, ಮಹಿಳೆಯರ ಸಂಖ್ಯೆ 12347 ಜನರಿದ್ದಾರೆ. ಸಮುದಾಯದ ಲಿಂಗವಾರು ವಯೋಗುಂಪು ಪ್ರಮಾಣದಲ್ಲಿ ಸ್ತ್ರೀಯರೆ ಅಧಿಕವಾಗಿದ್ದಾರೆ. ಇದರ ಪರಿಣಾಮವಾಗಿ ಆರು ವರ್ಷದೊಳಗಿನ ವಯೋಮಾನದಲ್ಲಿ ಲಿಂಗ ಪರಿಣಾಮವು



20 ದೊಳಗಿನ ವಯೋಮಾನದಲ್ಲಿ ಪ್ರತಿ 1000 ಗಂಡು ಮಕ್ಕಳಿಗೆ ಇದಿರಾಗಿ 2001ರಲ್ಲಿ 1010 ಹೆಣ್ಣು ಮಕ್ಕಳು ಇರುತ್ತಿದ್ದರು. ಆದರೆ 2011 ರಲ್ಲಿ ಇದರ ಪ್ರಮಾಣ 1077 ಆಗಿದೆ.

**ಕುಂಬ್ರಿ ಮರಾಠಿಗರ ಲಿಂಗಾನುಪಾತ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ**

ಕರ್ನಾಟಕದಲ್ಲಿ ಲಿಂಗಾನುಪಾತವು ಸರಾಸರಿ 1000 ಪುರುಷರಿಗೆ 973 ಮಹಿಳೆಯರಿದ್ದಾರೆ. ಈ ಲಿಂಗಾನುಪಾತವು ಗ್ರಾಮೀಣ ಪ್ರದೇಶದಲ್ಲಿ ಸರಾಸರಿ 979 ಹಾಗೂ ನಗರ ಪ್ರದೇಶದಲ್ಲಿ 963ರಷ್ಟಿದೆ.

**ಕೋಷ್ಟಕ 4**

**ಉತ್ತರ ಕನ್ನಡ ಜಿಲ್ಲೆಯ ಲಿಂಗಾನುಪಾತ**

| ವಿವರ | ಕರ್ನಾಟಕ | ಉತ್ತರ ಕನ್ನಡ |
|---|---|---|
| ಒಟ್ಟು | **973** | **979** |
| ಗ್ರಾಮೀಣ | **979** | **977** |
| ನಗರ | **963** | **982** |

ಉತ್ತರಕನ್ನಡ ಜಿಲ್ಲೆಯಲ್ಲಿ ಸರಾಸರಿ 1000 ಪುರುಷರಿಗೆ 979 ಮಹಿಳೆಯರಿದ್ದಾರೆ. ಈ ಲಿಂಗಾನುಪಾತವು ಗ್ರಾಮೀಣ ಪ್ರದೇಶದಲ್ಲಿ ಸರಾಸರಿ 977 ಹಾಗೂ ನಗರ ಪ್ರದೇಶದಲ್ಲಿ 982 ರಷ್ಟಿದೆ. ಒಟ್ಟಾರೆ ರಾಜ್ಯದ ಸರಾಸರಿ ಲಿಂಗಾನುಪಾತಕ್ಕೆ ಹೋಲಿಸಿದರೆ ಉತ್ತರಕನ್ನಡದಲ್ಲಿ ಸರಾಸರಿ ಲಿಂಗಾನುಪಾತದ ಪ್ರಮಾಣ ಹೆಚ್ಚಿದೆ. ಆದರೆ ಗ್ರಾಮೀಣ ಭಾಗದಲ್ಲಿ ರಾಜ್ಯದ ಸರಾಸರಿ ಲಿಂಗಾನುಪಾತಕ್ಕಿಂತ ಕಡಿಮೆ ಪ್ರಮಾಣದಲ್ಲಿ ಮಹಿಳೆಯರಿದ್ದಾರೆ. ಆದರೆ ನಗರ



ಪ್ರದೇಶದಲ್ಲಿ ರಾಜ್ಯದ ಸರಾಸರಿ ಲಿಂಗಾನುಪಾತಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಮಹಿಳೆಯರಿರುವುದು ಕಂಡುಬರುತ್ತದೆ. ಈ ಮೇಲಿನ ಅಂಕಿಅಂಶಗಳನ್ನು ಅವಲೋಕಿಸಿದಾಗ, ರಾಜ್ಯದ ಸರಾಸರಿಗಿಂತ ಉತ್ತರಕನ್ನಡ ಜಿಲ್ಲೆಯ ಲಿಂಗಾನುಪಾತವು ಏಕೆ ಹೆಚ್ಚಾಗಿದೆ ಹಾಗೂ ಉತ್ತರಕನ್ನಡ ಜಿಲ್ಲೆಯ ಗ್ರಾಮೀಣ ಪ್ರದೇಶದ ಲಿಂಗಾನುಪಾತವು ರಾಜ್ಯದ ಸರಾಸರಿಗಿಂತ ಏಕೆ ಕಡಿಮೆ ಇದೆ ಎಂಬ ಪ್ರಶ್ನೆಗಳು ಮೂಡುತ್ತವೆ. ಇಲ್ಲಿ ಇವುಗಳಿಗೆ ಉತ್ತರ ಕಂಡುಕೊಳ್ಳುವ ಅಗತ್ಯವಿದೆ.

ಈ ಜಿಲ್ಲೆಯ ದಟ್ಟವಾದ ಅರಣ್ಯ ಪ್ರದೇಶ ಮತ್ತು ಗುಡ್ಡ ಬೆಟ್ಟಗಳಿಂದ ಆವೃತ್ತವಾದ ಪ್ರದೇಶವಾಗಿದೆ. ಇಲ್ಲಿ ಹಲವಾರು ಬುಡಕಟ್ಟು ಮತ್ತು ಕೆಳವರ್ಗದ ಸಮುದಾಯಗಳು ವಾಸಿಸುತ್ತವೆ. ಬುಡಕಟ್ಟುಗಳು ಮಹಿಳೆಯರನ್ನು ತುಂಬಾ ಗೌರವಿಸುತ್ತಾರೆ. ಅದೇ ರೀತಿ ಈ ಸಮುದಾಯಗಳು ಹೆಣ್ಣನ್ನು ಗೌರವಿಸುತ್ತಾರೆ ಎಂಬುವುದು ಕ್ಷೇತ್ರಕಾರ್ಯದಲ್ಲಿ ಸಮುದಾಯಗಳ ಆಚರಣೆ, ನಂಬಿಕೆಗಳ ಅವಲೋಕನದಿಂದ ಸ್ಪಷ್ಟವಾಗುತ್ತದೆ ಹಾಗೂ ಬುಡಕಟ್ಟು ಅಧ್ಯಯನಕಾರರ ಹಲವಾರು ಕೃತಿಗಳಲ್ಲಿ ಇದನ್ನು ಉಲ್ಲೇಖಿಸಿದ್ದಾರೆ. ಅಲ್ಲದೇ ಕುಂಬ್ರಿ ಮರಾಠಿ ಸಮುದಾಯದ ಸಮೀಕ್ಷೆಯಲ್ಲಿ ಕುಟುಂಬದಲ್ಲಿ ಮಹಿಳೆಯರ ಸಂಖ್ಯೆ ಹೆಚ್ಚಾಗಿರುವುದು ಕಂಡುಬಂದಿದೆ. ಅದಕ್ಕಾಗಿ ಈ ಜಿಲ್ಲೆಯ ಲಿಂಗಾನುಪಾತ ಹೆಚ್ಚಾಗಿರುವುದಕ್ಕೆ ಈ ಸಮುದಾಯಗಳ ಬದುಕು ಕಾರಣವಾಗಿವೆ.

ಉತ್ತರಕನ್ನಡ ಜಿಲ್ಲೆಯ ಗ್ರಾಮೀಣ ಪ್ರದೇಶದ ಲಿಂಗಾನುಪಾತವು ರಾಜ್ಯದ ಸರಾಸರಿಗಿಂತ ಕಡಿಮೆ ಇದೆ. ರಾಜ್ಯದ ಇತರೆ ಕೆಲವು ಜಿಲ್ಲೆಗಳಿಗೆ ಹೋಲಿಸಿದಾಗ ಇದು ವ್ಯತಿರಿಕ್ತ ಅಂಶವಾಗಿದೆ. ಏಕೆಂದರೆ ಕೆಲವು ಜಿಲ್ಲೆಯ ಗ್ರಾಮೀಣ ಭಾಗದ ಲಿಂಗಾನುಪಾತವು ರಾಜ್ಯದ ಸರಾಸರಿಗಿಂತ

ಅಧಿಕವಾಗಿದ್ದು, ನಗರದ ಲಿಂಗಾನುಪಾತವು ಕಡಿಮೆ ಇರುವುದು ಕಂಡುಬರುತ್ತದೆ. ಅದರೆ ಈ ವ್ಯತಿರಿಕ್ತ ಅಂಶಗಳಿಂದ ಉತ್ತರಕನ್ನಡ ಜಿಲ್ಲೆಯ ಗ್ರಾಮೀಣ ಭಾಗ ಧಾರ್ಮಿಕ ನಂಬಿಕೆ ಮತ್ತು ಪುರುಷ ಪ್ರಧಾನ ಮೌಲ್ಯಗಳ ದಟ್ಟವಾದ ಪ್ರಭಾವಕ್ಕೆ ಒಳಗಾಗುತ್ತಿದೆ ಎಂಬುದು ತಿಳಿಯುತ್ತದೆ.

0 ರಿಂದ 5 ವರ್ಷ ವಯೋಮಾನದ ಮತ್ತು 6 ರಿಂದ 17 ವರ್ಷದ ವಯೋಮಾನದವರ ಲಿಂಗ ಪರಮಾಣದಲ್ಲಿ ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಅಂದರೆ ಕುಂಬ್ರಿ ಮರಾಠಿಗರ ಗಂಡು ಶಿಶುಗಳ ಪ್ರಮಾಣ ಹಾಗೂ ಹೆಣ್ಣು ಶಿಶುಗಳ ಪ್ರಮಾಣದಲ್ಲಿ ವ್ಯತ್ಯಾಸವು ಅಧಿಕವಾಗಿರುವುದಿಲ್ಲದಿರುವದು ಕಂಡುಬರುತ್ತದೆ. ಅಂದರೆ ಕುಂಬ್ರಿ ಮರಾಠಿಗರ ಒಟ್ಟಾರೆ ಜನಸಂಖ್ಯೆಯಲ್ಲಿ ಮಹಿಳೆಯರ ಸಂಖ್ಯೆ ಹೆಚ್ಚಿರುವುದು ಮೇಲ್ನೋಟಕ್ಕೆ ಗೊತ್ತಾಗುತ್ತದೆ. ಇದು ಕರ್ನಾಟಕದ ಜನಸಂಖ್ಯೆಯ ಒಟ್ಟಾರೆಯ ಲಿಂಗ ಪರಿಮಾಣವನ್ನು ಹೋಲುತ್ತದೆ. '1951 ರಲ್ಲಿ ಕರ್ನಾಟಕದ ಒಟ್ಟು ಜನಸಂಖ್ಯೆ 194.01 ಲಕ್ಷ, ಇದರಲ್ಲಿ ಪುರುಷರ ಸಂಖ್ಯೆ 98.66 ಲಕ್ಷಗಳಿದ್ದರೆ. ಸ್ತ್ರೀಯರ ಸಂಖ್ಯೆ 95.35 ಲಕ್ಷ. 1951 ರಲ್ಲಿ ಕರ್ನಾಟಕದಲ್ಲಿ ಪ್ರತಿ ಸಾವಿರ ಪುರುಷರಿಗೆ ಪ್ರತಿಯಾಗಿ 966 ಸ್ತ್ರೀಯರಿದ್ದರು, ಆದರೆ 1991 ರಲ್ಲಿ ರಾಜ್ಯದ ಜನಸಂಖ್ಯೆ 44.22 ಲಕ್ಷ, ಇದರಲ್ಲಿ ಸ್ತ್ರೀಯರ ಸಂಖ್ಯೆ 225.25 ಲಕ್ಷ ಮತ್ತು ಪುರುಷರ ಸಂಖ್ಯೆ 229.52 ಲಕ್ಷ. ಇದರ ಪ್ರಕಾರ 1991 ರಲ್ಲಿ ಕರ್ನಾಟಕದಲ್ಲಿ ಲಿಂಗ ಪರಿಮಾಣ 960. ಒಟ್ಟಾರೆ 1951 ರಿಂದ 1991 ರ ಕಾಲಾವಧಿಯಲ್ಲಿ ಕರ್ನಾಟಕದಲ್ಲಿ ಲಿಂಗ ಪ್ರಮಾಣದಲ್ಲಿ ಕಡಿತ ಉಂಟಾಗಿದೆ. ಲಿಂಗ ಪರಿಣಾಮವು 966 ರಿಂದ 960 ಕ್ಕೆ ಇಳಿದಿದೆ. 1951 ರಲ್ಲಿ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಸ್ತ್ರೀಯರ ಪ್ರಮಾಣ ಶೇಕಡ 49.14 ರಷ್ಟಿದ್ದುದು. 1991 ರಲ್ಲಿ ಶೇಕಡ 47.97 ಕ್ಕೆ ಇಳಿದಿದೆ. ಇದರ ಅರ್ಥವೆಂದರೆ ಜನಸಂಖ್ಯೆಯಲ್ಲಿ ಸ್ತ್ರೀಯರ ಪ್ರಮಾಣವು ಸಾಪೇಕ್ಷವಾಗಿ ಕಡಿಮೆಯಾಗುತ್ತ ನಡೆದಿದೆ. ಈ ಬಗೆಯ ಬೆಳವಣಿಗೆ ರಾಷ್ಟ್ರಮಟ್ಟದಲ್ಲಿ ಕಂಡುಬಂದಿದೆ. ಅಖಿಲ ಭಾರತ ಮಟ್ಟದಲ್ಲಿ 1901 ರಿಂದಲೂ ಲಿಂಗ ಪ್ರಮಾಣವು ಕಡಿಮೆಯಾಗುತ್ತಾ ಬಂದಿದೆ. 1901 ರಲ್ಲಿ ಪ್ರತಿ ಸಾವಿರ ಪುರುಷರಿಗೆ 950 ಸ್ತ್ರೀಯರಿದ್ದರೆ, 1991ರಲ್ಲಿ ಅವರ ಸಂಖ್ಯೆ 929ಕ್ಕೆ ಇಳದಿದೆ'.[5] ಮಹಿಳೆಯರ ಜನಸಂಖ್ಯೆ ಗಣನೀಯವಾಗಿ ಕಡಿಮೆಯಾಗಿರುವುದನ್ನು ಅಮರ್ತ್ಯ ಸೇನ್ ಅವರು 'ಕಳೆದು ಹೋದ ಸ್ತ್ರೀಯರು' ಎಂದು ಕರೆಯುತ್ತಾರೆ. ಕರ್ನಾಟಕದಲ್ಲಿ ಕಳೆದ 70 ವರ್ಷದ ಅವಧಿಯಲ್ಲಿ ಲಿಂಗ ಪ್ರಮಾಣದ ಗಣನೀಯ ಕುಸಿತವು ನಮ್ಮ ಸಮಾಜದಲ್ಲಿನ ಮಹಿಳೆಯರ ಕುರಿತು ಇರುವ ಕೀಳರಿಮೆ ಮತ್ತು ಅಜ್ಞಾನವನ್ನು ತೋರಿಸುತ್ತದೆ. ಮನುಷ್ಯನ ಬದುಕಿನ ಸರ್ವಾಂಗೀಣ ಶ್ರೇಯಸ್ಸಿಗೆ ಮತ್ತು ಮಾನವ ಸಂತತಿಯ ಮುಂದುವರಿಕೆಗೆ ಕಾರಣವಾಗುವ

ಮಹಿಳೆಯ ಅಸ್ತಿತ್ವವು ದಶಕಗಳಿಂದ ದಶಕಗಳಿಗೆ ಕಡಿಮೆಯಾಗುತ್ತಾ ಹೋಗುತ್ತಿರುವುದು ಆರೋಗ್ಯಕರ ಸಮಾಜದ ಲಕ್ಷಣವಲ್ಲ.

ಇಲ್ಲಿ ಕುಂಬ್ರಿ ಮರಾಠಿ ಸಮುದಾಯದ ಮಹಿಳೆಯ ವರ್ತಮಾನದ ಸಾಮಾಜಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಕುಂಬ್ರಿ ಮರಾಠಿ ಸಮುದಾಯದ ಮಹಿಳೆ ಕುಟುಂಬದ ಪ್ರಾತಿನಿಧ್ಯ, ಸಾಮಾಜಿಕ ಅಧಿಕಾರ ಮತ್ತು ಸಾಮಾಜಿಕ ಸ್ಥಾನಮಾನಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಈ ಭಾಗದ ಬರಹಕ್ಕೆ ಮುಖ್ಯವಾಗಿ ನನ್ನ Case Studyಯು ಹಲವು ಸಂದರ್ಶನಗಳನ್ನು ಕ್ರೋಢೀಕರಿಸಿ ಬಳಸಿಕೊಂಡಿದ್ದೇನೆ. ಜೊತೆಗೆ ನಾನು ಮಾಡಿದ ಏಳು ತಾಲೂಕುಗಳ 72 ಹಳ್ಳಿಗಳ ಕುಂಬ್ರಿ ಮರಾಠಿ ಸಮುದಾಯದ Household Data ವನ್ನು ಬಳಸಿಕೊಳ್ಳಲಾಗಿದೆ. ಸಾಮಾಜಿಕವಾಗಿ ಕುಂಬ್ರಿ ಮರಾಠಿ ಸಮುದಾಯದ ಮಹಿಳೆಗೆ ಇರುವ ಸ್ಥಾನಮಾನಗಳ ವರ್ತಮಾನದ ಸ್ವರೂಪವನ್ನು ಈ ಎಲ್ಲ ಅಂಕಿಅಂಶಗಳ ಮೂಲಕ ವಿವರಿಸಲು ಪ್ರಯತ್ನಿಸಲಾಗಿದೆ. ಕುಂಬ್ರಿ ಮರಾಠಿ ಸಮುದಾಯದ ಒಳಗೆ ಮಹಿಳೆಯ ಸ್ಥಾನಮಾನಗಳೇನು? ಕುಂಬ್ರಿ ಮರಾಠಿ ಸಮುದಾಯವಾದಂತಹ ಆದಿವಾಸಿ ಸಮುದಾಯದಲ್ಲಿ ಪುರುಷನಂತೆ ಮಹಿಳೆಯೂ ದುಡಿಯುತ್ತಾಳೆ. ದುಡಿಮೆಗೆ ಅನ್ವಯವಾಗುವ ದೈಹಿಕ ಶ್ರಮ ಗಂಡಸಿಗಿಂತ ಮಹಿಳೆಯದೇ ಅಧಿಕವಾಗಿದ್ದರೂ ಸಹ ಕುಂಬ್ರಿ ಮರಾಠಿ ಸಮುದಾಯದ ಕುಟುಂಬಗಳಲ್ಲಿ ಮಹಿಳೆಗೆ ಯಾವ ಬಗೆಯ ಹಕ್ಕುಗಳಾಗಲಿ ಅಥವಾ ಅಧಿಕಾರಗಳಾಗಲಿ ಇರುವುದಿಲ್ಲ. ಈ ಬಗೆಯ ಲಿಂಗ ಬೇಧ ಆದಿವಾಸಿ ಮತ್ತು ದುಡಿಯುವ ವರ್ಗಗಳಲ್ಲೂ ಇದೆ.

ಇಲ್ಲಿಯವರೆಗೆ ನಡೆದ ಅಧ್ಯಯನಗಳು ಆದಿವಾಸಿ ಮತ್ತು ಕೆಳ ಜಾತಿಗಳಲ್ಲಿ ಸಂಕೇತದ ಮಟ್ಟದಲ್ಲಾದರೂ ಮಹಿಳೆಗೆ ಸಾಮಾಜಿಕ ಅಧಿಕಾರಗಳು ಉಳಿದುಕೊಂಡಿವೆ ಎಂದು ಭಾವಿಸಿವೆ. ಆದರೆ ಈ ಸಮುದಾಯಗಳ ಚರಿತ್ರೆಯಲ್ಲಿ ಮಹಿಳೆಯ ಅನೇಕ ಬಂಡಾಯದ ಆಶಯಗಳು ವ್ಯಕ್ತವಾಗಿದ್ದರೂ ಸಹ ವರ್ತಮಾನದಲ್ಲಿ ಈ ಸಮುದಾಯಗಳ ಮಹಿಳೆಯ ಮುಖ್ಯ ವಾಹಿನಿಯು ಸಮಾಜಕ್ಕಿಂತ ಭಿನ್ನವಾಗೇನೂ ಇಲ್ಲ. ಕುಂಬ್ರಿ ಮರಾಠಿ ಸಮುದಾಯದ ಆದಿವಾಸಿಗಳಲ್ಲಿ ಮಹಿಳೆ ಕುಟುಂಬದ ಮುಖ್ಯ ತೀರ್ಮಾನಗಳನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಕನಿಷ್ಟ ಪರಿಗಣನೆಗೂ ಅರ್ಹವೆಂದು ಭಾವಿಸಲ್ಪಟ್ಟಿಲ್ಲ. ಅಲ್ಲದೆ ಸ್ತ್ರೀ ದಮನದ ಅನೇಕ ಸಾಂಸ್ಕೃತಿಕ ಆಚರಣೆಗಳು ನಿಷೇಧದ ರೂಪದಲ್ಲಿ ಇಂದಿಗೂ ಈ ಸಮುದಾಯದಲ್ಲಿ ಜೀವಂತವಾಗಿರುವದು ಅತ್ಯಂತ ಆತಂಕದ ಸಂಗತಿಯಾಗಿದೆ.

## 4. ಕುಂಬ್ರಿ ಮರಾಠಿ ಸಮುದಾಯದ ಒಳಾಡಳಿತ ಮತ್ತು ಬಳಿಗಳು

### ಕುಂಬ್ರಿ ಮರಾಠಿ ಸಮುದಾಯದ ಒಳಾಡಳಿತ ಪದ್ಧತಿ

ಕುಂಬ್ರಿ ಮರಾಠಿ ಸಮುದಾಯದಲ್ಲಿ ಒಳಾಡಳಿತ ವ್ಯವಸ್ಥೆ ಅತ್ಯಂತ ಆದಿಮ ಸ್ವರೂಪದಲ್ಲಿದೆ. ಒಂದು ಸಮುದಾಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ಐಕ್ಯತೆಗಳು ಉಳಿಯಬೇಕೆಂದರೆ ಆ ಸಮುದಾಯದ ಒಳಾಡಳಿತ ಪದ್ಧತಿಯು ಕಟ್ಟುನಿಟ್ಟಿನಿಂದ ಕೂಡಿರಬೇಕು. ಈ ನಿಟ್ಟಿನಲ್ಲಿ ಕುಂಬ್ರಿ ಮರಾಠಿ ಸಮುದಾಯದಲ್ಲಿ ಅವರ ಒಳಾಡಳಿತ ವ್ಯವಸ್ಥೆ ಬಿಗಿಯಾಗಿದೆ. ಕುಂಬ್ರಿ ಮರಾಠಿ ಸಮುದಾಯದ ಆಂತರಿಕ ಆಡಳಿತ ಪದ್ಧತಿಗೂ ಕುಣಬಿಯರ ಸಾಮಾಜಿಕ ವ್ಯವಸ್ಥೆಯಲ್ಲಿ ಒಳಾಡಳಿತಕ್ಕೂ ಅನೇಕ ಸಾಮ್ಯತೆಗಳಿವೆ. ಕಾರಣ ಈ ಎರಡೂ ಸಮುದಾಯಗಳು ಒಂದೇ ಜನಾಂಗಿಕ ಮತ್ತು ಸಾಮಾಜಿಕ ಹಿನ್ನೆಲೆಯಿಂದ ಬಂದ ಕಾರಣ ಈ ಎರಡೂ ಸಮುದಾಯಗಳ ಆಂತರಿಕ ರಚನೆ ಮತ್ತು ಕಟ್ಟುಪಾಡಗಳು ಒಂದೇ ಸ್ವರೂಪದಲ್ಲಿವೆ. ಕುಂಬ್ರಿ ಮರಾಠಿ ಸಮುದಾಯದ ಆಂತರಿಕ ರಚನೆಯಲ್ಲಿ ಈ ಕೆಳಕಂಡ ಸ್ತರಗಳಿವೆ.

1. ಬುದುವಂತ
2. ಮಿರಾಶಿ
3. ವೇಳಿಪ್
4. ಗಾವುಡ

**1. ಬುದವಂತ**

ಕುಂಬ್ರಿ ಮರಾಠಿ ಸಮುದಾಯದ ಪ್ರಮುಖನು. ಬುದುವಂತ ಎಂಬುದು ಒಂದು ಘನತೆಯ ಹುದ್ದೆಯಾಗಿದ್ದು, ಹಾಲಕ್ಕಿ ಒಕ್ಕಲಿಗ, ಮುಕ್ರಿ, ಕುಡುಬಿ, ಕುಣಬಿ ಸಮುದಾಯಗಳಲ್ಲಿ ಸಮುದಾಯದ ಮುಖಂಡನನ್ನು 'ಬುದುವಂತ' ಎಂದು ಕರೆಯಲಾಗುತ್ತದೆ. 'ಬುದುವಂತ' ಸಮುದಾಯದ ಐಕ್ಯತೆ ಮತ್ತು ಸಾಂಸ್ಕೃತಿಕ ಅನನ್ಯತೆಯ ಕಾವಲುಗಾರನಂತೆ ಕೆಲಸ ಮಾಡುತ್ತಾನೆ. ಕೆಲವೆಡೆ ಇವರು 'ಶಮನ್' ಆಗಿಯೂ ಕೆಲಸ ನಿರ್ವಹಿಸುತ್ತಾರೆ.

**2. ಮಿರಾಶಿ**

'ಮಿರಾಶಿ' ಕುಂಬ್ರಿ ಮರಾಠಿ ಸಮುದಾಯದ ಮುಖಂಡ. ಕುಂಬ್ರಿ ಮರಾಠಿ ಸಮುದಾಯದ ಧಾರ್ಮಿಕ, ಸಾಮಾಜಿಕ ಹಾಗೂ ವೈವಾಹಿಕ ಕಾರ್ಯಗಳಲ್ಲಿ ಈತ ಇಲ್ಲದಿದ್ದರೆ ಯಾವ ಕಾರ್ಯವೂ ನಡೆಯುವುದಿಲ್ಲ, ಆದ್ದರಿಂದ ಮಿರಾಶಿ ಕುಂಬ್ರಿ ಮರಾಠಿ ಸಮುದಾಯದ ಪ್ರಮುಖನಾಗಿರುತ್ತಾನೆ. ಉತ್ತರ ಕನ್ನಡದ ಉಳಿದ ಸಮುದಾಯಗಳಲ್ಲಿಯೂ ಈ 'ಮಿರಾಶಿ' ಹುದ್ದೆ ಜಾರಿಯಲ್ಲಿದೆ.

### 3. 'ವೇಳಿಪ್' ಮತ್ತು ಮಿರಾಶಿ

ಕುಂಬ್ರಿ ಮರಾಠಿ ಸಮುದಾಯದಲ್ಲಿ ಇವರಿಬ್ಬರೂ ಗ್ರಾಮದ ನ್ಯಾಯಿಕ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಬುದವಂತನಿಗೆ ಸಹಾಯ ನೀಡುವರು. ತಪ್ಪು ಮಾಡಿದವರಿಗೆ ಶಿಕ್ಷೆ ನೀಡುವ ಅಧಿಕಾರವನ್ನು ಬುದವಂತ ಮತ್ತು ಮಿರಾಶಿಗೆ ವಹಿಸಿರುತ್ತಾನೆ.

### 4. ಗಾವುಡ

ಕುಂಬ್ರಿ ಮರಾಠಿ ಸಮುದಾಯದಲ್ಲಿ ಅತ್ಯಂತ ಸ್ಥಳೀಯ ವ್ಯಾಜ್ಯಗಳನ್ನು 'ಗಾವುಡ' ಬಗೆಹರಿಸುತ್ತಾನೆ. ಚಿಕ್ಕ-ಪುಟ್ಟ ಜಗಳ, ಸರಾಯಿ ಕುಡಿಯುವುದು, ಕದ್ದು ಬಸುರಿಯಾಗುವುದು ಮುಂತಾದ ಅಪರಾಧಗಳನ್ನು ಈತ 'ಗಾವುಡ'ನು ಬಗೆಹರಿಸುತ್ತಾನೆ. ಅಂತರ್‌ಜಾತಿ ವಿವಾಹ, ಅನೈತಿಕ ಸಂಬಂಧ, ಪ್ರೇಮ ಪ್ರಕರಣಗಳು ಮುಂತಾದವುಗಳಿಗೆ ಸಮಾಜದಿಂದ ಬಹಿಷ್ಕಾರ ಹಾಕುವ ಶಿಕ್ಷ ಇದೆ. ಪ್ರೇಮ ಪ್ರಕರಣದಿಂದ ತಪ್ಪು ದಂಡ ವಿಧಿಸುವ ಹಾಗೂ ಬ್ರಾಹ್ಮಣರಿಂದ ಶಾಂತಿ ಪೂಜೆ ನಡೆಸುವ ಕ್ರಮವಿದ್ದು, ಅಂತರ್ ಜಾತಿಯ ವಿವಾಹಕ್ಕೆ ಯಾವುದೇ ವಿನಾಯಿತಿ ಇಲ್ಲ. ಒಂದು ಗ್ರಾಮದಲ್ಲಿ ವಾಸಿಸುವವರೆಲ್ಲರೂ ಒಂದೇ ಕುಲದವರು ಎಂಬ ಭಾವನೆಯನ್ನು ಹೊಂದಿರುತ್ತಾರೆ.

### ಕುಂಬ್ರಿ ಮರಾಠಿ ಸಮುದಾಯದಲ್ಲಿ ವಿಧಿ ನಿಷೇಧಗಳು

ಒಂದು ಆದಿಮ ಸಮುದಾಯದಲ್ಲಿ 'ಏನು ಮಾಡಬೇಕು' ಮತ್ತು 'ಏನು ಮಾಡಬಾರದು' ಎಂಬ ಎಚ್ಚರ ಸದಾ ಜಾಗೃತವಾಗಿರುತ್ತದೆ. 'ಏನು ಮಾಡಬೇಕು' ಮತ್ತು 'ಏನು ಮಾಡಬಾರದು' ಎಂಬ ಎಚ್ಚರವೇ ಕೆಲವು ಕಟ್ಟುನಿಟ್ಟಿನ ಕರ್ತವ್ಯಗಳನ್ನು 'ವಿಧಿಗಳ' ರೂಪದಲ್ಲಿ ಮತ್ತು ಏನನ್ನು ಮಾಡಬಾರದು ಎಂಬ ನಿಲುವನ್ನು ನಿಷೇಧಗಳ ರೂಪದಲ್ಲಿ ರೂಢಿಸಿಕೊಂಡು ಬಂದಿವೆ. ಇವುಗಳನ್ನು ವಿಧಿನಿಷೇಧಗಳೆಂದು ಕರೆಯಲಾಗುತ್ತದೆ. ಪ್ರತಿಯೊಂದು ಬುಡಕಟ್ಟುಗಳಲ್ಲಿ ಆಯಾ ಸಮುದಾಯದವರು ವಿಧಿನಿಷೇಧಗಳನ್ನು ಪಾಲಿಸಿಕೊಂಡು ಬಂದಿದ್ದಾರೆ. ಈ ನಿಷೇಧಗಳು ಆ ಸಮುದಾಯದ ನಂಬಿಕೆಗಳು, ಆರಾಧನೆಗಳು, ಭೌಗೋಳಿಕ, ಪರಿಸರ, ಇವುಗಳ ಹಿನ್ನಲೆಯಲ್ಲಿ ರೂಪುಗೊಂಡಿದ್ದು, ಈ ನಿಷೇಧಗಳಿಗೆ ಆಯಾ ಸಂಸ್ಕೃತಿಯು ನಿರ್ದಿಷ್ಟವಾದ ಕಾರಣಗಳನ್ನು ಮುನ್ನೆಲೆಗೆ ತರಲಾಗಿದೆ. ಕುಂಬ್ರಿ ಮರಾಠಿ ಸಮುದಾಯಗಳಲ್ಲಿ ಇಂತಹ ನಿಷೇಧಗಳು ಹೀಗಿವೆ.

1. ಪ್ರಾಣಿಗಳಿಗೆ ಸಂಬಂಧಿಸಿದ ನಿಷೇಧಗಳು
2. ಪಕ್ಷಿಗಳಿಗೆ ಸಂಬಂಧಿಸಿದ ನಿಷೇಧಗಳು

3. ವೃಕ್ಷ ಬಳ್ಳಿಗಳಿಗೆ ಸಂಬಂಧಿಸಿದ ನಿಷೇಧಗಳು

4. ಜಾತಿ ಕಟ್ಟಿಗೆ ಸಂಬಂಧಿಸಿದ ನಿಷೇಧಗಳು

**1. ಪ್ರಾಣಿಗಳಿಗೆ ಸಂಬಂಧಿಸಿದ ನಿಷೇಧಗಳು**

ಯಾವುದೇ ಬುಡಕಟ್ಟು ಸಮುದಾಯವಿರಲಿ, ಆಯಾ ಸಮುದಾಯಗಳು ಪ್ರಾಣಿಗಳಿಗೆ ಸಂಬಂಧಸಿದಂತೆ ಕಟ್ಟುನಿಟ್ಟಿನ ವಿಧಿಗಳನ್ನು ರೂಢಿಸಿಕೊಂಡು ಬಂದಿರುತ್ತವೆ. ಅನೇಕ ಆದಿಮ ಸಮುದಾಯಗಳ ಬಳಿಗಳೂ ಮತ್ತು ಕುಲಲಾಂಛನಗಳು ಸಹ ಪ್ರಾಣಿಗಳೇ ಆಗಿರುತ್ತವೆ. ತಮ್ಮ ಬಳಿ ಮತ್ತು ಕುಲಲಾಂಛನಗಳನ್ನು ಪ್ರತಿನಿಧಿಸುವ ಪ್ರಾಣಿಗಳನ್ನು ಆಯಾ ಬುಡಕಟ್ಟುಗಳು ಕೊಲ್ಲುವುದಿಲ್ಲ. ಮನೆಯಲ್ಲಿ ಸಾಕುವ ಕೆಲವು ಪ್ರಾಣಿಗಳನ್ನು ಕುಂಬ್ರಿ ಮರಾಠಿ ಸಮುದಾಯದವರು ಆಹಾರಕ್ಕೆ ಬಳಸುವುದಿಲ್ಲ. ಆದರೆ ಕಾಡು ಹಂದಿ, ಜಿಂಕೆ, ಕಾಡು ಕುರಿ, ಮುಳ್ಳು ಹಂದಿ, ನವಿಲು, ಸಾರಂಗ, ಮೊಲ, ಮೊದಲಾದವುಗಳನ್ನು ಆಹಾರಕ್ಕೆ ಬಳಸುತ್ತಾರೆ.

**2. ಪಕ್ಷಿಗಳಿಗೆ ಸಂಬಂಧಿಸಿದ ನಿಷೇಧಗಳು**

ಯಾವುದೇ ಬುಡಕಟ್ಟು ಸಮುದಾಯವಿರಲಿ, ಆಯಾ ಸಮುದಾಯಗಳು ಪಕ್ಷಿಗಳಿಗೆ ಸಂಬಂಧಸಿದಂತೆ ಕಟ್ಟುನಿಟ್ಟಿನ ವಿಧಿಗಳನ್ನು ರೂಢಸಿಕೊಂಡು ಬಂದಿರುತ್ತವೆ. ಅನೇಕ ಆದಿಮ ಸಮುದಾಯಗಳ ಬಳಿಗಳೂ ಮತ್ತು ಕುಲಲಾಂಛನಗಳು ಸಹ ಪಕ್ಷಿಗಳೂ ಆಗಿರುತ್ತವೆ. ತಮ್ಮ ಬಳಿ ಮತ್ತು ಕುಲಲಾಂಛನಗಳನ್ನ ಪ್ರತಿನಿಧಿಸುವ ಪಕ್ಷಿಗಳನ್ನು ಆಯಾ ಬುಡಕಟ್ಟುಗಳು ಕೊಲ್ಲುವುದಿಲ್ಲ. ಕುಂಬ್ರಿ ಮರಾಠಿ ಸಮುದಾಯದವರು ಮನೆಯಲ್ಲಿ ಸಾಕುವ ಕೋಳಿ (ಪಕ್ಷಿ)ಯನ್ನು ತಿನ್ನುವುದಿಲ್ಲ ಹಾಗೂ ಸಾಕುವುದಿಲ್ಲ. ಮತ್ತು ಅದರ ಮೊಟ್ಟೆಯನ್ನು ಕೂಡ ಆಹಾರಕ್ಕೆ ಬಳಸುವುದಿಲ್ಲ. ಒಂದು ವೇಳೆ ಕೋಳಿಯ ಹಿಕ್ಕೆಯನ್ನು ಮೆಟ್ಟಿದರೆ ಸ್ನಾನಮಾಡಿ ಗೋಮಯವನ್ನು ಮೈಗೆ ಸಿಂಪಡಿಸಿಕೊಂಡು ಮನೆಯ ಒಳಗೆ ಪ್ರವೇಶಿಸಬೇಕು. ಸಾಕು ಪ್ರಾಣಿಗಳು ಪಕ್ಷಿಗಳ ಮಾಂಸವನ್ನು ತಿನ್ನುವವರಿಗೆ ಹಿಂದಿನ ಕಾಲದಲ್ಲಿ ಬಹಿಷ್ಕಾರವನ್ನು ಹಾಕುತ್ತಿದ್ದರು. ಆದರೆ ಕುಂಬ್ರಿ ಮರಾಠಿ ಸಮುದಾಯದವರು ಕಾಡುಕೋಳಿಯನ್ನು ಆಹಾರಕ್ಕೆ ಬಳಸುತ್ತಾರೆ. ಕಾಡಿನಲ್ಲಿ ಸಾಮಾನ್ಯವಾಗಿ ಮಾಂಸಕ್ಕಾಗಿ ಬಳಸುವ ಪಕ್ಷಿಗಳನ್ನು ತಿನ್ನುವುದು, ಆದರೆ ನವಿಲನ್ನು ಬೇಟೆ ಆಡಬಾರದೆಂಬ ನಿಷೇಧವಿದೆ, ಆದರೆ ಆಕಸ್ಮಿಕವಾಗಿ ಬೇಟೆಯಾಡಿದರೆ ತಿನ್ನಬಹುದು. ಮಾಂಸಕ್ಕಾಗಿ ಉದ್ದೇಶಪೂರ್ವಕವಾಗಿ ನವಿಲನ್ನು ಬೇಟೆಯಾಡುವ ಹಾಗಿಲ್ಲ.

**3. ವೃಕ್ಷ ಬಳ್ಳಿಗಳಿಗೆ ಸಂಬಂಧಿಸಿದ ನಿಷೇಧಗಳು**

ವೃಕ್ಷ, ಬಳ್ಳಿಗೆ ಸಂಬಂಧಿಸಿದಂತೆ ಕಾಸರ್ಕನ ಮರವನ್ನು ಮನೆಯಲ್ಲಿ ಉರಿಸಬಾರದು ಮತ್ತು ಮನೆಯೊಳಗೆ ತರಕೂಡದು. ಇತರ ಜಾತಿಗಳಲ್ಲಿ ಕೂಡ ಇದು ಕಂಡುಬರುತ್ತದೆ.

ಕಾಸರ್ಕನ ಮರದ ಟೊಂಗಿಯನ್ನು ಮನೆಯ ಸುತ್ತ ಇಟ್ಟರೆ, ದೆವ್ವದ ಕಾಟವು ಇರುವುದಿಲ್ಲ ಎಂಬುದು ಅವರ ನಂಬಿಕೆಯಾಗಿದೆ. ಮನೆಯಲ್ಲಿ ಬಾಣಂತಿ ಮಗು ಸ್ನಾನದ ಬಟ್ಟಲು ಮನೆಯ ಹೊರಗೆ ಸಾಮಾನ್ಯವಾಗಿ ಇದನ್ನು ಇಟ್ಟಿರುತ್ತಾರೆ, ಇದರ ಚಿಗುರನ್ನು ಹೆಂಗಸರು ತಮ್ಮ ಗುರುತಿನಲ್ಲಿ ಇರಿಸಿಕೊಳ್ಳುತ್ತಿದ್ದರು ಹಾಗೂ ಸಣ್ಣ ಮಕ್ಕಳನ್ನು ಮನೆಯ ಹೊರಗೆ ಹೋಗುವಾಗ ಅದರ ಎಲೆಯನ್ನು ಸೊಂಟಕ್ಕೆ ಸಿಕ್ಕಿಸುವರು ಇದರಿಂದ ಅನಿಷ್ಟ, ಅಮಂಗಳ ದೂರವಾಗುತ್ತದೆ ಎಂಬ ಬಲವಾದ ನಂಬಿಕೆ ಅವರಲ್ಲಿದೆ.

ತೊಂಡೆಯ ಬಳ್ಳಿಯನ್ನು ಎಲ್ಲಾ ಮನೆಯವರು ನೆಡಬಾರದು, ಒಂದೇ ಕುಟುಂಬದ ಒಳಗೆ ಇರುವ ಯಜಮಾನ ಮಾತ್ರ ತೊಂಡೆಕಾಯಿ ಬಳ್ಳಿಯನ್ನು ನೆಡಬೇಕು. ಈ ನೆಟ್ಟ ತೊಂಡೆಯನ್ನು ಆ ಕುಟುಂಬದ ಎಲ್ಲರೂ ಬಳಸಬಹುದು, ಆದರೆ ಅದನ್ನು ನೆಡುವ ಅಧಿಕಾರ ಮಾತ್ರ ಆ ಕುಟುಂಬದ ಯಜಮಾನನಿಗೆ ಇರುವುದು. ಅವಿಭಕ್ತ ಕುಟುಂಬಗಳಲ್ಲಿ ಒಟ್ಟಿಗೆ ಅಡಿಗೆ ಮಾಡಿ ಊಟಮಾಡುವದು ಸಂಪ್ರದಾಯ. ಈ ಅಡುಗೆಗೆ ಬೇಕಾದ ತರಕಾರಿಗಳನ್ನು ಕುಟುಂಬದ ಯಾವ ಸದಸ್ಯ ಬೇಕಾದರೂ ನೆಡಬಹುದು. ಆದರೆ ತೊಂಡೆಬಳ್ಳಿಯನ್ನು ಮಾತ್ರ ನೆಡುವಂತಿಲ್ಲ. ತೊಂಡೆಬಳ್ಳಿ ಹುಟ್ಟುವ ಹಾಗೆ ಈ ಕುಟುಂಬ ಸಮಾನತೆ ಇರುವು, ಕುಟುಂಬದ ಮುಖ್ಯಸ್ಥನೆ ಪ್ರತಿವರ್ಷ ಪ್ರಥಮವಾಗಿ ಭೂಮಿಗೆ ಬೀಜ ಬಿತ್ತುವ ಕಾಯಕ ಮಾಡುತ್ತಾನೆ. ಈ ರೀತಿ ಮುಖ್ಯಸ್ಥನು ಮಾಡದಿದ್ದರೆ, ಇತರ ಸದಸ್ಯರು ಕೃಷಿ ಚಟುವಟಿಕೆ ಮಾಡುವಂತಿಲ್ಲ. ಈ ರೀತಿ ನಿಷೇಧವನ್ನು ಇಟ್ಟುಕೊಂಡಿದ್ದರೆಂದು ತಿಳಿಯುತ್ತದೆ.

**4. ಜಾತಿ ಕಟ್ಟಿಗೆ ಸಂಬಂಧಿಸಿದ ನಿಷೇಧಗಳು**

ಬುದುವಂತ, ಇವನು ಸಾಮಾಜಿಕ ಧಾರ್ಮಿಕ ಕಾರ್ಯಕ್ರಮಗಳ ಯಜಮಾನನೂ ಹೌದು. ಇವನ ಕೈಕೆಳಗೆ ಇಡೀ ಗ್ರಾಮದ ಕುಂಬ್ರಿ ಮರಾಠಿ ಸಮುದಾಯದ ಪ್ರತಿಯೊಂದು ಕಾರ್ಯ ನಡೆಯಬೇಕೆಂಬ ನಿಯಮವಿದೆ. ಸಾಮಾಜದಲ್ಲಿ ಬುದುವಂತನಿಗೆ ಅಪಾರ ಗೌರವಿದೆ. ಅವನು ಸಮಾಜದ ಎಲ್ಲಾ ಕಾರ್ಯಗಳಲ್ಲಿ ಮುಂದಿರುತ್ತಾನೆ. ತಮ್ಮ ಊರಿನ ಸಮಸ್ಯೆಗಳನ್ನು ಪರಿಹರಿಸಲು ತಮ್ಮ ಜಾತಿಯ ಎಲ್ಲರ ಸಭೆ ಇಲ್ಲವೇ ಸರ್ವಾನುಮತದಿಂದಿರಬಹುದು. ಒಮ್ಮೊಮ್ಮೆ ದಂಡವನ್ನು ವಿಧಿಸುವ ಹಕ್ಕನ್ನು ಪಡೆದಿರುತ್ತಾನೆ. ತಪ್ಪು ಮಾಡಿದವರಿಗೆ ಒಂದು ರೂಪಾಯಿಯಿಂದ ಹದಿನಾರು ರೂಪಾಯಿ ಯವರೆಗೆ ದಂಡ ವಿಧಿಸುವ ಹಕ್ಕಿದೆ. ಈ ಹಣದಲ್ಲಿ ಕೆಲ ಭಾಗವನ್ನು ಮಂಜುಗುಣಿಯ ಸೋಮೇಶ್ವರ ದೇವಸ್ಥಾನಕ್ಕೆ ವಿನಿಯೋಗಿಸಲಾಗುತ್ತದೆ. ವಿಶೇಷ ಕಾರ್ಯಕ್ರಮಗಳ ಸಂದೇಶವನ್ನು ಜಾತಿಯ ಜನರಿಗೆ ಮುಟ್ಟಿಸುವ ಕೋಲಕಾರನಿರುತ್ತಾನೆ. ಚಪ್ಪಲಿಯಿಂದ ಹೊಡೆಯುವುದು, ಹೊಡೆಸಿಕೊಳ್ಳುವುದು ಅಪರಾಧ. ಹೀಗೆ ಹೊಡೆಸಿಕೊಂಡವರನ್ನು

ಮತ್ತು ಹೊಡೆದವರನ್ನು ಜಾತಿಯಿಂದ ಹೊರಗೆ ಹಾಕಲಾಗುತ್ತಿತ್ತು. ತಮಗಿಂತ ಕೀಳು ಎಂದು ಭಾವಿಸಿರುವ ಸಮುದಾಯಗಳಲ್ಲಿ ಮನೆಗಳಲ್ಲಿ ಊಟ ಮಾಡಿದವರಿಗೆ ಸಹಾ ಇದೇ ಶಿಕ್ಷೆ ಕೊಡಲಾಗುತ್ತಿತ್ತು. ಇದನ್ನೆ ಕಟ್ಟುಕೊಡುವುದು ಎನ್ನುತ್ತಾರೆ. ನಂತರ ಅವರು ಸೀಮೆಗೆ ದಂಡಕಟ್ಟಿ ಒಳಗೆ ಬರಬೇಕಿತ್ತು. ಇಲ್ಲದಿದ್ದಲ್ಲಿ ಅವರ ಶವಸಂಸ್ಕಾರ, ಮದುವೆ ಇತರೆ ಧಾರ್ಮಿಕ ಕಾರ್ಯಗಳಲ್ಲಿ ಜಾತಿಯ ಜನರ್‍ಯಾರು ಭಾಗವಹಿಸದಂತೆ ಹೊರಗೆ ಇಡಲಾಗುತ್ತಿತ್ತು. ಕಟ್ಟು ಕೊಡಿಸಿಕೊಂಡವರು ಜಾತಿಯ ಒಳಗೆ ಬರಬೇಕಾದರೆ ಕೆಲವು ಪದ್ಧತಿಗಳನ್ನು ರೂಢಿಸಿಕೊಳ್ಳಲಾಗಿದೆ. ಕಟ್ಟು ತೆಗೆದುಕೊಂಡವರನ್ನು ಸೋಮೇಶ್ವರನ ದೇವಸ್ಥಾನಕ್ಕೆ ಕರೆದುಕೊಂಡು ಹೋಗಲಾಗುತ್ತದೆ. ಆ ದೇವಸ್ಥಾನದ ಪೂಜಾರಿಯು ದೇವರ ಮೂರ್ತಿಯನ್ನು ತೊಳೆದು ಅದರ ತೀರ್ಥವನ್ನು ಸ್ನಾನ ಮಾಡಿ ಬಂದ ಅಪರಾಧಿಗೆ ಕೊಡುತ್ತಾನೆ. ಆತ ದೇವರ ಈ ತೀರ್ಥವನ್ನು ಕುಡಿದು ಮೈಗೆಲ್ಲಾ ಹಚ್ಚಿಕೊಂಡಾಗ ತಾನು ಜಾತಿಯ ಒಳಗೆ ಬಂದಂತೆ. ಆ ನಂತರ ಜಾತಿಯ ಜನಕ್ಕೆ ಅನ್ನ ಸಂತರ್ಪಣೆ ಮಾಡಿಸಬೇಕು.

ವಿಧವೆಯರು ಬಸುರಿಯಾದರೆ ಅದಕ್ಕೆ ಕುಂಬ್ರಿ ಮರಾಠಿ ಸಮುದಾಯದಲ್ಲಿ ತೀವ್ರವಾದ ಶಿಕ್ಷೆಗಳಿವೆ. ಈ ಘಟನೆಗೆ ಕಾರಣನಾದ ವ್ಯಕಿಯನ್ನು ಗೋಕರ್ಣಕ್ಕೆ ಕರೆದುಕೊಂಡು ಹೋಗಿ ತಮ್ಮದೆ ಜಾತಿಯ ಮನುಷ್ಯನ ಮೂಲಕ ಗಡ್ಡ ತಲೆಯ ಕೂದಲನ್ನು ಬೋಳಿಸಲಾಗುತ್ತದೆ. ಅಲ್ಲಿಂದ ಸಮುದ್ರದ ಸ್ನಾನ ಮಾಡಿಸಿ ಮಹಾಬಲೇಶ್ವರನ ದರ್ಶನ ಮಾಡಿಸಿ ಅಲ್ಲಿಯ ಪುರೋಹಿತರಿಗೆ ಎರಡು ಮೊರ ಅಕ್ಕಿ, ಒಂದು ಕಾಯಿ, ಒಂದು ತಾಮ್ರದ ನಾಣ್ಯ ಕೊಟ್ಟು ಊರಿಗೆ ಕರೆದುಕೊಂಡು ಬರಲಾಗುತ್ತದೆ. ಹಾಗೆ ಬಂದ ಮೇಲೆ ಇಬ್ಬರ ಗೃಹಸ್ಥರ ಎದುರು ಮತ್ತೊಮ್ಮೆ ಸ್ನಾನ ಮಾಡಿಸಿ ಹುಲ್ಲಿನಿಂದ ನಿರ್ಮಿಸಿದ ಗುಡಿಸಿಲಿನಲ್ಲಿ ಅವರನ್ನು ಹೊಕ್ಕು ಹೊರಗೆ ಬರುವಂತೆ ಹೇಳಲಾಗುತ್ತದೆ. ಅದಾದ ನಂತರ ಆ ಗುಡಿಸಿಲಿಗೆ ಬೆಂಕಿಕೊಟ್ಟು ಸುಡಲಾಗುತ್ತದೆ. ಹೀಗೆ ಏಳು ಗುಡಿಸಿಲುಗಳನ್ನು ಸುಟ್ಟಮೇಲೆ ಸೋಮೇಶ್ವರ ದೇವರ ಬಳಿ ಕರೆದುಕೊಂಡು ಹೋಗಿ ತೀರ್ಥ ಕೊಡಿಸಿದ ಮೇಲೆ ಊಟಕ್ಕೆ ಸೇರಿಸಿಕೊಳ್ಳುತ್ತಾರೆ. ಹಾಗೆಯೆ ಮದುವೆಯಾದ ಹೆಣ್ಣು ವ್ಯಭಿಚಾರ ಮಾಡಿದರೆ ಇದೇ ರೀತಿಯ ಶಿಕ್ಷೆಯನ್ನು ಗಂಡನಿಂದ ಕೊಡಿಸಲಾಗುತ್ತದೆ. ಬುದುವಂತನಿಗೆ ಅಪಮಾನ ಮಾಡಿದರೆ ಅಥವಾ ಅವನೆದುರು ಅಸಭ್ಯ ರೀತಿಯಿಂದ ವರ್ತಿಸಿದರೆ ದಂಡ ವಿಧಿಸಲಾಗುತ್ತದೆ. ಕಟ್ಟುಕೊಟ್ಟ ಮೇಲೆ ತಕ್ಷಣ ಬಂದು ಒಪ್ಪಿಕೊಂಡು ಶಿಕ್ಷೆಯನ್ನು ಸ್ವೀಕರಿಸಿದರೆ ಅವರ ಜಾತಿಯ ಒಳಗೆ ಬರುತ್ತಾರೆ. ಇಲ್ಲದಿದ್ದರೆ ಜೀವನ ಪೂರ್ತಿ ಹೊರಗೆ ಇರಬೇಕಾಗುತ್ತದೆ. ಇವರನ್ನು ಬಾಂದೆಯವರೆಂದು ಕರೆಯಲಾಗುತ್ತದೆ.

ಈ ಬುದವಂತರ ಮೇಲೆ ಮೂರು ಹಳ್ಳಿಯ, ಹದಿನೆಂಟು ಹಳ್ಳಿಗಳ ಬಾರಕ ಹಾಗೂ ಗಡ್ಡೆಯ ಕೋಲಕಾರರಿರುತ್ತಾರೆ. ಈ ಸಮುದಾಯದೊಳಗೆ ಬರುವ ಸಮಸ್ಯೆಗಳನ್ನು ಆಯಾ

ಊರಿನ ಬುದುವಂತರ ಸಂಗಡ ಚರ್ಚಿಸಿ ಬಗೆಹರಿಸುತ್ತಾರೆ. ಅಲ್ಲದೆ ಶಿಕ್ಷೆಯನ್ನು ವಿಧಿಸುವ ಅಧಿಕಾರ ಕೂಡಾ ಈ ದೈವದ ಯಜಮಾನನಿಗಿರುತ್ತದೆ. ನಾಲ್ಕು ಗಡ್ಡೆಯ ಬಾರಕ, ಕೋಲಕಾರರು ಮೂರು ವರ್ಷಗಳಿಗೊಮ್ಮೆ ಸಭೆ ಸೇರಿ, ಊರಿನ ಬುದುವಂತರು ನೀಡಲಾಗದ ಪರಿಹಾರಗಳಿಗೆ ಉತ್ತರ ಕಂಡುಕೊಳ್ಳುತ್ತಾರೆ. ಈ ಪಂಚಾಯತಿಯು ಹಿಂದಿನ ದಿನಗಳಲ್ಲಿ ಮೂರು ದಿನಗಳಿಂದ ಹತ್ತು ದಿನಗಳವರೆಗೆ ನಡೆಯುತ್ತಿತ್ತು. ಈ ಗಡ್ಡೆ ಪಂಚಾಯತಿಯಲ್ಲಿ ಸಮಾಜದ ಒಗ್ಗಟ್ಟಿಗೆ ಅವಶ್ಯವಾದ ತೀರ್ಮಾನಗಳನ್ನು ಕೈಗೊಳ್ಳಲಾಗುತ್ತದೆ. ಊರು-ಊರುಗಳ ನಡುವೆ ಜಗಳಗಳಿದ್ದಲ್ಲಿ ಕೂಡಾ ಇಲ್ಲಿಯೇ ತೀರ್ಮಾನವಾಗುತ್ತದೆ. ಈ ಗಡ್ಡೆಗಳ ಸಭೆಗಾಗಿ ಪ್ರತಿ ಮನೆಯವರು ನಾಲ್ಕಾಣೆ, ಆರರಿಂದ ಎಂಟು ಮೊರ ಅಕ್ಕಿ ಹಾಗೂ ಒಂದು ಕಾಯನ್ನು ಬುದುವಂತನಿಗೆ ಕೊಡಬೇಕು. ಈಗ ನಾಲ್ಕಾಣೆ ಬದಲಿಗೆ ಪ್ರತಿ ಮನೆಗೂ ಐದು ರೂಪಾಯಿ ಪಡೆಯಲಾಗುತ್ತದೆ.

ಈ ಆಂತರಿಕ ಆಡಳಿತದ ಮೂಲಕ ತನ್ನದೇ ಆದ ವ್ಯವಸ್ಥಿತ ರೀತಿಯಲ್ಲಿ ಸಮಾಜದ ಹೊಣೆಯನ್ನು ಹೊತ್ತುಕೊಂಡು ಕ್ರಮಬದ್ಧವಾಗಿ ನಡೆಸಿಕೊಂಡು ಹೋಗುತ್ತಾರೆ. ಇಲ್ಲಿ ಬುದುವಂತ ಅಂದರೆ ಮುಖ್ಯ ಯಜಮಾನ. ಇವರು ಸಾಮಾಜಿಕ, ಧಾರ್ಮಿಕ ಕಾರ್ಯಕ್ರಮಗಳಿಗೆ ಮುಂದಾಳು. ಇವರಿಗೆ ಸಮಾಜದಲ್ಲಿ ಒಳ್ಳೆಯ ಗೌರವವಿದೆ. ಇವರ ಬಗ್ಗೆ ಸಮುದಾಯದ ಯಾರೂ ಅವಾಚ್ಯವಾಗಿ ಕೂಡ ಮಾತಾಡುವಂತಿಲ್ಲ. ಹೆಂಗಸರು ಇವರೆದರು ತಲೆ ಎತ್ತಿ ಮಾತಾಡುವುದಿಲ್ಲ. ಬುದುವಂತರ ತೀರ್ಪನ್ನು ಅಪ್ಪಿತಪ್ಪಿ ಕೂಡಾ ಪ್ರಶ್ನೆ ಮಾಡುವಂತಿಲ್ಲ. ಇದರ ವಿಶೇಷವೆಂದರೆ ಕಟ್ಟೆ ಮನೆಗಳಲ್ಲಿ ಹೆಣ್ಣುಮಕ್ಕಳು ಭಾಗವಹಿಸುವುದಿಲ್ಲ. ಆದರೆ ವಿಶೇಷ ಪ್ರಕರಣಗಳಲ್ಲಿ ಅಗತ್ಯವಿದ್ದಾಗ ಮಾತ್ರ ಹೆಣ್ಣುಮಕ್ಕಳನ್ನು ಪಂಚಾಯತಿಗೆ ಕರೆಸಲಾಗುತ್ತದೆ. ಪಾರಂಪರಿಕ ಕಟ್ಟುಪಾಡುಗಳು ಸಮುದಾಯದ ಹೊಸ ತಲೆಮಾರಿನವರಿಗೆ ಬಿಗಿ ಎನಿಸತೊಡಗಿವೆ. ರಾಜಕಾರಣವು ಪ್ರತಿ ಕೊಪ್ಪವನ್ನು ತಲುಪಿರುವುದರಿಂದ ತಮ್ಮ ಮುಖಂಡರನ್ನು ಪ್ರಶ್ನೆ ಮಾಡುವ ಮನೋಭಾವ ಬೆಳೆಯುತ್ತಿದೆ. ಇದರಿಂದ ಸಾಮಾಜಿಕ ಸಂಬಂಧಗಳು ಕ್ಷೀಣಿಸುತ್ತಿವೆ. ವ್ಯಭಿಚಾರದಂತಹ ಸಂದರ್ಭದಲ್ಲಿ ಅಪರಾಧಿಗೆ ಕೊಡುವ ಶಿಕ್ಷೆಯ ಸ್ವರೂಪ ಮತ್ತು ಮಾದರಿಗಳನ್ನು ಗಮನಿಸಿದರೆ ಸಾಮಾಜಿಕ ಅನೈತಿಕತೆಯ ಬಗ್ಗೆ ಅವರಿಗೆ ಇರಬಹುದಾದ ನೈತಿಕ ಎಚ್ಚರಿಕೆಯನ್ನು ಗಮನಿಸಬಹುದು.

**ಕುಂಬ್ರಿ ಮರಾಠಿ ಸಮುದಾಯದ ಸೀಮಾ ಪದ್ಧತಿ**

ಕುಂಬ್ರಿ ಮರಾಠಿ ಸಮುದಾಯದಲ್ಲಿ ಜಮ್ಮಾ ಪದ್ಧತಿ ಅಥವಾ ಸೀಮಾ ಪದ್ಧತಿ ಅಸ್ತಿತ್ವದಲ್ಲಿದೆ. ಕುಣಬಿಯರಲ್ಲೂ ಜಮ್ಮಾ ಪದ್ಧತಿ ರೂಢಿಯಲ್ಲಿದೆ. ಕುಣಬಿ ಸಮುದಾಯದ ವಾಸಸ್ಥಳಗಳಾದ ಅನೇಕ ಕುಳಾವಿಗಳು(ಗ್ರಾಮಗಳು) ಸೇರಿದ ಒಂದು ಘಟಕವನ್ನು ಸೀಮೆ

ಎಂದು ಕರೆಯಲಾಗುತ್ತದೆ. ಈ ಜಮ್ಮಾ ಮತ್ತು ಸೀಮೆ ಒಂದು ವಿಶಿಷ್ಟವಾದ ಸಾಂಸ್ಕೃತಿಕ ಪರಿಪ್ರೇಕ್ಷ್ಯವಾಗಿದ್ದು, ಒಂದು ಅನೂಹ್ಯ ಎಲ್ಲೆಯಾಗಿ ಪರಿಭಾವಿಸಲ್ಪಡುತ್ತದೆ. ಅವರ ಬೇಟೆ, ಕುಮರಿ ಬೇಸಾಯ, ಅವರನ್ನು ಕಾಯುವ ವಿವಿಧ ದೈವಗಳ ವ್ಯಾಪ್ತಿಗಳನ್ನು ಈ ಸೀಮೆ ನಿರ್ದಿಷ್ಟಪಡಿಸುತ್ತದೆ.

'ಯಾವುದೇ ಬುಡಕಟ್ಟು ಸಮುದಾಯ ತಾವು ತಲತಲಾಂತರಗಳಿಂದ ಜೀವಿಸಿದ ಪರಿಚಿತ ಪರಿಸರದಲ್ಲಿ ತಮ್ಮ ಪೂರ್ಣಮಟ್ಟದ ಬುಡಕಟ್ಟು ಸಂಸ್ಕೃತಿಯ ನೆಮ್ಮದಿಯ ಬದುಕಿನ ಚಟುವಟಿಕೆಗಳಿಗಾಗಿ ತಮಗೆ ಬೇಕಾದಷ್ಟು ಸಂಪನ್ಮೂಲಾಧಾರಿತ ಕಾಡನ್ನು ಹಳ್ಳಿಯ ಸುತ್ತಲು ಸಾಂಪ್ರದಾಯಿಕವಾಗಿ ಗುರುತಿಸಿಕೊಂಡ ಸಾಂಸ್ಕೃತಿಕ ಗಡಿ ರೇಖೆಯನ್ನು ಸೀಮಾ, ಜಮ್ಮಾ, ಗಡಿಯೆಂದು ಕರೆಯಲಾಗುತ್ತದೆ. ಹೀಗೆ ಸಾವಿರಾರು ವರ್ಷಗಳಿಂದಲೂ ನಿರ್ಮಿಸಿಕೊಂಡ ಈ ಗಡಿ ರೇಖೆಯೊಳಗೆ ನಿರ್ಧಿಷ್ಟ ಬುಡಕಟ್ಟು ಸಮುದಾಯ ತನ್ನ ಬದುಕಿದಾಗಿ ಕಾಡಿನ ಉತ್ಪನ್ನ, ಆಹಾರಕ್ಕಾಗಿ ಬೇಸಾಯ ಹಾಗೂ ಇಡೀ ಬುಡಕಟ್ಟು ಸಮುದಾಯದ ಸಾಂಸ್ಕೃತಿಕ ಬದುಕಿನ ಅವಿಚ್ಛಿನ್ನ ಚಟುವಟಿಕೆಯ ಭಾಗವಾಗಿರುತ್ತದೆ. ಇದನ್ನೇ ಸೀಮಾ ಪದ್ಧತಿಯೆಂದು ಕರೆಯಲಾಗುತ್ತದೆ. ತಲೆತಲಾಂತರಗಳಿಂದ ಮಡಿದ ಬುಡಕಟ್ಟು ಪೂರ್ವಜರ ಆತ್ಮಗಳು ಈ ಸೀಮಾ ರೇಖೆಯ ಒಳಗಿನ ಕ್ಷೇತ್ರದಲ್ಲಿ ನೆಲೆಸಿದ್ದು, ಕಾಡನ್ನು ಮತ್ತು ಕಾಡಿನ ಸಂಪನ್ಮೂಲಗಳನ್ನು ಬುಡಕಟ್ಟು ಹಳ್ಳಿಯವರಿಗಾಗಿ ರಕ್ಷಿಸುತ್ತಾ ಸಂಚರಿಸುತ್ತಿರುತ್ತವೆ, ಇವರ ಆತ್ಮಗಳು ಹಳ್ಳಿಯ ಗಡಿರೇಖೆಯ ಅಂಚುಗಳಲ್ಲಿ ಕಲ್ಲಿನ ಗುಂಡಿನ ರೂಪದಲ್ಲಿಯೂ, ಮರಗಳಲ್ಲಿಯೂ ಇದ್ದು ಸೀಮೆಯನ್ನು ರಕ್ಷಿಸುತ್ತಾರೆಂಬ ಗಾಢವಾದ ನಂಬಿಕೆಯಿಂದಾಗಿ ಆ ಬುಡಕಟ್ಟು ಸಮುದಾಯಕ್ಕೆ ಗಡಿಯ ವ್ಯಾಪ್ತಿಯ ಒಳಗಿನ ಬದುಕು ನಿಶ್ಚಿಂತೆಯಿಂದ ಇರುತ್ತದೆ. ಹೀಗೆ ಮಡಿದವರ ಆತ್ಮಗಳಲ್ಲದೇ ಆತ್ಮಗಳನ್ನು ರಕ್ಷಿಸುವ ದೇವತೆಗಳು, ರಕ್ಷಣಾ ದೇವರುಗಳು ಬೇರೆ ಬೇರೆಯವೆ ಇದ್ದು, ಒಂದಕ್ಕೊಂದು ಪರಸ್ಪರ ಪೂರಕವಾಗಿ ಸೀಮಾ ಕ್ಷೇತ್ರದ ವ್ಯಾಪ್ತಿಯ ಸಂರಕ್ಷಣೆಯ ಜವಾಬ್ದಾರಿಯನ್ನು ಹೊಂದಿರುತ್ತವೆ.

ಯಾವುದೇ ಕುಳಾವಿಯ ಸೀಮೆಯೊಳಗೆ ಬೇರೆ ಸೀಮೆ ಪ್ರವೇಶವನ್ನು ನಿಷೇಧಿಸಲಾಗಿರುತ್ತದೆ. ಒಂದು ಕುಳಾವಿಗೆ ಸಂಬಂಧಪಟ್ಟ ಕಾಡಿನ ಸೀಮಾ ಕಾರ್ಯಕ್ಷೇತ್ರ ಮೂರ್‍ನಾಲ್ಕು ಕಿಲೋಮೀಟರ್ ವ್ಯಾಪ್ತಿಯಿಂದ ಐದಾರು ಕಿಲೋಮೀಟರ್ ವ್ಯಾಪ್ತಿಯವರೆಗೂ ಜಮ್ಮಾಗಳು ಇರುತ್ತವೆ. ಈ ಸೀಮೆಯ ವ್ಯಾಪ್ತಿಯೊಳಗೆ ಬುಡಕಟ್ಟು ಸಮುದಾಯವೊಂದು ತನ್ನ ಸಾಮಾಜಿಕ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ರೂಪಿಸಿಕೊಂಡು ಬಂದಿರುತ್ತದೆ. ನಿರ್ದಿಷ್ಟ ಕುಳಾವಿಯ ಕಿರುಅರಣ್ಯ ಉತ್ಪನ್ನಗಳ ಒಡೆತನ ನಿರ್ದಿಷ್ಟ ಕುಳಾವಿಗೆ ಮಾತ್ರ ಮೀಸಲಿರುತ್ತದೆ. ಅಲ್ಲಿ ಸಿಗುವ ಸೀಗೆ,

ಜೇನು, ಮುರುಗಲು, ಅಮಸೋಲ್, ಅಂಟುವಾಳ, ಔಷಧಿ ಸಸ್ಯಗಳು, ಕಾಡು ಮೃಗ ಬೇಟೆ ಹಾಗೂ ಅಪಾರ ಕಾಡಿನ ಉತ್ಪನ್ನಗಳನ್ನು ಬೇರೆ ಕುಳಾವಿಯರು ಪಡೆಯುವ ಹಕ್ಕಿರುವುದಿಲ್ಲ ಹಾಗೂ ಆಕ್ರಮಿಸುವಂತಿಲ್ಲ. ಹಾಗೊಂದು ವೇಳೆ ನಿರ್ದಿಷ್ಟ ಹಳ್ಳಿಗೆ ಸೇರಿದ ಕಾಡಿನ ಗಡಿ ವ್ಯಾಪ್ತಿಯಲ್ಲಿ ಬೇರೆ ಕುಳಾವಿಯವರಾಗಲಿ ಅಥವಾ ಬೇರೆಯವರಾಗಲಿ ಅತಿಕ್ರಮಣ ಮಾಡಿ ಸಂಪನ್ಮೂಲ ಪಡೆದವರಾದರೆ ಸಂಬಂಧಪಟ್ಟ ಆತ್ಮಗಳು ಅಥವಾ ಗಡಿ ದೇವತೆಗಳು ಸಂಬಂಧಪಟ್ಟವರನ್ನು ಸುಮ್ಮನೆ ಬಿಡುವುದಿಲ್ಲವೆಂಬ ನಂಬಿಕೆ ಅವರಲ್ಲಿ ಗಾಢವಾಗಿವೆ. ಈ ಗಡಿಯೊಳಗಿನ ಸೀಮಾಕ್ಷೇತ್ರಗಳಲ್ಲಿ ಸಂಬಂಧಪಟ್ಟ ಕುಳಾವಿಯವರಾದರು ಆತ್ಮಗಳಿಗೆ, ದೇವತೆಗಳಿಗೆ ಕೇಳದೆ ಕಾಡಿನ ಯಾವುದೇ ಉತ್ಪನ್ನ ತೆಗೆಯುವಹಾಗಿಲ್ಲ. ಒಂದು ಸಣ್ಣ ಸಸಿ ಇರಲಿ, ಒಣಗಿದ ಮರ ಕಡಿಯಬೇಕಾದರೂ ಸಂಬಂಧಪಟ್ಟ ಆತ್ಮಗಳಿಗೆ ಕೇಳಿ ಪೂಜೆ ಮಾಡಿ ಅನುಮತಿ ಪಡೆದ ನಂತರವೇ ಮಾಡಬೇಕಾಗುತ್ತದೆ. ಸಂಬಂಧಪಟ್ಟ ಪೂರ್ವಜರ ಆತ್ಮಗಳು, ಗಡಿ ದೇವತೆಗಳು, ಕುಳಾವಿಯ ಸಮುದಾಯವನ್ನು ಯಾವತ್ತೂ ಕಾಯುತ್ತಿರುತ್ತಾರೆ. ಹಾಗಾಗಿ ಗಡಿ ವ್ಯಾಪ್ತಿಯ ಕ್ಷೇತ್ರದಲ್ಲಿ ಕುಂಬ್ರಿ ಮರಾಠಿಗರು ಯಾವುದೇ ಭೂತ–ಪ್ರೇತಗಳ, ಕಾಡಿನ ಕೆಟ್ಟ ಮೃಗಗಳ ಭಯವಿಲ್ಲದೆ ನೆಮ್ಮದಿಯಿಂದ ರಾತ್ರಿಯ ವೇಳೆಯಲ್ಲೂ ಸಂಚರಿಸಿರುತ್ತಾರೆ. ಇವರು ಕಾಡನ್ನಷ್ಟೇ ಅಲ್ಲ, ಇವರು ವ್ಯವಸಾಯ ಮಾಡಿರುವ ಕೃಷಿ ಜಮೀನನ್ನು ಕೂಡ ದನಕರು, ಇತರು ಕಾಡು ಮೃಗಗಳಿಂದ ಆತ್ಮಗಳು, ವಾಗ್ರೋಗಳು ಕಾಪಾಡುತ್ತವೆ. ಗಡಿ ರೇಖೆ ಅಂಚುಗಳಲ್ಲಿ ಬೇರೆ ಬೇರೆ ಆತ್ಮಗಳ ಕಲ್ಲುಗಳನ್ನು ಇಟ್ಟು ಗಡಿ ರೇಖೆಯನ್ನು ಗುರುತಿಸಿರುತ್ತಾರೆ. ಕಾಡಿನಲ್ಲಿ ಕುಂಬ್ರಿ ಮರಾಠಿಗರು ಪ್ರತಿಯೊಂದು ಹಳ್ಳಿಗಳಿಗೆ ಪ್ರತ್ಯೇಕವಾದ ಗಡಿ ವ್ಯಾಪ್ತಿಯ ಪ್ರದೇಶಗಳಿದ್ದು, ಪ್ರತಿ ಹಳ್ಳಿಗಳಿಗೂ ವಿಭಿನ್ನವಾದ ಆತ್ಮಗಳೂ, ದೇವತೆಗಳೂ, ಗಡಿವ್ಯಾಪ್ತಿ ಪ್ರದೇಶವನ್ನು ರಕ್ಷಿಸುತ್ತಿರುತ್ತವೆ. ಇವುಗಳಿಗೆ ಪ್ರತಿ ಹಳ್ಳಿಯ ಸಮುದಾಯ ಪೂಜೆಗಳನ್ನು ಹಾಗೂ ಜಾತ್ರೆಗಳನ್ನು ನಡೆಸುತ್ತಿರುತ್ತಾರೆ.

ಆಯಾ ಜಮ್ಮಾದ ವ್ಯಾಪ್ತಿ ಪ್ರದೇಶದೊಳಗಿರುವ ಕಾಡಿನ ಉತ್ಪನ್ನಗಳನ್ನು ಬೇರೆ ಯಾರೂ ತೆಗೆಯುವ ಹಾಗಿಲ್ಲ. ಖುದ್ದು ಕುಂಬ್ರಿ ಮರಾಠಿಗರ ಬೇರೆ ಸೀಮೆಯವರು ಇನ್ನೊಂದು ಜಮ್ಮಾದ ಒಳಗಿನ ಕಾಡಿನ ಕಾಳು ಮೆಣಸು, ಜೇನುತುಪ್ಪ, ಸೀಗೆ, ವಾಟೆಹುಳಿ, ಮುರುಗಲಿ, ತೆಗೆಯುವ ಮೊದಲು ಗಾಂಗೋಡ ಕಾಳ ಸತ್ಪುರುಷರಿಗೆ 'ಮಾತನ್' ಪೂಜೆಯನ್ನು ಬುದ್ಧಿವಂತನ ಮೂಲಕ ನೆರವೇರಿಸಿ ಅನುಮತಿ ಪಡೆದ ನಂತರವಷ್ಟೇ ಸಂಗ್ರಹಿಸಬಹುದು. ಅಲ್ಲದೆ ಅವರು ಬೆಳೆದ ವರ್ಷದ ಮೊದಲ ಬೆಳೆಯನ್ನು ಕೂಡ ಈ ರೀತಿ 'ಮಾತನ್' ಪೂಜೆ ನೆರವೇರಿಸಿ ಅನುಮತಿ ಪಡೆದ ಮೇಲೆ ಬಳಸಬಹುದು. ಸೀಮಾ ರೇಖೆಯ ಒಳಗಿನ ವ್ಯಾಪ್ತಿ ಪ್ರದೇಶದ ಕಾಡಲ್ಲಿ ಯಾರೇ ಕಳ್ಳತನ ಮಾಡಲಿ, ಪ್ರಾಣಿಗಳನ್ನು ಭೇಟೆಯಾಡಲಿ ಅವರನ್ನು ಎಳುಕಾಳು

ಸತ್ಪುರುಷರು ಇಲ್ಲಿಯವರೆಗೂ ಬಿಟ್ಟಿಲ್ಲ. ಸತ್ಪುರುಷರು ಕಳ್ಳರನ್ನು ಬಿಡುವುದಿಲ್ಲವೆಂಬುದು ಹಳ್ಳಿಯ ಜನರ ಗಾಢವಾದ ನಂಬಿಕೆ. ಈಗಲೂ ಅರಣ್ಯ ಇಲಾಖೆಯವರು ಕೂಡ ಯಾವುದೇ ಮರವನ್ನು ಕಡಿಯಬೇಕಾದರೂ ಕೂಡ ಕಾಳ ಸತ್ಪುರುಷರಿಗೆ ಪೂಜೆ ಸಲ್ಲಿಸಿ ಹೇಳಿಕೆ ಪಡೆದೇ ಮರ ಕಡಿಯಬೇಕಾಗುತ್ತದೆ. ಈ ಸಂಪ್ರದಾಯ ಇಂದಿಗೂ ಚಾಲ್ತಿಯಲ್ಲಿದೆ ಹಾಗಾಗಿ ಇಲ್ಲಿಯವರೆಗೂ ಯಾರು ಈ ನಿಯಮ ಮೀರಿ ದೇವರನ್ನು ಕೇಳದೆ ಮರ ಇರಲಿ, ಒಂದು ಕಡ್ಡಿಯನ್ನು ಕಾಡಿನಿಂದ ತೆಗೆದುಕೊಂಡು ಹೋಗುವುದಿಲ್ಲ. ಹೀಗೆ ದೇವರ ಅನುಮತಿ ಪಡೆಯದೆ ಮರಗಳ್ಳತನ ಹಾಗೂ ಕಾಡಿನ ಉತ್ಪನ್ನ ಕದ್ದವರು ಬೇರೆ ಬೇರೆ ರೀತಿ ಶಿಕ್ಷೆಗೊಳಗೊಂಡು ನಾಶವಾದ ಬಗ್ಗೆ ಇಲ್ಲಿ ದಂತ ಕಥೆಗಳೇ ಇವೆ.

ಹೀಗೆ ಎಲ್ಲಾ ಕುಂಬ್ರಿ ಮರಾಠಿ ಹಳ್ಳಿಗಳಲ್ಲೂ ಕೂಡ ಆಯಾ ಹಳ್ಳಿಗಳಿಗೆ ಸೀಮಿತ ಸೀಮಾವ್ಯಾಪ್ತಿ ಪ್ರದೇಶದ ಗಡಿ ರಕ್ಷಕ ಆತ್ಮಗಳು, ದೇವರು ದೇವತೆಗಳು ಈ ಸಮುದಾಯದ ಕಾಡನ್ನು, ಪೈರನ್ನು ಸಂರಕ್ಷಿಸುತ್ತವೆ. ಈ ಎಲ್ಲೆ, ಗಡಿ, ಸೀಮಾ ಪದ್ಧತಿ ಮತ್ತು ಅದರ ಪರಿಕಲ್ಪನೆ ಬುಡಕಟ್ಟು ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದ್ದು, ತಮ್ಮ ಸಮುದಾಯದ ಬೆಳೆದ ಉತ್ಪನ್ನಗಳನ್ನಷ್ಟೇ ಅಲ್ಲ, ಸುತ್ತಲ ಕಾಡನ್ನೂ ಕಾಡಿನ ಸಕಲ ಜೀವಿಗಳನ್ನೂ ಸಂರಕ್ಷಿಸುವ ಅಲ್ಲದೆ ಕರಾರುವಕ್ಕಾಗಿ ತಮ್ಮ ಮುಂದಿನ ಪೀಳಿಗೆಗಳಿಗೆ ಸಂಪನ್ಮೂಲಗಳನ್ನು ಉಳಿಸಿ ಬೆಳೆಸಿ ಕಾಪಾಡಿಕೊಳ್ಳುವ ಮಹತ್ತರ ಸಿದ್ಧಾಂತವನ್ನು ಈ ಸೀಮಾ ಪದ್ಧತಿ ಮೌಲ್ಯಗಳು ಪ್ರತಿಪಾದಿಸುತ್ತವೆ. ಪ್ರಪಂಚಕ್ಕೆ ಮಾದರಿಯಾಗಬಲ್ಲ, ಸಂಪನ್ಮೂಲ ರಕ್ಷಣೆಗಳು ಸಿದ್ಧಾಂತಗಳಿಗೆ ಉತ್ತಮ ಬುನಾದಿಯಾಗಬಲ್ಲ ಒಂದು ಜನಪದ ಸಂಸ್ಕೃತಿಯ ಆಚರಣೆ ಎಲ್ಲರ ದಿವ್ಯ ನಿರ್ಲಕ್ಷ್ಯಕ್ಕೊಳಗಾಗಿ ಜೀವ ಕಳೆದುಕೊಳ್ಳುತ್ತಿದೆ, ವಿನಾಶದ ಅಂಚಿಗೆ ಬಂದುನಿಂತಿದೆ. ಬುಡಕಟ್ಟು ಸಮುದಾಯಗಳಲ್ಲಿರುವ ಇಂತಹ ಶ್ರೇಷ್ಠ ಮೌಲ್ಯಾಚರಣೆಗಳೆ ಇಂದಿಗೂ ಪ್ರಪಂಚದೆಲ್ಲಡೆ, ಎಲ್ಲೆಲ್ಲಿ ಬುಡಕಟ್ಟು ಸಮುದಾಯಗಳು ನೆಲೆಸಿವೆಯೆ ಅಲ್ಲಲ್ಲಿ ಮಾತ್ರ ಕಾಡು ಉಳಿದಿರುವುದಕ್ಕೆ ಸೀಮಾ ಪದ್ಧತಿಯ ಶ್ರೇಷ್ಠ ಆಚರಣೆ ಕಾರಣ ಎಂದು ಸಂಶೋಧನೆಗಳಿಂದ ದೃಢಪಟ್ಟಿದೆ. ಒಟ್ಟಾರೆಯಾಗಿ ಕುಂಬ್ರಿ ಮರಾಠಿ ಸಮುದಾಯ ತನ್ನ ಬುಡಕಟ್ಟಿನ ಆದಿಮತನವನ್ನು ಉಳಿಸಿಕೊಂಡು ಬಂದಿರುವುದು ಆಶ್ಚರ್ಯ ಹುಟ್ಟಿಸಿದರೂ ಅದು ಸತ್ಯವೇ ಆಗಿದೆ.

**ಕುಂಬ್ರಿ ಮರಾಠಿ ಸಮುದಾಯದ ಬಳಿಗಳು**

ಜಗತ್ತಿನ ಯಾವುದೇ ಆದಿಮ ಸಮುದಾಯ ತನ್ನದೇ ಆದ ಬಳಿ, ಕುಲ ಲಾಂಛನಗಳನ್ನು ಹೊಂದಿರುತ್ತದೆ. ಬಳಿ ಮತ್ತು ಕುಲ ಲಾಂಛನಗಳಿಲ್ಲದ ಸಮಾಜಗಳು ಇಲ್ಲವೇ ಇಲ್ಲ ಎಂದರೂ ತಪ್ಪಲ್ಲ. ಅದರಲ್ಲೂ ಭಾರತದಂತಹ ಸಾಂಪ್ರದಾಯಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಆಯಾ

ಸಮುದಾಯಗಳು ತಮ್ಮ ಆದಿಮ ಚಹರೆಗಳ ಭಾಗವಾಗಿ ಬಳಿ ಮತ್ತು ಕುಲ ಲಾಂಛನಗಳನ್ನು ಇನ್ನೂ ಉಳಿಸಿಕೊಂಡು ಬಂದಿವೆ. ಯಾಕೆ ಈ ಬಳಿ ಮತ್ತು ಕುಲ ಲಾಂಛನಗಳು ರೂಪಗೊಂಡವು? ಹೀಗೆ ರೂಪುಗೊಂಡ ಬಳಿ ಮತ್ತು ಕುಲ ಲಾಂಛನಗಳು ಇನ್ನೂ ಯಾಕೆ ಅಸ್ತಿತ್ವದಲ್ಲಿವೆ? ಎಂಬುದು ಅತ್ಯಂತ ಆಸಕ್ತಿದಾಯಕ ಸಂಗತಿಯಾಗಿದೆ. ಈ ಕುರಿತು ಯುರೋಪ್ ಅಮೇರಿಕಾ ಮತ್ತು ಆಫ್ರಿಕಾದ ದೇಶಗಳ ಮಾನವಶಾಸ್ತ್ರಜ್ಞರು ಮತ್ತು ಸಮಾಜಶಾಸ್ತ್ರಜ್ಞರು ಹಲವು ಅಧ್ಯಯನಗಳನ್ನು ಕೈಗೊಂಡಿದ್ದಾರೆ. ಈ ನಿಟ್ಟಿನಲ್ಲಿ ರಾಯ್ ವಿಲ್ಲೀಸ್ ಪ್ರಕಟಿಸಿರುವ Signifying Animals, Human meaning in the natural world[6] ಮತ್ತು Hugh E Seebohm ಅವರ On the Structure of Greek Tribal Society[7] ಎಂಬ ಪುಸ್ತಕಗಳು ಗಮನಾರ್ಹವಾದವು. ಆದರೆ ಭಾರತದಲ್ಲಿ ಬಳಿ ಮತ್ತು ಕುಲ ಲಾಂಛನಗಳ ಕುರಿತ ಅಧ್ಯಯನಗಳು ವಿರಳ. ಆದರೂ ಭಾರತದ ಡಾ. ಬಾಬಾ ಸಾಹೇಬ್ ಅಂಬೇಡ್ಕರ್,[8] ಡಿ ಡಿ ಕೋಸಂಬಿ,[9] ರೋಮಿಲಾ ಥಾಪರ್,[10] ಭಗವತ್ ಶರಣ್ ಉಪಾಧ್ಯಾಯರಂತಹ[11] ಮಾರ್ಕ್ಸವಾದಿ ಚರಿತ್ರೆಕಾರರು ಈ ಕುರಿತು ಅಧ್ಯಯನಗಳನ್ನು ಮಾಡಿದ್ದಾರೆ. ಆದರೆ, ಕನ್ನಡದ ಸಂದರ್ಭದಲ್ಲಿ ಬಳಿ ಮತ್ತು ಕುಲ ಲಾಂಛನಗಳ ಕುರಿತ ಅಧ್ಯಯನಗಳು ನಡೆದಿಲ್ಲ. ಕನ್ನಡದಲ್ಲಿ ನಡೆದ ಸಮುದಾಯ ಅಧ್ಯಯನಗಳು ಹೆಚ್ಚು ಮಾಹಿತಿ ಸಂಗ್ರಹಕ್ಕೆ ಮಹತ್ವ ನೀಡಿದವೇ ವಿನಹ ಸೂಕ್ಷ್ಮ ವಿಶ್ಲೇಷಣೆಗೆ ತೊಡಗಲಿಲ್ಲ.

ಮುಖ್ಯವಾಗಿ, ಆದಿಮ ಬುಡಕಟ್ಟು ಸಮಾಜಗಳು ತಮ್ಮ ಕುಲ, ಬಳಿ ಮತ್ತು ಬೆಡಗುಗಳನ್ನು ಕಟ್ಟಿಕೊಂಡ ಬಂದ ವಿಧಾನ ಅತ್ಯಂತ ರೋಚಕವಾದದ್ದು. ರಾಯ್ ವಿಲ್ಲೀಸ್ ಮತ್ತು ಡಿ ಡಿ ಕೋಸಂಬಿಯವರು ವಿವರಿಸುವಂತೆ, ಆದಿಮ ಸಮಾಜಗಳು ತಮ್ಮ ಗುಂಪುಗಳ ಅಸ್ತಿತ್ವ ಮತ್ತು ಮುಂದುವರಿಕೆಯ ಭಾಗವಾಗಿ ಈ ಬಳಿ ಮತ್ತು ಕುಲ ಲಾಂಛನಗಳನ್ನು ಕಟ್ಟಿಕೊಂಡು ಬಂದಿವೆ ಎನ್ನುತ್ತಾರೆ. ಸಮಾಜ ಅಸ್ತಿತ್ವಕ್ಕೆ ಬರುವುದಕ್ಕೂ ಮುನ್ನ ಮನುಷ್ಯ ಏಕಾಂಗಿಯಾಗಿದ್ದ. ಪ್ರಕೃತಿಯ ಸವಾಲು ಮತ್ತು ಸಾಂಘಿಕ ಬದುಕಿನ ಅಗತ್ಯದ ಕಾರಣಕ್ಕಾಗಿ ಸಂಘ ಜೀವನವನ್ನು ಕಟ್ಟಿಕೊಂಡ. ಸಂಗಾತಿಗಳನ್ನು ಹುಡುಕಿಕೊಂಡು ಜೊತೆಯಾಗತೊಡಗಿದ. ಈ ಜೊತೆಯಾದ ಗುಂಪು ಮುಂದೆ ಆದಿಮ ಸಂಘಜೀವನದ ಅಡಿಪಾಯವಾಯಿತು. ಇದನ್ನು ಆದಿಮ ಸಂಘ ಜೀವನ ಅಥವಾ ಗಣ ವ್ಯವಸ್ಥೆ ಅಥವಾ ಆದಿಮ ಬುಡಕಟ್ಟು ವ್ಯವಸ್ಥೆ ಎಂದು ಕರೆಯಬಹುದು. ಹೀಗೆ ಜೊತೆಯಾದ ಆದಿಮ ಮುನುಷ್ಯ ತಾನು ಆಹಾರ ಸಂಗ್ರಹಣೆ ಮತ್ತು ಬೇಟೆಯ ಹಂತವನ್ನು ದಾಟಿ ಪಶುಪಾಲನೆಯ ಹಂತಕ್ಕೆ ಬಂದು ತಲುಪಿದ್ದ. ತನಗೆ ಬೇಕಾದ ಸಾತ್ವಿಕ ಪ್ರಾಣಿಗಳನ್ನು ಸಾಕುತ್ತ ಅವುಗಳ ಜೊತೆ ಬದುಕಲಾರಂಭಿಸಿದ. ಹೀಗೆ ಪಶುಪಾಲನೆ ಮತ್ತು

ಮನುಷ್ಯನ ಸಾಂಘಿಕ ಜೀವನ ಕಾಲಾನಂತರ ಬೆಳೆಯುತ್ತಾ ಹೋಯಿತು. ಸಣ್ಣ ಸಣ್ಣ ಗಣಗಳು ಅಥವಾ ಬುಡಕಟ್ಟುಗಳು ದೊಡ್ಡದಾಗಿ ಬೆಳೆದವು. ಹೀಗೆ ಬೆಳೆದ ಬುಡಕಟ್ಟುಗಳಲ್ಲಿ ಗುಂಪು ಕಲಹಗಳಾಗತೊಡಗಿದವು. ಈ ಕಲಹಗಳನ್ನು ಹೋಗಲಾಡಿಸಲು, ಮತ್ತು ಗಣಗಳನ್ನು ರಕ್ಷಿಸಲು ಬುಡಕಟ್ಟುಗಳ ಮುಖಂಡರು ಬೃಹತ್ತಾಗಿ ಬೆಳೆದ ಗಣಗಳನ್ನು ಹಲವು ಉಪಪಂಗಡಗಳನ್ನಾಗಿ ವಿಭಾಗಿಸಿದರು. ಒಂದೇ ಕಟ್ಟಲ್ಲಿ ಬೆಳೆದು ಬಂದಿದ್ದ ಗುಂಪು ಹಲವು ಉಪಪಂಗಡಗಳಾದಾಗ ಒಂದೊಂದು ಉಪಪಂಗಡವೂ ತನ್ನ ಮೂಲ ಕಟ್ಟಿನ ಅಸ್ಮಿತೆಯನ್ನು ಉಳಿಸಿಕೊಳ್ಳಲು ಪ್ರಯತ್ನಿಸಿತು. ಕಟ್ಟು ಒಂದೇ ಆದರೂ, ಬೇರ್ಪಟ್ಟ ಪ್ರತಿ ಉಪಪಂಗಡ ತನ್ನ ಮೂಲ ಕಟ್ಟಿನ ಚಹರೆಗಳನ್ನು ಬಿಟ್ಟುಕೊಡದೆ ಅದನ್ನೂ ತನ್ನ ಸಾಮಾಜಿಕ ಆಚರಣೆಗಳಲ್ಲಿ ಉಳಿಸಿಕೊಂಡಿತು. ಹೀಗಾಗಿ ಪ್ರತಿ ಉಪಪಂಗಡ ತನ್ನದೇ ಆದ ಚಹರೆಗಳನ್ನು ಹೊಂದುವ ನಿಟ್ಟಿನಲ್ಲಿ ಕೆಲವು ನಿಯಮಗಳನ್ನು ಹಾಕಿಕೊಂಡಿತು. ತನ್ನ ಪರಿಸರ, ತನ್ನ ಇರುವು, ಗಾಢ ನಂಬಿಕೆ ಮತ್ತು ಸಾಮಾಜಿಕ ಆಚರಣೆಗಳನ್ನು ಮುಖ್ಯವಾಗಿಟ್ಟುಕೊಂಡು ಈ ಲಾಂಛನಗಳನ್ನು ರೂಪಿಸಿಕೊಂಡಿತು. ತಾನು ಸಾಕುವ ಪ್ರಾಣಿ, ತಾನು ಬೆಳೆಯುವ ಸಸ್ಯ, ತನ್ನ ಸುತ್ತಲ ಪ್ರದೇಶ, ಪರಿಸರ, ಉತ್ಪಾದಿಸಲು ತಾನು ಬಳಸುವ ಸಲಕರಣೆ ಮತ್ತು ನಂಬಿಕೆಗಳನ್ನೇ ಮುಖ್ಯವಾಗಿಟ್ಟುಕೊಂಡು ತನ್ನ ಕುಲದ ಲಾಂಛನ ಮತ್ತು ಬಳಿಗಳನ್ನು ನಿರ್ಮಿಸಿಕೊಂಡಿತು. ಹಾಗಾಗಿ ನಮ್ಮ ಕುಲ ಮತ್ತು ಕುಲ ಲಾಂಛನಗಳು ಒಂದೋ ಗಿಡ ಮರ, ಪಕ್ಷಿ, ಪ್ರಾಣಿ, ಪರಿಸರ, ಪ್ರದೇಶ, ದುಡಿಮೆ, ದುಡಿಮೆಯ ಪರಿಕರಗಳಿಂದ ರೂಪುಗೊಂಡಿವೆ. ಅಷ್ಟೇ ಏಕೆ ಕರ್ನಾಟಕದ ಬಹುತೇಕ ಎಲ್ಲ ಸಾಮ್ರಾಜ್ಯಗಳ ರಾಜ ಲಾಂಛನಗಳೂ ಸಹ ಪ್ರಾಣಿ ಮತ್ತು ಸಸ್ಯಗಳನ್ನೇ ಪ್ರತಿನಿಧಿಸುತ್ತವೆ. ಹಾಗಾಗಿ ಬುಡಕಟ್ಟು ಸಮಾಜಗಳ ಕುಲ ಮತ್ತು ಬೆಡಗುಗಳು ಆಯಾ ಸಮುದಾಯಗಳ ಆದಿಮ ಕುರುಹುಗಳಿಂದಲೇ ರೂಪುಗೊಂಡಿವೆ. ಈ ನಿಟ್ಟಿನಲ್ಲಿ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿ ಸಮುದಾಯದ ಕುಲ ಮತ್ತು ಬಳಿಗಳನ್ನು ನೋಡೋಣ.

ಕರ್ನಾಟಕ ರಾಜ್ಯಾದ್ಯಂತ ಈಗಾಗಲೇ ಗುರುತಿಸಲಾದ 50 ಬುಡಕಟ್ಟುಗಳ ಪಟ್ಟಿಗೆ ಸೇರದ ಹಲವಾರು ಸಮುದಾಯಗಳಲ್ಲಿ ಉತ್ತರ ಕನ್ನಡ ಜಿಲ್ಲೆಯ 'ಕುಂಬ್ರಿ ಮರಾಠಿ' ಸಮುದಾಯವೂ ಒಂದು. ಈ ಸಮುದಾಯವು ತನ್ನದೇ ಆದ ಪ್ರತ್ಯೇಕ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ವ್ಯವಸ್ಥೆಯನ್ನು ಹೊಂದಿದ್ದು ವಿವಿಧ ಬುಡಕಟ್ಟು ಜನಾಂಗ ಗಳಲ್ಲಿರುವಂತೆ ಪುತ್ರ ಪ್ರಧಾನ ಕುಟುಂಬ ಹಾಗೂ ಒಳಾಡಳಿತ ವ್ಯವಸ್ಥೆಯನ್ನು ಹೊಂದಿರುವ, ಕಾಡುಗಳ ಮಧ್ಯೆ ಉಳಿದು ಬದುಕನ್ನು ನಡೆಸುತ್ತಿರುವ ಸಮುದಾಯವಾಗಿರುತ್ತದೆ. ಸಹ್ಯಾದ್ರಿ ಪರ್ವತ ಶ್ರೇಣಿಗಳ ದಟ್ಟ ಕಾಡುಗಳ ಕೊಳ್ಳ ಪ್ರದೇಶಗಳಲ್ಲಿ ಚದುರಿದಂತೆ ಚಿಕ್ಕ ಚಿಕ್ಕ ಕೊಪ್ಪ

(ಹಾಡಿ)ಗಳಲ್ಲಿ ವಾಸವಾಗಿರುವ ಈ ಸಮುದಾಯ ಉತ್ತರ ಕನ್ನಡ ಜಿಲ್ಲೆಯಲ್ಲಿ ಮಾತ್ರ ಹೆಚ್ಚಿನ ಸಂಖ್ಯೆಯಲ್ಲಿ ಕಾಣಲು ಸಿಗುತ್ತದೆ. ಆದರೆ ಈ ಸಮುದಾಯದ ಕುರಿತು ವಿಶೇಷ ಗಮನ ಹರಿಸುವ ನಿಟ್ಟಿನಲ್ಲಿ ಸಮುದಾಯದ ಕುರಿತು ಜನಾಂಗೀಯ ಅಧ್ಯಯನಗಳಾಗಲೀ ಅಥವಾ ಇನ್ನಾವುದೋ ರೀತಿಯಲ್ಲಿ ಗುರುತಿಸುವ, ದಾಖಲಿಸುವ ಪ್ರಯತ್ನಗಳಾಗಲೀ ಆಗದಿರುವುದೇ ವಿಪರ್ಯಾಸ. ಈ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆಯನ್ನು ಪರಿಗಣಿಸಿ ಕುಂಬ್ರಿ ಮರಾಠಿಗರ ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

ಉತ್ತರ ಕನ್ನಡದ ಪ್ರಾಕೃತಿಕ ಹಾಗೂ ಭೌಗೋಳಿಕ ಸನ್ನಿವೇಶಗಳು ಬುಡಕಟ್ಟು ಸಮುದಾಯಗಳ ಬದುಕಿಗೆ ಪೂರಕ ವಾತಾವರಣ ಕಲ್ಪಿಸಿರುವುದರಿಂದ ಈ ಜಿಲ್ಲೆಯಲ್ಲಿ ರಾಜ್ಯದಲ್ಲಿಯೇ ಅತಿ ಹೆಚ್ಚು ಹಾಗೂ ವೈವಿಧ್ಯಮಯ ಬುಡಕಟ್ಟು ಸಮುದಾಯಗಳು ವಲಸೆ ಬಂದು ನೆಲೆ ನಿಂತು ಬದುಕು ನಿರ್ಮಿಸಿಕೊಂಡಿರುತ್ತವೆ. ಹಸಲರು, ಕುರುಬರು, ಲಂಬಾಣಿಗಳು, ಮಸಲರು, ಬೇಡ ವಾಲ್ಮೀಕಿ, ಮೇದಾರರು, ಕುಣಬಿಯರು, ಆಗೇರರು, ಹಾಲಕ್ಕಿಗಳು ಮುಂತಾದ ಸಮುದಾಯಗಳು ಇಲ್ಲಿ ವಾಸವಿರುತ್ತಿದ್ದು ಈ ಸಮುದಾಯಗಳ ಕುರಿತು ವಿವಿಧ ಶೈಕ್ಷಣಿಕ ಸಂಸ್ಥೆಗಳು, ಅಧ್ಯಯನಕಾರರು ಅಧ್ಯಯನ ನಡೆಸಿರುವುದು ಕಂಡು ಬರುತ್ತದೆ. ಹೀಗಿದ್ದರೂ ಸಹ ಅನಾದಿಕಾಲದಿಂದ ಈ ಎಲ್ಲ ಸಮುದಾಯಗಳ ನಡುವೆ ಇದ್ದೂ ಇಲ್ಲದಂತೆ ಬದುಕುತ್ತಾ ತನ್ನದೇ ಆದ ಪ್ರತ್ಯೇಕ ವಿಶಿಷ್ಟ ಜೀವನ ಶೈಲಿಯನ್ನು ಕುಂಬ್ರಿ ಮರಾಠಿ ಹೊಂದಿದೆ.

ಮರಾಠಿ, ಕೊಂಕಣಿ, ಕನ್ನಡ ಮಿಶ್ರಿತ ಮರಾಠಿ ಮಾತನಾಡುವ ಇವರು ಜೀವನಾಧಾರಕ್ಕಾಗಿ ಕುಮರಿ ಬೇಸಾಯವನ್ನು, ಪಶು ಪಾಲನೆಯನ್ನು ಹಾಗೂ ಅರಣ್ಯ ಕಿರು ಉತ್ಪನ್ನಗಳ ಸಂಗ್ರಹಣೆಯನ್ನು ಅವಲಂಬಿಸಿಕೊಂಡು ಬಂದಿದ್ದು ಇತ್ತಿತ್ತಲಾಗಿ ಜಾಗತೀಕರಣ, ಆಧುನೀಕರಣ, ಕೈಗಾರಿಕೀಕರಣದ ಪರಿಣಾಮವಾಗಿ ಬಂದ ವಿವಿಧ ಯೋಜನೆಗಳು ಹಾಗೂ ಅರಣ್ಯ ಕಾಯ್ದೆಗಳು ಕುಂಬ್ರಿ ಮರಾಠಿಗರ ಮೇಲೆ ಪರಿಣಾಮ ಬೀರಿದ್ದರಿಂದ ಬದುಕಿಗಾಗಿ ಕೃಷಿ, ಪಶುಪಾಲನೆ, ಅರಣ್ಯೇತರ ಸಣ್ಣ ಪುಟ್ಟ ವ್ಯಾಪಾರ, ಕೂಲಿ ಇತ್ಯಾದಿಗಳನ್ನು ಅವಲಂಬಿಸಿರುವುದು ಕ್ಷೇತ್ರಾಧ್ಯಯನದ ಸಂದರ್ಭದಲ್ಲಿ ಕಂಡು ಬಂದಿರುತ್ತದೆ.

ವಿಶೇಷವಾಗಿ ಕುಂಬ್ರಿ ಮರಾಠಿಗರು ಪ್ರಕೃತಿ ಆರಾಧಕರಾಗಿದ್ದು ಇವರ ಭಾಷೆ, ದೈವಾರಾಧನೆ, ಆಹಾರ ಕ್ರಮ, ಉಡುಗೆ ತೊಡುಗೆಗಳು, ಜೀವನ ಶೈಲಿಯನ್ನು ಗಮನಿಸಿದಾಗ ಇವರು ಗೋವಾ, ಮಹಾರಾಷ್ಟ್ರ, ಗುಜರಾತ ಪ್ರದೇಶಗಳಿಂದ ರಕ್ಷಣೆ ಮತ್ತು ಆಹಾರಕ್ಕಾಗಿ ಕರ್ನಾಟಕದ ಕರಾವಳಿ ಹಾಗೂ ಪಶ್ಚಿಮ ಘಟ್ಟಗಳ ಕಡೆ ವಲಸೆ ಬಂದಂತೆ ಕಂಡು ಬರುತ್ತದೆ. ಏಕೆಂದರೆ

ಈ ಸಮುದಾಯಗಳಲ್ಲಿ ಕರ್ನಾಟಕ ಹಾಗೂ ರತ್ನಗಿರಿ ಮರಾಠಿಗರ ನಡುವೆ ವೈವಾಹಿಕ ಸಂಬಂಧಗಳು ನಡೆದಿರುವ ಬಗ್ಗೆ ಉದಾಹರಣೆಗಳಿವೆ. ದಟ್ಟ ಕಾಡು ಹಾಗೂ ಕೊಳ್ಳ ಪ್ರದೇಶಗಳಲ್ಲಿ ಸರಳ ಜೀವನ ನಡೆಸುತ್ತಿರುವ ಇವರು ಸಮಾಜದ ಮುಖ್ಯವಾಹಿನಿಯಲ್ಲಿ ತಮ್ಮನ್ನು ಗುರುತಿಸಿಕೊಳ್ಳಲಾಗದೆ, ಪ್ರತಿನಿಧಿಸಿಕೊಳ್ಳಲಾಗದೆ, ತಮ್ಮ ಅಸ್ತಿತ್ವವನ್ನು ಪ್ರತಿಪಾದಿಸಲಾಗದೆ ಆಧುನಿಕ ಸೌಲಭ್ಯಗಳಿಂದ ವಂಚಿತರಾಗಿ ದಟ್ಟಕಾಡುಗಳ ಕೊಳ್ಳಗಳಲ್ಲಿ ಧ್ವನಿ ಕಳೆದುಕೊಂಡು ಬದುಕುತ್ತಿರುವ ಸಮುದಾಯವಾಗಿ ಗೋಚರಿಸುತ್ತಾರೆ.

**ಕುಂಬ್ರಿ ಮರಾಠಿ ಸಮುದಾಯದಲ್ಲಿ ಬಳಿ ವ್ಯವಸ್ಥೆ:**

ಈ ಮೊದಲೇ ಹೇಳಿದಂತೆ ಗಣ ವ್ಯವಸ್ಥೆ, ಬುಡಕಟ್ಟು ಸಮಾಜ ನಂತರ ವರ್ಣ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದ ಭಾರತೀಯ ಸಂಸ್ಕೃತಿ ಕಾಲಾನಂತರ ಶಿಥಿಲಗೊಂಡು ಕ್ರಮೇಣ ಜಾತಿ ಸಮಾಜವಾಗಿ ರೂಪುಗೊಂಡಿತು. ತಮ್ಮ ತಮ್ಮ ವ್ಯವಸ್ಥೆಗನುಗುಣವಾಗಿ ಸಾವಿರಾರು ಜಾತಿಗಳು ಸೃಷ್ಟಿಯಾಗುತ್ತಾ ಬಂದವು. ಹೀಗೆ ಹುಟ್ಟಿಕೊಂಡ ಜಾತಿ ವ್ಯವಸ್ಥೆಗೆ ಆಯಾ ಸಮುದಾಯದ ಬಳಿಗಳು ಭದ್ರ ಅಡಿಪಾಯಗಳಾದವು ಅಥವಾ ಗೋತ್ರಗಳಾದವು. ನಾಗರಿಕತೆಯ ಆದಿಯಲ್ಲಿ ಮಾನವ ಗುಂಪು ಗುಂಪಾಗಿ ವಾಸಿಸುತ್ತಾ ಭೌಗೋಳಿಕವಾಗಿ ಅಲೆಯುತ್ತಾ ಚದುರುತ್ತಾ ವಿಭಿನ್ನರೂಢಿ ಸಂಪ್ರದಾಯಗಳನ್ನು ಆಚರಿಸಿಕೊಳ್ಳುತ್ತಾ ವಿಭಿನ್ನ ವೃತ್ತಿಗಳನ್ನು ಕೈಗೊಂಡಾಗ ತಮ್ಮ ತಮ್ಮ ಗುಂಪುಗಳನ್ನು ಒಂದೊಂದು ಸಂಕೇತದ ಮೂಲಕ ಗುರುತಿಸಿಕೊಂಡು ಬಂದಿರುವುದು ಕಂಡು ಬರುತ್ತದೆ. ಪ್ರಕೃತಿಯಲ್ಲಿ ಕಂಡ ಪ್ರಾಣಿ, ಪಕ್ಷಿ, ಗಿಡ, ಮರ, ಬಳ್ಳಿಗಳನ್ನು ಗುರುತಿಸಿ ಅವುಗಳಿಂದಲೇ ತಮ್ಮ ಗುಂಪಿನ ಸಂಕೇತವನ್ನು ನಿರ್ಧರಿಸಿಕೊಂಡು ಕುಟುಂಬದ ರಕ್ಷಣೆ ಮಾಡುತ್ತಾ ಬಂದ ಇಂತಹ ಸಂಕೇತಗಳೇ ಆಯಾ ಸಮುದಾಯದ ಕುಲದ ಸಂಕೇತವಾಗಿರುವುದು ಕಂಡು ಬರುತ್ತದೆ.

ಹಾಗಾಗಿ ಎಲ್ಲಾ ಬುಡಕಟ್ಟುಗಳ ರಕ್ತ ಸಂಬಂಧದ ಮೂಲಕೊಂಡಿಯೇ 'ಬಳಿ'.ಈ ಬಳಿಗಳನ್ನು ಅನುಸರಿಸಿಯೇ ವೈವಾಹಿಕ ಸಂಬಂಧಗಳು ಹಾಗೂ ಹಲವಾರು ಸಂಪ್ರದಾಯಗಳು ರೂಢಿಯಲ್ಲಿವೆ. ಈ ಹಿನ್ನೆಲೆಯಲ್ಲಿ ಬುಡಕಟ್ಟುಗಳು ಹೊಂದಿರುವ ಬಳಿಗಳ ಆಧಾರದಿಂದಲೇ ಬುಡಕಟ್ಟಿನ ಮೂಲದೊಂದಿಗೆ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲು ಸಾಧ್ಯವಾಗುತ್ತದೆ. 'ಕುಂಬ್ರಿ ಮರಾಠಿ' ಸಮುದಾಯದಲ್ಲಿ ಇಂತಹ ಎಪ್ಪತ್ತೈದಕ್ಕೂ ಹೆಚ್ಚು ಬಳಿಗಳಿರುವುದು ಕಂಡುಬಂದಿದೆ. ಕುಂಬ್ರಿ ಮರಾಠಿ ಸಮುದಾಯದ ಜಾಯು ಮರಾಠಿ ಹಾಗೂ ನಾರಾಯಣ ಮರಾಠಿ ಸಹಕಾರದೊಂದಿಗೆ ಐವತ್ತಮೂರು ಬಳಿಗಳನ್ನು ಗುರುತಿಸಿದ್ದು ಅವು ಇಂತಿವೆ:

ಕುಂಬ್ರಿ ಮರಾಠಿ ಸಮುದಾಯದ ಬಳಿಗಳು

1. ಪಾರ್ದಿ
2. ಹಳಿಯೆ
3. ತೆಲೆಯೆ
4. ಸೊಡೊನ್‌ಕಾರ
5. ಕುಂಬಾರಾಚೆ
6. ಮುಂಡಿಗೆಕಾರ
7. ಭಂಡಾರ್‍ಯಾಚೆ
8. ಘುಕನೆ
9. ಚೌಕೆಕಾರ
10. ಗಾಂವಕರ
11. ರಾಣೆ
12. ನೆವಾಳೆ
13. ಸೊನಾರಾ
14. ಚಿಂಬೆಚೆ
15. ಹುಂಡಳೆಕಾರ
16. ತೆದಮಾಚೆ
17. ಹಳದಿಯಾಚೆ
18. ಖಾಂದಾರ್‍ಯಾಚೆ
19. ಧುರೆಯೆಚೆ
20. ಸಿತ್ರೆ
21. ಬಟೊನೆಕಾರ
22. ಕಾಸಡೆಕಾರ
23. ಬೆಳ್ಳೆಕಾರ
24. ತಿಂಗಡೆಚೆ
25. ತಮಾನೆಕಾರ
26. ಚುಣೆಕಾರ
27. ವಾಣಿಯಾಚೆ
28. ಸೆಂಗಾಳೆ
29. ವಂಜಾರ್‍ಯಾಚೆ
30. ಮುಪ್ಪಿಲಕಾರ
31. ಮೆಡೆಕಾರ
32. ಧಾಪಳೆಕಾರ
33. ಆದ್ಲೆಕಾರ
34. ಬುವೆಕಾರ
35. ಕೊಳಸೋಣಕಾರ
36. ಸೆನವೆ
37. ದಾಬೊಳೆಕಾರ
38. ಶಾನಸ್ಗಾಚೆ
39. ವಾಂಡ್ರೆ
40. ಬಾಪಟಕಾರ
41. ಪಡಗಾವಡೆ
42. ಘಾಟಕ
43. ಬಾರಿಯೆ
44. ಮಂಚೆಕಾರ
45. ದರ್ಪೆ
46. ಜಾಂತೆಕಾರ
47. ಪೂಜಾರೆಕಾರ
48. ರಾಮಾನ್ಯೆ
49. ಗಾವಡೆಕಾರ
50. ಧೋಂಡಾಚೆ
51. ಆಗ್ರಕಾರ
52. ಮೊಳಾರಾಚೆ
53. ಗೊವೊಳ್‌ಕಾರ

ಈ ರೀತಿ ಬಳಿಗಳನ್ನು ಗುರುತಿಸಲಾಗಿದ್ದು ಕೆಲವೊಂದು ಬಳಿಗಳ ಮಧ್ಯೆ ಯಾವುದೇ ರೀತಿಯ ವೈವಾಹಿಕ ಸಂಬಂಧಗಳು ಏರ್ಪಡುವುದಿಲ್ಲ. ಆದರೆ ವೈವಾಹಿಕ ಸಂಬಂಧಗಳನ್ನು ಏರ್ಪಡಿಸುವ ಸಮಯದಲ್ಲಿ 'ಬಳಿ'ಗಳೇ ಪ್ರಮುಖ ಪಾತ್ರವಹಿಸುತ್ತವೆ. ಕುಂಬ್ರಿ ಮರಾಠಿಗರು ತಮ್ಮ ಬಳಿಗಳನ್ನಾಧರಿಸಿಯೇ ಸಂಬಂಧಗಳನ್ನು ಬೆಳೆಸುತ್ತಾರೆ. ಮೇಲ್ಕಾಣಿಸಿದ 53 ಬಳಿಗಳು ನಾನು ಕ್ಷೇತ್ರಕಾರ್ಯ ಮಾಡಿದ ಕುಂಬ್ರಿ ಮರಾಠಿ ಸಮುದಾಯಗಳಲ್ಲಿ ಲಭ್ಯವಾಗಿವೆ. ಉತ್ತರ ಕನ್ನಡದ ಕುಣಬಿಗಳು, ದಕ್ಷಿಣ ಕನ್ನಡದ ಕಣುಬಿಗಳು ಮತ್ತು ಕುಂಬ್ರಿ ಮರಾಠಿಗರು ಗೋವಾ, ರತ್ನಗಿರಿ ಪ್ರದೇಶದಿಂದ ಕರ್ನಾಟಕಕ್ಕೆ ಬಂದವರು. ಈ ಮೂರೂ ಸಮುದಾಯಗಳು ಒಂದೇ ಪ್ರಾದೇಶಿಕ ಹಿನ್ನೆಲೆ, ಪರಿಸರ ಮತ್ತು ಕಟ್ಟಿನಿಂದ ಬೇರ್ಪಟ್ಟಂತೆ ಕಾಣುತ್ತದೆ. ಕೊಂಕಣಿ ಮತ್ತು ಮರಾಠಿ ಬಾಷೆಯಿಂದ ತಮ್ಮದೇ ಆದ ಉಪಭಾಷೆಯನ್ನು ಕುಂಬ್ರಿ ಮರಾಠಿಗರು ಕಟ್ಟಿಕೊಂಡಿದ್ದಾರೆ. ಇವರ ಬಳಿಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಅನೇಕ ಹೊಳಹುಗಳು ಲಭ್ಯವಾಗುತ್ತವೆ.

1. ಇವರ ಬಳಿಗಳು ಅವರು ವಾಸಿಸುತ್ತಿದ್ದ ಮತ್ತು ವಾಸಿಸುತ್ತಿರುವ ಮೂಲ ನೆಲೆಗಳನ್ನು ಸಂಕೇತಿಸುತ್ತವೆ.
2. ಜೊತೆಗೆ ಕುಂಬ್ರಿ ಮರಾಠಿಗರ ಆದಿಮ ಕುಲವೃತ್ತಿಗಳನ್ನು ಈ ಬಳಿಗಳು ಪ್ರತಿನಿಧಿಸುತ್ತವೆ.
3. ತಮ್ಮ ಬುಡಕಟ್ಟಿನ ಸಾಮಾಜಿಕ ವ್ಯವಸ್ಥೆಯಲ್ಲಿ ಆಯಾ ಉಪಪಂಗಡದ ಜನ ವಹಿಸಿಕೊಂಡ ಕುಲಸಂಬಂಧೀ ವೃತ್ತಿಗಳನ್ನು ಈ ಬಳಿಗಳು ಸಂಕೇತಿಸುತ್ತಿವೆ.
4. ಈ ಬಳಿಗಳು ಕುಂಬ್ರಿ ಮರಾಠಿಗರ ಮನೋಭಾವವನ್ನು ಸೂತ್ರೀಕರಿಸುತ್ತವೆ.
5. ಕುಂಬ್ರಿ ಮರಾಠಿಗರ ಕುಲದ ಸ್ವರೂಪ, ಆರಾಧನಾ ಮನೋಭಾವವನ್ನು ಈ ಬಳಿಗಳು ಪ್ರತಿನಿಧಿಸುತ್ತವೆ.
6. ಕುಂಬ್ರಿ ಮರಾಠಿಗರ ಬಳಿಗಳು ಈ ಸಮುದಾಯ ವಾಸಿಸುವ ಪರಿಸರದಲ್ಲಿನ ಸಸ್ಯ ಮತ್ತು ಪ್ರಾಣಿಗಳನ್ನು ಸಂಕೇತಿಸುತ್ತವೆ.

ಒಟ್ಟಿನಲ್ಲಿ ಕುಂಬ್ರಿ ಮರಾಠಿ ಸಮುದಾಯದ ಬಳಿಗಳು ಅವರ ಬದುಕಿನ ರೀತಿ, ಲೋಕದೃಷ್ಟಿ ಮತ್ತು ಚಿಂತನಾ ಕ್ರಮಗಳನ್ನು ಸಂಕೇತಿಸುತ್ತವೆ. ಜೊತೆಗೆ ಕುಂಬ್ರಿ ಮರಾಠಿ ಸಮುದಾಯವು ಮೂಲತಃ ಪಶುಪಾಲಕ ಸಮುದಾಯವಾಗಿದ್ದು, ಅದು ಕಾಲಾನಂತರ ಕೆತ್ತು ಬೇಸಾಯ ಕ್ರಮವನ್ನು ರೂಢಿಸಿಕೊಂಡ ಕಾರಣಗಳಿಂದ ಅದು ಕೃಷಿಕ ಸಮುದಾಯವಾಗಿ ರೂಪುಗೊಂಡಂತಿದೆ. ಈ ಸಮುದಾಯದ ಹೆಸರಲ್ಲಿಯೇ ಇರುವ 'ಕುಂಬ್ರಿ' ಎಂಬ ಹೆಸರು,

ಕುಮ್ರಿ ಬೇಸಾಯದ ಕಾರಣಕ್ಕಾಗಿ ಬಂದಂತಿದೆ. ಅಲ್ಲದೆ ಇವರು ವಾಸಿಸುವ ಉತ್ತರ ಕನ್ನಡ ಜಿಲ್ಲೆಯ ಅನೇಕ ಕಡೆ ಇವರು ಇತ್ತೀಚಿನವರೆಗೂ ಕೆತ್ಲು ಬೇಸಾಯ ಮತ್ತು ವಲಸೆ ಬೇಸಾಯ ಕ್ರಮಗಳನ್ನು ಅನುಸರಿಸುತ್ತಿದ್ದುದೂ ಹೌದು. ಹಾಗಾಗಿ ಈ ಸಮುದಾಯದ ಬಳಿಗಳಲ್ಲಿ ವಲಸೆ ಮತ್ತು ಅಲೆಮಾರಿ ಬದುಕಿನ ಗಾಢ ನೆನಪುಗಳಿವೆ. ವೃತ್ತಿಯೇ ಪ್ರಧಾನವಾದ, ಪರಿಸರ ಮತ್ತು ನಿಸರ್ಗವೇ ಪ್ರಧಾನವಾದ ನಾಮ ಸೂಚಕಗಳು ಇವರ ಬಳಿಗಳನ್ನು ರೂಪಿಸಿವೆ.

ಒಂದು ಬುಡಕಟ್ಟು ಸಮುದಾಯದ ಬಳಿಗಳನ್ನು ಅಧ್ಯಯನ ಮಾಡುವುದು ಅತ್ಯಂತ ಸವಾಲಿನ ಕೆಲಸ. ಈಗಿನ ಆಧುನಿಕ ತಲೆಮಾರಿನ ಯುವಕರಿಗೆ ತಮ್ಮ ಮೂಲದ ಬಗ್ಗೆ ಮರೆವು ಕಾಡುತ್ತಿದೆ. ತಮ್ಮ ಮೂಲ ಸಂಸ್ಕೃತಿಯ ಅರಿವೇ ವಿಸ್ಮೃತಿಗೆ ಸರಿದು ಹೋದಂತೆ ಅವಜ್ಞೆಗೆ ಇಂತಹ ಸಮುದಾಯಗಳು ಈಡಾಗಿವೆ. ಆದರೆ ಇಂತಹ ಆದಿಮ ಸಮಾಜಗಳ ಕುಲ ಮತ್ತು ಕುಲ ಲಾಂಛನಗಳ ಕುರಿತು ಅಧ್ಯಯನ ಮಾಡುವುದು ಇಂದಿನ ಅಗತ್ಯವಾಗಿದೆ.

## 5. ಕುಂಬ್ರಿ ಮರಾಠಿ ಸಮುದಾಯದ ಶೈಕ್ಷಣಿಕ ಸ್ಥಿತಿಗತಿ ಮತ್ತು ಆರೋಗ್ಯ

### ಕುಂಬ್ರಿ ಮರಾಠಿ ಸಮುದಾಯದ ಶೈಕ್ಷಣಿಕ ಸ್ಥಿತಿಗತಿ

ಅಕ್ಷರಭ್ಯಾಸ, ಶಿಕ್ಷಿತರಾಗುವುದು, ಜ್ಞಾನಾರ್ಜನೆ ಮುಂತಾದ ಸಂಗತಿಗಳು ಜಗತ್ತಿನ ಎಲ್ಲ ಸಮುದಾಯಗಳನ್ನು ಆಧುನಿಕತೆಗೆ ಮುಖ ಮಾಡುವಂತೆ ಮಾಡಿವೆ. ಶೈಕ್ಷಣಿಕ ಸಾಧನೆ ಆಧುನಿಕ ಸಮಾಜಗಳ ಮೂಲಭೂತ ಚಟುವಟಿಕೆಗಳಲ್ಲಿ ಒಂದೆನಿಸಿದೆ. ವ್ಯಕ್ತಿ ಮತ್ತು ಸಮುದಾಯಗಳ ಆಧುನಿಕ ನಿರ್ಮಾಣಕ್ಕೆ ಶಿಕ್ಷಣ ಎಂಬುದು ಅಡಿಗಲ್ಲು. ಶಿಕ್ಷಣ ಆಧುನಿಕ ಮಾನವನ ಸಮೂಹ ಜೀವನದ ಅನಿವಾರ್ಯ ಅವಶ್ಯಕತೆ. ವ್ಯಕ್ತಿಯ ಚಾರಿತ್ರ್ಯ, ವ್ಯಕ್ತಿತ್ವ, ಸಂಸ್ಕೃತಿ, ಜ್ಞಾನ, ವಿವೇಚನೆ, ನೈಪುಣ್ಯತೆ ಮುಂತಾದ ಮಾನವನ ಜೀವನಕ್ಕೆ ಸಂಬಂಧಿಸಿದ ಅಂಶಗಳನ್ನು ಶಿಕ್ಷಣವು ಪ್ರಭಾವಿಸುತ್ತದೆ. ಮನುಷ್ಯ ಶಿಕ್ಷಣವಿಲ್ಲದೆ ಸಂಘಜೀವನ ನಡೆಸುವ ಪ್ರಶ್ನೆಯೇ ಇಲ್ಲ. ಪ್ರತಿಯೊಂದು ಹೊಸ ಪೀಳಿಗೆಯೂ ಕೂಡ ತನ್ನ ಸಮುದಾಯದ ರೀತಿ–ನೀತಿಗಳಿಗೆ, ಜೀವನ ವಿಧಾನಕ್ಕೆ ಅಥವಾ ಸಾಂಸ್ಕೃತಿಕ ಅಗತ್ಯಗಳಿಗೆ ತಕ್ಕಂತೆ ನಡೆದುಕೊಳ್ಳುವ ಬಗ್ಗೆ ಹಿರಿಯ ಪೀಳಿಗೆಯಿಂದ 'ಶಿಕ್ಷಣ'ವನ್ನು ಪಡೆಯುವುದು ಅನಿವಾರ್ಯವಾಗುವುದು. ಸಾಂಸ್ಕೃತಿಕ ಪರಂಪರೆಯ ಮುಂದುವರಿಯುವಿಕೆಯ ದೃಷ್ಟಿಯಿಂದಲೂ ಇದು ಅಗತ್ಯವಾಗಿದೆ. ಶಿಕ್ಷಣದಿಂದಾಗಿ ಸಮೂಹಗಳು, ಸಮುದಾಯಗಳು ತಮ್ಮ ಐಕ್ಯವನ್ನು ಕಾಯ್ದುಕೊಳ್ಳುವುದೂ ಸಹ ಸಾಧ್ಯವಾಗುವುದು. ಶಿಕ್ಷಣವು ಮಾನವನಿಗೆ ಅಜ್ಞಾನದಿಂದ ಜ್ಞಾನದ ಕಡೆಗೆ ಕರೆದು ತರುವ ಸಾಧನವಾಗಿದೆ. ಇದು ಮಾನವನಲ್ಲಿಯ ಹೊಸ ಹೊಸ ವಿಚಾರ, ಆಲೋಚನೆ ಹಾಗೂ ಆಸೆ, ಆಕಾಂಕ್ಷೆಗಳು ಬೆಳೆಯುವಂತಾಗಲು ಸಹಾಯ ಮಾಡುವುದು. ಆದರೆ ಶಿಕ್ಷಣದ ರೂಪ, ಸ್ವರೂಪ ಮತ್ತು ಗುಣಮಟ್ಟವು ಸಮಾಜದ

ಬೆಳವಣಿಗೆಯ ಹಂತವನ್ನು ಅವಲಂಬಿಸಿರುತ್ತದೆ. ಸಾಮಾಜಿಕ ನಿಯಂತ್ರಣ ಹಾಗೂ ಪರಿವರ್ತನೀಯ ಸಾಧನವಾಗಿ, ಸಾಂಸ್ಕೃತಿಕ ಸಂರಚನೆಯ ಪ್ರಭಾವಿ ಮಾಧ್ಯಮವಾಗಿ ಮತ್ತು ಇಂದಿನ ಆಧುನಿಕ ಸಮಾಜದ ಉದ್ಯೋಗ ತರಬೇತಿಯ ಕೇಂದ್ರವಾಗಿ ಶಿಕ್ಷಣ ಮತ್ತು ಶೈಕ್ಷಣಿಕ ಸಂಸ್ಥೆಗಳ ಪ್ರಾಮುಖ್ಯ ದಿನೇ ದಿನೇ ಹೆಚ್ಚುತ್ತಲಿದೆ. ಸಾಂಪ್ರದಾಯಿಕತೆಯ ಬಿಗಿಮುಷ್ಟಿಯಿಂದ ಆಧುನಿಕತೆಯತ್ತ ದಾಪುಗಾಲು ಹಾಕಲು, ಅರ್ಥಾತ್ ಕ್ಷಿಪ್ರಗತಿಯ ಸಾಮಾಜಿಕ ಪರಿವರ್ತನೆಯನ್ನು ತರಲು ಶಿಕ್ಷಣವು ಒಂದು ಪರಿಣಾಮಕಾರಿಯಾದ ಅಸ್ತ್ರವಾಗಿದೆ ಎಂಬ ನಂಬಿಕೆಯೂ ಇಂದು ಬಲಿಯುತ್ತಿದೆ. ಹೀಗಾಗಿ ಜಗತ್ತಿನ ಹೆಚ್ಚಿನ ಎಲ್ಲ ದೇಶಗಳು ಕೂಡ ಶಿಕ್ಷಣದ ಪ್ರಗತಿಗಾಗಿ ಸಾಕಷ್ಟು ಗಮನಹರಿಸುತ್ತಿವೆ ಹಾಗೂ ಬಹಳಷ್ಟು ಹಣವನ್ನು ವಿನಿಯೋಗಿಸುತ್ತಲಿವೆ. ಸಮಾಜವು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಜೀವನದ ಹಲವಾರು ಕ್ಷೇತ್ರಗಳಲ್ಲಿ ಪರಿವರ್ತನೆಯಾಗಲು ಮತ್ತು ಸಮಾಜ ಹಾಗೂ ವ್ಯಕ್ತಿಗಳ ಕಾರ್ಯ ಸುಗಮವಾಗಲು ಶಿಕ್ಷಣವು ಅತಿ ಅವಶ್ಯಕವಾಗಿದೆ. ಸಮಾಜವು ಮುಂದುವರೆಯಲು ಶಿಕ್ಷಣವು ಜೀವನಾಡಿಯಿದ್ದಂತೆ. ಮಾನವನ ಸರ್ವಾಂಗೀಣ ಅಭಿವೃದ್ಧಿಗೆ ಕಾರಣವಾದ ಶಿಕ್ಷಣವು ಭಾರತದಲ್ಲಿ ಪ್ರಾಚೀನ ಕಾಲದಲ್ಲಿ ಗುರುಕುಲಗಳಲ್ಲಿ ಕೇವಲ ಬ್ರಾಹ್ಮಣರಿಗೆಮಾತ್ರ ಸೀಮಿತವಾಗಿತ್ತು, ಆದರೆ ಇಂದು ಶಿಕ್ಷಣವು ಎಲ್ಲ ಸಮುದಾಯಗಳ ವಿಮೋಚನೆಗೆ ಏಕೈಕ ಮಾರ್ಗವೆಂದು ಪರಿಗಣಿಸಲ್ಪಟ್ಟಿದೆ. ಈ ಸಂಬಂಧದಲ್ಲಿ ಭಾರತವನ್ನೂ ಒಳಗೊಂಡಂತೆ ಕರ್ನಾಟಕದ ಸಾಕ್ಷರತೆಯ ಪ್ರಮಾಣದ ಚಾರಿತ್ರಿಕ ಬೆಳವಣಿಗೆಯನ್ನು ನೋಡೋಣ.

**ಕರ್ನಾಟಕದ ಸಾಕ್ಷರತೆ ಪ್ರಮಾಣದ ಚಾರಿತ್ರಿಕ ಬೆಳವಣಿಗೆ**

ಭಾರತದ ಮೊದಲ ಜನಗಣತಿಯಲ್ಲಿ ಅಂದರೆ 1951ರಲ್ಲಿ ಕರ್ನಾಟಕದ ಸಾಕ್ಷರತೆಯ ಪ್ರಮಾಣ ಕೇವಲ ಶೇ. 20.60 ಮಾತ್ರವಿತ್ತು. ಅಂದರೆ ಶೇ. 79.40ರಷ್ಟು ಜನ ಅನಕ್ಷರರಾಗಿಯೇ ಉಳಿದಿದ್ದರು. 1961ರಲ್ಲಿ ಈ ಪ್ರಮಾಣವು ಶೇ. 25.40ರಷ್ಟಾಗಿದೆ. ಇದರಲ್ಲಿ ಪುರುಷರ ಪ್ರಮಾಣ ಶೇ. 39.20 ಇದ್ದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ. 14.20 ಮಾತ್ರವಿದೆ. 1951ಕ್ಕಿಂತ 1961ರ ಸಾಕ್ಷರತಾ ಸಾಧನೆ ಶೇ. 05.60ರಷ್ಟು ವೃದ್ಧಿಯಾಗಿದೆ. 1971ರಲ್ಲಿಯ ಸಾಕ್ಷರತೆಯ ಪ್ರಮಾಣವು ಶೇ. 31.50ರಷ್ಟಿದೆ. ಇದರಲ್ಲಿ ಪುರುಷರು ಶೇ. 41.60ರಷ್ಟು ಸಾಕ್ಷರರಾಗಿದ್ದಾರೆ. ಮಹಿಳೆಯರು ಶೇ. 21.00ರಷ್ಟು ಸಾಕ್ಷರರಾಗಿದ್ದಾರೆ. 1971ರ ಸಾಕ್ಷರತೆಯ ಪ್ರಮಾಣದಲ್ಲಿ ಶೇ. 6.10ರಷ್ಟು ಸಾಧನೆಯಾಗಿದೆ. 1981ರ ಸಾಕ್ಷರತಾ ಪ್ರಮಾಣವು ಶೇ. 38.50ರಷ್ಟಿದೆ. ಇದರಲ್ಲಿ ಪುರುಷರ ಸಾಕ್ಷರತೆ ಶೇ. 48.80ರಷ್ಟಿದ್ದರೆ ಮಹಿಳೆಯರ ಸಾಕ್ಷರತೆ ಶೇ. 27.70ರಷ್ಟಿದೆ. 1971ಕ್ಕಿಂತ 1981ರಲ್ಲಿ ಶೇ. 07ರಷ್ಟು ವೃದ್ಧಿಯಾಗಿದೆ. 1991ರಲ್ಲಿಯ ಸಾಕ್ಷರತೆಯ ಪ್ರಮಾಣ ಶೇ. 56.00ರಷ್ಟಿದೆ. ಇದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ಶೇ.

67.30ರಷ್ಟಿದ್ದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ. 44.30ರಷ್ಟಿದೆ. 1991ರ ಸಾಕ್ಷರತೆಯಲ್ಲಿ ಶೇ. 17.50ರಷ್ಟು ವೃದ್ಧಿಯಾಗಿದೆ.

2001ರಲ್ಲಿಯ ಸಾಕ್ಷರತೆಯ ಪ್ರಮಾಣವು ಶೇ. 66.64ರಷ್ಟಿದೆ. ಇದರಲ್ಲಿ ಪುರುಷರು ಶೇ. 76.10 ಹಾಗೂ ಮಹಿಳೆಯರು ಶೇ. 56.07ರಷ್ಟು ಸಾಕ್ಷರತೆಯ ಸಾಧನೆ ಮಾಡಿರುವುದು ಕಂಡುಬರುತ್ತದೆ. ಈ ದಶಕದಲ್ಲಿ ವೃದ್ಧಿಗೊಂಡ ಸಾಕ್ಷರತೆಯ ಪ್ರಮಾಣ ಶೇ. 10.64ರಷ್ಟು ವೃದ್ಧಿಯಾಗಿದೆ. 2011ರಲ್ಲಿಯ ಸಾಕ್ಷರತೆಯ ಪ್ರಮಾಣವು ಶೇ. 75.60ರಷ್ಟಿದೆ. ಇದರಲ್ಲಿ ಪುರುಷರು ಶೇ. 82.85 ಹಾಗೂ ಮಹಿಳೆಯರು ಶೇ. 75.60ರಷ್ಟು ಸಾಕ್ಷರತೆಯ ಸಾಧನೆ ಮಾಡಿರುವುದು ಕಂಡುಬರುತ್ತದೆ. ಈ ದಶಕದಲ್ಲಿ ವೃದ್ಧಿಗೊಂಡ ಸಾಕ್ಷರತೆಯ ಪ್ರಮಾಣ ಶೇ. 8.96ರಷ್ಟಿದೆ.

**ಪರಿಶಿಷ್ಟ ಜಾತಿಯ ಸಾಕ್ಷರತೆಯ ಪ್ರಮಾಣ ಮತ್ತು ಸಾಕ್ಷರತೆಯ ಅಂತರ**

2001ರ ಜನಗಣತಿ ಪ್ರಕಾರ ರಾಜ್ಯದ ಒಟ್ಟು ಜನಸಂಖ್ಯೆಯ ಸಾಕ್ಷರತಾ ಪ್ರಮಾಣವು ಶೇ. 67.4ರಷ್ಟಿದೆ. ಇದರಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣವು ಶೇ. 57.45 ಇದ್ದರೆ ಪುರುಷರ ಸಾಕ್ಷರತಾ ಪ್ರಮಾಣ ಶೇ. 76.29ರಷ್ಟಿದೆ. ರಾಜ್ಯದ ಪರಿಶಿಷ್ಟ ಜಾತಿಗಳ ಸಾಕ್ಷರತಾ ಪ್ರಮಾಣವು ಶೇ. 52.90 ಇದೆ. ಇದರಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣವು ಶೇ. 41.70 ಇದ್ದರೆ ಪುರುಷರ ಸಾಕ್ಷರತಾ ಪ್ರಮಾಣ ಶೇ. 63.80ರಷ್ಟಿದೆ. ಅಂದರೆ ಸಾಮಾನ್ಯ ಸಾಕ್ಷರತೆಗೂ ಪರಿಶಿಷ್ಟ ಜಾತಿಗಳ ಸಾಕ್ಷರತೆಗೂ ಇರುವ ಅಂತರ ಒಟ್ಟು 14.14ರಷ್ಟಿದೆ. ಮಹಿಳೆಯರ ಅಂತರ ಶೇ. 15.75, ಪುರುಷರ ಅಂತರ ಶೇ.12.49ರಷ್ಟಿದೆ.

**ಕೋಷ್ಟಕ 5**

**ಕರ್ನಾಟಕ ರಾಜ್ಯದ 2011ರ ಜಿಲ್ಲಾವಾರು ಸಾಕ್ಷರತಾ ಪ್ರಮಾಣ**

**ಜಿಲ್ಲಾವಾರು ಸಾಕ್ಷರತಾ ಪ್ರಮಾಣ**

| ಕ್ರಸಂ. | ಜಿಲ್ಲೆ | ಗಂಡು | ಹೆಣ್ಣು | ಒಟ್ಟು |
|---|---|---|---|---|
| 1. | ಬೆಳಗಾವಿ | 1725548 | 1326484 | 3052032 |
| 2. | ಬಾಗಲಕೋಟೆ | 641388 | 472024 | 1113412 |
| 3. | ವಿಜಯಪುರ | 730566 | 517702 | 1248268 |
| 4. | ಬೀದರ | 597198 | 445475 | 1042673 |
| 5. | ರಾಯಚೂರು | 577213 | 402556 | 979769 |
| 6. | ಕೊಪ್ಪಳ | 468785 | 34033 | 502818 |

| ಕ್ರ.ಸಂ. | ಜಿಲ್ಲೆ | ಗಂಡು | ಹೆಣ್ಣು | ಒಟ್ಟು |
|---|---|---|---|---|
| 7. | ಗದಗ | 397178 | 302999 | 700177 |
| 8. | ಧಾರವಾಡ | 711776 | 589888 | 1301664 |
| 9. | ಉತ್ತರಕನ್ನಡ | 582009 | 499807 | 1081816 |
| 10. | ಹಾವೇರಿ | 603793 | 481650 | 1085443 |
| 11. | ಬಳ್ಳಾರಿ | 813440 | 608181 | 1421621 |
| 12. | ಚಿತ್ರದುರ್ಗ | 607188 | 480204 | 1087392 |
| 13. | ದಾವಣಗೆರೆ | 720637 | 587903 | 1308540 |
| 14. | ಶಿವಮೊಗ್ಗ | 674938 | 588078 | 1263016 |
| 15. | ಉಡುಪಿ | 465704 | 460725 | 926429 |
| 16. | ಚಿಕ್ಕಮಗಳೂರು | 438257 | 380088 | 818345 |
| 17. | ತುಮಕೂರು | 1006024 | 807367 | 1813391 |
| 18. | ಬೆಂಗಳೂರು(ನಗರ) | 4078041 | 3434235 | 7512276 |
| 19. | ಬೆಂಗಳೂರು(ಗ್ರಾ) | 385311 | 303438 | 688749 |
| 20. | ಮಂಡ್ಯ | 638668 | 510981 | 1149649 |
| 21. | ಹಾಸನ | 668836 | 556420 | 1225256 |
| 22. | ದಕ್ಷಿಣಕನ್ನಡ | 864019 | 802304 | 1666323 |
| 23. | ಕೊಡಗು | 215302 | 197575 | 412877 |
| 24. | ಮೈಸೂರು | 1063766 | 898414 | 1962180 |
| 25. | ಚಾಮರಾಜನಗರ | 312957 | 252322 | 565279 |
| 26. | ಗುಲ್ಬರ್ಗಾ | 828359 | 599009 | 1427368 |
| 27. | ಯಾದಗಿರಿ | 306751 | 203252 | 510003 |
| 28. | ಕೋಲಾರ | 564110 | 452109 | 1016219 |
| 29. | ಚಿಕ್ಕಬಳ್ಳಾಪುರ | 442158 | 341064 | 783222 |
| 30. | ರಾಮನಗರ | 378461 | 296297 | 674758 |
| | ಕರ್ನಾಟಕ ರಾಜ್ಯ | **22508381** | **17832584** | **40340965** |

* 2011ರ ಜನಗಣತಿಯ ವರದಿ, ಭಾರತ ಸರ್ಕಾರ[12]

2011ರ ಕರ್ನಾಟಕದ ಒಟ್ಟು ಸಾಕ್ಷರತೆಯ ಪ್ರಮಾಣವು 40,340,965 ಇದೆ ಇದರಲ್ಲಿ ಪುರುಷರ ಸಂಖ್ಯೆಯು 22508381(55.80%) ಇದ್ದರೆ ಮಹಿಳೆಯರ ಸಂಖ್ಯೆಯು 17832584(44.20%) ಇದೆ.

**ಕೋಷ್ಟಕ 6**

**ಕೋಷ್ಟಕ: 2001–2011 ಜಿಲ್ಲಾವಾರು ಸಾಕ್ಷರತೆಯ ಪ್ರಮಾಣ (ಶೇಕಡವಾರುಗಳಲ್ಲಿ)**

| ಕ್ರಸಂ | ಜಿಲ್ಲೆ | 2001 | 2011 |
|---|---|---|---|
| 1. | ಬೆಳಗಾವಿ | 64.21 | 73.94 |
| 2. | ಬಾಗಲಕೋಟೆ | 57.30 | 69.39 |
| 3. | ಬಿಜಾಪುರ | 57.01 | 67.20 |
| 4. | ಬೀದರ್ | 60.94 | 71.01 |
| 5. | ರಾಯಚೂರು | 48.81 | 60.46 |
| 6. | ಕೊಪ್ಪಳ | 54.10 | 67.28 |
| 7. | ಗದಗ | 66.11 | 75.18 |
| 8. | ಧಾರವಾಡ | 71.61 | 80.30 |
| 9. | ಉತ್ತರ ಕನ್ನಡ | 76.60 | 84.03 |
| 10. | ಹಾವೇರಿ | 67.79 | 77.60 |
| 11. | ಬಳ್ಳಾರಿ | 57.40 | 67.85 |
| 12. | ಚಿತ್ರದುರ್ಗ | 64.45 | 73.82 |
| 13. | ದಾವಣಗೆರೆ | 67.43 | 76.30 |
| 14. | ಶಿವಮೊಗ್ಗ | 74.52 | 80.50 |
| 15. | ಉಡುಪಿ | 81.25 | 86.29 |
| 16. | ಚಿಕ್ಕಮಗಳೂರು | 72.20 | 79.24 |
| 17. | ತುಮಕೂರು | 67.01 | 74.32 |
| 18. | ಬೆಂಗಳೂರು | 82.96 | 88.48 |
| 19. | ಮಂಡ್ಯ | 61.05 | 70.14 |
| 20. | ಹಾಸನ | 68.63 | 75.89 |
| 21. | ದಕ್ಷಿಣಕನ್ನಡ | 83.35 | 88.62 |

| ಕ್ರಸಂ | ಜಿಲ್ಲೆ | 2001 | 2011 |
|---|---|---|---|
| 22. | ಕೊಡಗು | 77.99 | 82.52 |
| 23. | ಮೈಸೂರು | 63.48 | 72.56 |
| 24. | ಚಾಮರಾಜನಗರ | 50.87 | 61.12 |
| 25. | ಗುಲ್ಬರ್ಗಾ | 54.34 | 65.65 |
| 26. | ಯಾದಗಿರಿ | 39.90 | 52.36 |
| 26. | ಕೋಲಾರ | 65.84 | 74.33 |
| 27. | ಚಿಕ್ಕಬಳ್ಳಾಪುರ | 59.24 | 70.08 |
| 28. | ಬೆಂಗಳೂರು(ಗ್ರಾ) | 69.59 | 78.29 |
| 29. | ರಾಮನಗರ | 60.71 | 69.20 |
| | **ಒಟ್ಟು** | **66.64** | **75.60** |

2011ರ ಜನಗಣತಿಯ ವರದಿ, ಭಾರತ ಸರ್ಕಾರ[13]

ಕರ್ನಾಟಕದ ಜಿಲ್ಲಾವಾರು ಸಾಕ್ಷರತೆಯ ಪ್ರಮಾಣವನ್ನು ಗಮನಿಸಲಾಗಿ 2001 ಹಾಗೂ 2011ರಲ್ಲಾದ ಶೇಕಡವಾರು ಬೆಳವಣಿಗೆಯು ಈ ಕೆಳಗಿನಂತಿದೆ. 2001 ಹಾಗೂ 2011ರ ಮಧ್ಯದಲ್ಲಿರುವ ಜಿಲ್ಲಾವಾರು ಸಾಕ್ಷರತೆಯ ಪ್ರಮಾಣವನ್ನು ಗಮನಿಸಿದರೆ ಬಹುತೇಕ ಎಲ್ಲಾ ಜಿಲ್ಲೆಗಳಲ್ಲಿಯೂ ಸಾಕ್ಷರತೆಯ ಪ್ರಮಾಣವು ವೃದ್ಧಿಗೊಂಡಿರುವುದು. ಕಂಡುಬರುತ್ತದೆ. ಬೆಳಗಾವಿಯ ಸಾಕ್ಷರತೆಯ ಪ್ರಮಾಣವನ್ನು ಗಮನಿಸಿದರೆ 2001 ಹಾಗೂ 2011ರ ಮಧ್ಯದಲ್ಲಿ ಶೇ. 9.73ರಷ್ಟು ಸಾಕ್ಷರತೆಯ ಪ್ರಮಾಣವು ವೃದ್ಧಿಯಾಗಿದೆ. ಅದೇ ರೀತಿ ಬಾಗಲಕೋಟೆಯ ಸಾಕ್ಷರತಾ ಪ್ರಮಾಣ ಶೇ. 12.09ರಷ್ಟು ಬೆಳವಣಿಗೆಯಾಗಿದೆ. ಬಿಜಾಪುರದ ಸಾಕ್ಷರತಾ ಪ್ರಮಾಣವು ಶೇ. 10.19 ಅಭಿವೃದ್ಧಿಗೊಂಡಿದೆ. ಬೀದರಿನ ಸಾಕ್ಷರತಾ ಪ್ರಮಾಣ ಶೇ. 10.76 ವೃದ್ಧಿಗೊಂಡಿದೆ. ರಾಯಚೂರಿನ ಸಾಕ್ಷರತಾ ಪ್ರಮಾಣ 2001ರಿಂದ 2011ರ ಮಧ್ಯದಲ್ಲಿ ಶೇ. 11.65ರಷ್ಟು ಅಭಿವೃದ್ಧಿಗೊಂಡಿದೆ.

ಕೊಪ್ಪಳದ ಸಾಕ್ಷರತಾ ಪ್ರಮಾಣ ಶೇ. 13.18ರಷ್ಟು ಬೆಳವಣಿಗೆಗೊಂಡಿದೆ. ಗದಗದ ಸಾಕ್ಷರತಾ ಬೆಳವಣಿಗೆ ಪ್ರಮಾಣ ಶೇ. 9.07 ರಷ್ಟಿದೆ. ಧಾರವಾಡದ ಸಾಕ್ಷರತಾ ಪ್ರಮಾಣ ಶೇ. 8.69 ವೃದ್ಧಿಗೊಂಡಿದೆ. ಉತ್ತರಕನ್ನಡದ ಸಾಕ್ಷರತಾ ಪ್ರಮಾಣ ಶೇ. 7.43 ಬೆಳವಣಿಗೆಯಾಗಿದೆ. ಹಾವೇರಿಯಲ್ಲಿ ಇದು ಶೇ. 9.81 ರಷ್ಟು ಅಭಿವೃದ್ದಿಗೊಂಡಿದೆ. ಬಳ್ಳಾರಿ ಸಾಕ್ಷರತಾ ಪ್ರಮಾಣ

ಶೇ. 10.45ರಷ್ಟು ವೃದ್ಧಿಗೊಂಡಿದೆ. ಚಿತ್ರದುರ್ಗದ ಸಾಕ್ಷರತಾ ಪ್ರಮಾಣ ಶೇ. 9.37ರಷ್ಟು ಅಭಿವೃದ್ಧಿಗೊಂಡಿದೆ. ದಾವಣಗೆರೆಯ ಸಾಕ್ಷರತಾ ಪ್ರಮಾಣ ಶೇ. 8.67ರಷ್ಟು ವೃದ್ಧಿಗೊಂಡಿದೆ. ಶಿವಮೊಗ್ಗದ ಸಾಕ್ಷರತಾ ಪ್ರಮಾಣ ಶೇ. 5.98ರಷ್ಟಿದೆ. ಉಡುಪಿಯ ಸಾಕ್ಷರತಾ ಪ್ರಮಾಣ ಶೇ. 5.04ರಷ್ಟು ಬೆಳವಣಿಗೆಯಾಗಿದೆ. ಚಿಕ್ಕಮಗಳೂರಿನ ಸಾಕ್ಷರತಾ ಪ್ರಮಾಣ ಶೇ. 7.04 ಬೆಳವಣಿಯಾಗಿದೆ. ತುಮಕೂರಿನ ಸಾಕ್ಷರತಾ ಪ್ರಮಾಣ ಶೇ. 7.31 ರಷ್ಟು ಅಭಿವೃದ್ಧಿಯಾಗಿದೆ. ಬೆಂಗಳೂರು ನಗರದ ಸಾಕ್ಷರತಾ ಪ್ರಮಾಣ ಶೇ. 5.52 ರಷ್ಟು ವೃದ್ಧಿಯಾಗಿದೆ. ಮಂಡ್ಯದ ಸಾಕ್ಷರತಾ ಪ್ರಮಾಣ ಶೇ. 7.09 ರಷ್ಟು ಬೆಳವಣಿಗೆಯಾಗಿದೆ. ಹಾಸನದ ಸಾಕ್ಷರತಾ ಪ್ರಮಾಣ ಶೇ. 7.26ರಷ್ಟು ಅಭಿವೃದ್ಧಿಗೊಂಡಿದೆ. ದಕ್ಷಿಣ ಕನ್ನಡದ ಸಾಕ್ಷರತಾ ಪ್ರಮಾಣ ಶೇ. 5.27ರಷ್ಟು ವೃದ್ಧಿಗೊಂಡಿದೆ. ಕೊಡಗಿನ ಸಾಕ್ಷರತಾ ಪ್ರಮಾಣ ಶೇ. 4.53ರಷ್ಟು ವೃದ್ಧಿಸಿದೆ. ಮೈಸೂರಿನ ಸಾಕ್ಷರತಾ ಪ್ರಮಾಣ ಶೇ. 9.08 ರಷ್ಟು ಅಭಿವೃದ್ಧಿಗೊಂಡಿದೆ. ಚಾಮರಾಜನಗರದ ಸಾಕ್ಷರತಾ ಪ್ರಮಾಣ ಶೇ. 10.25ರಷ್ಟು ಬೆಳವಣಿಗೆ ಕಂಡಿದೆ. ಗುಲ್ಬರ್ಗಾದ ಸಾಕ್ಷರತಾ ಪ್ರಮಾಣ ಶೇ. 11.31 ರಷ್ಟು ವೃದ್ಧಿಯಾಗಿದೆ. ಯಾದಗಿರಿಯ ಸಾಕ್ಷರತಾ ಪ್ರಮಾಣ ಶೇ. 12.46 ರಷ್ಟು ಬೆಳವಣಿಗೆಯಾಗಿದೆ. ಕೋಲಾರದ ಸಾಕ್ಷರತಾ ಪ್ರಮಾಣ ಶೇ. 8.49 ವೃದ್ಧಿಯಾಗಿದೆ. ಚಿಕ್ಕಬಳ್ಳಾಪುರದ ಸಾಕ್ಷರತಾ ಪ್ರಮಾಣ ಶೇ. 10.84 ವೃದ್ಧಿಯಾಗಿದೆ. ಬೆಂಗಳೂರು ಗ್ರಾಮಾಂತರದ ಸಾಕ್ಷರತಾ ಪ್ರಮಾಣ ಶೇ. 8.70 ವೃದ್ಧಿಯಾಗಿದೆ. ರಾಮನಗರದ ಸಾಕ್ಷರತಾ ಪ್ರಮಾಣ ಶೇ. 14.89ರಷ್ಟು ವೃದ್ಧಿಗೊಂಡಿದೆ. ಕರ್ನಾಟಕದ ಸಾಕ್ಷರತಾ ಪ್ರಮಾಣ ಶೇ. 66.64 ಇದ್ದರೆ 2011ರಲ್ಲಿ ಶೇ. 75.60 ಇದೆ. ಅಂದರೆ ಕರ್ನಾಟಕದ ಸಾಕ್ಷರತೆಯ ಒಟ್ಟು ವೃದ್ಧಿಯು ಒಂದು ದಶಕದಲ್ಲಿ ಶೇ. 8.96ರಷ್ಟಿದೆ. 2001ರಲ್ಲಿ ಸಾಕ್ಷರತೆಯಲ್ಲಿ ಮುಂಚೂಣಿಯಲ್ಲಿದ್ದ ಜಿಲ್ಲೆಯು ದಕ್ಷಿಣಕನ್ನಡ(ಶೇ. 83.35)ವಾಗಿದೆ. ಸಾಕ್ಷರತೆಯಲ್ಲಿ ಹಿಂದುಳಿದಿದ್ದ ಜಿಲ್ಲೆಯು ಯಾದಗಿರಿ (ಶೇ. 39.90) ಆಗಿದೆ. 2011ರಲ್ಲಿ ಸಾಕ್ಷರತೆಯಲ್ಲಿ ಮುಂಚೂಣಿಯಲ್ಲಿರುವ ಜಿಲ್ಲೆ ಎನ್ನುವ ಹೆಗ್ಗಳಿಕೆಗೆ ಪಾತ್ರವಾಗಿರುವುದು ದಕ್ಷಿಣ ಕನ್ನಡ (ಶೇ. 88.62)ವಾಗಿದೆ. ಯಾದಗಿರಿಯು ಹಿಂದುಳಿದ ಜಿಲ್ಲೆ (ಶೇ. 52.36) ಆಗಿದೆ. ಆದರೆ 2001ಕ್ಕೂ ಹಾಗೂ 2011ಕ್ಕೂ ಯಾದಗಿರಿಯ ಸಾಕ್ಷರತೆಯಲ್ಲಿರುವ ಅಂತರವು ಶೇ. 12.46ರಷ್ಟಿದೆ. ದಕ್ಷಿಣಕನ್ನಡ ಜಿಲ್ಲೆಯ ಸಾಕ್ಷರತೆಯ ಅಂತರವು 2001ಕ್ಕಿಂತ 2011ಕ್ಕೆ ಶೇ. 5.27ರಷ್ಟಿದೆ.

ಕೋಷ್ಟಕ 7

ಕರ್ನಾಟಕದ ವಿಭಾಗವಾರು ಸಾಕ್ಷರತಾ ಪ್ರಮಾಣ

2001–2011 (ಶೇಕಡವಾರುಗಳಲ್ಲಿ)

| ವಿಭಾಗ | ಪುರುಷರ | *ಸಾ.ಪ್ರ | ಮಹಿಳೆ | *ಸಾ.ಪ್ರ | ಒಟ್ಟು | *ಸಾ.ಪ್ರ |
|---|---|---|---|---|---|---|
| | **2001** | **2011** | **2001** | **2011** | **2001** | **2011** |
| ಬೆಂಗಳೂರು | 80.30 | 87.04 | 63.98 | 73.85 | 72..37 | 80.21 |
| ಮೈಸೂರು | 76.62 | 82.69 | 61.31 | 70.39 | 68.92 | 76.50 |
| ದಕ್ಷಿಣಕನ್ನಡ | 79.03 | 85.14 | 63.02 | 72.69 | 71.15 | 78.99 |
| ಬೆಳಗಾವಿ | 76.37 | 83.22 | 53.48 | 65.92 | 65.14 | 74.69 |
| ಗುಲ್ಬರ್ಗಾ | 65.87 | 74.89 | 41.07 | 54.76 | 53.64 | 64.93 |
| ಉತ್ತರಕನ್ನಡ | 72.01 | 79.65 | 48.30 | 61.12 | 60.35 | 70.51 |
| **ಕರ್ನಾಟಕ** | **76.01** | **82.86** | **56.87** | **67.87** | **66.64** | **75.46** |

* ಸಾ.ಪ್ರ: ಸಾಕ್ಷರತಾ ಪ್ರಮಾಣ

**ಆಧಾರ:** 2011ರ ಜನಗಣತಿಯ ವರದಿ, 2012, ಭಾರತ ಸರ್ಕಾರ[14]

ಕರ್ನಾಟಕದ ಒಟ್ಟು ಸಾಕ್ಷರತೆಯ 2001 ಹಾಗೂ 2011ರ ಶೈಕ್ಷಣಿಕ ಅಂತರವು 8.96 ಇದೆ. ಈ ಅಂತರವು ವಿಭಾಗಾವಾರು ಬೆಂಗಳೂರು ವಿಭಾಗದಲ್ಲಿ 7.84, ಮೈಸೂರು ವಿಭಾಗದಲ್ಲಿ 7.58, ದಕ್ಷಿಣಕನ್ನಡ ವಿಭಾಗದಲ್ಲಿ 7.84, ಬೆಳಗಾವಿ ವಿಭಾಗದಲ್ಲಿ 9.55, ಗುಲ್ಬರ್ಗಾ ವಿಭಾಗದಲ್ಲಿ 11.29, ಉತ್ತರಕನ್ನಡ ವಿಭಾಗದಲ್ಲಿ 10.16ರಷ್ಟಿದೆ.

ಕೋಷ್ಟಕ: 8

2001 ಸಾಕ್ಷರತೆಯ ಮಾಹಿತಿ (ಶೇಕಡವಾರುಗಳಲ್ಲಿ)

| ಕ್ರಸಂ | ವಿವರಗಳು | ಪುರುಷರು | ಮಹಿಳೆಯರು | ಒಟ್ಟು |
|---|---|---|---|---|
| 1. | ರಾಜ್ಯದ ಸಾಕ್ಷರತೆ ಪ್ರಮಾಣ | 76.29 | 57.45 | 67.04 |
| 2. | ಪ.ಜಾ ಸಾಕ್ಷರತೆ ಪ್ರಮಾಣ | 63.80 | 41.70 | 52.90 |
| 3. | ಅಂತರ (1–2) | 12.49 | 15.75 | 14.14 |

2001ರ ಸಾಕ್ಷರತೆಯ ಮಾಹಿತಿಯ ಪ್ರಕಾರ ರಾಜ್ಯದ ಒಟ್ಟು ಸಾಕ್ಷರತೆಯ ಪ್ರಮಾಣವು ಶೇ. 67.04ರಷ್ಟಿದೆ. ಇದರಲ್ಲಿ ಪುರುಷರ ಪ್ರಮಾಣವು ಶೇ. 76.29 ಇದ್ದರೆ ಮಹಿಳೆಯರ ಪ್ರಮಾಣವು ಶೇ. 57.45ರಷ್ಟಿದೆ. ಅದೇ ರೀತಿಯಾಗಿ ರಾಜ್ಯದ ಪರಿಶಿಷ್ಟ ಜಾತಿಯ ಸಾಕ್ಷರತೆಯ ಪ್ರಮಾಣವು ಒಟ್ಟು ಶೇ. 52.90 ರಷ್ಟಿದೆ. ಇದರಲ್ಲಿ ಪುರುಷರ ಪ್ರಮಾಣವು ಶೇ. 63.49 ಇದ್ದರೆ ಮಹಿಳೆಯರ ಪ್ರಮಾಣ ಶೇ. 41.70 ಇದೆ. ಸಾಮಾನ್ಯರಿಗೂ ಪರಿಶಿಷ್ಟ ಜಾತಿಗೂ ಇರುವ ಶೈಕ್ಷಣಿಕ ಅಂತರವು ಒಟ್ಟು ಶೇ. 14.14 ಇದೆ. ಇದರಲ್ಲಿ ಪುರುಷರ ಶೈಕ್ಷಣಿಕ ಅಂತರವು ಶೇ. 12.49 ಇದ್ದರೆ ಮಹಿಳೆಯರ ಅಂತರವು ಶೇ. 15.75ರಷ್ಟಿದೆ.

**ಕುಂಬ್ರಿ ಮರಾಠಿಗರ ಶೈಕ್ಷಣಿಕತೆ**

ಕರ್ನಾಟಕದ ಮಲೆನಾಡಿನ ದಟ್ಟ ಮತ್ತು ನಿರ್ಮಾನುಷ ಕಣಿವೆಗಳಲ್ಲಿರುವ ಕುಂಬ್ರಿ ಮರಾಠಿಗರು ಮೂಲತಃ ಪಶುಪಾಲಕರು ಮತ್ತು ಆದಿಮ ಕೃಷಿಕರು. ಮಹಾರಾಷ್ಟ್ರ ಮತ್ತು ಗೋವಾ ಗಡಿಗಳಿಂದ ವಲಸಿಗರಾಗಿ ಬಂದು ಈಗ ನೆಲೆನಿಂತಿರುವ ಕುಂಬ್ರಿ ಮರಾಠಿಗರು ಮೆಲ್ಲನೆ ಶಿಕ್ಷಣದತ್ತ ಮುಖ ಮಾಡಿದ್ದಾರೆ. ಇಂತಹ ಸಮುದಾಯದ ಸರ್ವಾಂಗೀಣ ಅಭಿವೃದ್ಧಿಗೆ ಎಂತಹ ಶಿಕ್ಷಣ ಬೇಕು? ಎಂಬುದು ಮೂಲಭೂತ ಪ್ರಶ್ನೆಯಾಗಿದೆ. ಏಕೆಂದರೆ ಕುಂಬ್ರಿ ಮರಾಠಿಗರು ಬಹುಭಾಷಿಕ ಪ್ರದೇಶದಿಂದ ವಲಸೆ ಬಂದು ಇಂದು ದಟ್ಟಡವಿಗಳಲ್ಲಿ ನೆಲೆನಿಂತವರು. ಶತಮಾನಗಳಿಂದ ಜನಸಂಪರ್ಕಗಳಿಲ್ಲದೆ ಏಕಾಂಗಿಗಳಾಗಿ ಬದುಕಿದವರು. ಇಂತಹ ಬುಡಕಟ್ಟು ಸಮುದಾಯಗಳಿಗೆ ನಾವು ಕೊಡುತ್ತಿರುವ ಶಿಕ್ಷಣ ಎಷ್ಟರಮಟ್ಟಿಗೆ ತಲುಪುತ್ತದೆ ಎಂಬುದು ಗಮನದಲ್ಲಿರಿಸಿಕೊಳ್ಳಬೇಕು. ಕುಂಬ್ರಿ ಮರಾಠಿಗರು ತಮ್ಮ ನೆಲೆಯನ್ನು ಹೆಚ್ಚಾಗಿ ದಟ್ಟಾರಣ್ಯದಲ್ಲಿ ಗುರುತಿಸಿಕೊಂಡು ಅದರಲ್ಲೂ ಬೆಟ್ಟಗಳ ಇಳಿಜಾರಿನಲ್ಲಿ ವಾಸಸ್ಥಳವನ್ನು ಮಾಡಿಕೊಂಡು ಅದಕ್ಕೊಂದು ಊರು ಎಂದು ಹೆಸಿರಿಟ್ಟುಕೊಂಡಿವೆ. ಇದರಿಂದಾಗಿ ಯಾವುದೇ ಸೌಲಭ್ಯವಿಲ್ಲದೆ ಜೀವನವನ್ನು ಸಾಗಿಸುವ ಒಂದು ಬುಡಕಟ್ಟು ಸಮುದಾಯವಾಗಿದೆ.

ಕುಂಬ್ರಿ ಮರಾಠಿಗರು ವಾಸಿಸುವುದು ದಟ್ಟಾರಣ್ಯಗಳಲ್ಲಾದುದರಿಂದ ಶಾಲೆಗಳು ಕೂಡ ತುಂಬಾ ಅಂತರದಲ್ಲಿರುತ್ತವೆ. ಕೆಲವೆಡೆ ಶಾಲೆಗಳೇ ಇಲ್ಲ. ಶಾಲೆಗಳಿದ್ದರೂ ಅಲ್ಲಿ ಶಿಕ್ಷಕರಿವುದಿಲ್ಲ. ಮಳೆಗಾಲದಲ್ಲಿ ಕೇಳುವವರೂ ಇಲ್ಲ, ಶಾಲೆಗಳೂ ನಡೆಯುವುದಿಲ್ಲ. ಬಹುತೇಕ ಶಿಕ್ಷಕರು ಬಯಲು ಸೀಮೆ ಕಡೆಯಿಂದ ಬಂದವರು. ಕುಂಬ್ರಿ ಮರಾಠಿಗರ ಮಾತೃಭಾಷೆ ಕೊಂಕಣಿ, ಶಿಕ್ಷಕರಿಗೆ ಈ ಭಾಷೆ ಗೊತ್ತಿಲ್ಲದಿರುವುದರಿಂದ ಮಕ್ಕಳಿಗೆ ಮನವರಿಕೆ ಮಾಡುವುದು ಕಷ್ಟವಾಗುತ್ತದೆ.

ಆದ್ದರಿಂದ ಕೊಂಕಣಿ ಗೊತ್ತಿರುವ ಶಿಕ್ಷಕರನ್ನು ನೇಮಿಸಬೇಕೆಂಬುದು ಕುಂಬ್ರಿ ಮರಾಠಿಗರು ಒತ್ತಾಯ. ದೂರದೂರದ ಶಾಲೆಗಳು, ಶಿಕ್ಷಕರ ಗೈರುಹಾಜರಿ, ಕೆಲವು ಶಾಲೆಗಳು ಸಂಪೂರ್ಣವಾಗಿ ಮುಚ್ಚಿ ಹೋಗಿರುವುದು ಇವೆಲ್ಲ ಶಿಕ್ಷಣದ ಪ್ರಗತಿಗೆ ಅಡ್ಡಿಯಾಗಿವೆ. ಇವೆಲ್ಲದರ ಪರಿಣಾಮವಾಗಿ ಅರ್ಧದಲ್ಲಿಯೇ ಶಾಲೆ ಬಿಡುವ ಮಕ್ಕಳ ಸಂಖ್ಯೆ ಹೆಚ್ಚು. ಇದರ ಪರಿಣಾಮ ಉನ್ನತ ಶಿಕ್ಷಣ ಎಂಬುದು ಈ ಸಮುದಾಯಕ್ಕೆ ಮರೀಚಿಕೆ. ಪದವಿ ಪಡೆದವರು ಕೇವಲ ಬೆರಳೆಣಿಕೆಯಷ್ಟು, ಇಡೀ ಸಮುದಾಯದಲ್ಲಿ ಬೆರಳೆಣಿಕೆ ಜನ ಮಾತ್ರ ಶಿಕ್ಷಕರಾಗಿ ನೇಮಕ ಹೊಂದಿದ್ದಾರೆ. ಕೆಲವರು ವಿವಿಧ ಇಲಾಖೆಗಳಲ್ಲಿ ನಾಲ್ಕನೇ ದರ್ಜೆ ನೌಕರರಾಗಿ ಸೇರಿದ್ದಾರೆ. ಸ್ನಾತಕೋತ್ತರ ಮಟ್ಟದ ಉನ್ನತ ಶಿಕ್ಷಣ ಯಾರಿಗೂ ಇಲ್ಲ.

ಅಕ್ಷರ ವಂಚಿತ ಕುಂಬ್ರಿ ಮರಾಠಿಗರಿಗರಿಗೆ ಯಾವುದೇ ಪ್ರತ್ಯೇಕ ಯೋಜನೆಗಳನ್ನು ಜಾರಿಗೊಳಿಸಲಾಗಿಲ್ಲ. ವಯಸ್ಕರ ಶಿಕ್ಷಣ ಅಥವಾ ಸಾಕ್ಷರತಾ ಆಂದೋಲನಗಳು ಇಲ್ಲಿ ಯಾವ ಪರಿಣಾಮವನ್ನು ಬೀರಿಲ್ಲ. ಒಟ್ಟಾರೆಯಾಗಿ ಶೈಕ್ಷಣಿಕವಾಗಿ ಕುಂಬ್ರಿ ಮರಾಠಿಗರು ಅತ್ಯಂತ ಹಿಂದುಳಿದವರು. ಅಲ್ಲಿ ಸರಕಾರ ಶಾಲೆಗಳನ್ನು ತೆರೆದರೂ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲು ಹಿಂಜರಿಯುತ್ತಾರೆ. ಇದಕ್ಕೆ ಮುಖ್ಯ ಕಾರಣಗಳೆಂದರೆ, ಬಡತನ, ಪ್ರೇರಣೆಯ ಕೊರತೆ, ಪ್ರೋತ್ಸಾಹದ ಕೊರತೆ, ಅನಕ್ಷರತೆ, ಖಿನ್ನತೆಯನ್ನುಂಟು ಮಾಡುವಂಥ ಮನೆಯ ವಾತಾವರಣ, ಬುಡಕಟ್ಟುಗಳಿಗೆ ಕೊಡ ಮಾಡಿದ ಪ್ರಯೋಜನೆಗಳ ಅಲಭ್ಯತೆ ಇತ್ಯಾದಿ. ಕುಂಬ್ರಿ ಮರಾಠಿಗರಿಗೆ ಕೂಡ ಭೂಮಿ ಮತ್ತು ತಮ್ಮ ಬದುಕಿನ ಅನ್ನದ ಪ್ರಶ್ನೆಯೇ ಮುಖ್ಯವಾಗಿರುವುದರಿಂದ ಶಿಕ್ಷಣದ ಕಡೆ ಗಮನ ಇನ್ನೂ ಅಷ್ಟಾಗಿ ಹರಿದಿಲ್ಲ. ಯಾವುದೇ ಒಂದು ಸಮುದಾಯವು ಮುಂದುವರೆಯಲು ಶಿಕ್ಷಣವು ಅತೀ ಅವಶ್ಯಕವಾದದ್ದು. ಕುಣಬಿಗಳು ವಾಸಿಸುತ್ತಿರುವ ಯಾವ ಪ್ರದೇಶದಲ್ಲಿ ಸಮುದಾಯವು ಆರ್ಥಿಕವಾಗಿ ದುಸ್ಥಿತಿಯಲ್ಲಿದೆಯೋ ಆ ಎಲ್ಲಾ ಪ್ರದೇಶಗಳಲ್ಲಿ ಸದರಿ ಸಮುದಾಯ ಸಾಕ್ಷರತೆಯ ಮತ್ತು ಶಿಕ್ಷಣ ಹೊಂದಿದವರ ಪ್ರಮಾಣವು ಅದು ಯಾವ ತೆರನಾಗಿ ಸಾಗಿದೆ ಎಂಬುದನ್ನು ಕುಂಬ್ರಿ ಮರಾಠಿಗರ ಶೈಕ್ಷಣಿಕ ಮಟ್ಟದ ಸ್ಥಿತಿಗತಿಗಳನ್ನು ಅರಿತುಕೊಳ್ಳಬೇಕಾಗುತ್ತದೆ. ಕುಂಬ್ರಿ ಮರಾಠಿ ಸಮುದಾಯದಲ್ಲಿಯ ಪ್ರಚಲಿತ ಕಾಲದಲ್ಲಿ ಶೈಕ್ಷಣಿಕ ಮಟ್ಟ ಸ್ಥಿತಿಗತಿ ಯಾವ ರೀತಿಯಾಗಿದೆ ಎಂಬುದನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ಕೋಷ್ಟಕ 9**

**ಸಮೀಕ್ಷೆಗೊಳಪಟ್ಟ ಕುಂಬ್ರಿ ಮರಾಠಿಗರ ತಾಲೂಕುವಾರು, ಲಿಂಗವಾರು ಸಾಕ್ಷರರ್ಹರಲ್ಲದವರು ಹಾಗೂ ಸಾರ್ಕರರ್ಹರು ಪ್ರಮಾಣ**

| ತಾಲೂಕುಗಳು | ಕುಟುಂಬಗಳು | 0–5 ಸಾಕ್ಷರರ್ಹರಲ್ಲದವರು | | | 6–61 ಸಾಕ್ಷರರ್ಹರು | | |
|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಅಂಕೋಲಾ | 247 | 96 | 85 | 181 | 749 | 652 | 1401 |
| ಕುಮಟಾ | 399 | 108 | 99 | 207 | 1072 | 1182 | 2254 |
| ಹೊನ್ನಾವರ | 328 | 101 | 150 | 251 | 888 | 1288 | 2176 |
| ಭಟ್ಕಳ | 401 | 175 | 186 | 361 | 1696 | 1720 | 3416 |
| ಶಿರಸಿ | 1282 | 496 | 506 | 1002 | 3488 | 3640 | 7128 |
| ಸಿದ್ದಾಪುರ | 429 | 153 | 145 | 298 | 1440 | 1616 | 3056 |
| ಯಲ್ಲಾಪುರ | 188 | 85 | 80 | 165 | 610 | 633 | 1243 |
| ಮುಂಡಗೊಡ | 113 | 40 | 42 | 82 | 272 | 323 | 595 |
| **ಒಟ್ಟು** | **3387** | **1254** | **1293** | **2547** | **10215** | **11054** | **21269** |



ಸಮೀಕ್ಷೆಗೆ ಒಳಪಟ್ಟ ಕುಂಬ್ರಿ ಮರಾಠಿ ಸಮುದಾಯದ 3387 ಕುಟುಂಬದಲ್ಲಿ 0 ಯಿಂದ 5 ವರ್ಷದ ಒಳಗಿನವರ ಸಂಖ್ಯೆ ಒಟ್ಟು 2547. ಅಂದರೆ ಸಮೀಕ್ಷೆಗೆ ಒಳಪಟ್ಟ ಒಟ್ಟು ಜನಸಂಖ್ಯೆಯಲ್ಲಿ ಇವರ ಸಂಖ್ಯೆ ಶೇ 11%. ಇನ್ನು ಸಮೀಕ್ಷೆಗೆ ಒಳಪಟ್ಟ ಕುಂಬ್ರಿ ಮರಾಠಿ ಸಮುದಾಯದ 3387 ಕುಟುಂಬದಲ್ಲಿ 6 ಯಿಂದ 61 ವರ್ಷದ ಒಳಗಿನವರ ಸಂಖ್ಯೆ ಒಟ್ಟು 21269. ಇವರ ಸಂಖ್ಯೆ ಶೇ 89%. ನಮ್ಮ ಈ ಒಟ್ಟಾರೆಯ ವಿಶ್ಲೇಷಣೆಗೆ ಒಳಪಡುವವರು ಈ ಶೇ 89% ಜನ ಮಾತ್ರ. ಈ ಎರಡೂ ವಯೋಗುಂಪಿನಲ್ಲಿ ಹೆಣ್ಣುಮಕ್ಕಳ ಸಂಖ್ಯೆ ಗಂಡಸರಿಗಿಂತ ಅಧಿಕವಾಗಿದ್ದು, ವಯಸ್ಕರ ಸಂಖ್ಯೆ ಹೆಚ್ಚಿದೆ.

**ಕುಂಬ್ರಿ ಮರಾಠಿಗರ ಸಾಕ್ಷರತೆಯ ಪ್ರಮಾಣ**

**ಕೋಷ್ಟಕ 10**

**ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ತಾಲೂಕುವಾರು, ಲಿಂಗವಾರು ಸಾಕ್ಷರಸ್ಥರ ಹಾಗೂ ನಿರಕ್ಷರಿಗಳ ಪ್ರಮಾಣ**

| ತಾಲೂಕುಗಳು | ಕುಟುಂಬ | ಸಾಕ್ಷರರ್ಹರು | | | ಸಾಕ್ಷರಸ್ಥರು | | | ನಿರಕ್ಷರಿಗಳು | | |
|---|---|---|---|---|---|---|---|---|---|---|
| | ಗಳು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಅಂಕೋಲಾ | 247 | 749 | 652 | 1401 | 456 | 319 | 775 | 293 | 333 | 626 |
| ಕುಮಟಾ | 399 | 1072 | 1182 | 2254 | 617 | 715 | 1332 | 455 | 467 | 922 |
| ಹೊನ್ನಾವರ | 328 | 888 | 1288 | 2176 | 667 | 837 | 1504 | 221 | 451 | 672 |
| ಭಟ್ಕಳ | 401 | 1696 | 1720 | 3416 | 741 | 1061 | 1802 | 955 | 659 | 1614 |
| ಶಿರಸಿ | 1282 | 3488 | 3640 | 7128 | 1239 | 1172 | 2411 | 2249 | 2468 | 4717 |
| ಸಿದ್ದಾಪುರ | 429 | 1440 | 1616 | 3056 | 679 | 546 | 1225 | 761 | 1070 | 1831 |
| ಯಲ್ಲಾಪುರ | 188 | 610 | 633 | 1243 | 556 | 601 | 1157 | 54 | 32 | 86 |
| ಮುಂಡಗೊಡ | 113 | 272 | 323 | 595 | 156 | 143 | 299 | 116 | 180 | 296 |
| **ಒಟ್ಟು** | **3387** | **10215** | **11054** | **21269** | **5111** | **5394** | **10505** | **5104** | **5660** | **10764** |

ಮೇಲಿನ ಕೋಷ್ಟಕದ ಪ್ರಕಾರ ಸಾಕ್ಷರಾರ್ಹ ಕುಂಬ್ರಿ ಮರಾಠಿಗರ ಸಂಖ್ಯೆ ಒಟ್ಟು 21269. ಅದರಲ್ಲಿ 10215 ಜನ ಪುರುಷರು, 11054 ಸ್ತ್ರೀಯರಿದ್ದಾರೆ. ಇವರಲ್ಲಿ 5111 ಜನ ಪುರುಷರು ಸಾಕ್ಷರರಾಗಿದ್ದರೆ, 5394 ಸ್ತ್ರೀಯರು ಸಾಕ್ಷರರಿದ್ದಾರೆ. ಇದರಲ್ಲಿ 5111 ಜನಪುರುಷರು ಸಾಕ್ಷರರಿದ್ದರೆ, 5394 ಜನ ಮಹಿಳೆಯರು ಸಾಕ್ಷರರಿದ್ದಾರೆ. ಅಂದರೆ ಪುರುಷರಿಗಿಂತ ಮಹಿಳೆಯರಲ್ಲಿ ಸಾಕ್ಷರತೆಯ ಪ್ರಮಾಣ ಹೆಚ್ಚಿರುವುದು ಕಂಡುಬರುತ್ತದೆ.




ಕುಂಬ್ರಿ ಮರಾಠಿಗರಲ್ಲಿ ಮಹಿಳೆಯರ ಸಂಖ್ಯೆ ಜಾಸ್ತಿ ಇದೆ. ಅದಕ್ಕನುಗುಣವಾಗಿ ಅವರ ಸಾಕ್ಷರತೆಯ ಪ್ರಮಾಣವೂ ಅಧಿಕವಾಗಿರುವುದು ಆ ಸಮುದಾಯದ ಸಾಮಾಜಿಕ ಆರೋಗ್ಯದ ದೃಷ್ಟಿಯಿಂದ ಒಳ್ಳೆಯ ಬೆಳವಣಿಗೆಯೇ ಆಗಿದೆ.

**ಶೈಕ್ಷಣಿಕ ಸ್ಥಿತಿಗತಿ**

ಕುಂಬ್ರಿ ಮರಾಠಿಗರಲ್ಲಿ ಶೈಕ್ಷಣಿಕ ಹಂಬಲಗಳು ಗಟ್ಟಿಯಾಗಿವೆ. ಕುಂಬ್ರಿ ಮರಾಠಿ ಸಮುದಾಯದ ಬಹುಪಾಲು ಮಂದಿ ಸುಮಾರು ಎರಡು ದಶಕಗಳಿಂದ ಶಿಕ್ಷಣದಲ್ಲಿ ತೊಡಗಿದ್ದಾರೆ. ಇವರ ಶಿಕ್ಷಣಕ್ಕೆ ಅನುಕೂಲವಾಗುವಂತೆ ಇವರು ವಾಸಿಸುವ ಪ್ರದೇಶಗಳಲ್ಲಿ ಕೆಲವೆಡೆ ಶಾಲೆಗಳಿವೆ. ಇವರ ಪ್ರಕಾರ ನಮ್ಮ ಸಮುದಾಯದ ಮಕ್ಕಳು ಶಿಕ್ಷಣವನ್ನು ಪಡೆದರೆ ಇಡೀ ಸಮುದಾಯವೆ ಬದಲಾಗುತ್ತದೆ ಎಂದು ಭಾವಿಸಿದ್ದಾರೆ. ಈ ಹಿಂದೆ ಈ ಸಮುದಾಯದ ಹಲವಾರು ಜನ ಶಿಕ್ಷಣದಿಂದ ಸರ್ಕಾರಿ ನೌಕರಿಯನ್ನು ಪಡೆದು ಅವರು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಮುಂದುವರೆದಿದ್ದಾರೆ. ಆದರೆ ಇವರು ನಮ್ಮ ಹಳ್ಳಿಗಾಗಲಿ ನಮ್ಮ ಸಮಾಜಕ್ಕಾಗಲಿ ಯಾವುದೇ ನೆರವಿಗೆ ಬಂದಿಲ್ಲ ಎಂದು ಬೇಸರ ವ್ಯಕ್ತಪಡಿಸಿದ್ದಾರೆ. ಹೆಣ್ಣು ಮಕ್ಕಳನ್ನು ಸಹ ಶಾಲೆಗೆ ಕಳಿಸುವಂತಹ ಪ್ರಜ್ಞೆ ಈ ಸಮುದಾಯಕ್ಕೆ ಮೂಡಿದೆ. ಇವರು ವಾಸಿಸುವ ಪ್ರದೇಶದಲ್ಲಿರುವ ಶಾಲೆಗಳಲ್ಲಿ ಶಿಕ್ಷಕರು ಪರಿಣಾಮಕಾರಿಯಾಗಿ ಬೋಧನೆಯನ್ನು ಮಾಡುತ್ತಿದ್ದಾರೆ ಎಂದು ನಾನು ಸಂದರ್ಶಿಸಿದ 100ರಲ್ಲಿ 65 ಕುಟುಂಬಗಳು ಅಭಿಪ್ರಾಯಪಟ್ಟವು. ಸಂದರ್ಶಿಸದ 100

ಕುಟುಂಬಗಳಲ್ಲಿ ಶೇ.75 ಕುಟುಂಬಗಳು ನಮ್ಮ ಸಮುದಾಯಕ್ಕೆ ಮೀಸಲಾತಿ ಬೇಕು ಎಂದು ತಿಳಿಸಿದರೆ ಶೇ.25 ಕುಟುಂಬಗಳು ನಮಗೆ ಮೀಸಲಾತಿ ಅವಶ್ಯಕತೆ ಇಲ್ಲ ಎಂದು ತಿಳಿಸಿದ್ದಾರೆ. ಮೀಸಲಾತಿ ಇರುವುದರಿಂದ ನಮ್ಮ ಸಮುದಾಯಕ್ಕೆ ಉದ್ಯೋಗ ಸಿಗಬಹುದೆಂದು 85 ಕುಟುಂಬದವರು ತಿಳಿಸಿದರೆ 15 ಕುಟುಂಬದವರು ಮೀಸಲಾತಿಯಿಂದ ನಮಗೆ ಉದ್ಯೋಗ ಸಿಗುವುದಿಲ್ಲ ಎಂದು ಭಾವಿಸಿದ್ದಾರೆ. ಈ ಮೀಸಲಾತಿಯಿಂದ ಹಿಂದುಳಿದ ಸಮುದಾಯಗಳ ಸಬಲೀಕರಣ ಸಾಧ್ಯವಿಲ್ಲವೆಂದು ಶೇ.82 ಕುಟುಂಬಗಳು ತಿಳಿಸಿದರೆ ಶೇ.18 ಕುಟುಂಬಗಳು ಮೀಸಲಾತಿಯಿಂದ ಸಮುದಾಯದ ಸಬಲೀಕರಣ ಸಾಧ್ಯವಿಲ್ಲವೆಂದು ತಿಳಿಸಿದರು. ಈ ಹಿನ್ನೆಲೆಯಲ್ಲಿ ಕುಂಬ್ರಿ ಮರಾಠಿಗರ ಶೈಕ್ಷಣಿಕ ಸ್ಥಿತಿಗತಿಗಳನ್ನು ವಿಶ್ಲೇಷಿಸಲಾಗಿದೆ.

**ಕೋಷ್ಟಕ 11**

**ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಸಮುದಾಯದ ಲಿಂಗವಾರು ಶೈಕ್ಷಣಿಕ ಪ್ರಮಾಣ**

| ಶೈಕ್ಷಣಿಕ ಹಂತ | ಗಂಡು | ಹೆಣ್ಣು | ಒಟ್ಟು | ಶೇಕಡ |
|---|---|---|---|---|
| ಪ್ರಾಥಮಿಕ | 2290 | 2714 | 5004 | 47.63 |
| ಮಾಧ್ಯಮಿಕ | 1659 | 2003 | 3662 | 34.86 |
| ಪ್ರೌಢಶಾಲೆ | 658 | 511 | 1169 | 11.13 |
| ಡಿಪ್ಲೋಮಾ | 24 | 3 | 27 | 0.257 |
| ಪದವಿ ಪೂರ್ವ | 323 | 144 | 467 | 4.446 |
| ಪದವಿ | 131 | 17 | 148 | 1.409 |
| ಸ್ನಾತ ಕೋತ್ತರ | 7 | 2 | 9 | 0.086 |
| ಇತರೆ | 19 | 0 | 19 | 0.181 |
| **ಒಟ್ಟು** | **5111** | **5394** | **10505** | |

ಮೇಲಿನ ಕೋಷ್ಟಕದ ಪ್ರಕಾರ ಕುಂಬ್ರಿ ಮರಾಠಿ ಸಮುದಾಯದ ಗಂಡು ಮಕ್ಕಳ ಶಿಕ್ಷಣ ಕೇವಲ ಪ್ರಾಥಮಿಕದಿಂದ ಸ್ನಾತಕ ಪದವಿಯ ವರೆಗೆ ಸಾಗಿಬಂದಿರುವುದು ಕಂಡುಬರುತ್ತದೆ. ಆದರೆ ಹೆಣ್ಣುಮಕ್ಕಳ ಶಿಕ್ಷಣವು ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಯವರೆಗೆ ಪುರುಷರಿಗಿಂತ ಅಧಿಕವಾಗಿದೆ. ಆದರೆ ಪ್ರೌಢಶಾಲೆಯ ಹಂತದಿಂದ ಹೆಣ್ಣುಮಕ್ಕಳ ಶೈಕ್ಷಣಿಕ ಮುಂದುವರಿಕೆ ಕ್ಷೀಣಿಸುತ್ತ ಹೋಗಿರುವುದನ್ನು ನೋಡಬಹುದು.




| | ಪ್ರಾಥಮಿಕ | ಮಾಧ್ಯಮಿಕ | ಪ್ರೌಢಶಾಲೆ | ಡಿಪ್ಲೋಮಾ | ಪದವಿ ಪೂರ್ವ | ಪದವಿ | ಸ್ನಾತಕೋತ್ತರ | ಇತರೆ |
|---|---|---|---|---|---|---|---|---|
| ಗಂಡು | ೨೨೯೦ | ೧೬೪೯ | ೬೫೮ | ೨೪ | ೩೨೩ | ೧೩೧ | ೭ | ೧೯ |
| ಹೆಣ್ಣು | ೨೭೧೪ | ೨೦೦೩ | ೫೧೧ | ೩ | ೧೪೪ | ೧೭ | ೨ | ೦ |
| ಒಟ್ಟು | ೫೦೦೪ | ೩೬೬೨ | ೧೧೬೯ | ೨೭ | ೪೬೭ | ೧೪೮ | ೯ | ೧೯ |

ಕುಂಬ್ರಿ ಮರಾಠಿಗರಲ್ಲಿ ಹೆಣ್ಣು ಮಕ್ಕಳ ಶಿಕ್ಷಣವಂತೂ ಅತ್ಯಂತ ದನನೀಯ ಸ್ಥಿತಿಯಲ್ಲಿದೆ. ಈ ಸಮುದಾಯದ ಹೆಣ್ಣು ಮಕ್ಕಳು ವಿವಿಧ ಶಿಕ್ಷಣ ಹಂತದಲ್ಲಿದ್ದು, ಅವರೂ ಸಹ ಹೆಚ್ಚಿನ ಸಂಖ್ಯೆಯಲ್ಲಿ ಮಾಧ್ಯಮಿಕ ಹಾಗೂ ಪ್ರೌಢ ಶಿಕ್ಷಣವನ್ನು ಮಾತ್ರ ಪಡೆಯುತ್ತಿದ್ದಾರೆ. ಕುಂಬ್ರಿ ಮರಾಠಿ ಸಮುದಾಯದ ಶಿಕ್ಷಣ ಗುಣಮಟ್ಟ ಸುಧಾರಿಸಲು ಸರಕಾರ ಮತ್ತು ಅರೆ ಸರಕಾರಿ ಸಂಘ ಸಂಸ್ಥೆಗಳಿಗೆ ಒಂದು ಸವಾಲಾಗಿದೆ. ಶಿಕ್ಷಣ ಇಲಾಖೆಯ ಸರ್ವಶಿಕ್ಷಣ ಅಭಿಯಾನ ಯೋಜನೆ ಕುಂಬ್ರಿ ಮರಾಠಿ ಸಮುದಾಯದ ಶಿಕ್ಷಣ ಗುಣಮಟ್ಟ ಸುಧಾರಿಸಲು ಹೆಚ್ಚಿನ ಕ್ರಮವಹಿಸಬೇಕಾಗಿರುವುದು.

ಕುಂಬ್ರಿ ಮರಾಠಿ ಸಮುದಾಯದ ಸಾಕ್ಷರತೆಯ ಹಾಗೂ ಶೈಕ್ಷಣಿಕ ಪ್ರಮಾಣವು ಕಡಿಮೆ ಮಟ್ಟದ ಶಿಕ್ಷಣಕ್ಕೆ ಕಾರಣ ಕುಂಬ್ರಿ ಮರಾಠಿಗಳಿಗೆ ನಿಶ್ಚಿತ ಆರ್ಥಿಕ ಮೂಲಗಳಿಲ್ಲದೆ ಇರುವುದು ಹಾಗೂ ಶಿಕ್ಷಣ ಪಡೆಯಲು ಇರಬೇಕಾದ ಮೂಲಭೂತ ಸೌಲಭ್ಯಗಳ ಕೊರತೆ ಇದೆ. 'ಯಾವ ಸಮುದಾಯವು ಕೇವಲ ಅನಿಶ್ಚಿತ ಮತ್ತು ಅವಲಂಬಿತ ಆರ್ಥಿಕ ಮೂಲಗಳನ್ನು ನೆಚ್ಚಿಕೊಂಡಿರುತ್ತದೋ ಆ ಸಮುದಾಯವು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಯಾವತ್ತೂ ಹಿನ್ನಡೆಯನ್ನು ಅನುಭವಿಸುತ್ತಲೇ ಇರುತ್ತದೆ. ವರ್ತಮಾನವನ್ನು ಚರಿತ್ರೆಯ ನೆನಪುಗಳಿಂದ ಎದುರಿಸುವುದು ಸಾಧ್ಯವಿಲ್ಲ, ಹೀಗಾಗಿ ಸಮುದಾಯವೊಂದಕ್ಕೆ ಸಾಂಸ್ಕೃತಿಕವಾಗಿ ಶತಮಾನಗಳ ಇತಿಹಾಸವಿದ್ದರೂ, ವರ್ತಮಾನವನ್ನು ಎದುರಿಸುವ ಆಧುನಿಕ ಕೌಶಲ್ಯಗಳಿಲ್ಲದೇ ಹೋದರೆ ಅಂತಹ ಸಮುದಾಯಗಳ ಭವಿಷ್ಯತ್ತಿನಲ್ಲಿ ಮೂಲೆ ಗುಂಪಾಗುತ್ತವೆ'.[15] ಹೀಗೆ ಸಮುದಾಯಕ್ಕೆ ಆರ್ಥಿಕ ಮೂಲಗಳಿಲ್ಲದ ಕಾರಣದಿಂದ ಶಿಕ್ಷಣ ಪಡೆಯಲು ಆಗದೆ ಇರುವುದು ಬಹುಮುಖ್ಯವಾದ

ಕಾರಣ. ಸದರಿ ಸಮುದಾಯ ತಮ್ಮ ನಿತ್ಯದ ಬದುಕನ್ನು ನಿರ್ವಹಿಸಲು ಪ್ರಯತ್ನಿಸುವಾಗ ಸ್ಪರ್ಧಾತ್ಮಕ ಶಿಕ್ಷಣ ರಂಗಕ್ಕೆ ಮುನ್ನುಗ್ಗಲು ಹೇಗೆ ಸಾಧ್ಯ? ಇಂತಹ ಸ್ಪರ್ಧಾತ್ಮಕ ಯುಗದಲ್ಲಿ ಆರ್ಥಿಕವಾಗಿ ಸಬಲಗೊಳ್ಳದೇ ಶಿಕ್ಷಣಕ್ಕೆ ಪ್ರಧಾನ್ಯತೆ ಕೊಡಲು ಸಾಧ್ಯವೇ?ಮತ್ತೊಂದೆಡೆ ಬಹುಪಾಲು ಕುಂಬ್ರಿ ಮರಾಠಿಗರಿಗೆ ಕೃಷಿ ಭೂಮಿ ಇಲ್ಲ. ಕೂಲಿ ಮಾಡಿ ಜೀವನ ನಡೆಸಬೇಕು. ಇವರಿಗೆ ದೊರೆಯುವ ಕೂಲಿ 40–50 ರೂ. ಮಾತ್ರ, ಇಂಥ ಸಂದರ್ಭದಲ್ಲಿ ಮಕ್ಕಳಿಗೆ ಶಾಲೆಗೆ ಕಳಿಸಲು ಸಾಧ್ಯವಾಗುತ್ತಿಲ್ಲ. ಕುಂಬ್ರಿ ಮರಾಠಿಗರಿಗೆ ಆರ್ಥಿಕವಾಗಿ ಮುನ್ನಡೆಸದಿದ್ದಲ್ಲಿ ಇವರನ್ನು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಸಬಲೀಕರಿಸಲು ಸಾಧ್ಯವಿಲ್ಲ. ಅದರಲ್ಲೂ ಶೈಕ್ಷಣಿಕವಾಗಿ ಸಬಲಗೊಳ್ಳದ ಯಾವ ಸಮುದಾಯವು ವರ್ತಮಾನವನ್ನು ಎದುರಿಸಿ ನಿಲ್ಲಲು ಸಾಧ್ಯಮೂ ಇಲ್ಲ. ಕುಂಬ್ರಿ ಮರಾಠಿ ಸಮುದಾಯವನ್ನು ಆರ್ಥಿಕವಾಗಿ ಸಬಲಗೊಳಿಸಿದರೆ ಅದು ಶೈಕ್ಷಣಿಕವಾಗಿ ಮತ್ತು ಸಾಮಾಜಿಕವಾಗಿ ಸಬಲಗೊಳ್ಳಲು ಸಾಧ್ಯವಾಗುತ್ತದೆ. ಮೇಲೆ ತಿಳಿಸಿದ ಗ್ರಾಮಗಳಲ್ಲಿ ಸರಕಾರ ಮೊಬೈಲ್ ಶಾಲೆಯನ್ನು ತೆರೆಯಬೇಕು. ಮಳೆಗಾಲದಲ್ಲಿ ಸರಕಾರ ಊರಿಗೆ ಸೇತುವೆ ಕಟ್ಟಿಸಿ ವಾಹನ ಸೌಲಭ್ಯ ಕಲ್ಪಿಸಿಕೊಡಬೇಕು, ಇರುವ ಊರಿನಲ್ಲೇ ಶಾಲೆಗಳನ್ನು ತೆರೆಯಬೇಕು. ಒಟ್ಟಿನಲ್ಲಿ ತಿಳಿದುಬರುವುದೇನೆಂದರೆ, ಶಿಕ್ಷಣವು ಕುಂಬ್ರಿ ಮರಾಠಿ ಸಮುದಾಯದವರಲ್ಲಿ ಹಲವಾರು ರೀತಿಯ ತಿಳುವಳಿಕೆ, ಜ್ಞಾನ ಹಾಗೂ ಅವರು ಸ್ವಾವಲಂಬಿಗಳಾಗಿ ಬದುಕಲು, ಅವರಿಗೆ ಅನುಭವ ಮತ್ತು ಅವರ ಜೀವನ ಮಾರ್ಗ ಕಂಡುಕೊಳ್ಳಲು ಶಿಕ್ಷಣವು ಅವಶ್ಯಕವಾಗಿದೆ. ಆದರೂ ಮಕ್ಕಳಿಗೆ ಶಿಕ್ಷಣವನ್ನು ಒದಗಿಸಲು ಹಲವಾರು ತೊಂದರೆಗಳಿದ್ದರೂ ಮಾಹಿತಿದಾರರು ತಮ್ಮ ಮಕ್ಕಳನ್ನು ಸುಶಿಕ್ಷತರನ್ನಾಗಿ ಮಾಡಲು ಪರಿಶ್ರಮಪಡುತ್ತಿದ್ದೇವೆ ಎಂಬುದನ್ನು ನಾನಿ ಈ ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯ ಕೈಕೊಂಡಾಗ ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ಆದರೆ ಹೆಚ್ಚಿನ ಕುಂಬ್ರಿ ಮರಾಠಿ ಸಮುದಾಯದ ಜನರು ಸರಕಾರಿ ನೌಕರಿಗಾಗಿ ಕಾಯದೇ ತಮ್ಮದೇ ಆದ ಸ್ವಂತ ಉದ್ಯೋಗಗಳನ್ನು ಹೊಂದಿ, ಸಮಾಜದಲ್ಲಿ ಉತ್ತಮ ಜೀವನವನ್ನು ಸಾಗಿಸುತ್ತಿರುವುದು ಕಂಡುಬಂದಿದೆ. ಇವರು ತಮ್ಮ ಅತ್ಯಮೂಲ್ಯವಾದ ಸಮಯವನ್ನು ಹಾಳುಮಾಡದೆ, ಅದರ ಸದುಪಯೋಗವನ್ನು ಪಡೆದುಕೊಂಡು ಅವರು ಸಹ ಇತರರಂತೆ ಸಹಬಾಳ್ವೆ ನಡೆಸಲು ಹಾಗೂ ಪರಿವರ್ತನೆ ಹೊಂದುತ್ತಿರುವ ಸಮಾಜದಲ್ಲಿ ಕ್ರಿಯಾಶೀಲರಾಗಿ, ತಮ್ಮಲ್ಲಿ ಕೀಳರಿಮೆಯನ್ನು ಬಿಟ್ಟು, ಇತರರಂತೆ ಬಾಳುವ ಉತ್ತಮವಾದ ಮನೋಭಾವವು ಅವರಲ್ಲಿ ಬೆಳೆದಿರುವುದನ್ನು ಕಾಣಬಹುದು. ಶಿಕ್ಷಣ ಪ್ರತಿಯೊಬ್ಬರಿಗೂ ಅತೀ ಅವಶ್ಯಕವಾಗಿದ್ದು, ಅದರಿಂದ ಜೀವನವನ್ನು ಸುಗಮವಾಗಿ ಸಾಗಿಸಲು ಕಾರಣವಾಗಿದ್ದು, ಅದನ್ನು ಮಾಹಿತಿದಾರರು ತಮ್ಮ ಜೀವನದಲ್ಲಿ ಹೊಂದಿ ಪರಿವರ್ತಿತ ಸಮಾಜದೊಂದಿಗೆ ಸಾಗಿರುವುದು ಸಂತಸದ ಸಂಗತಿಯಾಗಿದೆ.

**ಕುಂಬ್ರಿ ಮರಾಠಿಗರಲ್ಲಿ ಆರೋಗ್ಯ ಕುರಿತ ತಿಳುವಳಿಕೆ**

ಕುಂಬ್ರಿ ಮರಾಠಿಗರು ನೀಗ್ರೋ ಆಸ್ಟ್ರೋಲಾಯ್ಡ್ ಜನವರ್ಗಕ್ಕೆ ಸೇರಿದವರೆಂದು ದೃಢಪಟ್ಟಿದೆ. ಮಹಾರಾಷ್ಟ್ರದ ಪಶ್ಚಿಮ ಘಟ್ಟದಲ್ಲಿರುವ ಅನೇಕ ಬುಡಕಟ್ಟುಗಳ ಜನಾಂಗಿಕ ಅಧ್ಯಯನ ನಡೆಸಿರುವ ಇರಾವರ್ತಿ ಕರ್ವೆ ಇದನ್ನು ತಮ್ಮ ಅಧ್ಯಯನದ ಮೂಲಕ ದೃಢಪಡಿಸಿದ್ದಾರೆ.[16] ಹೀಗಾಗಿ ಕುಂಬ್ರಿ ಮರಾಠಿಗರು ದೈಹಿಕವಾಗಿ ಸದೃಢರು. ಇವರಲ್ಲಿ ಆರೋಗ್ಯಕ್ಕೆ ಸಂಬಂಧಿಸಿದಂತೆ ಅನೇಕ ಪಾರಂಪರಿಕ ತಿಳುವಳಿಕೆಯ ಕ್ರಮಗಳಿವೆ. ಅನೇಕ ಆದಿಮ ಸಂಸ್ಕೃತಿಗಳಲ್ಲಿ ಆರೋಗ್ಯವು ಸಾಮಾನ್ಯವಾದ ವಿಷಯವಾಗಿದೆ. ನಿಜವಾಗಿಯು ಎಲ್ಲ ಸಮುದಾಯಗಳು ತಮ್ಮ ಸಂಸ್ಕೃತಿಯ ಒಂದು ಅಂಗವಾಗಿ ಆರೋಗ್ಯ ಕುರಿತಾದ ತಮ್ಮದೇ ಆದ ಕಲ್ಪನೆಯನ್ನು ಹೊಂದಿವೆ. ಮಾನವನು ಸಮಾಜದಲ್ಲಿ ಉತ್ತಮವಾದ ಜೀವನವನ್ನು ನಡೆಸಲು ಹಲವಾರು ಅಂಶಗಳು ಅತಿ ಅವಶ್ಯಕವಾಗಿವೆ. ಅವುಗಳಲ್ಲಿ ಆರೋಗ್ಯವು ತನ್ನದೇ ಆದ ಮಹತ್ವವನ್ನು ಪಡೆದುಕೊಂಡಿದೆ.

ಕುಂಬ್ರಿ ಮರಾಠಿಗರಲ್ಲಿ ಅನಾರೋಗ್ಯವು ದೊಡ್ಡ ಸಮಸ್ಯೆಯಾಗಿದೆ. ಇದಕ್ಕೆ ಅನೇಕ ಕಾರಣಗಳಿವೆ. ಅನಾರೋಗ್ಯಕರವಾದ ವಾತಾವರಣದಲ್ಲಿ ವಾಸಿಸುವದು, ಶುದ್ಧ ನೀರಿನ ಕೊರತೆ, ಬಡತನ ಮತ್ತು ಶಕ್ತಿ ಹೀನತೆ, ವೈದ್ಯಕೀಯ ಜ್ಞಾನ ಮತ್ತು ಮಾಹಿತಿಯ ಕೊರತೆ ಒದೆ. ಅನೇಕ ಸಂದರ್ಭಗಳಲ್ಲಿ ಅವರ ಮೂಢನಂಬಿಕೆಗಳ ಪರಿಣಾಮವಾಗಿ ಅವರು ವೈದ್ಯಕೀಯ ಸೌಲಭ್ಯಗಳನ್ನು ಪಡೆಯಲು ಹಿಂಜರಿಯುತ್ತಾರೆ.

ಈ ಅಧ್ಯಯನಕ್ಕಾಗಿ ಸಂದರ್ಶಿಸಲ್ಪಟ್ಟ ಕುಟುಂಬಗಳಲ್ಲಿ ವಿಶೇಷವಾಗಿ ಮಹಿಳೆಯರು ಅಪೌಷ್ಟಿಕತೆಯಿಂದ ಬಳಲುವುದನ್ನು ಗಮನಿಸಿದ್ದೇನೆ. ಕುಂಬ್ರಿ ಮರಾಠಿಗರು ರೋಗ ತಡೆಗಟ್ಟುವಿಕೆಗೆ ತಮ್ಮ ಆದಿಮ ಮಂತ್ರ–ತಂತ್ರಗಳ ಮೇಲೆ ಹೆಚ್ಚು ಅವಲಂಬಿತರಾಗಿದ್ದಾರೆ. ಕೆಲವರಂತೂ ಸ್ಥಳೀಯ ಗಿಡಮೂಲಿಕೆಗಳನ್ನು ಸ್ವಯಂ ತಾವೇ ಉಪಯೋಗಿಸುತ್ತಾರೆ. ಇಲ್ಲವೆ ಕುಂಬ್ರಿ ಮರಾಠಿಗರ ವೈದ್ಯರ ಪರಿಣತಿಯನ್ನು ಅವಲಂಬಿಸಿರುತ್ತಾರೆ. ಕುಂಬ್ರಿ ಮರಾಠಿಗರ 'ಶಮನ್' ಸ್ವತಃ ವೈದ್ಯನಂತೆ ಹಲವು ರೋಗಗಳಿಗೆ ಔಷಧಿ ಮಾಡುತ್ತಾನೆ. ಅವರಲ್ಲಿ ಬಹುಸಂಖ್ಯೆಯ ಜನರು ತಮ್ಮ ಗರ್ಭಿಣಿಯರನ್ನು ಹೆರಿಗೆಗಾಗಿ ಆಸ್ಪತ್ರೆಗೆ ಸೇರಿಸುವುದಿಲ್ಲ. ಹೆರಿಗೆಯ ನಂತರ ಬಾಣಂತಿಯನ್ನು ಹನ್ನೊಂದು ದಿನಗಳವರೆಗೆ ಹೊರಮನೆಯಲ್ಲಿ ಇಡುತ್ತಾರೆ. ಸಾಮಾನ್ಯವಾಗಿ ಈ ಹೊರಮನೆ ದನಕರುಗಳಿಗಾಗಿ ಕಟ್ಟಿದ ಹುಲ್ಲಿನ ಗುಡಿಸಲೇ ಆಗಿರುತ್ತದೆ. ಈ ತರಹದ ವಾಸಸ್ಥಾನವು ಗಂಭೀರವಾದ ಕಾಯಿಲೆಗೆ ಒಮ್ಮೊಮ್ಮೆ ಸಾವಿಗೂ ಕಾರಣವಾಗಬಲ್ಲದು. ಹೆರಿಗೆಯಾದ ಬಾಣಂತಿಯನ್ನು ಮನೆಯಲ್ಲೇ ಇಟ್ಟುಕೊಳ್ಳುವುದರಿಂದ ಮನೆ ಮತ್ತು ಮನೆಯ ದೇವರು ಅಪವಿತ್ರ, ಮೈಲಿಗೆಯಾಗುವುದೆಂದು ಕುಂಬ್ರಿ ಮರಾಠಿಗರು ತಿಳಿದುಕೊಳ್ಳುತ್ತಾರೆ. ಮತ್ತೊಂದು

ಅನಾರೋಗ್ಯಕರವಾದ ರೂಢಿಯೆಂದರೆ ಹುಟ್ಟಿದ ಮಗುವಿನ ಹೊಕ್ಕಳು ಬಳ್ಳಿಯನ್ನು ಚಾಕು ಅಥವಾ ಕುಡಗೋಲಿನಿಂದ ಕತ್ತರಿಸುತ್ತಾರೆ. ಕುಂಬ್ರಿ ಮರಾಠಿಗಲ್ಲಿರುವ ಈ ಅನಾರೋಗ್ಯಕರವಾದ ಪದ್ಧತಿಗಳು ಅನೇಕ ಸಾಂಸರ್ಗಿಕ ರೋಗಗಳಿಗೆ ದಾರಿ ಮಾಡಿಕೊಡುತ್ತವೆ. ಈ ಸಂಬಂಧವಾಗಿ 100 ಜನ ಸಮುದಾಯದ ಹಿರಿಯರಿಂದ ರೋಗಗಳ ಉಪಚಾರದ ಬಗ್ಗೆ ವಿಚಾರಿಸಿ ಅವರ ಅಭಿಪ್ರಾಯವನ್ನು ಈ ಮುಂದಿನ ಕೋಷ್ಟಕದಲ್ಲಿ ಸಂಗ್ರಹಿಸಲಾಗಿದೆ.

**ಕೋಷ್ಟಕ 12**

**ಕುಂಬ್ರಿ ಮರಾಠಿಗರು ಅನಾರೋಗ್ಯದ ವೇಳೆಯಲ್ಲಿ ಬಳಸುವ ಉಪಚಾರದ ವಿವರ**

| ಕ್ರ.ಸಂ. | ಉಪಚಾರಗಳು | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| 1 | ಡಾಕ್ಟರ್‌ರನ್ನು ಕಾಣುವದಿಲ್ಲ | 81 | 81.00 |
| 2 | ಡಾಕ್ಟರ್‌ರನ್ನು ಕಾಣುತ್ತೇವೆ | 19 | 19.00 |
| ಒಟ್ಟಾರೆ | | **100** | **100.00** |

ರೋಗಗಳ ಉಪಚಾರಕ್ಕಾಗಿ ಡಾಕ್ಟರ್‌ನ್ನು ಸಂಪರ್ಕಿಸಲಾಗುತ್ತದೆಯೇ ಎಂದು ಮಾಹಿತಿ ದಾರರನ್ನು ಕೇಳಲಾಯಿತು. ಮೇಲಿನ ಕೋಷ್ಟಕದಲ್ಲಿ ಮಾದರಿಯಾಗಿ ಸಂಗ್ರಹಿಸಿದ 100 ಮಾಹಿತಿದಾರರು ಆರೋಗ್ಯದ ಸಂದರ್ಭದಲ್ಲಿ ಬಳಸುವ ಉಪಚಾರದ ಕ್ರಮಗಳ ಕುರಿತು ವಿವರಿಸಲಾಗಿದ್ದು, ಮಾದರಿಯಾಗಿ ಸಂಗ್ರಹಿಸಿದ್ದ ಮಾಹಿತಿಯ ಪ್ರಕಾರ 81 (81 ಪ್ರತಿಶತ) ರಷ್ಟು ಮಾಹಿತಿದಾರರು ತಾವು ಡಾಕ್ಟರ್‌ನನ್ನು ಉಪಚಾರಕ್ಕಾಗಿ ಕಾಣುವುದಿಲ್ಲದಾಗಿಯೂ, ಕೇವಲ 19 (19 ಪ್ರತಿಶತ) ರಷ್ಟು ಮಾಹಿತಿದಾರರು ಡಾಕ್ಟರ್‌ನನ್ನು ಉಪಚಾರಕ್ಕಾಗಿ ಕಾಣುತ್ತೇವೆಂದು ತಿಳಿಸಿದರು. ಬಹುಸಂಖ್ಯೆಯ ಜನರು 81 (81 ಪ್ರತಿಶತ) ತಾವು ರೋಗದ ಉಪಚಾರಕ್ಕಾಗಿ ಗಿಡಮೂಲಿಕೆಯನ್ನು ಅವಲಂಬಿಸಿ ತಮ್ಮ ಗ್ರಾಮದ 'ಶಮನ್'ನ್ನು ಸಂಪರ್ಕಿಸುವುದಾಗಿ ಹೇಳಿದರು. ಒಟ್ಟಾರೆಯಾಗಿ ಮಾಹಿತಿದಾರರು ನೀಡಿರುವ ಅಭಿಪ್ರಾಯದಲ್ಲಿ ವೈದ್ಯಕೀಯ ವಿಚಾರದಲ್ಲಿ ಕುಂಬ್ರಿ ಮರಾಠಿಗರು ತಮ್ಮ ಸಂಪ್ರದಾಯವನ್ನು ಬಿಟ್ಟಿಲ್ಲವೆಂದು ಗೊತ್ತಾಗುತ್ತದೆ. ಇದು ಕುಂಬ್ರಿ ಮರಾಠಿ ಸಮುದಾಯದ ಆರೋಗ್ಯದ ಮೇಲೆ ತೀವ್ರ ಪರಿಣಾಮ ಉಂಟುಮಾಡುತ್ತಿದೆ.

## ಕೋಷ್ಟಕ 13

### ಕುಂಬ್ರಿ ಮರಾಠಿಗರು ಅನಾರೋಗ್ಯದ ವೇಳೆಯಲ್ಲಿ ವೈದ್ಯರನ್ನು ಸಂಪರ್ಕಿಸದಿರುವ ಕಾರಣಗಳ ವಿವರ

| ಕ್ರಸಂ. | ಕಾರಣಗಳು | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| 1 | ಶಮನ್(ಪಾರಂಪರಿಕ ವೈದ್ಯ) | 36 | 36.00 |
| 2 | ಬುಡಕಟ್ಟು ಸಂಪ್ರದಾಯ | 10 | 10.00 |
| 3 | ಇಂಗ್ಲೀಷ್ ಔಷಧಗಳ ಕುರಿತ ಪೂರ್ವಾಗ್ರಹ | 15 | 15.00 |
| 4 | ಆಸ್ಪತ್ರೆಗಳ ಅಲಭ್ಯತೆ | 20 | 20.00 |
| | ಒಟ್ಟಾರೆ | 81 | 81.00 |

ಮೇಲಿನ ಕೋಷ್ಟಕದಲ್ಲಿ ಮಾಹಿತಿದಾರರನ್ನು ಅನಾರೋಗ್ಯದ ಸಂದರ್ಭದಲ್ಲಿ ಅವರು ಸಂಪರ್ಕಿಸುವ, ಸಂಪರ್ಕಿಸದಿರುವ ಕುರಿತು ಚರ್ಚಿಸಲಾಗಿದ್ದು, ಇವುಗಳ ಕುರಿತು ತಿಳಿದುಕೊಳ್ಳುವಾಗ ಶಮನ್ (ಪಾರಂಪರಿಕ ವೈದ್ಯ) ಅಥವಾ ಬುಡಕಟ್ಟಿನ ಸ್ಥಳೀಯ ವೈದ್ಯವನ್ನು ಅವಲಂಬಿಸುವವರು ಸಂಖ್ಯೆ ಜಾಸ್ತಿ ಇದೆ. ಶಮನ್ (ಪಾರಂಪರಿಕ ವೈದ್ಯ) ಅಥವಾ ಬುಡಕಟ್ಟಿನ ಸ್ಥಳೀಯ ವೈದ್ಯವನ್ನು ಸಂಪರ್ಕಿಸುಲು ಇರುವ ಕಾರಣವನ್ನು ಕೇಳಲಾಯಿತು. ಶಮನ್ (ಪಾರಂಪರಿಕ ವೈದ್ಯ) ಅಥವಾ ಬುಡಕಟ್ಟಿನ ಸ್ಥಳೀಯ ವೈದ್ಯವನ್ನು ಸಂಪರ್ಕಿಸಿದವರಲ್ಲಿ 36 (36 ಪ್ರತಿಶತ) ಜನರು ರೋಗದ ಕಾರಣವನ್ನು ತಿಳಿದುಕೊಳ್ಳುವುದಕ್ಕಾಗಿ ತಾವು ಹಾಗೆ ಮಾಡುವುದಾಗಿ ತಿಳಿಸಿದರು. 15 (15 ಪ್ರತಿಶತ) ಮಾಹಿತಿದಾರರು ಇದು ಇಂಗ್ಲೀಷ್ ಔಷಧಗಳ ಮೇಲಿನ ಅಪನಂಬಿಕೆ ಎಂದು ಹೇಳಿದರು. ಇನ್ನು 20 (20 ಪ್ರತಿಶತ) ಮಾಹಿತಿದಾರರು ಸರ್ಕಾರಿ ಆಸ್ಪತ್ರೆಗಳ ಲಭ್ಯವಿಲ್ಲದ ಕಾರಣಗಳನ್ನು ನೀಡಿದರು.

### ಅಡಿಟಿಪ್ಪಣಿಗಳು

1. ನಾಗರಾಜ, ಡಿ.ಆರ್, ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ಹೆಗ್ಗೋಡು, 1996
2. ಬೋರಲಿಂಗಯ್ಯ, ಹಿ.ಚಿ, ವಿಸ್ಮೃತಿ ಸಂಸ್ಕೃತಿ, ಸಿವಿಜಿ ಪಬ್ಲಿಕೇಷನ್, ಬೆಂಗಳೂರು, 2001
3. ನಾಯಕ, ಎನ್.ಆರ್, ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993
4. Vidyarthi and Rai B.K. 'The Tribal Culture of India', pp. 40-41, 1977
5. Sarokhen, P. Sociological Theories of Today, p. 15, 1966

6. Roy Willis, Ed: Signifying Animals, Human meaning in the natural world, Rutledge London and New York, 2005

7. Hugh E Seebohm, On the Structure of Greek Tribal Society, Macmilan and Co, and New York, 1895

8. ಅಂಬೇಡ್ಕರ್, ಡಾ. ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂ.1, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, 1990

9. ಡಿ ಡಿ ಕೋಸಾಂಬಿ, ಅನು ಎಚ್ ಎಸ್ ಶ್ರೀಮತಿ, ಪ್ರಾಚೀನ ಭಾರತದ ಚರಿತ್ರೆ, ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್ 1998

10. Romila Thapar, Ancient Indian Social History: Some interpretations, Orient Blackswan, 1978

11. ಭಗವತ್ ಶರಣ ಉಪಾಧ್ಯಾಯ, *ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ*, ನವಕರ್ನಾಟಕ ಪ್ರಕಾಶನ, 1950

12. 2011ರ ಜನಗಣತಿಯ ವರದಿ, ಭಾರತ ಸರ್ಕಾರ

13. 2011ರ ಜನಗಣತಿಯ ವರದಿ, ಭಾರತ ಸರ್ಕಾರ

14. Census of India-2001, District Population Booklet, Uttara Kannada, Directorate of Census Operations, Karnataka.

15. ಪ್ರಭಾಕರ ಎ ಎಸ್, ಕರ್ನಾಟಕದ ಡೊಂಬರು, ಒಂದು ಅಲೆಮಾರಿ ಸಮುದಾಯದ ಅಧ್ಯಯನ. ಅಪ್ರಕಟಿತ ಪಿಎಚ್, ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2007

16. Karve Irawati, Anthropometric Measurement in Karnataka and Orissa and a Comparison of these two Regions with Maharashtra. Journal of the Anthropological Society of Bombay, 8: 45-76. 1954

# ಅಧ್ಯಾಯ: ನಾಲ್ಕು

## ಕುಂಬ್ರಿ ಮರಾಠಿಗರ ಆರ್ಥಿಕ ಸ್ಥಿತಿಗತಿಗಳು

1. ಕುಂಬ್ರಿ ಮರಾಠಿಗರ ಕುಲಕಸಬು ಮತ್ತು ಪಾರಂಪರಿಕ ಆರ್ಥಿಕ ಮೂಲ.
2. ಕುಂಬ್ರಿ ಮರಾಠಿಗರ ಕುಟುಂಬ ನಿರ್ವಹಣೆ ವ್ಯವಸ್ಥೆ.
3. ಕುಂಬ್ರಿ ಮರಾಠಿಗರ ಶೈಕ್ಷಣಿಕ ಸ್ಥಿತಿಗತಿಗಳು
4. ಕುಂಬ್ರಿ ಮರಾಠಿಗರ ವರ್ತಮಾನದ ದುಡಿಮೆಯ ಮಾದರಿಗಳು.

# ಅಧ್ಯಾಯ: ನಾಲ್ಕು

# ಕುಂಬ್ರಿ ಮರಾಠಿಗರ ಆರ್ಥಿಕ ಸ್ಥಿತಿಗತಿಗಳು

## 1. ಕುಂಬ್ರಿ ಮರಾಠಿಗರ ಕುಲಕಸಬು ಮತ್ತು ಪಾರಂಪರಿಕ ಆರ್ಥಿಕ ಮೂಲ.

ಭಾರತದ ಒಂದೊಂದು ಜಾತಿ, ಸಮುದಾಯ, ಬುಡಕಟ್ಟುಗಳು ಪ್ರತ್ಯೇಕ ಉತ್ಪಾದನಾ ಘಟಕಗಳೇ ಆಗಿವೆ. ಶ್ರಮ ವಿಭಜನೆ ಮತ್ತು ಆ ಮೂಲಕ ನಡೆದ ಕಸಬುಗಳ ಅವಲಂಬನೆಗಳು ಈ ಪ್ರತ್ಯೇಕಿತ ಗುಂಪುಗಳನ್ನು ಜಾತಿಯ ಆವರಣದೊಳಕ್ಕೆ ತಂದು ನಿಲ್ಲಿಸಿದವು. ಅರಣ್ಯವಾಸಿ ಸಮುದಾಯಗಳು 'ಕಟ್ಟು'ಗಳಲ್ಲಿ ತಮ್ಮನ್ನು ಸೀಮಿತಗೊಳಿಸಿಕೊಂಡವು. ಸಾಮಾಜಿಕವಾಗಿ ಸೀಮಿತಗೊಳ್ಳುವುದು ಎಂದರೆ ಆಯಾ ನಿಶ್ಚಿತ ಪ್ರದೇಶದ ಒಳಗೆ ನಿರ್ದಿಷ್ಟ ಶ್ರಮಕ್ಕೆ ಮತ್ತು ದುಡಿಮೆಗೆ ಲಗತ್ತಾಗುವುದು ಎಂದೇ ಆಗುತ್ತದೆ. ನಿರ್ದಿಷ್ಟ ಸಾಮಾಜಿಕ ಸಂದರ್ಭ ಮತ್ತು ಹೇರಲ್ಪಟ್ಟ ಆರ್ಥಿಕತೆಯ ಭಾಗವಾದಾಗ ಆಯಾ ಸಮುದಾಯಗಳು ಪ್ರತ್ಯೇಕ ಗುಂಪುಗಳಾಗಿ ಸ್ವಯಂಪೂರ್ಣಗೊಂಡವು. ಈ ಸ್ವಯಂಪೂರ್ಣತೆಯೇ ಪ್ರತ್ಯೇಕತೆಯ ಮೂಲವಾಯಿತು. ಹೀಗಾಗಿ ಜಾತಿ ಮತ್ತು ಬುಡಕಟ್ಟುಗಳ ಸ್ವಯಂಪೂರ್ಣತೆಯ ಹಿಂದೆ ಶ್ರೇಣೀಕರಣದ ಹುನ್ನಾರಗಳಿವೆ. ಭಾರತದಲ್ಲಿ ಒಂದು ಜಾತಿಯೆಂದರೆ, ಶ್ರಮ ವಿಭಜನೆಯ ಆಧಾರದಲ್ಲಿ ರೂಪಗೊಂಡ ಒಂದು ಉತ್ಪಾದನಾ ಘಟಕ. ಪ್ರತಿಯೊಂದು ಜಾತಿ, ಒಂದು ಸ್ವಯಂಪೂರ್ಣ ಉತ್ಪಾದನಾ ಘಟಕವಾಗಿ ತನ್ನ ಅಸ್ತಿತ್ವವನ್ನು ಸದಾ ಕಾಯ್ದುಕೊಳ್ಳುತ್ತಲೇ ಬಂದಿದೆ. ಜಾತಿಯೊಂದು ತನ್ನ ಆಚರಣೆ, ಲಾಂಛನ, ಭಾಷೆ ಇವುಗಳ ಮೂಲಕ ಭಾವನಾತ್ಮಕವಾಗಿ ತನ್ನ ಅಸ್ತಿತ್ವವನ್ನು ನಿಖರಗೊಳಿಸಿ ಕೊಳ್ಳುತ್ತಲೇ ಬಂದಿದೆ. ತಾನು ಅನುಸರಿಸುವ ಕಸುಬಿನಿಂದಾಗಿ ಒಂದು ಸಾಮಾಜಿಕ ಗುಂಪು ಸ್ವಯಂಪೂರ್ಣವಾಗಿ ಇನ್ನೊಂದು ಜಾತಿ ಸಮುದಾಯದಿಂದ ಅನೇಕ ಬಗೆಗಳಲ್ಲಿ ಭಿನ್ನವಾಗಿ ನಿಲ್ಲಲು ಯತ್ನಿಸುತ್ತದೆ. ಇದನ್ನೆ ಅಂಬೇಡ್ಕರ್ 'ಪ್ರತ್ಯೇಕತೆ ಎಂಬುದು ಜಾತಿಯ ಒಂದು ಸ್ವಾಭಾವಿಕ ಪರಿಣಾಮ'[1] ಎನ್ನುತ್ತಾರೆ. ಯಾರು ಯಾವ ಯಾವ ಕೆಲಸಗಳಲ್ಲಿ ತೊಡಗಿಸಿಕೊಳ್ಳಬೇಕು ಮತ್ತು ಯಾರು ಯಾವುದನ್ನು ಮಾಡಬಾರದು ಎಂಬ ನಿಯಮಗಳೇ ಭಾರತದ ಶ್ರೇಣೀಕರಣವನ್ನು

ಜಾರಿಗೆ ತಂದವು. ಯಾವ ಗುಂಪಿನ ಜನ ಯಾವ ಬಗೆಯ ಉತ್ಪಾದನೆಯಲ್ಲಿ ತೊಡಗಿಸಿಕೊಳ್ಳಬೇಕು ಎಂದು ನಿರ್ಧಾರವಾದದ್ದು, ಆಯಾ ಸಾಮಾಜಿಕ ಗುಂಪುಗಳು ಅಂದಂದಿನ ಚಾರಿತ್ರಿಕ ಘಟ್ಟದಲ್ಲಿ ಸಾಧಿಸಿದ ನಿರ್ಣಾಯಕ ಗೆಲುವು ಮತ್ತು ಸೋಲುಗಳನ್ನೇ ಅವಲಂಬಿಸಿತ್ತು. ಸೋತ ಸಮುದಾಯಗಳು ತಮಗೆ ದಕ್ಕಿದ ಇಲ್ಲವೆ ಹೇರಲ್ಪಟ್ಟ ಕೆಲಸಗಳನ್ನು ಅನಿವಾರ್ಯವಾಗಿ ನಿರ್ವಹಿಸಲೇ ಬೇಕಾಯಿತು. ಇಲ್ಲಿ ಕೆಲವು ಸಮುದಾಯಗಳ ಗೆಲುವು ಎಂದರೆ, ಅಂದಂದಿನ ಒಟ್ಟು ಸಮಾಜದ ಹಣೆಬರಹವನ್ನು ರೂಪಿಸುವ ಆರ್ಥಿಕ ಮೂಲಗಳ ಮೇಲೆ ಸಾಧಿಸುವ ಹಿಡಿತವೇ ಆಗಿದೆ. ಯಾವ ಉತ್ಪಾದನಾ ವಿಧಾನದಿಂದಾಗಿ ಸಮಾಜದಲ್ಲಿ ಅಧಿಕ ಉತ್ಪಾದನೆಯಾಗುವುದೋ, ಆ ಉತ್ಪಾದನಾ ವಿಧಾನದ ಮೇಲೆ ನಿಶ್ಚಿತ ಒಡೆತನ ಸಾಧಿಸುವುದು ಗೆದ್ದ ಸಮುದಾಯಗಳ ಪರಿಪಾಠ. ಸಮಾಜದ ಮೇಲೆ ಒಡೆತನ ಸಾಧಿಸಿದ ಸಮುದಾಯಗಳ ಬಹುಮುಖ್ಯ ಕೆಲಸ, ದುಡಿವ ಉತ್ಪಾದಕ ಸಮುದಾಯಗಳ ಕಾರ್ಯವೈಖರಿಯನ್ನು ಪರಂಪರೆಯ ಹೆಸರಲ್ಲಿ ಸಮರ್ಥಿಸುತ್ತ ಅದರ ಸಾತತ್ಯವನ್ನು ಪೋಷಿಸುವುದು. ಇದೇ ಕಾರಣದಿಂದಾಗಿ ಜಗತ್ತು ತಂತ್ರಜ್ಞಾನದ ಹೆಸರಲ್ಲಿ ಎಷ್ಟೇ ಮುಂದುವರೆದಿದ್ದರೂ ಭಾರತ ಇನ್ನೂ ಸಾಂಪ್ರದಾಯಿಕ ಉತ್ಪಾದನಾ ವಿಧಾನವನ್ನು ಸಮರ್ಥಿಸುತ್ತಲೇ ಇದೆ. ಹೀಗಾಗಿ ಭಾರತದ ಉತ್ಪಾದನಾ ಕ್ಷೇತ್ರಗಳಲ್ಲಿ ಅಗಾಧ ಪ್ರಮಾಣದ ಕ್ರಾಂತಿಗಳು ಸಂಭವಿಸಲಿಲ್ಲ. ಆಗಾಗ ನಡೆದುಹೋದ ಬದಲಾವಣೆಗಳು ಇಂಡಿಯಾದ ಸಮಾಜದ ದುಡಿವವರ್ಗಗಳ ಬದುಕಲ್ಲಿ ಯಾವ ಗಮನಾರ್ಹ ಹೊಸತನವನ್ನೂ ತರಲಿಲ್ಲ. ಕುಲಕಸುಬಿನ ಆಧಾರದ ಮೇಲೆ ಒಂದು ಜಾತಿಗೆ ಪ್ರಾಪ್ತವಾಗಿದ್ದ ಹೀನ ವೃತ್ತಿಗಳು, ಆಧುನಿಕ ಜಗತ್ತಿನಲ್ಲಿ ಇಲ್ಲವಾಗಿ ಅಂತಹ ಜಾತಿಗಳು ಸಾಮಾಜಿಕ ಅವಮಾನಗಳನ್ನು ಮೀರಿ ನಿಲ್ಲಲು ಸಾಧ್ಯವಾಯಿ ತಾದರೂ, ಆ ಜಾತಿಗಳ ಒಟ್ಟು ಆರ್ಥಿಕ ಸ್ಥಿತಿಗಳಲ್ಲಿ ಯಾವ ಬದಲಾವಣೆ ಗಳಾಗಲಿಲ್ಲ. 'ಹೀಗಾಗಿ ಮಾನವ ಸಮಾಜದ ಚರಿತ್ರೆಯಲ್ಲಿ ಭಾರತದ ಶ್ರೇಣೀಕರಣಕ್ಕೆ ಒಂದು ವಿಶಿಷ್ಟ ಸ್ಥಾನಮಾನ ಪ್ರಾಪ್ತವಾಗಿದೆ. ಕಾಲ ಬದಲಾದರೂ, ಜಾಗತಿಕ ಮಟ್ಟದ ಉತ್ಪಾದನಾ ವ್ಯವಸ್ಥೆಯಲ್ಲಿ ಕ್ರಾಂತಿಗಳು ನಡೆದು ಹೋದರೂ, ಭಾರತದ ಜಾತಿಗಳು ನಮ್ಮ ಪಾರಂಪರಿಕ ಆರ್ಥಿಕ ಅವಲಂಬನೆಯನ್ನು ಕಾಯ್ದುಕೊಂಡೇ ಬಂದಿವೆ. ಇದಕ್ಕೆ ಅಲೆಮಾರಿಗಳು ಹೊರತಾಗೇನೂ ಇಲ್ಲ. ಇಡೀ ಜಗತ್ತಿನಲ್ಲಿ ಕೃಷಿಕರನ್ನು ಬಿಟ್ಟರೆ, ತಮ್ಮ ಸಾಂಪ್ರದಾಯಿಕ ಆರ್ಥಿಕ ಮೂಲಗಳನ್ನು ಉಳಿಸಿಕೊಂಡು ಬಂದವರೆಂದರೆ ಅಲೆಮಾರಿಗಳು ಮಾತ್ರ. ತಮ್ಮ ತಮ್ಮ ಆರ್ಥಿಕ ಮೂಲಗಳನ್ನು ಚಾರಿತ್ರಿಕವಾಗಿ ಅವಶೇಷಗಳ ಮಾದರಿಯಲ್ಲಿ ಅಲೆಮಾರಿಗಳು ಉಳಿಸಿಕೊಳ್ಳಲು ಕಾರಣ, ಭಾರತವೆಂಬ ಸಂಪ್ರದಾಯಶೀಲ ಸಮಾಜದಲ್ಲಿ ಯಾವತ್ತೂ ಬಹುದೊಡ್ಡ ಆರ್ಥಿಕ ಉತ್ಕ್ರಾಂತಿ ಸಂಭವಿಸದೇ ಹೋದದ್ದು. ಈ ಕಾರಣದಿಂದಾಗಿ ಸಾಮಾಜಿಕ ಅಸಮಾನತೆಯು ತನ್ನ ಅತ್ಯಂತ ಹೇಯ ಆಯಾಮಗಳನ್ನು ವಿಕಸಿಸಿಕೊಳ್ಳುತ್ತಲೇ ಹೋಯಿತು. ಹೀಗಾಗಿ ಭಾರತದ ಸಮಾಜದಲ್ಲಿ

ಅಲೆಮಾರಿಗಳು ಸಹ ಈ ಶ್ರೇಣೀಕೃತ ಸಮಾಜದ ಒಂದು ಭಾಗವಾಗಿಯೇ ರೂಪಗೊಂಡಿದ್ದಾರೆ.'[2] ಅಲೆಮಾರಿಗಳು ದೇಶಗಳನ್ನು ತಿರುಗುವ ಆಧುನಿಕ ಅಲೆಮಾರಿಗಳೆಂದಲ್ಲ. ಪಾರಂಪರಿಕ ಸಮಾಜದಲ್ಲಿ ನಿತ್ಯದ ಬದುಕಿನ ನಿರ್ವಹಣೆಗೆ, ಒಪ್ಪತ್ತಿನ ಊಟದ ಅನ್ವೇಷಣೆಯಲ್ಲಿ 21ನೇ ಶತಮಾನದಲ್ಲೂ ಅಲೆದಾಡುವ ಸಾಮಾಜಿಕ ಅನಿವಾರ್ಯತೆಯನ್ನು ಅನುಭವಿಸುತ್ತಿರುವ ಸಮುದಾಯಗಳನ್ನು ಇಲ್ಲಿ ಅಲೆಮಾರಿಗಳು ಎಂದು ಪರಿಭಾವಿಸಲಾಗಿದೆ. ಅಲೆಮಾರಿತನ ಭಾರತದ ಅಸಮಾನ ಸಮಾಜದ ಒಂದು ಭಾಗವಾಗಿ ರಚನೆಗೊಂಡ ಸ್ಥಿತಿಯಾಗಿದೆ. ಅಲೆಮಾರಿಗಳ ಆರ್ಥಿಕ ಬದುಕಿನಲ್ಲಿ ಸಂಭವಿಸಿರುವ ರೂಪಾಂತರಗಳನ್ನು ಕಟ್ಟಿಕೊಡುವ ಹಂತದಲ್ಲಿ ನಾವು ಸ್ಪಷ್ಟ ಪುರಾವೆಗಳ ಸಮಸ್ಯೆಯನ್ನು ಎದುರಿಸುತ್ತೇವೆ. ಅಲೆಮಾರಿಗಳ ಮತ್ತು ಕೆಳಜಾತಿಗಳ ಬದುಕಿನ ಚರಿತ್ರೆಯನ್ನು ರೂಪಿಸಲು ಕ್ಲಾಸಿಕಲ್ ಆಕರಗಳ ಕೊರತೆ ಇದೆ. ಕುಂಬ್ರಿಮರಾಠಿಗರೂ ಸಹ ತಲೆ ತಲೆಮಾರುಗಳಿಂದ ವಲಸೆ ಮಾಡುತ್ತ ಬಂದವರು. ಅಲೆಮಾರಿತ್ವ ಅವರ ಕುಲಕಸಬಿನ ಆಧಾರದಲ್ಲಿಯೇ ರೂಪುಗೊಳ್ಳುತ್ತಾ ಬಂದಿದೆ. ಈ ಕಾರಣಗಳಿಗಾಗಿ ಕುಂಬ್ರಿ ಮರಾಠಿ ಸಮುದಾಯದ ಆರ್ಥಿಕತೆಯ ಕುರಿತು ನಿಖರವಾದ ಮಾಹಿತಿಗಳು ಸಿಗುವುದು ದುಸ್ತರ.

ಒಂದು ಕಾಲಕ್ಕೆ ಕಾಡನ್ನೇ ನಂಬಿ ಕಾಡಿನ ಮಧ್ಯ ಸ್ವತಂತ್ರವಾಗಿ ಬದುಕುತ್ತಿದ್ದ ಬುಡಕಟ್ಟುಗಳು ವಸಾಹತುಶಾಹಿ ಮತ್ತು ಅದು ಹೊತ್ತು ತಂದ ಆರ್ಥಿಕ ನೀತಿಯಿಂದಾಗಿ ಜರ್ಜರಿತಗೊಂಡವು. ಅದಕ್ಕಿಂತ ಹೆಚ್ಚಾಗಿ ದೇಶೀ ಮೂಲದ ಕುಶಲಕರ್ಮಿಗಳನ್ನು ಮತ್ತು ವ್ಯಾಪಾರಿಗಳನ್ನು ತುಳಿದು ಆ ಸಮುದಾಯಗಳು ಆರ್ಥಿಕವಾಗಿ ದುರ್ಬಲಗೊಳ್ಳುವಂತೆ ವಸಾಹತುಶಾಹಿ ವ್ಯವಸ್ಥೆ ನೋಡಿಕೊಂಡಿತು. ಈ ಜನರನ್ನು ನಿಯಂತ್ರಿಸಲೆಂದೇ ಬ್ರಿಟೀಷ್ ವಸಾಹತುಶಾಹಿಯು ಹೊಸ ಹೊಸ ಕಾಯ್ದೆಗಳನ್ನು ಜಾರಿಗೊಳಿಸಿತು. ಇವರ ವ್ಯಾಪಾರದ ಮೇಲೆ ನಿಯಂತ್ರಣ ಹೇರಿತು, ಜೊತೆಗೆ ಅರಣ್ಯ ಕಾಯ್ದೆಯನ್ನು ಜಾರಿಗೊಳಿಸಿತು. ಒಟ್ಟಾರೆಯಾಗಿ ಆ ಜನರನ್ನು ಬಲವಂತವಾಗಿ ತಮ್ಮ ತೊತ್ತುಗಳಾಗಿ ರೂಪಿಸಿಕೊಳ್ಳುವಲ್ಲಿ ಅದು ಯಶಸ್ವಿಯಾಯಿತು. ಆ ಮೂಲಕ ಅವರ ಆರ್ಥಿಕ ಸ್ವಾವಲಂಬಿತನವನ್ನು ವಸಾಹತುಶಾಹಿಯು ಅತಂತ್ರಗೊಳಿಸಿತು.

ಬ್ರಿಟೀಷರು ಭಾರತವನ್ನು ಬಿಟ್ಟು ಹೊರ ಹೋದ ನಂತರದ ಚಿತ್ರಣವೇನೂ ಬದಲಾಗಲಿಲ್ಲ. ಇಲ್ಲಿಯ ಅಧಿಕಾರಶಾಹಿ ಮತ್ತು ಸರಕಾರಗಳು ಇವರನ್ನು ನಿರ್ಲಕ್ಷಿಸಿದವು. ಈ ಬುಡಕಟ್ಟು ಜನರ ಅಭಿವೃದ್ಧಿಗಾಗಿ ಹಲವು ಯೋಜನೆಗಳನ್ನು ರೂಪಿಸಲಾಯಿತಾದರೂ ಅವುಗಳ ಅನುಷ್ಠಾನದಲ್ಲಿ ಸರಕಾರ ಸೋತಿತು. ಕೇವಲ ಮುಂಗೈ ಬಲವಿದ್ದವರಿಗೆ ಮಾತ್ರ ಯೋಜನೆಯ ಲಾಭಗಳು ದೊರೆಯುವಂತಾದವು. 'ಭಾರತದ ಸಂದರ್ಭದಲ್ಲಿ ಬುಡಕಟ್ಟು ಜನರ ಅಭಿವೃದ್ಧಿಗಾಗಿ ಕಾರ್ಯಕ್ರಮಗಳಿವೆ ವಿನಾ ಬುಡಕಟ್ಟು ನೀತಿ ಎಂಬುದೇನೂ ಇಲ್ಲ. ನೀತಿ ಎಂದರೆ ಪ್ರಜ್ಞಾಪೂರ್ವಕವಾಗಿ

ರೂಪಿಸಿದ ಉದ್ದೇಶಗಳನ್ನು ಒಳಗೊಂಡ ಒಂದು ಕಾಯಕಲ್ಪ. ಈ ಕಾಯಕಲ್ಪದ ಉದ್ದೇಶಗಳನ್ನು ಈಡೇರಿಸಲು ಇರುವ ಚಟುವಟಿಕೆಗಳೇ ಕಾರ್ಯಕ್ರಮ'.[3] ಭಾರತದ ಮಟ್ಟಿಗೆ ಯೋಜನೆಗಳೆಂಬವು ಕೇವಲ ಯೋಜನೆಗಳನ್ನು ರೂಪಿಸುವವರಿಗೆ ಹೊರತು ಅದರ ಲಾಭ ಪಡೆಯಬೇಕಾದ ಫಲಾನುಭವಿಗಳಿಗಲ್ಲ ಎಂಬ ಮಾತು ಬುಡಕಟ್ಟುಗಳ ಅಭಿವೃದ್ಧಿ ವಿಚಾರದಲ್ಲಿ ನಿಜವಾಗಿದೆ.

**ಬುಡಕಟ್ಟುಗಳ ಆರ್ಥಿಕತೆ**

ಜೀವನದ ಅವಶ್ಯಕ ವಸ್ತುಗಳನ್ನು ಪೂರೈಸುವಲ್ಲಿ ಓರ್ವ ವ್ಯಕ್ತಿಯ ಆರ್ಥಿಕ ಪರಿಸ್ಥಿತಿಯು ಅವನ ಜೀವನದಲ್ಲಿ ಮಹತ್ವದ ಪಾತ್ರ ವಹಿಸುವದಲ್ಲದೇ ಅವನ ಸಾಮಾಜಿಕ–ಸ್ಥಾನಮಾನದ ಮೇಲೆಯೂ ಪರಿಣಾಮ ಬೀರುತ್ತದೆ. ನಾವು ಬುಡಕಟ್ಟು ಸಮುದಾಯದ ಆರ್ಥಿಕ ಸ್ಥಿತಿಗಳನ್ನು ಗಮನಿಸಿದಾಗ, ಬೇರೆ ಸಮುದಾಯದವರಿಗೆ ಹೋಲಿಸಿದರೆ ಬಹಳ ಹಿಂದುಳಿದಿವೆ ಎಂದು ಹೇಳಬಹುದು. ಅವರ ಆದಾಯ, ಜೀವನಮಟ್ಟ, ಸ್ವಚ್ಛತೆ ಮತ್ತು ಆರೋಗ್ಯ ಸ್ಥಿತಿಯ ವಿಷಯದಲ್ಲಿ ಇತರ ಸುಧಾರಿತ ಸಮುದಾಯದವರಿಗಿಂತ ತೀರ ಹಿಂದುಳಿದಿದ್ದಾರೆ. ಇಂದೂ ಕೂಡಾ ಬುಡಕಟ್ಟು ಸಮುದಾಯದವರು ತಮ್ಮ ಸಾಂಪ್ರದಾಯಿಕ ಉದ್ಯೋಗಗಳೆನಿಸಿದ ಬೇಟೆ ಯಾಡುವುದು ಹಾಗೂ ಬುಟ್ಟಿ ಹೆಣೆಯುವಿಕೆಯ ಮೇಲೆ ಅವಲಂಬಿತರಾಗಿದ್ದಾರೆ. ಇಂದು ಆರ್ಥಿಕ ಮಾನವಶಾಸ್ತ್ರವು ಪ್ರತ್ಯೇಕ ಪಠ್ಯಕ್ರಮವಾಗಿ ಬೆಳೆಯುತ್ತಿದ್ದರೂ ಬುಡಕಟ್ಟು ಅರ್ಥವ್ಯವಸ್ಥೆಯ ಪ್ರಾಯೋಗಿಕ ಅಧ್ಯಯನಗಳು ಸಾಕಷ್ಟು ಲಭ್ಯವಾಗಿಲ್ಲ. ಈಗ ಪ್ರಚಲಿತ ಸಮಾಜದಲ್ಲಿ ಆರ್ಥಿಕ ತಜ್ಞರು, ಸಮಾಜ ವಿಜ್ಞಾನಿಗಳು ಹಾಗೂ ಮಾನವಶಾಸ್ತ್ರಜ್ಞರಿಗೆ ಬುಡಕಟ್ಟು ಸಮುದಾಯ ಅರ್ಥವ್ಯವಸ್ಥೆಯ ಕಾರ್ಯಾವಿಧಾನ ಹಾಗೂ ಪರಿವರ್ತನೆಯ ಆಳ ಅಧ್ಯಯನದ ಅವಶ್ಯಕತೆಯಿದೆ. ಆರ್ಥಿಕ ಜೀವನವೆಂದರೆ, ಆಯಾ ಸಮುದಾಯದ ಭೌತಿಕ ಬೇಡಿಕೆ ಹಾಗೂ ಅವಶ್ಯಕತೆಗಳೆಂದು ತಿಳಿಯಬಹುದು. ಈ ತರಹದ ಆರ್ಥಿಕ ಬೇಡಿಕೆಗಳನ್ನು ತೃಪ್ತಿಗೊಳಿಸುವದೇ ಅರ್ಥವ್ಯವಸ್ಥೆಯ ಪ್ರಮುಖ ಅಂಶವಾಗಿದೆ. ಒಂದು ಮಹತ್ವದ ಸಂಗತಿಯೆಂದರೆ, ಭಾರತದ ಬುಡಕಟ್ಟು ಸಮುದಾಯಗಳು ಬದಲಾವಣೆಯ ಅಂಚಿನಲ್ಲಿ ನಿಂತಿವೆ. ಇಂದು ಬುಡಕಟ್ಟು ಸಮುದಾಯದ ಕಲ್ಯಾಣ ಹಾಗೂ ಸಮುದಾಯ ಅಭಿವೃದ್ಧಿ ಯೋಜನಾ ಕ್ರಮಗಳು ಹಾಗೂ ಆಧುನಿಕ ಚಿಂತನೆಯ ನಗರೀಕರಣ, ಶಿಕ್ಷಣ, ಸಾರಿಗೆ ಸಂಪರ್ಕ, ಸಹಕಾರಿ ಬ್ಯಾಂಕು ಹಾಗೂ ವಾಣಿಜ್ಯ ಬ್ಯಾಂಕುಗಳ ಸ್ಥಾಪನೆಯ ಕ್ರಮದಿಂದ ಬುಡಕಟ್ಟು ಸಮುದಾಯದ ಅರ್ಥವ್ಯವಸ್ಥೆಯಲ್ಲಿಯೂ ಬದಲಾವಣೆ ತರುತ್ತದೆ. ಆದರೂ ಒಟ್ಟಾರೆ ಪರಿಣಾಮ ಅಷ್ಟೊಂದು ಆಶಾದಾಯಕವಾಗಿ ತೋರುತ್ತಿಲ್ಲ.

ಭಾರತದ ಸಮುದಾಯಗಳ ಆದಿಮ ಆರ್ಥಿಕ ಅವಲಂಬನೆ ಎಂದರೆ ಕೃಷಿಯೇ ಆಗಿದೆ. ಮುಖ್ಯವಾಹಿನಿ ಮತ್ತು ಅರಣ್ಯದಲ್ಲಿರುವ ಆದಿವಾಸಿಗಳು ಸಹ ಕೃಷಿಯನ್ನೇ ಅವಲಂಬಿಸಿಕೊಂಡು ಬಂದಿದ್ದಾರೆ. ಸಾಮಾನ್ಯ ಜನತೆಯ ಅಥವಾ ಬುಡಕಟ್ಟು ಸಮುದಾಯದ ಮೂಲಭೂತ ಅರ್ಥವ್ಯವಸ್ಥೆಯು ಕೃಷಿಯನ್ನೇ ಅವಲಂಬಿಸಿದೆ. ಬುಡಕಟ್ಟು ಜನರಲ್ಲಿಯಂತೂ ಈಗಲೂ ಬಹಳಷ್ಟು ಜನ ಸಂಪ್ರದಾಯಿಕ ಕೃಷಿ ಪದ್ಧತಿಯನ್ನೇ ಅನುಸರಿಸುತ್ತಿದ್ದಾರೆ. ಅದಲ್ಲದೆ ಬಹುಸಂಖ್ಯಾತ ಬುಡಕಟ್ಟು ವರ್ಗಗಳು ತಮ್ಮ ಜೀವನ ನಿರ್ವಹಣೆಗಾಗಿ ಇಂದಿಗೂ ಸಾಂಪ್ರದಾಯಿಕ ಉದ್ಯೋಗಗಳೆನಿಸಿದ ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ, ಕರಕುಶಲ ಕೈಗಾರಿಕೆ, ಕುಮ್ರಿ ಬೇಸಾಯಗಳನ್ನು ನಮ್ಮ ಆದಿವಾಸಿಗಳು ಅವಲಂಬಿಸಿಕೊಂಡು ಬಂದಿರುವುದು ಅನೂಚಾನವಾಗಿ ನಡೆದುಬಂದಿದೆ. ಇದರಿಂದ ಅನೇಕ ಬುಡಕಟ್ಟು ಗುಂಪುಗಳು ಸಾಲಭಾರ, ಆರ್ಥಿಕ ಶೋಷಣೆ, ಮಾರುಕಟ್ಟೆಯ ನೈಪುಣ್ಯತೆಯ ಕೊರತೆ, ಭೂಹೀನತೆ, ಆಧುನಿಕ ಕೃಷಿ ತಂತ್ರಜ್ಞಾನದ ಕೊರತೆ ಹಾಗೂ ಅಜ್ಞಾನತೆಯ ಸಮಸ್ಯೆಯಲ್ಲಿ ತೋಳಲಾಡುತ್ತಿವೆ. ಆದ್ದರಿಂದ ಬುಡಕಟ್ಟು ಸಮುದಾಯದ ಅರ್ಥವ್ಯವಸ್ಥೆಯನ್ನು 'ಬದಲಾವಣೆ ಮತ್ತು ಪ್ರಗತಿ' ಈ ಎರಡೂ ದೃಷ್ಟಿಕೋನದಿಂದ ನೋಡುವದು ಅವಶ್ಯಕವಾಗಿದೆ. ಕುಂಬ್ರಿ ಮರಾಠಿ ಸಮುದಾಯವನ್ನೂ ಒಳಗೊಂಡಂತೆ ಇಂತಹ ವಲಸಿಗ ಮತ್ತು ಅಲೆಮಾರಿ ಸಮುದಾಯಗಳ ಕಸಬುಗಳು ಸಂಕೀರ್ಣವಾಗಿ ರೂಪುಗೊಳ್ಳುತ್ತಾ ಬಂದಿವೆ. ಅನೇಕ ಭಾರತೀಯ ಬುಡಕಟ್ಟು ಪಂಗಡಗಳಂತೆ, ಕುಂಬ್ರಿ ಮರಾಠಿ ಸಮುದಾಯದ ಆರ್ಥಿಕ ಜೀವನದಲ್ಲಿ ಕೃಷಿ, ಬೇಟೆ, ಆಹಾರ ಸಂಗ್ರಹ, ಪಶುಪಾಲನೆ, ಕರಕುಶಲ ಕಲೆಗಳು ಮಹತ್ವ ಪಡೆದಿವೆ. ಆರ್ಥಿಕ ದೃಷ್ಟಿಯಿಂದ ಕುಂಬ್ರಿ ಮರಾಠಿಗರು ಅತ್ಯಂತ ಹಿಂದುಳಿದ ಆರ್ಥಿಕತೆಯನ್ನು ಹೊಂದಿದ್ದಾರೆ.

ಶತಮಾನಗಳ ಕಾಲದ ಮಾನವ ವಿಕಾಸದ ಹಾದಿಯಲ್ಲಿ ಅನೇಕ ಸಮುದಾಯಗಳು ತಮ್ಮ ಅಸ್ತಿತ್ವಕ್ಕಾಗಿ ಅನೇಕ ಕಸಬುಗಳನ್ನು ಪಾರಂಪರಿಕವಾಗಿ ಅವಲಂಬಿಸಿಕೊಂಡು ಬಂದಿವೆ. ಆದರೆ ಜಗತ್ತು ಬದಲಾದಂತೆ ಸಮುದಾಯಗಳು ತಮ್ಮ ಕುಲಕಸಬುಗಳನ್ನು ಬದಲಿಸಿಕೊಳ್ಳಲು ಅವಕಾಶಗಳಿರಲಿಲ್ಲ. ಭಾರತದ ಜಾತಿ ವ್ಯವಸ್ಥೆಯು ಅಧೀನ ಸಮುದಾಯಗಳಿಗೆ ತಮ್ಮ ಕಸಬುಗಳನ್ನು ಬದಲಿಸಿಕೊಳ್ಳುವ ಅವಕಾಶಗಳನ್ನು ಕಲ್ಪಿಸಲೇ ಇಲ್ಲ. ಹಾಗಾಗಿ ಸಾವಿರಾರು ವರ್ಷಗಳ ಇತಿಹಾಸವಿರುವ ಈ ದೇಶದಲ್ಲಿ ಅನೇಕ ಸಮುದಾಯಗಳು ಇಂದಿಗೂ ತಮ್ಮ ಪರಂಪರಾಗತ ಬದುಕಿನ ವ್ಯವಸ್ಥೆಯಲ್ಲಿಯೇ ಮುಂದುವರಿದಿರುವುದೊಂದು ವಿಶೇಷ. ಆದರೆ ಕಳೆದ ಒಂದೆರಡು ಶತಮಾನಗಳಲ್ಲಿ ಆದ ರಾಜಕೀಯ ಮತ್ತು ಆರ್ಥಿಕ ಬದಲಾವಣೆಗಳು ಬುಡಕಟ್ಟು ಬದುಕಿನ ಮೇಲೆ ಅಪಾರವಾದ ಪರಿಣಾಮವನ್ನು ಬೀರಿವೆ. ವಸಾಹತು ಸಂದರ್ಭದಲ್ಲಿ ಹೇಗೆ ಅರಣ್ಯಗಳು

ವಾಣಿಜ್ಯ ಉದ್ದೇಶಗಳಿಗಾಗಿ ಬಳಕೆಯಾದವು ಮತ್ತು ಅಂಥ ಆರ್ಥಿಕ ಬದಲಾವಣೆಗಳಿಂದ ಕಾಡನ್ನೇ ಅವಲಂಬಿಸಿ ಬದುಕುತ್ತಿದ್ದ ಸಮುದಾಯಗಳ ಮೇಲೆ ಆದ ಪರಿಣಾಮಗಳ ಹಿನ್ನೆಲೆಯಲ್ಲಿಯೇ ಕುಂಬ್ರಿ ಮರಾಠಿಗರ ಆರ್ಥಿಕ ಸ್ಥಿತ್ಯಂತರಗಳನ್ನು ನಾವು ಗಮನಿಸಬೇಕಾಗಿದೆ. ಸಾಂಪ್ರದಾಯಿಕವಾಗಿ ಕುಂಬ್ರಿ ಮರಾಠಿಗರ ಶತಮಾನಗಳಿಂದ ಅರಣ್ಯವಾಸಿಗಳಾಗಿದ್ದರು. ಬಹಳ ಕಾಲದಿಂದ ಅರಣ್ಯವನ್ನು ನಂಬಿ ಬದುಕಿದವರು ಎಂಬುದರಲ್ಲಿ ಎರಡು ಮಾತಿಲ್ಲ. ಅವರ ಅರಣ್ಯಾಧಾರಿತ ಜೀವನದಲ್ಲಿ ಮೂರು ಹಂತಗಳನ್ನು ನಾವು ಗಮನಿಸಬಹುದು;

1. ಆಹಾರ ಸಂಗ್ರಹಣೆ, 2. ಬೇಟೆ, 3. ಪಶುಪಾಲನೆ, 4. ಕೃಷಿ (ಕುಮ್ರಿ ಬೇಸಾಯ)

**ಆಹಾರ ಸಂಗ್ರಹಣೆ: ಪಾರಂಪರಿಕ ಕಸಬುಗಳು**

ಕುಂಬ್ರಿ ಮರಾಠಿ ಸಮುದಾಯದ ಬದುಕು ಮತ್ತು ಅವರ ವೃತ್ತಿ ಪರಸ್ಪರ ಒಂದನ್ನೊಂದು ಸಂಬಂಧವನ್ನು ಹೊಂದಿವೆ. ಆದ್ದರಿಂದ ಈ ಸಮುದಾಯದವರು ಕೃಷಿಯನ್ನೇ ಜೀವನದ ವೃತ್ತಿಯನ್ನಾಗಿ ಮಾಡಿಕೊಂಡು ಕೃಷಿಗೆ ಹೊಂದಾಣಿಕೆಯಾಗುವಂತೆ ಅನೇಕ ಉಪಕಸಬುಗಳಾದ ಬೇಟೆ, ಮೀನುಗಾರಿಕೆ, ಪಶುಪಾಲನೆ, ಕುಮರಿ ಬೇಸಾಯ, ಕೈತೋಟ, ಕೃಷಿ ಕೂಲಿ ಮತ್ತು ಗೃಹ ಕೈಗಾರಿಕೆಗಳನ್ನು ದಿನನಿತ್ಯದ ಬದುಕಿನಲ್ಲಿ ಮಾಡುತ್ತಾ ಬಂದಿದ್ದಾರೆ. ಇದರಿಂದಾಗಿ ಈ ಸಮುದಾಯದವರು ಮಾಡುತ್ತಾ ಬಂದಿರುವ ಕಸಬುಗಳನ್ನು ವಿವರವಾಗಿ ನೋಡುವ.

**ಬೇಟೆ**

ಬೇಟೆ ಆಹಾರ ಸಂಗ್ರಹಣೆಯ ಮುಂದುವರಿದ ಉತ್ಪಾದನಾ ಚಟುವಟಿಕೆ. ಅರಣ್ಯವಾಸಿ ಸಮುದಾಯಗಳಿಗೆ ಬೇಟೆ ಸಹಜವಾಗಿಯೇ ಒಂದು ಆಹಾಸ ಸಂಗ್ರಾಹಕ ಪ್ರವೃತ್ತಿಯೂ ಹೌದು. ಈ ಕಾರಣಕ್ಕಾಗಿ ಬೇಟೆ ಆದಿಮ ಜನ ಸಮುದಾಯಗಳ ಪುರಾತನ ಆಹಾರ ಉತ್ಪಾದನಾ ವಿಧಾನ. 'ನಾಗರಿಕನಾಗಿ' ಬೆಳೆದು ನಿಂತಿರುವ ಇಂದಿನ ಬಹುತೇಕ ಎಲ್ಲಾ ಸಮುದಾಯಗಳು ಬೇಟೆಯ ಹಂತವನ್ನು ದಾಟಿಯೇ ಇಂದಿನ ವ್ಯವಸ್ಥೆಗೆ ಬಂದು ತಲುಪಿವೆ. ಬೇಟೆ ಇಂದು ಸಂಪೂರ್ಣವಾಗಿ ನಿಷೇಧಿಸಲ್ಪಟ್ಟಿದೆ. ಒಂದು ಕಾಲಕ್ಕೆ ಉಪವೃತ್ತಿಯೇ ಆಗಿದ್ದ ಬೇಟೆ ಕುಂಬ್ರಿ ಮರಾಠಿ ಸಮುದಾಯಕ್ಕೆ ಇಂದು ಅದು ಅಪರೂಪದ ಸಂಗತಿ. ಆದರೂ ಇವರು ಹಿಂದೆ ಬೇಟೆಯಲ್ಲಿ ಪರಿಣಿತರು ಎಂದು ಹಲವರು ಅಭಿಪ್ರಾಯಪಡುತ್ತಾರೆ. ಆದ ಕಾರಣ ಈ ಹಿಂದೆ ಸ್ಥಳೀಯರು ಬೇಟೆಗೆ ಹೋಗುವಾಗ ಕುಂಬ್ರಿ ಮರಾಠಿ ಸಮುದಾಯದ ಪರಿಣಿತರನ್ನು ಕರೆದುಕೊಂಡು ಹೋಗುವ ಪದ್ಧತಿ ಇತ್ತಂತೆ. ಕುಂಬ್ರಿ ಮರಾಠಿ ಸಮುದಾಯದ ಬೇಟೆಯ ಆಯುಧಗಳೆಂದರೆ ಈಟಿ, ಕೊಡಲಿ, ಹಗ್ಗ, ಬಲೆ ಮತ್ತು ಬಡಿಗೆಗಳಾಗಿವೆ. ಇವರು

ಬಲೆ ಹಾಗೂ ಹಗ್ಗಗಳಿಂದ ಕಾಡು ಜಿಂಕೆ ಮತ್ತು ಇತರ ಕಾಡು ಪ್ರಾಣಿಗಳನ್ನು ಸೆರೆ ಹಿಡಿಯುತ್ತಾರೆ. ವಿಶಿಷ್ಟ ಹಗ್ಗ ಕುಣಿಕೆಗಳಿಂದ ಹಕ್ಕಿಗಳನ್ನು ಸೆರೆ ಹಿಡಿಯುವರು. ಕಾಡು ಹಂದಿ ಹಿಡಿಯುವಾಗ ಈಟಿ, ಬಡಿಗೆ, ಹಗ್ಗಗಳನ್ನು ಉಪಯೋಗಿಸುವರು.

ಕುಂಬ್ರಿ ಮರಾಠಿಗರು ಬೇಟೆಯ ಆಯುಧಗಳನ್ನು ಸ್ವತಃ ತಯಾರಿಸಿಕೊಳ್ಳುವರು. ಇಲ್ಲವೆ ನೆರೆಹೊರೆಯ ಬುಡಕಟ್ಟು ಪಂಗಡಗಳಿಂದ ಆಯುಧಗಳನ್ನು ಎರವಲು ಪಡೆಯುವರು. ಕಬ್ಬಿಣದ ಚೂಪು ಕೊಡಲಿಗಳನ್ನು ಸ್ಥಳೀಯ ಕಮ್ಮಾರಿನಿಂದ ಖರೀದಿಸುವರು. ಇವರು ಹಗ್ಗ, ಬಲೆ, ಕುಣಿಕೆ ತಯಾರಿಸಲು ಬೇಕಾಗುವ ನಾರು, ಒಣ ತೊಗಟೆ, ಬಳ್ಳಿಗಳನ್ನು ಅರಣ್ಯ ಪ್ರದೇಶದಲ್ಲಿ ಶೋಧಿಸಿ, ಸಂಸ್ಕರಿಸಿ ಹಗ್ಗ ಮತ್ತು ಬಲೆಗಳನ್ನು ತಾವೇ ತಯಾರಿಸಿಕೊಳ್ಳುವರು. ಈ ಹಗ್ಗ ಮತ್ತು ಬಲೆಗಳಿಂದ ಕಾಡು ಹಂದಿ, ಮೊಲ, ಪಾರಿವಾಳಗಳನ್ನು ಸೆರೆ ಹಿಡಿಯುತ್ತಿದ್ದರು. ಸಾಮಾನ್ಯವಾಗಿ ಹಗ್ಗ, ಬಲೆ ತಯಾರಿಸಲು ಎರಡು-ಮೂರು ವರ್ಷ ಹಿಡಿಯುತ್ತದೆ. ಒಂದು ಬಲೆ ಸರಾಸರಿ 10 ರಿಂದ 15 ಅಡಿ ಉದ್ದವಿದ್ದು ಈ ಬಲೆಯನ್ನು 15 ರಿಂದ 20 ವರ್ಷಗಳವರೆಗೆ ಚೆನ್ನಾಗಿ ಬಳಸಬಹುದಾಗಿದೆ.

ಬೇಟೆಯಾಡದಿದ್ದರೆ ಊರಿನಲ್ಲಿ ತೊಂದರೆಯಾಗುವುದು ಎಂಬ ನಂಬಿಕೆ ಕೂಡ ಇವರಲ್ಲಿದೆ. ಬೇಟೆಯ ಮೊದಲು ದೇವರಲ್ಲಿ ಕೇಳುವ ವಾಡಿಕೆ ಇದೆ. ಕುಂಬ್ರಿ ಮರಾಠಿಗಳು ಬೇಟೆಯಲ್ಲಿ ಗುಂಪುಗಳನ್ನು ಮಾಡಿಕೊಂಡು ಮುನ್ನಡೆಯುತ್ತಾರೆ. ಪ್ರತಿ ಗುಂಪಿನಲ್ಲಿಯೂ ಕನಿಷ್ಠ 50 ರಿಂದ ಗರಿಷ್ಠ 100 ಜನ ಬೇಟೆಗಾರರಿರುತ್ತಾರೆ. ಹಿರಿಯರೊಂದಿಗೆ ಕಿರಿಯರು ಬೇಟೆಯಲ್ಲಿ ಸಹಕರಿಸುತ್ತಾರೆ. ಕುಂಬ್ರಿ ಮರಾಠಿ ಸಮುದಾಯದವರು ಬೇಟೆಗೆ ಹೊರಡುವುದಕ್ಕಿಂತ ಸಾಕಷ್ಟು ಮುಂಚೆಯೇ ಜೊತೆಗೆ ಕರೆದುಕೊಂಡು ಹೋಗಬಹುದಾದ ಜನರ ಬಗ್ಗೆ ನಿರ್ಧರಿಸಿ ಹೊರಡುವ ಸ್ಥಳ, ಸಮಯ, ಆಯುಧಗಳ ಸಾಗಣೆ ಹಾಗೂ ಪ್ರಾಣಿಯ ಮಾಂಸ ಹಂಚಿಕೆಯ ಬಗ್ಗೆ ಸೂಕ್ತ ಯೋಜನೆ ತಯಾರಿಸಿಕೊಳ್ಳುತ್ತಾರೆ. ಗುಂಪು ಬೇಟೆ ಸಾಮಾನ್ಯವಾಗಿ ಮಧ್ಯಾಹ್ನದ ಸಮಯಕ್ಕೆ ಆರಂಭವಾಗುತ್ತದೆ, ಕಾಡು ಹಂದಿಗಳ ಬೇಟೆಯನ್ನು ಸಾಮಾನ್ಯವಾಗಿ ಮಳೆಗಾಲದಲ್ಲಿ ಇಟ್ಟುಕೊಳ್ಳುತ್ತಾರೆ. ಕುಂಬ್ರಿ ಮರಾಠಿ ಸಮುದಾಯದವರು ಸಾಮಾನ್ಯವಾಗಿ 15 ದಿನಗಳಿಗೊಮ್ಮೆ ಅಥವಾ ತಿಂಗಳಲ್ಲಿ ಒಂದು ಸಲ ಗುಂಪು ಬೇಟೆ ಯೋಜಿಸಿಕೊಂಡು ವ್ಯವಸ್ಥಿತ ಸಿದ್ಧತೆ ಮಾಡಿಕೊಳ್ಳುವರು. ಸಾಮೂಹಿಕ ಬೇಟೆ ಯೋಜಿಸಿದಾಗ ಕೆಲವೊಂದು ಸಾಂಪ್ರದಾಯಿಕ ಪೂಜೆ ಪುನಸ್ಕಾರಗಳನ್ನು ಮುಂಚೆ ಹಾಗೂ ನಂತರ ಮಾಡಬೇಕಾಗುವುದು. ಬೇಟೆಯ ಬಲೆ, ಆಯುಧ ಹಾಗೂ ಇನ್ನಿತರ ಉಪಕರಣಗಳನ್ನು ಭಯಭಕ್ತಿಯಿಂದ ಪೂಜಿಸಿ, ಸಕಲ ಯಶಸ್ಸಿಗಾಗಿ ಪ್ರಾರ್ಥಿಸುವರು. ಬೇಟೆಯ ಬಲೆ ಹಾಗೂ ಇನ್ನಿತರ ಸಾಮಗ್ರಿಗಳು ತುಂಬಾ ಪವಿತ್ರ ವಸ್ತುಗಳು.

ಕುಂಬ್ರಿ ಮರಾಠಿ ಸಮುದಾಯದಲ್ಲಿ ಬೇಟೆಗೆ ಹೊರಡುವಾಗ, ಬೇಟೆ ದೇವತೆಯನ್ನು ಬಾಳೆ ಎಲೆಗಳಿಂದ ಸಿಂಗರಿಸಿ ಬಾಳೆಹಣ್ಣು, ತೆಂಗಿನಕಾಯಿ ಹಾಗೂ ಇತರ ಹಣ್ಣುಗಳನ್ನು ಅರ್ಪಿಸಿ ಪೂಜಿಸುವರು. ಈ ಪೂಜೆಯನ್ನು ಗುರಿಕಾರನ ಮನೆಯ ತುಸು ದೂರದಲ್ಲಿ ಎತ್ತರ ಪ್ರದೇಶದಲ್ಲಿ ನೆರವೇರಿಸುವರು. ರಜಸ್ವಲೆಯಾದಾಗ ಹೆಣ್ಣು ಮಕ್ಕಳಿಗೆ ಬೇಟೆ ಆಯುಧಗಳನ್ನು ಮುಟ್ಟಲು ನಿರ್ಬಂಧ ಇರುತ್ತದೆ. ಕಾಡು ಹಂದಿಯ ಬೇಟೆಯಾಡಿ ಅರ್ಪಿಸಿದಾಗ ಸೋಮೇಶ್ವರ ದೇವರಿಗೆ ಪೂಜೆ ಸಲ್ಲಿಸಿದಂತಾಗುವುದು ಎಂಬ ನಂಬಿಕೆ ಕುಣಬಿ ಸಮುದಾಯದಲ್ಲಿದೆ. ಬೇಟೆಗಾರರು ಅರಣ್ಯ ಪ್ರವೇಶ ಮಾಡಿದೊಡನೆ ತಮ್ಮ ತಮ್ಮ ಆಯುಧ ಹಾಗೂ ಸಲಕರಣೆಗಳಿಂದ ನಿರ್ದಿಷ್ಟ ಸ್ಥಾನವನ್ನು ವಹಿಸಿಕೊಳ್ಳುವರು. ಎಲ್ಲರೂ ವೃತ್ತಾಕಾರದಲ್ಲಿ ಸನ್ನದ್ಧರಾಗಿ ಜೋರಾಗಿ ಬೊಬ್ಬೆ ಹೊಡೆಯುವುದಲ್ಲದೆ, ಬಡಿಗೆಗಳಿಂದ ಪೊದೆಗಳ ಮೇಲೆ ಬಡಿಯುತ್ತ ಕಾಡು ಪ್ರಾಣಿಗಳನ್ನು ಹೆದರಿಸಲು ಪ್ರಯತ್ನಿಸುವರು. ಅದರಲ್ಲೂ ಮುಳ್ಳು ಹಂದಿ ಹಾಗೂ ಕಾಡು ಹಂದಿಗಳು ದಿಕ್ಕಾಪಾಲಾಗಿ ಹೆದರಿ ಓಡತೊಡಗುತ್ತವೆ, ಆಗ ಪೊದೆಗಳಲ್ಲಿ ಅವಿತ ಬೇಟೆಗಾರರು ತಮ್ಮ ಆಯುಧಗಳಿಂದ ಅವುಗಳನ್ನು ಕೊಲ್ಲುವರು. ಆ ನಂತರ ಬೇಟೆಯಾಡಿದ ಪ್ರಾಣಿಯನ್ನು ಗಿಡದ ಎಲೆ-ಬಳ್ಳಿಗಳಿಂದ ಮುಚ್ಚಿ ಸಾಂಪ್ರದಾಯಿಕ ಮೆರವಣಿಗೆಯಲ್ಲಿ ಊರಿಗೆ ಒಯ್ದು ಪ್ರಾಣಿ ಮಾಂಸವನ್ನು ಹಂಚುವರು, ಇದು ಕೂಡ ಸಾಂಪ್ರದಾಯಿಕ ಆಚರಣೆಯ ಮಹತ್ವದ ಅಂಶವಾಗಿದೆ. ಮಾಂಸ ಹಂಚಿಕೆಯ ಪೂರ್ವದಲ್ಲಿ ದೇವ-ದೇವತೆಗಳಿಗೆ ಸಮರ್ಪಿಸುವರು. ಅದು ಕೂಡ ಬೆಟ್ಟ ಪ್ರದೇಶದ ಎತ್ತರದ ಸ್ಥಳದಲ್ಲಿ ಎಲೆಯಲ್ಲಿ ಬೇಟೆ ಪ್ರಾಣಿಯ ಮಾಂಸವನ್ನು ಎಡೆಗೆ ಇಟ್ಟು ಸಾಮೂಹಿಕ ಪ್ರಾರ್ಥನೆ ಸಲ್ಲಿಸುವರು. ಬಲಭಾಗದಲ್ಲಿ ತುಸು ಮಾಂಸವನ್ನು ಚೆಲ್ಲಿ ನಿಗೂಢ ಶಕ್ತಿದೇವತೆಗಳಿಗೆ ನೈವೇದ್ಯ ನೀಡುವರು. ಈ ಸಾಂಪ್ರದಾಯ ಪಾಲಿಸದಿದ್ದರೆ, ಮುಂದಿನ ಬೇಟೆ ಅಯಶಸ್ವಿಯಾಗುವುದೆಂಬ ನಂಬಿಕೆ ಕುಂಬ್ರಿ ಮರಾಠಿ ಸಮುದಾಯದವರಲ್ಲಿದೆ.

ಕುಂಬ್ರಿ ಮರಾಠಿ ಸಮುದಾಯದವರಲ್ಲಿ ಒಂದು ವೇಳೆ ಕಾಡು ಹಂದಿ ಬೇಟೆಯ ಆಹುತಿ ಆಗಿದ್ದರೆ, ಬಲೆಯನ್ನು ನೀಡಿದ ವ್ಯಕ್ತಿಗೆ ಗೌರವ ಪಾಲಿನ ದ್ಯೋತಕವಾಗಿ ಪ್ರಾಣಿಯ ತಲೆ, ಹಿಂಗಾಲು, ಬೆನ್ನೆಲುಬು ಹಾಗೂ ಪಾದದ ಮಾಂಸ ದೊರೆಯುತ್ತದೆ. ಕುಂಬ್ರಿ ಮರಾಠಿ ಸಮುದಾಯದಲ್ಲಿ ಬೇಟೆಗಾರನಿಗೆ ತಲೆ, ಎದೆ, ಬೆನ್ನೆಲುಬು, ಶ್ವಾಶಕೋಶದ ಭಾಗ ದೊರೆಯುತ್ತದೆ. ಇವರಲ್ಲಿ ಮತ್ತೊಂದು ರೂಢಿಯೆಂದರೆ ಭೂಮಿಯ ಒಡೆಯನಿಗೆ ಪ್ರಾಣಿಯ ಮುಂಗಾಲನ್ನು ಗೌರವಪೂರ್ವಕವಾಗಿ ನೀಡುತ್ತಾರೆ, ಯಾರಿಗೂ ಹೆಚ್ಚಿನ ಪಾಲು ನೀಡುವುದಿಲ್ಲ. ಕುಂಬ್ರಿ ಮರಾಠಿ ಸಮುದಾಯದಲ್ಲಿ ಕಾಡು ಹಂದಿಯ ಪಿತ್ತಜನಕಾಂಗವನ್ನು ಒಣಗಿಸಿ ಬಿದಿರು ದಂಟಿನಲ್ಲಿ ಸಂಗ್ರಹಿಸಿ ಮುಂದಿನ ವರ್ಷದ ಹೋಳಿಹಬ್ಬದವರೆಗೆ ಕಾಯ್ದಿರಿಸುವರು, ಅನಂತರ ಹೋಳಿ ಹಬ್ಬದಂದು ಒಣಗಿದ ಮಾಂಸದ ತುಂಡನ್ನೇ ನೈವೇದ್ಯವೆಂದು ಅರ್ಪಿಸಿ ಸೇವಿಸುವರು.

ಇತ್ತೀಚೆಗೆ ಬೇಟೆ ಕಣ್ಮರೆಯಾಗಿದೆ. ಈಗ ಅರಣ್ಯದಿಂದ ಅಲ್ಲಿನ ಉಪುತ್ಪನ್ನಗಳನ್ನು ಸಂಗ್ರಹಿಸುವುದೇ ದುಸ್ತರವಾಗಿದೆ. ಇತರ ಕಚ್ಚಾ ಸಾಮಗ್ರಿ ಸಿಗುವುದೂ ಕಷ್ಟದಾಯಕ. ಹೀಗಾಗಿ ಸಾಂಪ್ರದಾಯಿಕ ಬಲೆ ತಯಾರಿಸುವುದನ್ನು ಬಿಟ್ಟು ಕುಂಬ್ರಿ ಮರಾಠಿ ಸಮುದಾಯದವರು ನೈಲಾನ್ ದಾರವನ್ನು ಬಳಸಿ ಬಲೆ ನೇಯುವುದಕ್ಕೆ ಪ್ರಾರಂಭಿಸಿದ್ದಾರೆ. ಅವಿಭಕ್ತ ಕುಟುಂಬದಿಂದ ವೈಯಕ್ತಿಕ ಕುಟುಂಬಗಳು ರೂಪುಗೊಳ್ಳುತ್ತಿರುವ ಸಂದರ್ಭದಲ್ಲಿ ಸಮೂಹ ಬೇಟೆ ಪದ್ಧತಿ ತೀವ್ರವಾಗಿ ರೂಪಾಂತರ ಹೊಂದಿದೆ. ಈಗ ಅರಣ್ಯ ಇಲಾಖೆಯ ಕಾನೂನು ಕಟ್ಟೆಚ್ಚರಗಳಿಂದಾಗಿ ತಮ್ಮ ಪ್ರಿಯ ಆಹಾರವನ್ನು ಕಿತ್ತುಕೊಳ್ಳಲಾಯಿತು ಎಂಬ ಅಸಮಾಧಾನ ಕೆಲವು ಹಿರಿಯರಲ್ಲಿದೆ ಹಾಗೂ ಕಾಡು ಪ್ರಾಣಿಗಳ ಇಳಿಮುಖ ಇರುವ ಕಾರಣ ಕುಂಬ್ರಿ ಮರಾಠಿ ಸಮುದಾಯದಲ್ಲೂ ಬದಲಾವಣೆಗಳಾಗಿವೆ. ಇನ್ನೊಂದು ಸ್ವಾರಸ್ಯದ ಸಂಗತಿ ಎಂದರೆ ಇತ್ತೀಚೆಗಿನ ಕುಂಬ್ರಿ ಮರಾಠಿ ಸಮುದಾಯದ ಯುವ ಪೀಳಿಗೆಗೆ ಸಾಂಪ್ರದಾಯಿಕ ಬೇಟೆ ಹಾಗೂ ಬಲೆ ತಯಾರಿಕೆ ಗೊತ್ತೇ ಇರುವುದಿಲ್ಲ. ಹೀಗಾಗಿ 'ಭಾರತ ಉಪಖಂಡದಲ್ಲಿ ಕಾಡು ಪ್ರಾಣಿಗಳ ತೀವ್ರ ಇಳಿಮುಖ ಹಾಗೂ ಅರಣ್ಯ ಸಂಪತ್ತು ನಶಿಸುತ್ತಿರುವ ಸಂದರ್ಭದಲ್ಲಿ ಬೇಟೆಗಾರಿಕೆಯು ಸಂಪೂರ್ಣ ಮಾಯವಾಗಿದೆ. ಅನೇಕ ವಿರಳ ಜಾತಿಯ ಪ್ರಾಣಿಗಳ ಸಂರಕ್ಷಣಾ ಕಾಯ್ದೆ ಜಾರಿಗೆ ಬಂದಿರುವುದರಿಂದ, ಬೇಟೆಯು ಈಗ ಸಾಂಪ್ರದಾಯಿಕ, ಧಾರ್ಮಿಕ ವಿಧಿ ಎನ್ನುವ ಮಟ್ಟಿಗೆ ಉಳಿದಿದೆ'.[9] ಒಟ್ಟಾರೆಯಾಗಿ ಹೇಳುವುದಾದರೆ ಸಾಕು ಪ್ರಾಣಿಗಳ ಸಾಕಾಣಿಕೆಯಿಂದ ದೂರವಿರುವ ಕುಂಬ್ರಿ ಮರಾಠಿಗರು ಮಾಂಸಾಹಾರವನ್ನು ತ್ಯಜಿಸುತ್ತಿದ್ದಾರೆ. ಅವರ ಪ್ರಿಯ ಆಹಾರವನ್ನು ನಮ್ಮ ವ್ಯವಸ್ಥೆ ಕಸಿದುಕೊಂಡಿದೆ. ಇದರಿಂದ ಕುಂಬ್ರಿ ಮರಾಠಿಗರ ಆಹಾರ ಕ್ರಮದ ಮೇಲೆ ಮಾತ್ರವಲ್ಲ, ಅವರ ಆರ್ಥಿಕತೆಯ ಮೇಲೂ ಪರಿಣಾಮ ಬೀರಿದೆ.

**ಆಹಾರಕ್ಕಾಗಿ ಮೀನುಗಾರಿಕೆ**

ಕುಂಬ್ರಿ ಮರಾಠಿಗರು ಒಳನಾಡ ಮೀನುಗಾರಿಕೆಯಲ್ಲೂ ಪರಿಣಿತರು. ತಾವು ವಾಸಿಸುವ ಕಣಿವೆಗಳಲ್ಲಿ ಮಳೆಗಾಲದಲ್ಲಿ ಮೀನುಗಾರಿಕೆಯನ್ನೂ ಮಾಡುತ್ತಾರೆ. ಆದರೆ ಇದು ಸಾಮೂಹಿಕ ಚಟುವಟಿಕೆಯೇನೂ ಅಲ್ಲ. ಆಯಾ ಮನೆಯವರು ಪ್ರತ್ಯೇಕವಾಗಿ ಮೀನು ಹಿಡಿಯುತ್ತಾರೆ. ಆದರೆ ಕುಂಬ್ರಿ ಮರಾಠಿಗರು ಇದನ್ನು ಮುಖ್ಯ ಆರ್ಥಿಕ ಅವಲಂಬನೆ ಎಂದು ಪರಿಗಣಿಸಿಲ್ಲ. ಮಳೆಗಾಲದಲ್ಲಿ ಮಾತ್ರ ತಮ್ಮ ದೈನಂದಿನ ಆಹಾರಕ್ಕೆ ಹತ್ತಿರದ ನದಿ ಮತ್ತು ಹಳ್ಳಗಳಲ್ಲಿ ಮೀನುಗಾರಕೆ ಮಾಡುತ್ತಾರೆ. ಬಲೆಯನ್ನು ನಾರಿನ ಹಗ್ಗದಿಂದ ತಯಾರಿಸುವರು. ಮೀನಿನ ಆಕಾರ ಹಾಗೂ ಸಂಖ್ಯೆಯನ್ನು ಅವಲಂಬಿಸಿ ಬಲೆಯ ಅಳತೆ ಹಾಗೂ ಆಕಾರ ನಿರ್ಧರಿತವಾಗುವುದು. ಬಲೆಯನ್ನು ಬಿದುರಿನ ಕೋಲಿಗೆ ಸಿಕ್ಕಿಸಿ ಕೊಕ್ಕೆಯಂತೆ ಉಪಯೋಗಿಸುವರು. ಬಳ್ಳಿ

ಹಾಗೂ ನಾರನ್ನು ಮೀನು ಬಲೆ ತಯಾರಿಸಲು ಉಪಯೋಗಿಸುತ್ತಾರೆ. ಝೂಲಿ ಎಂಬ ಸಾಂಪ್ರದಾಯಿಕ ಬಲೆಯನ್ನು ದೊಡ್ಡ ಮೀನು ಹಿಡಿಯಲು ಕುಂಬ್ರಿ ಮರಾಠಿಗರು ಬಳಸುತ್ತಾರೆ. ಬಹಳ ಮೀನು ಹಿಡಿಯಲು ಝೂಲ ಎಂಬ ಬೇರೆ ಬಲೆ ಬಳಸುವರು. ಗೋರ್ಜಲಿ ಎಂಬ ಬಲೆಯನ್ನು ಸಣ್ಣ ಸಣ್ಣ ಮೀನು ಹಿಡಿಯಲು ಬಳಸುವರು. ಕಂಕುಲಿ ಬಲೆಯನ್ನು ಉದ್ದ ಆಕಾರದ ಕ್ಷಿಪ್ರಗತಿ ಮಾರಾಟಗುಣ ಪಡೆದ ಮೀನು ಹಿಡಿಯಲು ಉಪಯೋಗಿಸುವರು. ಬೀಸು ಬಲೆಯನ್ನು ನೀರಿನ ಪಾತಳಿಯ ಮೇಲೆ ವೃತ್ತಾಕಾರದಲ್ಲಿ ಹರಡಿ ಮೀನು ಹಿಡಿಯುವರು. 'ಬೀಡುಬಲೆ' ಎಂಬ ಬಲೆಯನ್ನು ಆಳ ನೀರಿನಲ್ಲಿ ಮೀನು ಹಿಡಿಯಲು ಬಳಸುವರು. ಈ ಎಲ್ಲಾ ರೀತಿಯ ಬಲೆಗಳಲ್ಲಿ ಕೆಲವೊಂದು ಬಲೆಗಳನ್ನು ಸ್ಥಳೀಯ ಮೀನುಗಾರರು ಬಳಸುತ್ತಾರೆ. ಈ ಬಲೆಗಳ ಬಳಕೆಯಲ್ಲದೇ ಗಾಳಕ್ಕೆ ಆಹಾರದ ತುಂಡು ಅಥವಾ ಮೀನಿನ ತುಂಡು ಸಿಕ್ಕಿಸಿ, ಮೀನು ಹಿಡಿಯುವಿಕೆಗೆ 'ಗೋರೆ' ಎನ್ನುವರು. ಅಲ್ಲದೆ ಶಂಕುವಿನಾಕಾರದ ಬಿದುರು ಕೊಕ್ಕೆಯನ್ನು ಮೀನು ಮತ್ತು ಏಡಿ ಹಿಡಿಯಲು ಬಳಸುವರು. ಒಟ್ಟಾರೆ ಮೀನುಗಾರಿಕೆಯು ಇವರ ಮುಖ್ಯ ಆರ್ಥಿಕ ಚಟುವಟಿಕೆಯೇನು ಅಲ್ಲ. ಅವರು ತಮ್ಮ ನಿತ್ಯದ ಆಹಾರ ಉತ್ಪಾದನೆಗಾಗಿ ಮೀನುಗಾರಿಕೆಯನ್ನು ಅವಲಂಬಿಸಿದ್ದಾರೆ.

**ಪಶುಪಾಲನೆ**

ಕುಣಬಿ, ಕುಂಬ್ರಿ ಮರಾಠಿ, ಕುಡುಬಿ, ಮಾರಾಠಿ ನಾಯ್ಕ ಈ ಸಮುದಾಯಗಳು ಮೂಲತಃ ಪಶುಪಾಲಕರು. ಈ ಸಮುದಾಯಗಳು ಪಶುಪಾಲನೆ ಮಾಡುತ್ತಲೇ ಕುಮ್ರಿ ಬೇಸಾಯದಂತಹ ಕೃಷಿಯನ್ನು ಕಂಡುಕೊಳ್ಳುತ್ತಾ ಬಂದಿವೆ. ಹಾಗಾಗಿ ಪಾರಂಪರಿಕ ಕೃಷಿ ಸಮುದಾಯಗಳು ಒಂದು ಕಾಲಕ್ಕೆ ಪಶುಪಾಲಕ ಸಮುದಾಯಗಳೇ ಆಗಿದ್ದವು. ಇದು ಸಹಜ ಕೂಡ ಹೌದು. ಪಶುಪಾಲನೆ ಇಂದಿಗೂ ಪ್ರಮುಖ ಆಹಾರ ಉತ್ಪಾದನಾ ಚಟುವಟಿಕೆಯೂ ಹೌದು. ಆದರೆ ಪಾರಂಪರಿಕ ಪಶುಪಾಲಕ ಚಟುವಟಿಕೆಯು ಇಂದು ಒಂದು ಆಚರಣೆಯಾಗಿಯೂ ಈ ಸಮುದಾಯಗಳಲ್ಲಿ ಉಳಿದು ಬಂದಿದೆ. ಕುಂಬ್ರಿ ಮರಾಠಿಗರು ಕೃಷಿಯನ್ನು ಅವಲಂಬಿಸಿಕೊಂಡು ಜೀವನ ಮಾಡುವವರಾಗಿದ್ದರಿಂದ ಒಂದೊಂದು ಮನೆಯಲ್ಲಿ ಎಮ್ಮೆಗಳನ್ನು ಸಾಕಿರುವುದನ್ನು ನೋಡಬಹುದು. ಅಲ್ಲದೆ ಕೆಲವೊಂದು ಮನೆಯಲ್ಲಿ ಹಸುಗಳಿವೆ, ಆದರೆ ಕೃಷಿಯನ್ನು ಮಾಡುವಂತಹ ಎಲ್ಲಾ ಮನೆಯಲ್ಲಿಯೂ ಎರಡು ಕೋಣಗಳಿರುವುದನ್ನು ಇಲ್ಲಿ ವಿಶೇಷವಾಗಿ ನೋಡಬಹುದು. ಕೆಲವೆಡೆ ಕುಣಬಿ ಸಮುದಾಯವರು ಕೋಣಗಳನ್ನು ವ್ಯವಸಾಯಕ್ಕೂ ಬಳಸುತ್ತಾರೆ. ನೇಗಿಲು ಹೊಡೆಯಲು ಮತ್ತು ಉಳುಮೆ ಮಾಡಲು ಕೋಣಗಳನ್ನು ಕುಂಬ್ರಿ ಮರಾಠಿಗರೂ ಬಳಸುತ್ತಾರೆ. ಕುಂಬ್ರಿ ಮರಾಠಿಗರು ಪಾರಂಪರಿಕ ಪಶುಪಾಲಕರೂ ಆಗಿರುವುದರಿಂದ ಇವರ

ಆದಿಮ ದೈವಗಳಲ್ಲಿ ಪ್ರಾಣಿಗಳು ಮತ್ತು ಅವುಗಳನ್ನು ಕಾಯುವ ಮತ್ತು ಕಾಪಾಡುವ ವೀರರೂ ಸಹ ದೈವಗಳಾಗಿ ಪೂಜಿಸಲ್ಪಡುತ್ತಿದ್ದಾರೆ. ಕುಂಬ್ರಿ ಮರಾಠಿಗರ ಆಚರಿಸುವ ಗೋವಿನ ಹಬ್ಬ ಇವರ ಆದಿಮ ಪಶುಪಾಲಕ ಚಟುವಟಿಕೆಯನ್ನು ಪ್ರತಿನಿಧಿಸುತ್ತದೆ. ಬಲಿಪಾಡ್ಯಮಿಯಂದು ಆಚರಿಸುವ ಈ ಹಬ್ಬ ಕುಂಬ್ರಿ ಮರಾಠಿಗರ ಆಚರಣೆಯಲ್ಲಿ ಅತ್ಯಂತ ವಿಶಿಷ್ಟವಾದದ್ದು. ಸಾಮಾನ್ಯವಾಗಿ ಬುಡಕಟ್ಟುಗಳಲ್ಲಿ ಪಶುಪಾಲನೆಯನ್ನು ಹೆಚ್ಚಾಗಿ ಮಹಿಳೆಯರನ್ನು ಅವಲಂಬಿಸಿರುತ್ತಾರೆ. ದೈಹಿಕ ಶ್ರಮವು ಕಡಿಮೆ ವ್ಯಯವಾಗುವ ಈ ಚಟುವಟಿಕೆಯಲ್ಲಿ ಮಹಿಳೆ ಪ್ರಧಾನಪಾತ್ರ ವಹಿಸುತ್ತಾಳೆ. ಪಶುಗಳ ಪಾಲನೆ, ಪೋಷಣೆ, ಹೈನುಗಾರಿಕೆ ಮುಂತಾದ ಸಂಕೀರ್ಣ ಮತ್ತು ಕೌಶಲ್ಯಪೂರ್ಣ ಚಟುವಟಿಕೆಗಳನ್ನು ಮಹಿಳೆ ನಿರ್ವಹಿಸುತ್ತಾಳೆ. ಕುಂಬ್ರಿ ಮರಾಠಿಗರ ಮಹಿಳೆ ಇಂದಿಗೂ ಪಶುಪಾಲನೆ ಮಾಡುತ್ತಿದ್ದಾಳೆ. ಪಶುಪಾಲನೆಯಲ್ಲಿ ಹಾಲು ಮತ್ತು ಅದರ ನಂತರದ ಉತ್ಪನ್ನಗಳನ್ನು ರಕ್ಷಿಸುವುದು ಮಹಿಳೆಯ ಪಾರಂಪರಿಕ ಹೊಣೆಗಾರಿಕೆ. ಈ ಸಮುದಾಯದವರು ಬೇರೆಯವರಿಗೆ ಹಣಕ್ಕೆ ಹಾಲು, ಮೊಸರು, ತುಪ್ಪವನ್ನು ಮಾರಾಟ ಮಾಡದೆ ಎಲ್ಲವನ್ನು ಊಟಕ್ಕೆ ಬಳಸುತ್ತಾರೆ. ಕೃಷಿಯು ಇನ್ನೂ ಆವಿಷ್ಕಾರವಾಗಬೇಕಿದ್ದ ಆದಿಮ ಹಂತದಲ್ಲಿ ಪಶುಪಾಲಕರಾಗಿ ಸ್ತ್ರೀ ಗಂಡಿನ ಜೊತೆ ಸಮಾನ ಶ್ರಮವನ್ನು ವ್ಯಯಿಸುತ್ತಿದ್ದಳು. ಇಂದಿಗೂ ಆದಿಮ ಪಶುಪಾಲಕ ಸಮುದಾಯಗಳಲ್ಲಿ ಮಹಿಳೆ ಪುರುಷನಷ್ಟೇ ಶ್ರಮವನ್ನು ಪಶುಪಾಲನೆಯಲ್ಲಿ ವಿನಿಯೋಗಿಸುತ್ತಾಳೆ. ಈ ರೀತಿಯಾಗಿ ಪಶುಪಾಲನೆಯಲ್ಲಿ ಕೃಷಿಯನ್ನು ಹಾಗೂ ಕೃಷಿಯಲ್ಲಿ ಪಶುಪಾಲನೆಯನ್ನು ರೂಢಿಸಿಕೊಂಡು ಒಂದು ಉಪಕಸುಬಾಗಿ ಮಾಡಿಸಿಕೊಂಡು ಜೀವನವನ್ನ ಸಾಗಿಸುತ್ತಾ ಬಂದಿರುವುದನ್ನು ಕಾಣಬಹುದಾಗಿದೆ.

### ಅರಣ್ಯದ ಪಾರಂಪರಿಕ ಅವಲಂಬನೆ ಮತ್ತು ಕುಮ್ರಿ ಬೇಸಾಯ

ಮೂಲತಃ ಅರಣ್ಯವಾಸಿಗಳಾದ ಕುಂಬ್ರಿ ಮರಾಠಿಗರಿಗೆ ಕಾಡಿನ ಜೊತೆಗೆ ಒಂದು ಅವಿನಾಭಾವ ಸಂಬಂಧವಿದೆ. ಅರಣ್ಯ ಮತ್ತು ಸಮುದಾಯಗಳ ನಡುವಿನ ಸಂಬಂಧವೇ ಅಪರೂಪದ್ದು. 'ಭಾರತದ ಸಾಮಾಜಿಕ ಸಂದರ್ಭದಲ್ಲಿ ಅರಣ್ಯ ಮತ್ತು ಸಮುದಾಯಗಳ ಸಂಬಂಧ ಅವಿಚ್ಛಿನ್ನವಾದದ್ದು. ಅರಣ್ಯಗಳು ಸ್ಥಳೀಯ ಸಮುದಾಯಗಳ ಬದುಕಿನ ಭಾಗವಾಗಿಯೇ ಪರಿಭಾವಿಸಲ್ಪಟ್ಟಿವೆ. ಈ ಸಮುದಾಯಗಳು, ಅರಣ್ಯಗಳನ್ನು ಕೇವಲ ಮಳೆ ಸುರಿಸುವ ಮತ್ತು ಹಸಿರಿನಿಂದ ಕಂಗೊಳಿಸಿ ಮನಸ್ಸಿಗೆ ಮುದ ನೀಡುವ ಭೂಭಾಗಗಳನ್ನಾಗಿ ಮಾತ್ರ ಪರಿಗಣಿಸಿರಲಿಲ್ಲ. ಸಮುದಾಯಗಳ ಸಂಸ್ಕೃತಿ ಮತ್ತು ಆಧ್ಯಾತ್ಮಿಕ ಜಗತ್ತನ್ನು ಅರಣ್ಯಗಳು ರೂಪಿಸುತ್ತಲೇ ಬಂದಿವೆ. ಈ ಕಾರಣದಿಂದಾಗಿ ಸಮುದಾಯಗಳು ಯಾವತ್ತೂ ಅರಣ್ಯವನ್ನು ಉಪಯೋಗವಾದಿ ದೃಷ್ಟಿಕೋನದಿಂದ ನೋಡುವ ಪರಿಪಾಠವನ್ನು ಬೆಳೆಸಿಕೊಂಡಿರಲಿಲ್ಲ. ಅರಣ್ಯಗಳು ಸಮುದಾಯಗಳ

ಬದುಕಿನ ಅವಿಭಾಜ್ಯ ಅಂಗಗಳಾಗಿದ್ದವು. ಜೊತೆಗೆ ಅರಣ್ಯವು ಒಂದು 'ಆಸ್ತಿ'ಯಾಗಿ ಪರಿಗಣಿಸಲ್ಪಟ್ಟಿರಲಿಲ್ಲ. ಅರಣ್ಯವು ಆಧ್ಯಾತ್ಮವಾಗಿ, ತಿಳಿವಿನ ಮೂಲವಾಗಿ, ಮನುಷ್ಯನ ಯಾವತ್ತೂ ಸಂಗಾತಿಯಾಗಿ ಸಮುದಾಯಗಳ ಬದುಕಲ್ಲಿ ಹಾಸುಹೊಕ್ಕಾಗಿತ್ತು. ಈ ಹಂತದಲ್ಲಿ ಅರಣ್ಯ ಉಪಭೋಗಕ್ಕೆ ಒಳಗಾಗಿರಲಿಲ್ಲ. ಹಾಗಿದ್ದೂ ಸಹ ಸಮುದಾಯದ ಆರ್ಥಿಕತೆಯನ್ನು ರೂಪಿಸುವಲ್ಲಿ ಅರಣ್ಯ ಉಪಯುಕ್ತ ಪಾತ್ರ ವಹಿಸುತ್ತಲೇ ಇತ್ತು. ಮನುಷ್ಯನ ಸಾಮಾಜಿಕ ಸಂಸ್ಥೆಗಳಾದ ಬೇಟೆ, ಪಶುಪಾಲನೆ ಮತ್ತು ಆದಿಮ ಕೃಷಿ ಹಂತಗಳಲ್ಲಿ ಅರಣ್ಯ ಬಳಕೆಯಾಗುತ್ತಿತ್ತು. ಆದರೆ ಇಂದಿನಂತೆ ಖಿಲಗೊಳ್ಳುವ ಸ್ವರೂಪದಲ್ಲಿ ಬಳಕೆಯಾಗುತ್ತಿರಲಿಲ್ಲ. ಆದಿಮಾನವ ಅಥವಾ ಇಂದಿನ ಆದಿವಾಸಿಗಳು ರೂಢಿಸಿಕೊಂಡಿದ್ದ ಕುಮ್ರಿ ಬೇಸಾಯ ಪದ್ಧತಿಯು ಅರಣ್ಯದ ಸಾವಯವತೆಯನ್ನು ನಾಶ ಮಾಡುವಂತದ್ದಲ್ಲ. ಬದಲಿಗೆ ಅರಣ್ಯವನ್ನು ಮತ್ತು ಅದರ ಸಾವಯವತೆಯನ್ನು ಈ ಕುಮ್ರಿ ಕೃಷಿ ಪದ್ಧತಿಯು ಪೋಷಿಸುತ್ತಿತ್ತು. ಈ ಕಾರಣದಿಂದ ಭಾರತದ ಸ್ಥಳೀಯ ಸಮುದಾಯಗಳಿಗೆ ಅರಣ್ಯವು ಭೋಗಿಸಲ್ಪಡುವ ಆಸ್ತಿಯಲ್ಲ. ಅರಣ್ಯದ ಮೇಲೆ ಖಾಸಗಿ ಒಡೆತನವೂ ಈ ಸಮುದಾಯಗಳಿಗೆ ಸಾಧ್ಯವಾಗಲಿಲ್ಲ. ಕರ್ನಾಟಕದಲ್ಲಿ ಸೋಲಿಗ, ಬೆಟ್ಟಕುರುಬ, ನಾಯಕ, ಎರವ, ಕುಣಬಿ, ಕುಮ್ರಿ ಮರಾಟಿ, ಮರಾಟಿ ನಾಯಕ, ಕೊರಗ, ಕುಡಿಯ, ಗೌಡಲು, ಹಸಲ ಮತ್ತು ಹಾಲಕ್ಕಿ ಒಕ್ಕಲಿಗರು ಈ ಕುಮ್ರಿ ಬೇಸಾಯ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿವೆ. ಆಧುನಿಕಪೂರ್ವ ಕಾಲಘಟ್ಟದವರೆಗೆ ಭಾರತದಲ್ಲಿ ಈ ಸ್ಥಿತಿ ಮುಂದುವರಿದುಕೊಂಡು ಬಂದಿತು. ಆದರೆ ವಸಾಹತು ಆಡಳಿತ ಯಾವತ್ತು ಭಾರತವನ್ನು ಸಂಪೂರ್ಣವಾಗಿ ಆಕ್ರಮಿಸಿಕೊಂಡಿತೋ ಅಂದಿನಿಂದ ಅರಣ್ಯವು ಆಸ್ತಿಯಾಗಿ ರೂಪಾಂತರಗೊಂಡಿತು. ಬುಡಕಟ್ಟುಗಳ ಕುಮ್ರಿ ಬೇಸಾಯ ಪದ್ಧತಿಯನ್ನು ನಿಷೇಧಿಸಲಾಯಿತು. ಬುಡಕಟ್ಟುಗಳು ಕುಮ್ರಿ ಬೇಸಾಯ ಮಾಡುತ್ತಿದ್ದ ಕಣಿವೆಗಳನ್ನು ವಸಾಹತು ಆಡಳಿತ ವಶಪಡಿಸಿಕೊಂಡಿತು. ಮಾರುಕಟ್ಟೆಯಲ್ಲಿ ಬಿಕರಿಯಾಗುವ 'ವಸ್ತು'ವಾಗಿ ಅರಣ್ಯ ಪರಿಭಾವಿಸಲ್ಪಟ್ಟಿತು. ವಸಾಹತುಶಾಹಿ ಆಳ್ವಿಕೆಯಲ್ಲಿ ಸಮುದಾಯಗಳ ಬದುಕಿನ ಭಾಗವಾಗಿದ್ದ ಅರಣ್ಯವು ಸರಕಾರದ, ಬಂಡವಾಳಶಾಹಿಗಳ ಖಾಸಗಿ ಆಸ್ತಿಯಾಗಿ ಬದಲಾಯಿತು. ಇದರ ಜೊತೆಗೆ ಸಮುದಾಯ ಮತ್ತು ಅರಣ್ಯಗಳ ನಡುವೆ ಇದ್ದ ಪಾರಂಪರಿಕ ಸಂಬಂಧಗಳಿಗೂ ಈ ಹಂತದಲ್ಲಿ ಸಂಚಕಾರ ಬಂದೊದಗಿತು. ಅರಣ್ಯವು ಕಂಪನಿ ಆಡಳಿತದ ಸಂದರ್ಭದಲ್ಲಿ ಉಪಭೋಗಕ್ಕೆ ಒಳಗಾಗತೊಡಗಿತು. ಅರಣ್ಯವು ವಸಾಹತು ಆಡಳಿತದ ವಿಸ್ತರಣೆಗೆ ಬಳಕೆಯಾಗತೊಡಗಿದ ಮೇಲೆ ಸಮುದಾಯ ಮತ್ತು ಅರಣ್ಯಗಳ ನಡುವಿನ ಪಾರಂಪರಿಕ ಸಂಬಂಧವು ಕ್ರಮೇಣ ನಶಿಸತೊಡಗಿತು. ಅದರಲ್ಲೂ ಅರಣ್ಯಗಳಲ್ಲಿ ಬದುಕುತ್ತಿದ್ದ ಆದಿವಾಸಿಗಳು ವಸಾಹತು ಆಡಳಿತದ ಅರಣ್ಯ ನೀತಿಗಳಿಂದ ಅತಂತ್ರ ಸ್ಥಿತಿಗೆ ತಳ್ಳಲ್ಪಟ್ಟರು. ಅರಣ್ಯವನ್ನು ಸರ್ವಸ್ವವೆಂದು ಬದುಕುತ್ತಿದ್ದ ಆದಿವಾಸಿಗಳು ವಸಾಹತು ಆಡಳಿತದ

ಅರಣ್ಯನೀತಿಯಿಂದಾಗಿ ತಮ್ಮ ವಾಸದ ನೆಲೆಗಳಲ್ಲಿಯೇ ಅನ್ಯರಾಗುವ ಬಿಕ್ಕಟ್ಟನ್ನು ಎದುರಿಸಿತ್ತಿದ್ದಾರೆ.[೫] ಆದರೆ ಕುಂಬ್ರಿ ಮರಾಠಿ, ಕುಣಬಿಗಳಂತಹ ಸಮುದಾಯಗಳು ಇನ್ನೂ ಕಾಡನ್ನೇ ಅವಲಂಬಿಸಿ ಬದುಕುತ್ತಿವೆ. ಅರಣ್ಯದಲ್ಲಿ ನೈಸರ್ಗಿಕವಾಗಿ ಸಿಗುವ, ಚಿಕ್ಕಪುಟ್ಟ ಅರಣ್ಯ ಉತ್ಪನ್ನಗಳೆನ್ನಿಸಿದ ಹಣ್ಣು-ಹಂಪಲ, ಗಡ್ಡೆ-ಗೆಣಸು ಹಾಗೂ ಗಿಡಮೂಲಿಕೆ ಸಸ್ಯಗಳನ್ನು ಹಿಂದಿನಿಂದಲೂ ಕುಂಬ್ರಿ ಮರಾಠಿಗರ ಸಂಗ್ರಹಿಸುತ್ತಿದ್ದರು. ಇದರೊಟ್ಟಿಗೆ ಉರುವಲು ಕಟ್ಟಿಗೆ, ಬಿದಿರು, ಮೆಳೆ, ಅರಗು, ನಾರು, ಮೇಣ, ಜೇನುತುಪ್ಪ, ಔಷಧೀಯ ಸಸ್ಯಗಳು, ಗಿಡಬಳ್ಳಿಗಳು, ಹೂಬಳ್ಳಿ ಮುಂತಾದ ವಸ್ತುಗಳೂ ದೊರೆಯುತ್ತಿದ್ದವು. ಈ ರೀತಿ ಅರಣ್ಯ ಉತ್ಪನ್ನಗಳು ಕುಂಬ್ರಿ ಮರಾಠಿಗಳಿಗೆ ಬಹುಮಟ್ಟಿಗೆ ಜೀವನ ನಿರ್ವಹಣೆಯ ಆಧಾರವಾಗಿದ್ದವು. ಅವರು ಅರಣ್ಯಗಳಲ್ಲಿಯೇ ವಾಸಿಸುತ್ತಿದ್ದಾಗ ತಮ್ಮ ಜೀವನಾವಶ್ಯಕ ವಸ್ತುಗಳನ್ನು ಸರದಿ ಕೃಷಿ ಮತ್ತು ಆಹಾರ ಸಂಗ್ರಹಣೆಯಿಂದ ಪಡೆಯುತ್ತಿದ್ದರು. ಅರಣ್ಯ ಸಂಪತ್ತಿನಿಂದಲೇ, ಕೃಷಿ ಉಪಕರಣ, ಗೃಹ ನಿರ್ಮಾಣ ವಸ್ತುಗಳು, ಉರುವಲು, ಸಂಗೀತ-ವಾದ್ಯ ನಿರ್ಮಾಣ ವಸ್ತುಗಳನ್ನು ಪಡೆಯುವರು. ಅರಣ್ಯದಲ್ಲಿ ಪ್ರಾಣಿ ಬೇಟೆಯಾಡಿ ಮಾಂಸಾಹಾರವನ್ನೂ ಪಡೆಯುತ್ತಿದ್ದರು. ಬಹುಶಃ ಕೃಷಿ ಜಾರಿಗೆ ಬಂದ ಪ್ರಥಮದಲ್ಲಿ ಯಾವ ರೀತಿಯ ಕೃಷಿ ಪದ್ಧತಿ ಇತ್ತೋ ಅಂಥ ಪಾರಂಪರಿಕ ಪದ್ಧತಿ ಕುಣಬಿಯರಲ್ಲಿ ಇತ್ತೀಚಿಗಿನವರೆಗೂ ಜಾರಿಯಲ್ಲಿದೆ ಎಂಬುದೇ ಒಂದು ವಿಶೇಷ. ಅದೇ 'ಕುಮರಿ ಬೇಸಾಯ' ಅಥವಾ 'ಸ್ಥಳಾಂತರ ಕೃಷಿ'. ಈ ಕುಮ್ರಿ ಬೇಸಾಯ ಭಾರತದ ಅನೇಕ ಅರಣ್ಯವಾಸಿ ಸಮುದಾಯಗಳ ಪಾರಂಪರಿಕ ಕೃಷಿ ಪದ್ಧತಿಯಾಗಿದೆ. ಆದರೆ, ವಸಾಹತು ಆಡಳಿತದ ಕೃಷಿ ಪದ್ಧತಿ ಮತ್ತು ಅವರು ತಂದ ಭೂಸಂಬಂಧಿ ಕಾಯ್ದೆಗಳು ಸ್ಥಳಾಂತರ ಬೇಸಾಯ ಪದ್ಧತಿಯನ್ನು ನಿಷೇಧಿಸಿದವು. ಆದರೆ ಕೆಲವು ಸಮುದಾಯಗಳು ದಟ್ಟ ಅಡವಿ ಮತ್ತು ಕಣಿವೆಗಲ್ಲಿ ಕುಮ್ರಿ ಬೇಸಾಯ ಕ್ರಮವನ್ನು ಅನುಸರಿಸಿಕೊಂಡು ಬಂದ ಉದಾಹರಣೆಗಳಿವೆ. ಕುಂಬ್ರಿ ಮರಾಠಿಗರು ಇತ್ತೀಚಿನವರೆಗೂ ಈ ಪಾರಂಪರಿಕ ಕೃಷಿ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿದ್ದರು ಎಂಬುದಕ್ಕೆ ಅನೇಕ ಪುರಾವೆಗಳು ಸಿಗುತ್ತವೆ. ಮತ್ತೊಂದು ಸಂಗತಿಯೆಂದರೆ ಸರಕಾರವೇ ಈ ಕೃಷಿ ಪದ್ಧತಿಯನ್ನು ನಿಲ್ಲಿಸುವಂತೆ ಪ್ರತಿಬಂಧ ಒಡ್ಡಿದೆ. ಈ ಸರದಿ ಕೃಷಿ ಪದ್ಧತಿಗೆ ಸ್ಥಳೀಯವಾಗಿ 'ಕುಮರಿ ಬೇಸಾಯ' ಎನ್ನುತ್ತಾರೆ. ಈ 'ಕುಮರಿ' ಎಂಬ ಶಬ್ದದಿಂದ ಇವರಿಗೆ ಕುಮ್ರಿ ಮರಾಠಿ, ಕುಂಬ್ರಿ ಮರಾಠಿ ಎಂಬ ಹೆಸರು ಬಂದಿದೆ. ಈ ಪಾರಂಪರಿಕ ಕೃಷಿ ಪದ್ಧತಿಯಲ್ಲಿ ಕುಂಬ್ರಿ ಮರಾಠಿಗರು ಮಳೆಗಾಲಕ್ಕಿಂತ ಮುಂಚೆಯೇ ಗಿಡಗಂಟೆಗಳನ್ನು ಕಡಿದು ಸುಡುವುದರ ಮೂಲಕ ಅರಣ್ಯ ಭೂಮಿಯನ್ನು ಕೃಷಿಗೆ ಅಣಿಗೊಳಿಸಿ ಬೀಜ ಬಿತ್ತುವರು. ಸಾಮಾನ್ಯವಾಗಿ ಬೆಟ್ಟಗುಡ್ಡಗಳ ಇಳಿಜಾರು ಪ್ರದೇಶಗಳಾದ ಕಣಿವೆಗಳಲ್ಲಿ ಕುಮ್ರಿ ಬೇಸಾಯ ಸುಲಭ. ಈ ಪ್ರದೇಶದ ಸುತ್ತಲೂ ಕಡಿಯದಿರುವ ಗಿಡಮರಗಳ ರಕ್ಷಣಾವ್ಯೂಹ ನಿರ್ಮಾಣಗೊಳ್ಳುವುದು. ಈ ಸರದಿ ಕೃಷಿ

ಪ್ರದೇಶವನ್ನು ಪ್ರತಿ ಎರಡು-ಮೂರು ವರ್ಷಗಳಿಗೊಮ್ಮೆ ಬದಲಾಯಿಸುತ್ತಾರೆ. ಕುಂಬ್ರಿ ಮರಾಠಿ ಸಮುದಾಯದವರು ಕುಮರಿ-ಕೃಷಿಗಾಗಿ ತಮ್ಮ ವಾಸಸ್ಥಳವನ್ನು ಆಗಾಗ ಬದಲಾಯಿಸುತ್ತ ಹೊಸ ಸ್ಥಳ ಹುಡುಕಿಕೊಂಡು ಹೋಗುತ್ತಾರೆ. ಈ ತರಹದ ಕೃಷಿಯಲ್ಲಿ ಬಹುತೇಕ ಬೆಳೆಯುವ ಪ್ರಮುಖ ಬೆಳೆಗಳೆಂದರೆ – ಚಿಕ್ಕ ಕಾಳುಗಳಾದ ನವಣೆ, ಸಜ್ಜೆ, ಎಳ್ಳು, ರಾಗಿ, ಅರಿಷಣ ಮತ್ತು ವಿವಿಧ ಕಾಯಿಪಲ್ಲೆ, ಗಡ್ಡೆಗೆಣಸುಗಳನ್ನು ಇವರು ಬೆಳೆಯುತ್ತಾರೆ. ಈ ತರಹದ ಕೃಷಿ ವ್ಯವಸಾಯಕ್ಕೆ ಹಾರೆ, ಗುದ್ದಲಿ, ಪಿಕಾಸಿ, ಸಲಿಕೆ ಮುಂತಾದ ಸರಳ ಸಾಮಾನ್ಯ ಕೃಷಿ ಉಪಕರಣ ಬಳಸಿಕೊಳ್ಳುವರು. ದುಂಡಗಿನ ಆಕೃತಿಯ ಆರು ಮೀಟರ್ ವ್ಯಾಸದ ಹಗೇವುಗಳನ್ನು ನಿರ್ಮಿಸಿ ಬೆಳೆಗಳ ಕಾಳುಗಳನ್ನು ರಕ್ಷಿಸಿಕೊಳ್ಳುತ್ತಾರೆ. ಇದು ಅತ್ಯಂತ ಪ್ರಾಚೀನ ಬೀಜ ಸಂರಕ್ಷಣಾ ಕ್ರಮವಾಗಿದೆ. ಇದಲ್ಲದೆ ಕೊಂಕಣಿ, ಕನ್ನಡ ಮತ್ತು ಮರಾಠಿ ಭಾಷಿಕ ಪ್ರದೇಶಗಳಿಂದ ವಲಸೆ ಬಂದ ಸಮುದಾಯಗಳ ಅಲೆಮಾರಿತನ ರೂಪುಗೊಂಡಂದೇ ಈ ಕಾರಣಕ್ಕಾಗಿ ಎಂದು ಸ್ಟೀಫನ್ ಫೋಕ್ಸ್ ಹೇಳುತ್ತಾನೆ. 'ಸರದಿ ಕೃಷಿಯು ಕುಣಬಿ ಬುಡಕಟ್ಟು ಸಮುದಾಯ-ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದ್ದು, ಅವರ ಆರ್ಥಿಕ ಸ್ಥಿತಿ ಹಾಗೂ ಮಾನಸಿಕ ಧೋರಣೆಯ ಮೇಲೆ ನಿಶ್ಚಿತ ಪರಿಣಾಮ ಬೀರುತ್ತದೆ.'[1] ದಕ್ಷಿಣ ಭಾರತದ ಜಾತಿ ಸಮುದಾಯಗಳಲ್ಲಿ ಸ್ಥಳಾಂತರ ಕೃಷಿ ಪದ್ಧತಿಯು ಅವರ ಬದುಕನ್ನು ಅಲೆಮಾರಿಯಾಗಿಸಿದೆ. 'ಸ್ಥಳಾಂತರ ಬೇಸಾಯ' ಈ ಸಮುದಾಯಗಳ ಪ್ರಮುಖ ಉದ್ಯೋಗವಾಗಿದ್ದು, ಅಲ್ಲಲ್ಲಿ ಕೆಲವರು ಮಾತ್ರ ಕಾಚು ತಯಾರಿಕೆಯ ಉಪವ್ಯವಸಾಯದಲ್ಲಿ ತೊಡಗಿಕೊಂಡಿರುತ್ತಾರೆ.[2] ಎನ್ನುತ್ತಾನೆ ಥರ್ಸಟನ್. ಆದರೆ ಯಾವಾಗ ಅರಣ್ಯಕ್ಕೆ ಸಂಬಂಧಿಸಿದ ಕಾನೂನುಗಳನ್ನು ವಸಾಹತು ಆಡಳಿತ ರೂಪಿಸಿತೋ ಅಲ್ಲಿಂದ ಈ ಸಮುದಾಯಗಳ ಪಾರಂಪರಿಕ ಕಸಬುಗಳಿಗೆ ಕಂಟಕಗಳು ಪ್ರಾರಂಭವಾದವು. 'ರಾಷ್ಟ್ರೀಯ ಉದ್ಯಾನಗಳು ಭಾರತದಲ್ಲಿ ವಸಾಹತು ಕಾಲಘಟ್ಟದಲ್ಲಿಯೇ ಹೆಸರಿಸಲ್ಪಟ್ಟವು. ಆದರೆ 1972 Wild life Profection Act ರಾಷ್ಟ್ರೀಯ ಉದ್ಯಾನಗಳಿಗೆ ಆಧುನಿಕವೆನ್ನಿಸುವ ಸ್ವರೂಪವನ್ನು ಕಲ್ಪಿಸಿತು. ಈ ಕಾಯ್ದೆಯು ಅರಣ್ಯವನ್ನು ಒಂದು ಸ್ವಯಂಪೂರ್ಣ ಮತ್ತು ಸಾಪೇಕ್ಷ ಸಂಗತಿಯನ್ನಾಗಿ ಪರಿಗಣಿಸಿತು. ಅಲ್ಲದೆ ಭಾರತದ ಬಹುಮುಖ್ಯ ಅರಣ್ಯಗಳ ಉಸ್ತುವಾರಿಯನ್ನು ವಿಶ್ವಬ್ಯಾಂಕ್‌ನಂತಹ ಜಾಗತಿಕ ಸಂಸ್ಥೆಗಳು ವಹಿಸಿಕೊಂಡವು. ಜೊತೆಗೆ ಅರಣ್ಯ ಕಾಯ್ದೆಗಳೂ ಸಹ ಹೆಚ್ಚು ಬಿಗಿಯಾದವು. ಅದರಲ್ಲೂ ರಾಷ್ಟ್ರೀಯ ಉದ್ಯಾನಗಳ ಕುರಿತ ಕಾಯ್ದೆಯು ಅರಣ್ಯವನ್ನು ಅದರೊಳಗೆ ಜೀವಿಸುವ ಆದಿವಾಸಿಗಳಿಂದ ರಕ್ಷಿಸಬೇಕು, ರಾಷ್ಟ್ರೀಯ ಉದ್ಯಾನದೊಳಗೆ ಜನವಸತಿಗಳಿರಕೂಡದು ಎಂಬ ನಿಲುವನ್ನು ಉಗ್ರವಾಗಿ ಪ್ರತಿಪಾದಿಸಿತು. ಇದರಿಂದಾಗಿ ಆದಿವಾಸಿಗಳ ಬದುಕೇ ಅತಂತ್ರ ಸ್ಥಿತಿಗೆ ದೂಡಲ್ಪಟ್ಟಿತು. ಶತಮಾನಗಳ ಕಾಲ ತಾವು ಬದುಕಿ ಬಂದಿದ್ದ ಪರಿಸರವನ್ನು ಆದಿವಾಸಿಗಳು

ಕಳೆದುಕೊಳ್ಳತೊಡಗಿದರು. ರಾಷ್ಟ್ರೀಯ ಉದ್ಯಾನಗಳ ಸೃಷ್ಟಿಯ ತತ್‌ಕ್ಷಣದ ಪರಿಣಾಮವೆಂದರೆ, 'ರಕ್ಷಿತ ಅರಣ್ಯಗಳಿಂದ' ಆದಿವಾಸಿಗಳ ಎತ್ತಂಗಡಿ.

ಒಂದೆಡೆ ಸರಕಾರದ ಉದ್ದೇಶಿತ ಅರಣ್ಯ ಸಂರಕ್ಷಣೆ, ಇನ್ನೊಂದೆಡೆ ಅರಣ್ಯದಲ್ಲಿನ ಆದಿವಾಸಿಗಳ ಅಸ್ತಿತ್ವದ ಪ್ರಶ್ನೆ. ಅರಣ್ಯವನ್ನು ರಕ್ಷಿಸುವ ಮತ್ತು ಅಭಿವೃದ್ಧಿಪಡಿಸುವ ಸರಕಾರದ ಉದ್ದೇಶಗಳಿಗೆ ಮತ್ತು ಆದಿವಾಸಿಗಳ ಸಾಮಾಜಿಕಾರ್ಥಿಕ ಬದುಕಿನ ಅಸ್ತಿತ್ವದ ಕುರಿತ ಬಿಕ್ಕಟ್ಟುಗಳಿಗೆ ಯಾವತ್ತೂ ಸಂಘರ್ಷಾತ್ಮಕ ಮುಖಾಮುಖಿ ನಡೆಯುತ್ತಲೇ ಬಂದಿದೆ. ಅರಣ್ಯವನ್ನು ತಮ್ಮ ಜೀವನ ನಿರ್ವಹಣೆಗಾಗಿ ಯಾವತ್ತೂ ಅವಲಂಬಿಸಿಕೊಂಡು ಬಂದ ಆದಿವಾಸಿಗಳು ರಾಷ್ಟ್ರೀಯ ಉದ್ಯಾನ ಕಾಯ್ದೆಯ ಪ್ರಕಾರ ಅರಣ್ಯವನ್ನು ಯಾವ ಕಾರಣಗಳಿಗೂ ಬಳಸುವಂತಿಲ್ಲ. ಅರಣ್ಯದ ಉತ್ಪನ್ನಗಳನ್ನು ಸಂಗ್ರಹಿಸುವ, ಅದನ್ನು ಮಾರಾಟ ಮಾಡುವ ಆದಿವಾಸಿಗಳ ಪಾರಂಪರಿಕ ಹಕ್ಕುಗಳನ್ನು ರಾಷ್ಟ್ರೀಯ ಉದ್ಯಾನ ನೀತಿ ಕಿತ್ತುಕೊಂಡಿತು. ಅಷ್ಟೇ ಅಲ್ಲದೆ ಅರಣ್ಯದಲ್ಲಿ ಜನವಸತಿಗಳಿರಕೂಡದು ಎಂದು ಆದಿವಾಸಿಗಳನ್ನು ರಾಷ್ಟ್ರೀಯ ಉದ್ಯಾನಗಳಿಂದ ಒಕ್ಕಲೆಬ್ಬಿಸುವುದು ಸರ್ವೇಸಾಮಾನ್ಯ ಸಂಗತಿಯಾಯಿತು. 'ನಾಗರಿಕ ಜಗತ್ತಿನಿಂದ' ದೂರವಿದ್ದ, ಕಾಡನ್ನೇ ಆಶ್ರಯಿಸಿದ್ದ ಆದಿವಾಸಿಗಳು ಈ ಒಕ್ಕಲೆಬ್ಬಿಸುವಿಕೆಯಿಂದ ದಿಕ್ಕೆಟ್ಟು ಹೋದರು. ದೇಶದ ಕೆಲವೆಡೆ ಆದಿವಾಸಿಗಳು ಈ ಅರಣ್ಯ ನೀತಿಯ ವಿರುದ್ಧ ಹೋರಾಟಗಳನ್ನೂ ಕೈಗೊಂಡರು. ಸರಕಾರಗಳು ಒಕ್ಕಲೆದ್ದ ಆದಿವಾಸಿಗಳಿಗೆ ಸರಿಯಾಗಿ ಪುನರ್ವಸತಿ ಕಲ್ಪಿಸಲಿಲ್ಲ. ಹೀಗೆ ಸ್ವಾತಂತ್ರ್ಯಾನಂತರ ವಿವಿಧ ಅಭಿವೃದ್ಧಿ ಯೋಜನೆಗಳಿಂದ ಒಕ್ಕಲೆದ್ದ ಸುಮಾರು 21.3 ಮಿಲಿಯನ್ ಜನರಲ್ಲಿ 8.54 ಮಿಲಿಯನ್ ಜನ ಆದಿವಾಸಿಗಳಿದ್ದಾರೆ. ಇವರು ತಮ್ಮ ಪಾರಂಪರಿಕ ವಾಸದ ನೆಲೆಗಳನ್ನು ಮಾತ್ರವಲ್ಲದೆ ಜೀವಿಸುವ ಹಕ್ಕನ್ನೂ ಕಳೆದುಕೊಂಡು ನಿರ್ಗತಿಕರಾಗಿದ್ದಾರೆ. ಏಕೆಂದರೆ ಆದಿವಾಸಿಗಳ ಬಳಿ ನಾಗರಿಕ ಆಡಳಿತ ವ್ಯವಸ್ಥೆ ಕೇಳುವ ಹಕ್ಕು ಪತ್ರಗಳಾಗಲಿ, ಕಾನೂನು ಬದ್ಧ ಒಡೆತನದ ಸಾಕ್ಷಿಗಳಾಗಲಿ ಇರುವುದಿಲ್ಲ. ಈ ಕಾರಣಕ್ಕಾಗಿ ಆದಿವಾಸಿಗಳು 'ಮುಖ್ಯವಾಹಿನಿ'ಯ ಜನರಿಂದ ಅನೇಕ ಬಗೆಯ ಶೋಷಣೆಗಳಿಗೆ ಒಳಗಾಗುವ ಸಂದರ್ಭಗಳು ತಲೆದೋರುತ್ತಾ ಬಂದಿವೆ.'[೮] ನೂತನ ಅರಣ್ಯ ನೀತಿ ಹಾಗೂ ಅರಣ್ಯ ಭೂಮಿ ಅತಿಕ್ರಮಣ, ಅರಣ್ಯ ನಾಶ, ಹೊರಗಿನವರ ಅಕ್ರಮ ಪ್ರವೇಶ ಹಾಗೂ ಆಧುನೀಕರಣ ಪ್ರಕ್ರಿಯೆಯಿಂದಾಗಿ ಕುಂಬ್ರಿ ಮರಾಠಿ ಸಮುದಾಯದವರು ನಿಧಾನವಾಗಿ ಅರಣ್ಯ ಪ್ರದೇಶದಿಂದ ದೂರ ಸರಿಯುತ್ತ, ಗ್ರಾಮಗಳಲ್ಲಿ ಬೆಟ್ಟದ ಸಮೀಪದ ಇಳಿಜಾರು ಪ್ರದೇಶಗಳಲ್ಲಿ ನೆಲೆನಿಂತರು. ಆದರೆ ಸ್ವಾತಂತ್ರ್ಯ ನಂತರ ಇವರ ಸ್ಥಿತಿ ಉತ್ತಮಗೊಳ್ಳಲಿಲ್ಲ. 'ಸ್ವಾತಂತ್ರ್ಯನಂತರ, ಅರಣ್ಯ ಮತ್ತು ಆದಿವಾಸಿಗಳನ್ನು ಜೊತೆಯಲ್ಲೇ ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಯೋಜನೆಗಳನ್ನು ರೂಪಿಸಲು ಅನೇಕ ಆಯೋಗಗಳನ್ನು ಭಾರತ ಸರ್ಕಾರ ನೇಮಿಸಿದೆ. ಸ್ವತಃ ನೆಹರು ಆದಿವಾಸಿಗಳನ್ನು ಅಪಾರವಾಗಿ ಪ್ರೀತಿಸುತ್ತಿದ್ದರು. ಬುಡಕಟ್ಟುಗಳ ಜೊತೆಗೇ ಬದುಕಿದ

ವೆರಿಯರ್ ಎಲ್ವಿನ್ ಆದಿವಾಸಿಗಳ ಸಹಜ ಬದುಕನ್ನು ಅವರ ಪರಿಸರದಲ್ಲಿಯೇ ಉಳಿಸಿ ಬೆಳೆಸುವ ಮೂಲಕ ಅವರ ಅಭಿವೃದ್ಧಿಯನ್ನು ಹೇಗೆ ಸಾಧಿಸಬಹುದು ಎಂಬುದನ್ನು ನೆಹರುರವರಿಗೆ ಮನವರಿಕೆ ಮಾಡಿಕೊಟ್ಟರು. ಈ ಹಿನ್ನೆಲೆಯಲ್ಲಿ ಆದಿವಾಸಿಗಳ ಅಭಿವೃದ್ಧಿಗಾಗಿ ಪಂಚಶೀಲ ತತ್ವಗಳನ್ನ ನೆಹರು ರೂಪಿಸಿದರು. ಅಲ್ಲದೆ ಆದಿವಾಸಿಗಳ ಕಾಡಿನ ಮುಗ್ಧ ಪರಿಸರವನ್ನು ಹೊರಗಿನ ಜನ ಯಾವ ಕಾರಣಕ್ಕೂ ಕದಡಬಾರದೆಂದು ನೆಹರು ಪದೇ ಪದೇ ತಮ್ಮ ಭಾಷಣಗಳ ಮೂಲಕ ಕರೆ ನೀಡುತ್ತಿದ್ದರು. ಆದಿವಾಸಿಗಳು ಕಾಡಲ್ಲಿಯೇ ಇದ್ದು, ಅವರಷ್ಟಕ್ಕೆ ಅವರು ಅಭಿವೃದ್ಧಿಯ ಕಡೆಗೆ ನಡೆದು ಹೋಗಬೇಕೆಂದು ನೆಹರು ಬಯಸುತ್ತಿದ್ದರು. ಅವರ ಕಾಲದಲ್ಲಿಯೇ ಮೊದಲ ಬಾರಿಗೆ ಅರಣ್ಯ ಮತ್ತು ಆದಿವಾಸಿಗಳ ಪಾರಂಪರಿಕ ಸಂಬಂಧದ ಕುರಿತು ವೈಜ್ಞಾನಿಕ ವರದಿಯನ್ನು ಸಿದ್ಧಪಡಿಸಲು ಢೇಬರ್ ಆಯೋಗವನ್ನು ನೇಮಿಸಲಾಯಿತು. ಆನಂತರ ಅನೇಕ ಆಯೋಗಗಳು ಸ್ವಾತಂತ್ರ್ಯಾನಂತರ ನೇಮಿಸಲ್ಪಟ್ಟವೆ. ಆದಿವಾಸಿಗಳು ಅರಣ್ಯದ ಜೊತೆ ಹೊಂದಬಹುದಾದ ಸಂಬಂಧ ಮತ್ತು ಈ ಸಂಬಂಧದ ಕುರಿತು ಸರ್ಕಾರ ಈಗಾಗಲೇ ಅಂಗೀಕರಿಸಿರುವ ಅರಣ್ಯ ನೀತಿಯಲ್ಲಿ ಇರಬಹುದಾದ ಅಡೆತಡೆಗಳನ್ನು ಸರಿಪಡಿಸುವ ಕುರಿತು ಅನೇಕ ಸಲಹೆ ಸೂಚನೆಗಳನ್ನು ಸರಕಾರ ರಚಿಸಿದ ಎಲ್ಲ ಆಯೋಗಗಳು ನೀಡಿವೆ. ಅರಣ್ಯ ಮತ್ತು ಆದಿವಾಸಿಗಳ ನಿತ್ಯದ ಸಂಬಂಧಗಳನ್ನು ಸುಧಾರಿಸುವ ನಿಟ್ಟಿನಲ್ಲಿ ಸರಕಾರ ರಚಿಸಿದ ಎಲ್ಲ ಆಯೋಗಗಳು ಮಹತ್ವದ ಶಿಫಾರಸ್ಸುಗಳನ್ನು ಮಾಡಿವೆ.[5] ಭಾರತದ ಬುಡಕಟ್ಟು ಸಮುದಾಯದವರು ವಿವಿಧ ಕಾರಣಗಳಿಂದ ದುರವಸ್ಥೆ ಹೊಂದಿ, ಅರಣ್ಯ ಪ್ರದೇಶದ ಸಂಪರ್ಕದಿಂದ ದೂರವಾಗುತ್ತಿದ್ದಾರೆ. ಈಗ ಕುಂಬ್ರಿ ಮರಾಠಿ ಸಮುದಾಯದವರು ಆಹಾರ ಸಂಗ್ರಹದ ಅಲೆದಾಟದಿಂದ ನೆಲೆನಿಂತು, ಕೃಷಿಯ ಕಾಯಕದಲ್ಲಿ ರೂಪಾಂತರ ಹೊಂದಿದ್ದಾರೆ. ಈ ಸ್ಥಿತ್ಯಂತರದಿಂದ ಕುಂಬ್ರಿ ಮರಾಠಿ ಸಮುದಾಯವು ನಿಧಾನವಾಗಿ ತಮ್ಮ ಕುಲಕಸಬುಗಳಲ್ಲಿ ಬದಲಾವಣೆಗಳನ್ನು ಮಾಡುತ್ತ ಬಂದಿದೆ. ಇದರಿಂದಾಗಿ ತಮ್ಮ ಸಾಂಪ್ರದಾಯಿಕ ಸ್ಥಳಾಂತರ ಬೇಸಾಯವನ್ನು ಬಿಟ್ಟುಕೊಟ್ಟು ಪರ್ಯಾಯ ಕೃಷಿಯನ್ನು ರೂಢಿಸಿಕೊಳ್ಳುತ್ತಿದ್ದಾರೆ. ಇವುಗಳೆಂದರೆ ಕೃಷಿ ಕೂಲಿ, ಬಾಡಿಗೆ ಕೃಷಿ, ಪಾಲು ಕೃಷಿದಾರರಾಗಿ ಜೀವನ ನಿರ್ವಹಿಸುತ್ತಿರುವರು. ಈ ಕೃಷಿ ಆಧಾರಿತ ಚಟುವಟಿಕೆಗಳಲ್ಲದೆ, ಕೆಲವರು ಬತ್ತದ ಗದ್ದೆ ಹಾಗೂ ಅಡಿಕೆ ತೋಟಗಳಲ್ಲಿ ಕಾವಲುಗಾರರಾಗಿ ಉಪಜೀವನ ನಡೆಸುತ್ತಿದ್ದಾರೆ ಮತ್ತೆ ಕೆಲವರು ಮನೆಯಾಳುಗಳಾಗಿ ದುಡಿಯುವುದನ್ನು ರೂಢಿಸಿಕೊಂಡಿದ್ದಾರೆ.

ಪ್ರಸ್ತುತ ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯ ಮಾಡಿದ ಸಂದರ್ಭದಲ್ಲಿ, ಕುಂಬ್ರಿ ಮರಾಠಿಗರು ಉತ್ತರಿಸಿದಂತೆ, ಕೃಷಿ ಕೂಲಿಯೇ ತಮ್ಮ ಪೂರ್ವಜರ ಮುಖ್ಯ ಕಸಬು ಎಂದಿರುವರು. ಅದಲ್ಲದೆ ತಮ್ಮ ಆದಾಯ ಹೆಚ್ಚಿಸಿಕೊಳ್ಳಲು ಬುಟ್ಟಿ, ಚಾಪೆ ಹೆಣೆಯುವಿಕೆ, ನೇಕಾರಿಕೆ, ಬೇಟೆ,

ಔಷಧೀಯ ಸಸ್ಯ ಗಿಡಮೂಲಿಕೆ ಸಂಗ್ರಹ ಹಾಗೂ ವಿತರಣೆ ಇವರ ಉಪಕಸಬುಗಳಾಗಿವೆ. ಈ ಕುಂಬ್ರಿ ಮರಾಠಿ ಸಮುದಾಯದಲ್ಲಿ ಅನೇಕರು ಸಾಂಪ್ರದಾಯಿಕ ವೈದ್ಯಕೀಯ ಸೇವೆ ಕೈಗೊಂಡಿದ್ದಾರೆ. ಇವರನ್ನು ಆಧುನಿಕ ಅರ್ಥದಲ್ಲಿ 'ಶಮನ್' ಎಂದು ಕರೆಯಲಾಗುತ್ತದೆ. ಇವರು ಗಿಡಬಳ್ಳಿ, ಮೂಲಿಕೆ, ಬೇರು, ನಾರು, ಒಣ ತೊಗಟೆಗಳನ್ನು ಔಷಧೀಯ ಗುಣ ಹೊಂದಿದ್ದರಿಂದ ಸ್ತ್ರೀಯರು ಸಂಗ್ರಹಿಸಿ ಹತ್ತಿರದ ನಗರಗಳಲ್ಲಿಯೂ ಮಾರಾಟ ಮಾಡುತ್ತಾರೆ. ಕುಂಬ್ರಿ ಮರಾಠಿ ಸಮುದಾಯದವರಿಗೆ ಔಷಧೀಯ ಗಿಡಮೂಲಿಕೆಗಳ ವಿತರಣೆಯ ಪರಿಣಿತಿ ಹಾಗೂ ಅನುಭವ ವಂಶ ಪಾರಂಪರ್ಯವಾಗಿ ಬಂದಿದೆ. ಕುಂಬ್ರಿ ಮರಾಠಿ ಸಮುದಾಯ ಹಿರಿಯ ಜೀವಿಗಳಿಗೆ ಔಷಧೀಯ ಸಸ್ಯಗಳ ಜ್ಞಾನ ಚೆನ್ನಾಗಿದೆ. ಇವರು ಯಾವಾಗಲೂ ಅರಣ್ಯ, ಬೆಟ್ಟ-ತಪ್ಪಲು ಪ್ರದೇಶದ ಮಡಿಲಲ್ಲಿ ಇರುವುದರಿಂದ ನಿತ್ಯೋಪಯೋಗಿ ಔಷಧೀಯ ಸಸ್ಯಗಳು ಹಾಗೂ ಮೂಲಿಕೆಗಳು ಯಾವಾಗಲೂ ಹೇರಳವಾಗಿ ದೊರೆಯುತ್ತವೆ. ಕಾಡುಗಳ ನಾಶದಿಂದ, ನಗರೀಕರಣದ ಚಟುವಟಿಕೆಗಳಿಂದ ಔಷಧೀಯ ಸಸ್ಯಗಳು ನಾಶವಾಗುತ್ತಿವೆ. ಅಲೆಮಾರಿಗಳು, ವಲಸಿಗ ಸಮುದಾಯಗಳು ಅವಲಂಬಿಸಿದ್ದ, ಆಹಾರ ಸಂಗ್ರಹಣೆಯಾಗಲೀ, ಬೇಟೆಯಾಗಲೀ ಅಥವಾ ಕುಮರಿ ಕೃಷಿಯಾಗಲೀ ಚಾರಿತ್ರಿಕವಾಗಿ ಅನೇಕ ಸ್ಥಿತ್ಯಂತರಗಳಿಗೆ ಒಳಗಾಗಿವೆ. ಅವರಿಗೆ ನೆಲೆಯಾಗಿದ್ದ ಭೂಮಿ ಇಂದು ಅವರಿಗೆ ಸಮಸ್ಯೆಯಾಗಿ ಪರಿಣಮಿಸುತ್ತಿದೆ. ಆಶ್ರಯ ನೀಡಿದ್ದ ಅರಣ್ಯ ಅವರ ಕೈತಪ್ಪಿದೆ, ಅನೇಕ ಸ್ಥಿತ್ಯಂತರಗಳ ನಡುವೆಯೂ ಈ ಮೂರು ಜೀವನ ಪದ್ಧತಿಗಳು ಕುಂಬ್ರಿ ಮರಾಠಿ ಸಮುದಾಯದಲ್ಲಿ ಇಂದಿಗೂ ಉಳಿದುಕೊಂಡು ಬಂದಿವೆ.

**ಕುಮ್ರಿ ಬೇಸಾಯ**

ಪಶುಪಾಲಕ ವಲಸಿಗ ಸಮುದಾಯಗಳ ಆವಿಷ್ಕಾರ ಈ ಕುಮ್ರಿ ಬೇಸಾಯ. ಕುಮ್ರಿ ಬೇಸಾಯ ಮಾನವನ ಸಂಘ ಜೀವನದ(ಗಣ ವ್ಯವಸ್ಥೆ) ಸಂದರ್ಭದಲ್ಲಿ ಆರಂಭವಾದದ್ದು. ಪಶುಪಾಲನೆಯ ಜೊತೆ ಜೊತೆಯಲ್ಲಿಯೇ ಈ ಬೇಸಾಯ ಕ್ರಮವನ್ನು ಕಂಡುಕೊಂಡದ್ದು ಮಹಿಳೆ. ಗಣ ಹಂತದ ಸಮಾಜದ ಸ್ತ್ರೀಯು ಕುಮ್ರಿ ಬೇಸಾಯ ಕ್ರಮವನ್ನು ಆವಿಷ್ಕರಿಸದಳು. ಆಹಾರ ಸಂಗ್ರಹಣೆ ಮತ್ತು ಬೇಟೆಯ ಹಂತ ಸಡಿಲಗೊಂಡು ಪಶುಪಾಲನೆಯ ಕೊನೆಯ ಹಂತದಲ್ಲಿ ಕೃಷಿಯ ಕಡೆಗೆ ಗಮನ ಹೊರಳಿತು. ಗಂಡಸು ಆಹಾರ ಸಂಗ್ರಹಕ್ಕಾಗಿ ಹಾಗೂ ಬೇಟೆಗಾಗಿ ಹೊರಹೋದಾಗ ಮಕ್ಕಳ ಪಾಲನೆಗಾಗಿ ಮನೆಯಲ್ಲಿರುತ್ತಿದ್ದ ಸ್ತ್ರೀ ತನ್ನ ಬಿಡುವಿನ ಕಾಲದಲ್ಲಿ ಲಘು ಕೃಷಿಯ ಮೂಲಕ ಕೃಷಿ ಅನ್ವೇಷಣೆಗಳಿಗೆ ಕಾರಣಳಾದಳು ಎಂಬುದು ಪ್ರಚಲಿತದಲ್ಲಿರುವ ವಾದ. ತನ್ನ ಸುತ್ತಲ ಉಪಯುಕ್ತ ಸಸ್ಯಗಳನ್ನು ಆಯ್ದು ಅವುಗಳಿಂದ

ಆಹಾರ ತಯಾರಿಸುವ ಕೌಶಲ್ಯವನ್ನು ಕಂಡುಕೊಂಡವಳು ಆದಿಮ ಸಮಾಜದ ಮಹಿಳೆ. ಆದರೆ ಈ ಹಂತದ ಕೃಷಿಯು ಈಗಿನಂತೆ ನೆಲೆನಿಂತ ಕೃಷಿಯಾಗಿರಲಿಲ್ಲ, ಪಶುಪಾಲನೆಯ ಜೊತೆಗೆ ಸಮುದಾಯಗಳು ಈ ಲಘು ಕೃಷಿಯನ್ನು ರೂಢಿಸಿಕೊಂಡು ಬಂದವು. ಪಶುಗಳಿಗೆ ಮೇವು ಸಿಗುವ ಕಡೆಗಳಲ್ಲಿ ಕೆಲ ಕಾಲ ನೆಲೆನಿಂತು ಅಲ್ಲಿಯ ಕಾಡನ್ನು ತಾವು ಕಂಡುಕೊಂಡ ಉಪಯುಕ್ತ ಸಸ್ಯಗಳನ್ನು ಪುನಃ ಬೆಳೆಯಲು ತಾತ್ಕಾಲಿಕವಾಗಿ ಸಿದ್ಧಗೊಳಿಸುತ್ತಿದ್ದರು, ಅಲ್ಲಿ ಕೆಲಕಾಲ ನೆಲೆ ನಿಂತು ಪುನಃ ತಮ್ಮ ಪಶುಗಳ ಜೊತೆ ಬೇರೆಡೆಗೆ ನಡೆದು ಹೋಗಿ ಲಘು ಕೃಷಿಗೆ ಸೂಕ್ತವಾದ ಜಾಗ ಹುಡುಕಿ ಅಲ್ಲಿ ಮತ್ತೆ ತಮ್ಮ ಕೃಷಿಯನ್ನು ಕೈಗೊಳ್ಳುತ್ತಿದ್ದರು. ಈ ಬಗೆಯ ಕೃಷಿಯು ಕಾಡನ್ನು ನಾಶ ಮಾಡುತ್ತಿರಲಿಲ್ಲ. ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಚಲಿಸುವ ಅಲೆಮಾರಿ ಪಶುಪಾಲಕರು ಜಾರಿಗೆ ತಂದ ಈ ವ್ಯವಸಾಯದ ಕ್ರಮವನ್ನು 'ಕುಮರಿ' ಅಥವಾ 'ಕುಂಬ್ರಿ ಬೇಸಾಯ' (Shifting Cultivation), 'ಸ್ಥಳಾಂತರ ಕೃಷಿ' ಎಂದು ಕರೆಯುತ್ತಾರೆ. ಇದನ್ನೆಲ್ಲ ಪರಿಗಣಿಸಿ ಹೇಳುವುದಾದರೆ, ಕರ್ನಾಟಕವನ್ನೂ ಒಳಗೊಂಡಂತೆ ಭಾರತದ ಆದಿವಾಸಿಗಳ ದುಡಿಮೆ ಮತ್ತು ಆರ್ಥಿಕ ಚಟುವಟಿಕೆಗಳು ಬದಲಾಗಿವೆ ಎಂದು ಭಾವಿಸಿದರೆ ತಪ್ಪಾಗುತ್ತದೆ. ಕರ್ನಾಟಕದ ಬಹುಪಾಲು ಬುಡಕಟ್ಟು ಸಮುದಾಯಗಳು ಪಾರಂಪರಿಕ ಆರ್ಥಿಕ ಚಟುವಟಿಕೆಗಳನ್ನು ನಂಬಿಯೇ ಬದುಕುತ್ತಿವೆ. ಇಲ್ಲಿನ ಹಲವು ಬುಡಕಟ್ಟು ಸಮುದಾಯಗಳು ಮೂಲತಃ ಕೃಷಿಕ ಸಮುದಾಯಗಳು. ಸೋಲಿಗ, ಎರವ, ಬೆಟ್ಟಕುರುಬ, ಹಾಲಕ್ಕಿಒಕ್ಕಲಿಗ, ಕುಣಬಿ, ಕೊರಗ, ಕುಡಿಯ, ಗೌಡಲು, ಮರಾಠಿ ನಾಯಕ, ಕುಮ್ರಿ ಮರಾಠಿ, ಹಸಲ, ಸಿದ್ದಿ, ಇರುಳ, ಗೊಂಡ, ಮುಕ್ರಿ ಮುಂತಾದ ಬುಡಕಟ್ಟುಗಳು ಪಾರಂಪರಿಕವಾಗಿ ಲಘು ಕೃಷಿಯನ್ನು ರೂಢಿಸಿಕೊಂಡಿದ್ದವು ಎಂಬುದು ಅವರ ಸೃಷ್ಟಿಪುರಾಣ ಮತ್ತು ಮೌಖಿಕ ಸಾಹಿತ್ಯದ ಮೂಲಕ ರುಜುವಾತಾಗುತ್ತದೆ. ವಸಾಹತು ಕಾಲದವರೆಗೂ ಈ ಸಮುದಾಯಗಳು ಕುಮ್ರಿ ಬೇಸಾಯವನ್ನು ಅನುಸರಿಸಿಕೊಂಡು ಬಂದಿದ್ದವು. ಜೇನುಕುರುಬ, ಹಕ್ಕಿಪಿಕ್ಕಿ, ಇರುಳ, ಚೆಂಚು, ಪಾರ್ಧಿ, ಡುಂಗ್ರಿಗಾರಾಸಿಯ, ರಾಜಗೊಂಡ ಮುಂತಾದ ಬುಡಕಟ್ಟುಗಳ ಜನ ಇನ್ನೂ ಆಹಾರ ಸಂಗ್ರಹಕಾರಾಗಿಯೇ ಉಳಿದಿದ್ದಾರೆ. ಗೌಳಿ, ಅಲೆಮಾರಿ ಕುರುಬ, ನಾಯಕ, ಕಾಡುಗೊಲ್ಲ ಮುಂತಾದ ಸಮುದಾಯಗಳು ಪಶುಪಾಲನೆಯಲ್ಲಿ ನಿರತರಾಗಿವೆ. ಸುಡುಗಾಡು ಸಿದ್ದರು, ಡೊಂಬರು, ಸಿಂಧೋಳ, ಬುಡ್ಗ ಜಂಗಮ, ಕಿನ್ನರಿ ಜೋಗಿ ಸಮುದಾಯಗಳು ಇನ್ನೂ ತಮ್ಮ ಪ್ರದರ್ಶನ ಕಲೆಗಳನ್ನೇ ನಂಬಿ ಅಲೆಮಾರಿಗಳಾಗಿಯೇ ಉಳಿದಿವೆ. ಮೇದ, ಬೆಟ್ಟಕುರುಬ, ಕೊರಗ, ಸಿದ್ದಿ ಮುಂತಾದ ಸಮುದಾಯ ಗಳು ಕರಕುಶಲ ವೃತ್ತಿಗಳನ್ನು ಅವಲಂಬಿಸಿ ಬದುಕುತ್ತಿವೆ.

ಕರ್ನಾಟಕದ ಕರಾವಳಿ, ಮಲೆನಾಡಿನ ಬೆಟ್ಟ ಮತ್ತು ಕಣಿವೆ ಪ್ರದೇಶ, ಅರೆಮಲೆನಾಡು ಮತ್ತು ಬಯಲು ಸೀಮೆಗಳಲ್ಲಿ ಈ ಬುಡಕಟ್ಟುಗಳು ವಿವಿಧ ವೃತ್ತಿಗಳನ್ನು ಅವಲಂಬಿಸಿ ಬದುಕುತ್ತಿವೆ. ಮೇಲ್ಕಾಣಿಸಿದ ಯಾವ ಸಮುದಾಯಗಳಿಗೂ ನಿಶ್ಚಿತ ಆರ್ಥಿಕ ಮೂಲಗಳಿಲ್ಲ. ಮಲೆನಾಡು, ಕರಾವಳಿ ಮತ್ತು ಅರೆಮಲೆನಾಡು ಪ್ರದೇಶಗಳಲ್ಲಿನ ಬುಡಕಟ್ಟುಗಳಿಗೆ ಇರುವ ಕೃಷಿ ಭೂಮಿ ತುಂಬಾ ಕಡಿಮೆ. ಶತಮಾನಗಳಿಂದ ಬುಡಕಟ್ಟುಗಳು ಸಾಗುವಳಿ ಮಾಡಿ ಕೃಷಿ ಮಾಡುತ್ತಿರುವ ಭೂಮಿ ಸರ್ಕಾರದ ಪ್ರಕಾರ ಒತ್ತುವರಿ (Encroachment). ಅದಕ್ಕೆ ಪಾಣಿ ಪಟ್ಟಗಳಿಲ್ಲ. 'ಒತ್ತುವರಿ' ಎಂದು ಹೇಳಲಾಗುವ ಜಮೀನಾದರೂ ಕೇವಲ ಒಂದೆರಡು ಎಕರೆ ಮಾತ್ರ. ಯಾವ ಬುಡಕಟ್ಟುಗಳಿಗೂ ಹತ್ತಾರು ಎಕರೆ ಕಾಫಿ, ಟೀ ತೋಟಗಳಿಲ್ಲ. ಕೃಷಿ ಕೂಲಿಯೇ ಈ ಬೇಸಾಯಗಾರ ಸಮುದಾಯಗಳ ಮುಖ್ಯ ಆರ್ಥಿಕ ಅವಲಂಬನೆ. ಜೇನುಕುರುಬರಂತಹ ಆಹಾರ ಸಂಗ್ರಹಣೆಯ ಹಂತದ ಬುಡಕಟ್ಟುಗಳ ಸ್ಥಿತಿ ಇನ್ನೂ ಚಿಂತಾಜನಕ. ಗೌಳಿಗರಂತಹ ಪಶುಪಾಲಕರು, ಕಾಡಿನ ಉಪಉತ್ಪನ್ನಗಳನ್ನೇ ಆಧರಿಸಿ ಬದುಕುತ್ತಿರುವ ಮೇದ, ಸಿದ್ದಿ, ಬೆಟ್ಟಕುರುಬ, ಕೊರಗ ಮುಂತಾದ ಕರಕುಶಲ ವೃತ್ತಿಗಳನ್ನು ಅವಲಂಬಿಸಿರುವ ಸಮುದಾಯಗಳಿಗೆ ಅರಣ್ಯ ಕಾಯ್ದೆಯ ಕಠೋರ ನಿಯಮಗಳು ತಮ್ಮ ವೃತ್ತಿಗಳನ್ನು ಮುಂದುವರಿಸಲು ಅನುವು ಮಾಡಿಕೊಡುತ್ತಿಲ್ಲ. ಅರಣ್ಯವನ್ನೇ ನಂಬಿಕೊಂಡು ಈ ಸಮುದಾಯಗಳು ಶತಮಾನಗಳಿಂದ ಬದುಕಿ ಬಂದಿವೆ.'[೧೦] ಹೀಗಾಗಿ ಕುಂಬ್ರಿ ಮರಾಠಿ ಸಮುದಾಯವನ್ನೂ ಒಳಗೊಂಡಂತೆ ಬಹುತೇಕ ಎಲ್ಲ ಆದಿವಾಸಿಗಳ ಪಾರಂಪರಿಕ ಕಸಬುಗಳು ಬದಲಾಗಿಲ್ಲ. ಜೊತೆಗೆ ಕಾಡೊಳಗಿನ ಕುಂಬ್ರಿ ಮರಾಠಿಗರು ಈ ಕಾರಣಕ್ಕಾಗಿ ಇನ್ನೂ ಕುಮ್ರಿ ಬೇಸಾಯವನ್ನು ಅವಲಂಬಿಸಿಕೊಂಡು ಬಂದಿದ್ದಾರೆ.

ಕುಮ್ರಿ ಬೇಸಾಯದ ಪದ್ಧತಿಯು ಈ ಸಮುದಾಯದಲ್ಲಿ ವಿಶಿಷ್ಟವಾಗಿದೆ. ಕುಮ್ರಿ ಬೇಸಾಯದಲ್ಲಿ ಕುಂಬ್ರಿ ಮರಾಠಿಗರು ಮಳೆಗಾಲಕ್ಕಿಂತ ಮುಂಚೆಯೇ ಗಿಡಗಂಟಿಗಳನ್ನು ಕಡೆದು ಸುಡುವುದರ ಮೂಲಕ ಭೂಮಿಯನ್ನು ಕೃಷಿಗೆ ಅಣಿಗೊಳಿಸಿ ಬೀಜ ಬಿತ್ತುವರು. ಮಳೆಯಾದೊಡನೆ ಬೀಜ ಮೊಳಕೆಯೊಡೆದು ಬಿಡುವುದು. ಸಾಮಾನ್ಯವಾಗಿ ಬೆಟ್ಟ-ಗುಡ್ಡಗಳ ಇಳಿಜಾರು ಪ್ರದೇಶ ಹಾಗೂ ಕೊಳ್ಳ ಪ್ರದೇಶಗಳನ್ನು ಈ ತರಹದ ಕುಮ್ರಿ ಕೃಷಿಗೆ ಆಯ್ದುಕೊಳ್ಳುವರು. ಈ ಕುಮ್ರಿ ಕೃಷಿ ಪ್ರದೇಶವನ್ನು ಪ್ರತಿ ಎರಡು-ಮೂರು ವರ್ಷಗಳಿಗೊಮ್ಮೆ ಬದಲಾಯಿಸುತ್ತಾರೆ. ಈ ಕುಮರಿ ಕೃಷಿ ಅಥವಾ ಸ್ಥಳಾಂತರ ಬೇಸಾಯ ಅತ್ಯಂತ ಪ್ರಾಚೀನ ಕಾಲದಿಂದ ಮನುಷ್ಯ ಅನುಸರಿಸಿಕೊಂಡು ಬಂದಿರುವ ಒಂದು ತಾಂತ್ರಿಕ ಪದ್ಧತಿ ಹಾಗೂ ಇಂದಿಗೂ ಒಂದು ವೈಜ್ಞಾನಿಕ ಪದ್ಧತಿ. ಈ ನೈಸರ್ಗಿಕ ಕೃಷಿ ಭೂಮಿಯ ಸವಕಳಿಯನ್ನು ತಪ್ಪಿಸುತ್ತದೆ. ಅರಣ್ಯ

ನಾಶವನ್ನು ತಡೆಯುತ್ತದೆ. ಮನುಷ್ಯನ ಮಣ್ಣಿನ ಮೋಹಕ್ಕೆ ಕಡಿವಾಣ ಹಾಕುತ್ತದೆ. ನಾನು, ನನ್ನದು ಮತ್ತು ನನ್ನ ಆಸ್ತಿ ಎಂಬ ಒಡೆತನದ ಅಹಂಕಾರಕ್ಕೆ ಅಸ್ಪದವಿಲ್ಲದ ಪದ್ಧತಿ ಇದು. ಮನುಷ್ಯನ ಅಂದಂದಿನ ಹೆಚ್ಚೆಂದರೆ ಆಯಾ ವರ್ಷದ ಬೇಡಿಕೆಯನ್ನು ಮಾತ್ರ ಪೂರೈಸಬಲ್ಲ ಈ ಪದ್ಧತಿ ಆಸೆಬುರುಕತನಕ್ಕೆ ಪ್ರೇರೇಪಿಸುವುದಿಲ್ಲ. ನೇಗಿಲು–ನೊಗ–ಎತ್ತುಗಳು ಮುಂತಾದ ಭೂಮಾಲೀಕತ್ವದ ಸೊಂಕಿನಿಂದ ಇಂದಿಗೂ ದೂರವಿರುವ ಕುಂಬ್ರಿ ಮರಾಠಿಗರು ಕೇವಲ ಗುದ್ದಲಿ ಅಥವಾ ಪಿಕಾಸಿಯ ಸಹಾಯದಿಂದ ತಮ್ಮ ಅಗತ್ಯಕ್ಕೆ ತಕ್ಕಷ್ಟು ಭೂಮಿಯನ್ನು ಮಾತ್ರ ಕೆತ್ತಿ ಅಥವಾ ಅಗೆದು ಅತ್ಯಂತ ಮಿತವಾದ ಜಾಗದಲ್ಲಿ ತಮಗೆ ಬೇಕಾದ ಬೆಳೆಗಳನ್ನು ಬೆಳೆಯುತ್ತಿದ್ದರು. ಈ ತರಹದ ಕೃಷಿಯಲ್ಲಿ ಬಹುತೇಕ ಬೆಳೆಯುವ ಪ್ರಮುಖ ಬೆಳೆಗಳೆಂದರೆ, ಚಿಕ್ಕ ಕಾಳುಗಳಾದ ನವಣೆ, ಸಜ್ಜೆ, ಎಳ್ಳು, ರಾಗಿ, ಅರಿಷಣ ಮತ್ತು ವಿಧವಿಧದ ಕಾಯಿಪಲ್ಲೆ, ಗಡ್ಡೆ–ಗೆಣಸು ಆಗಿರುತ್ತದೆ. ಬೆಟ್ಟದ ಇಳಿಜಾರುಗಳಲ್ಲಿ ಲಭ್ಯವಿರುವ ಖಾಲಿ ಭೂಮಿಯನ್ನು ಹಸನು ಮಾಡಿ, ಅಡ್ಡ ತೆವರಿಗಳನ್ನು ನಿರ್ಮಿಸಿ, ಹಂತಹಂತಗಳಲ್ಲಿ ಸಮತಟ್ಟುಗೊಳಿಸಿ ಚೆಲ್ಲುವುದು ಇವರ ಪದ್ಧತಿ. ಇದರಿಂದಾಗಿ ಖಾಲಿಯಿದ್ದ ಭೂಮಿ ಸದುಪಯೋಗವಾಗುತ್ತಿತ್ತು. ಅಲ್ಲದೆ ನೀಳನಾದ ಇಳಿಜಾರಿನಿಂದ ಸವಕಲಾಗುತ್ತಿದ್ದ ಅಥವಾ ಕರಗಿ ಹೋಗುತ್ತಿದ್ದ ಮಣ್ಣು ಇವರು ಹಾಕುತ್ತಿದ್ದ ಅಡ್ಡ ತೆವರಿಗಳಿಂದ ಕೊಚ್ಚಿ ಹೋಗದೆ ನಿಲ್ಲುತ್ತಿತ್ತು. ತಲೆತಲಾಂತರದಿಂದ ಇಂಥ ಪದ್ಧತಿಯನ್ನು ಅನುಸರಿಸಿಕೊಂದು ಕೃಷಿ ಮಾಡುತ್ತಿದ್ದ ಕುಂಬ್ರಿ ಮರಾಠಿಗರು ಒಂದೇ ಜಾಗವನ್ನು ಸತತವಾಗಿ ಬಳಸುವುದಿಲ್ಲ. ಹೀಗೆ ಒಂದೇ ಕಡೆ ಭೂಮಿಯನ್ನು ಬಳಸಿದರೆ ಅದು ಬಂಜರಾಗುತ್ತದೆ ಎಂಬುದು ಅವರ ಪಾರಂಪರಿಕ ತಿಳುವಳಿಕೆ. ಮನುಷ್ಯ ಖಾಯಂ ಆಗಿ ನೆಲೆನಿಂತಲ್ಲಿ ಮಾತ್ರ ಅರಣ್ಯ ನಾಶವಾಗಿ ಪರಿಸರದ ಅಸಮತೋಲನ ಜರುಗುತ್ತಿತ್ತು. ಕುಂಬ್ರಿ ಮರಾಠಿಗರು ಈ ಸ್ಥಳಾಂತರ ಬೇಸಾಯ ಪರಿಸರದ ಸ್ನೇಹಿಯಾಗಿದೆ.

**ಕುಮ್ರಿ ಬೇಸಾಯ ಹೇಗೆ?**

1. ಕುಮ್ರಿ ಬೇಸಾಯ ಎಂದರೆ, ಲಘು ಕೃಷಿ. ಪುಟ್ಟ ಗಣಗಳು ಅಥವಾ ಚಿಕ್ಕ ಮಾನವ ಗುಂಪು ಕಂಡುಕೊಂಡ ಸಸ್ಯ ಪೋಷಣೆಯ ವಿಧಾನ. ಮೂಲತಃ ಉಪಯುಕ್ತ ಸಸ್ಯಗಳ ಪುನರುತ್ಪಾದನೆಗೆ ಆದಿಮ ಸಮುದಾಯಗಳ ಕಂಡುಕೊಂಡ ಬೇಸಾಯ ಕ್ರಮ.

2. ಕಣಿವೆಗಳು ಕುಮ್ರಿ ಬೇಸಾಯದ ಪ್ರಧಾನ ಸ್ಥಳಗಳು, ಅಥವಾ ಕಣಿವೆಗಳ ವಿಶಾಲ ಹರಹುಗಳು ಕುಮ್ರಿ ಬೇಸಾಯಕ್ಕೆ ಬಳಸಲ್ಪಡುತ್ತವೆ. ಇಳಿಜಾರು ಮತ್ತು ಸದಾ ಜಿನುಗುವ ತೊರೆಗಳ ದಡಗಳು. ಇಲ್ಲಿನ ದಡಗಳ ಹುಲ್ಲನ್ನು ನಾಶಮಾಡದೆ ಅಕ್ಕಪಕ್ಕದ ನೆಲವನ್ನು ಹದಗೊಳಿಸುವುದು.

3. ನೇಗಿಲ ಬಳಕೆ ಇರವುದಿಲ್ಲ. ಕೈಬಳಕೆಯ ಚಿಕ್ಕ ಸಾಧನಗಳ ಬಳಕೆ. ಕೇವಲ ಗುದ್ದಲಿ, ಪಿಕಾಸಿ ಮುಂತಾದ ಅಗೆಯುವ ಸಾಧನಗಳನ್ನು ಮಾತ್ರ ಬಳಸಿ ಕೃಷಿಯನ್ನು ಒಂದು ಮಿತಿಗೆ ಒಳಪಡಿಸಿ, ಅರಣ್ಯ ಭೂಮಿಯನ್ನು ಸಂರಕ್ಷಿಸುವುದು.

4. ಭೂಮಿಯನ್ನು ಸುಟ್ಟು ಹದ ಮಾಡುವುದು, ಚಿಕ್ಕ ಭೂಮಿಯನ್ನು ಸಸ್ಯಗಳನ್ನು ಬೆಳೆಯಲು ಆಯ್ಕೆ ಮಾಡಿಕೊಳ್ಳುವುದು, ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಬೇಸಾಯವನ್ನು ಸ್ಥಳಾಂತರಿಸುವುದು ಈ ಬೇಸಾಯ ಪದ್ಧತಿಯ ಪ್ರಧಾನ ಲಕ್ಷಣ.

5. ಸ್ಥಳದಿಂದ ಸ್ಥಳಕ್ಕೆ ಬದಲು ಮಾಡುವ ಕ್ರಮ ಮುಖ್ಯವಾಗಿ ಭೂಮಿಯ ಸಾರವನ್ನು ಕಾಪಾಡುತ್ತದೆ. ನೆಲದ ಸಾವಯವತೆ ರಕ್ಷಿಸಲ್ಪಟ್ಟು ಭೂಮಿ ಫಲವತ್ತಾಗಿಯೇ ಇರುವಂತೆ ನೋಡಿಕೊಳ್ಳುವುದು.

6. ಈ ಕೃಷಿ ಪಶುಪಾಲನೆಯ ವಿಸ್ತರಣೆ ಮಾತ್ರ. ಪಶುಪಾಲನೆಗೆ ದಕ್ಕೆಯಾಗದಂತೆ ಇದನ್ನು ವಸ್ತರಿಸಲಾಗುತ್ತದೆ. ಹೀಗಾಗಿ ಇದು ಮಾನವ ವಲಸೆಯನ್ನು ಚಾಲ್ತಿಯಲ್ಲಿಟ್ಟಿರುತ್ತದೆ. ಅಲೆಮಾರಿತ್ವ ಮತ್ತು ವಲಸೆ ಇಲ್ಲಿ ಸರ್ವೇಸಾಮಾನ್ಯ.

7. ಕಾಡಿನ ರಕ್ಷಣೆ, ಮರಗಿಡಗಳ ಪೋಷಣೆ, ಕಾಡಿನ ಪ್ರಾಣಿಗಳ ಜೊತೆಗೆ ಸಹಜೀವನ ಈ ಚಟುವಟಿಕೆಯ ಪ್ರಧಾನ ಲಕ್ಷಣ. ಕಣಿವೆಯ ಇಳಿಜಾರುಗಳನ್ನು ಹೆಚ್ಚು ವಿರೂಪಗೊಳಿಸದೆ ಪುಟ್ಟ ಪುಟ್ಟ ಒಡ್ಡುಗಳನ್ನು ನಿರ್ಮಿಸಿ ಬೀಳುವ ಮಳೆಗೆ ಮಣ್ಣು ಕೊಚ್ಚಿ ಹೋಗುದಂತೆ ತಡೆಯುವ ಸಹಜ ಮೆಟ್ಟಿಲುಗಳನ್ನು ನಿರ್ಮಿಸಲಾಗುತ್ತದೆ. ನೀರು ಸುಲಭವಾಗಿ ಇಂಗಿ ಅಂತರ್ಜಲದ ಮಟ್ಟವನ್ನು ಕಾಯುವುದು. ಮಣ್ಣಿನ ಸವಕಳಿಯನ್ನು ತಡೆಯುವುದು.

8. ನಿರ್ದಿಷ್ಟ ಸಸ್ಯಗಳ ಉತ್ಪಾದನೆ. ಸೀಮಿತ ಫಸಲಿನ ನಿರೀಕ್ಷೆ. ಲಘು ಉತ್ಪಾದನೆ. ನಿತ್ಯದ ಆಹಾರಕ್ಕೆ ಪೂರಕವಾದ ಕಾಡಿನ ಸಹಜ ಸಸ್ಯಗಳ ಪುನರುತ್ಪಾದನೆ. ಔಷಧಿ ಸಸ್ಯಗಳ ರಕ್ಷಣೆ.

ಇದೇ ಅಲ್ಲದೆ ಕುಮ್ರಿ ಬೇಸಾಯದ ಉಪಯುಕ್ತತೆ ಹೆಚ್ಚಾಗಿಯೇ ಇದೆ. ಉತ್ತರ ಕನ್ನಡ ಜಿಲ್ಲೆಯ, ಜೋಯಿಡಾ, ಶಿರಸಿ, ಸಿದ್ದಾಪುರ, ಭಟ್ಕಳ ತಾಲೂಕಿನಲ್ಲಿ ಕುಮ್ರಿ ಬೇಸಾಯ ಹೆಚ್ಚಾಗಿ ಕಾಣಿಸುತ್ತದೆ. ಮೇಲ್ಕಾಣಿಸಿದ ತಾಲೂಕುಗಳಲ್ಲಿ ಸುಮಾರು 15 ಸಾವಿರ ಎಕರೆಗೂ ಹೆಚ್ಚು ಜಮೀನು ಕುಮ್ರಿ ಬೇಸಾಯಕ್ಕೆ ಬಳಸಲ್ಪಟ್ಟಿತ್ತು ಎಂದು ಅಂದಾಜಿಸಲಾಗಿದೆ. ಕುಮ್ರಿ ಬೇಸಾಯದ ಮತ್ತೊಂದು ವೈಶಿಷ್ಟ್ಯವೆಂದರೆ, ಹಳ್ಳಿಯ ರೈತರೆಲ್ಲರೂ ಇದನ್ನು ಸಾಮೂಹಿಕವಾಗಿ ಬೇಸಾಯ ಮಾಡಿ ಬಂದ ಫಸಲನ್ನು ಹಳ್ಳಿಯ ಎಲ್ಲರೂ ಹಂಚಿಕೊಳ್ಳುವರು. ಹಿಂದೆ ಸುಮಾರು 60–

70 ವರ್ಷಗಳ ಹಿಂದೆ ಕುಂಬ್ರಿ ಮರಾಠಿಗರು ತಂಡ ಕಟ್ಟಿಕೊಂಡು ಕುಮ್ರಿ ಬೇಸಾಯ ಮಾಡಲು ಹೋಗುತ್ತಿದ್ದರು. ಕಾಡಿನಲ್ಲಿನ ಜಾಗವನ್ನು ಸುಟ್ಟು ಹದಮಾಡಿ, ರಾಗಿ ಬೆಳೆಯುತ್ತಿದ್ದರು. 30 ಮನೆಗೊಂದು ಕುಮ್ರಿ ಇದ್ದು ಪ್ರತಿ ಮನೆಯಿಂದ ಇಬ್ಬಿಬ್ಬರಂತೆ 60 ಮಂದಿ ಒಂದು ಕುಮ್ರಿ ಬೇಸಾಯ ಮಾಡುತ್ತಿದ್ದರು. ಇದಕ್ಕೂ ಮೊದಲು ಅರಣ್ಯದಲ್ಲಿ ಕುಮ್ರಿ ಬೇಸಾಯಕ್ಕೆ ಸ್ಥಳವನ್ನು ಗುರುತು ಮಾಡುತ್ತಿದ್ದರು. ನಂತರ ಆ ಸ್ಥಳದಲ್ಲಿ ಬೆಂಕಿ ಇಟ್ಟು ಭೂಮಿಯನ್ನು ರಕ್ತ ಸಂಬಂಧಿಗಳು ಸ್ವಾಧೀನ ಮಾಡಿಕೊಳ್ಳುತ್ತಿದ್ದರು.

ಬುಡಕಟ್ಟುಗಳು ಅರಣ್ಯವನ್ನು ತಮ್ಮ ಜೀವನಾಡಿಯನ್ನಾಗಿ ಕಾಣುತ್ತಿದ್ದರು. ಅದಕ್ಕೆ ಮುನ್ನೆಚ್ಚರಿಕೆಯಾಗಿ ಕುಮ್ರಿ ಬೇಸಾಯ ಮಾಡುವಾಗ ತಮ್ಮಿಂದ ಮರ, ಪ್ರಾಣಿಗಳಿಗೆ ತೊಂದರೆಯಾಗದಂತೆ ಇರುತ್ತಿದ್ದರು. ಅರಣ್ಯ ಇವತ್ತು ಉಳಿದಿದೆ ಎಂದರೆ ಕೇವಲ ಬುಡಕಟ್ಟುಗಳ ಪರಿಣಾಮವಾಗಿಯೇ. ಆದರೆ ಇವತ್ತು ಹಾಳಾಗುತ್ತಿರುವುದು ಬುಡಕಟ್ಟುಗಳನ್ನು ಅರಣ್ಯದಿಂದ ಒಕ್ಕಲೆಬ್ಬಿಸಿದ ಪರಿಣಾಮ. ಆದರೆ ಸರಕಾರ ಇವತ್ತು ಆದಿವಾಸಿಗಳ ಕಾರಣದಿಂದ ಅರಣ್ಯ ಹಾಳಾಗುತ್ತಿದೆ ಎಂದು ಬೊಬ್ಬೆ ಹಾಕುತ್ತಿದೆ. ಹಾಳುಮಾಡುತ್ತಿರುವುದು ಸ್ವತಃ ಸರಕಾರವೇ ಹೊರತು ಆದಿವಾಸಿಗಳಲ್ಲ. ತಿಂಗಳಾನುಗಟ್ಟಲೆ ರಾಗಿ ನೆಟ್ಟು ಬೆಳೆ ಬರುವವರೆಗೆ ಕಾಯಲು ಮಾಳಗಳನ್ನು ಮಾಡಿ ಕೆಲವರನ್ನು ಅಲ್ಲಿಯೇ ಬಿಟ್ಟು ಉಳಿದವರು ಮನೆಗೆ ಬರುತ್ತಿದ್ದರಂತೆ. ಬೆಳೆ ಬಂದ ತಕ್ಷಣ ಮತ್ತೆ ಹೋಗಿ ರಾಗಿ ಕೊಯ್ದು ರಾಶಿ ಮಾಡಿಕೊಂಡು ಸಮನಾಗಿ ಹಂಚಿಕೊಂಡು ಊರಿಗೆ ತರುವ ಪದ್ಧತಿ ಇತ್ತು. ಬ್ರಿಟಿಷರು ಬರುವ ಮುಂಚಿನವರೆಗೂ ಕಾಡಿನಲ್ಲಿ ಮುಕ್ತವಾಗಿ ತಂಡೋಪತಂಡವಾಗಿ ತಮ್ಮ ಕುಟುಂಬಗಳ ಜೊತೆ ಅಲೆಮಾರಿ ಜೀವನ ನಡೆಸುತ್ತಾ ಕುಮ್ರಿ ಬೇಸಾಯ ಮಾಡುತ್ತಿದ್ದರು. ಜೊತೆಗೆ ಕಾಡಿನ ಪ್ರವೇಶ ಮುಕ್ತವಾಗಿದ್ದು ಕಾಡನ್ನು ಸುಟ್ಟು ಒಕ್ಕಲುತನಕ್ಕೆ, ಕುಮ್ರಿ ಬೇಸಾಯಕ್ಕೆ ಭೂಮಿಯನ್ನು ಉಪಯೋಗಿಸುವ, ತೋಟ ಗದ್ದೆಗಳಿಗೆ ಗೊಬ್ಬರ ಹಾಕಲಿಕ್ಕೆ ಮರಗಳ ಎಲೆಗಳನ್ನು ತೆಗೆದುಕೊಂಡು ಹೋಗುವ, ಕಾಡಿನಲ್ಲಿ ಮೆಣಸಿನ ಬಳ್ಳಿಯನ್ನು ಹಾಕುವುದು, ದನ ಮೇಯಿಸುವುದು, ಕಟ್ಟಿಗೆಯನ್ನು ಉರುವಲಿಗೆ ತೆಗೆದುಕೊಂಡು ಹೋಗುವುದು ಮುಂತಾದ ಹತ್ತು ಹಲವು ಅವಕಾಶಗಳಿದ್ದವು. ಆದರೆ ಬ್ರಿಟಿಷರು ದಿನ ದಿನಕ್ಕೆ ಕುಮ್ರಿ ಬೇಸಾಯಕ್ಕೆ ಅರಣ್ಯವನ್ನು ಕೊಡುವುದನ್ನು ಕಡಿಮೆ ಮಾಡುತ್ತಾ ಬಂದರು. ಮೂರು–ನಾಲ್ಕು ವರ್ಷಗಳಿಗೊಮ್ಮೆ ಭೂಮಿಯನ್ನು ಬದಲಿಸುತ್ತಾ ಹೋಗುವುದರಿಂದ ಅಲ್ಲಿ ಮತ್ತೆ ಹೊಸ ಅರಣ್ಯವು ಬೆಳೆಯುತ್ತಾ ಹೋಗುವುದು. ಅರಣ್ಯವನ್ನು ಹಾಳು ಮಾಡದೇ ಅದನ್ನು ಪುನಃ ಫಲವತ್ತಾಗಿಸುವ ನಿಟ್ಟಿನಲ್ಲಿ ಕುಂಬ್ರಿ ಮರಾಠಿಗರು ಪ್ರಯತ್ನಿಸುತ್ತಿದ್ದರು. ಅದಕ್ಕೆ ವಿರುದ್ಧವಾಗಿ ಬ್ರಿಟಿಷ್ ಸರಕಾರ ಕುಮ್ರಿ ಬೇಸಾಯ ಪದ್ಧತಿಯಿಂದ ಅರಣ್ಯ ನಾಶವಾಗುತ್ತದೆ

ಎಂದು ಅದನ್ನು ನಿಷೇಧಿಸಿತು. ಇದರಿಂದ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರಂತಹ ಹಲವು ಬುಡಕಟ್ಟುಗಳು ಕುಮ್ರಿ ಭೂಮಿ ಇಲ್ಲದ್ದರಿಂದ ತುಂಬಾ ತೊಂದರೆ ಅನುಭವಿಸಿದವು. ಹೀಗೆ ಕುಮ್ರಿ ಬೇಸಾಯದಿಂದಾಗಿ ಖಾಸಗಿ ಆಸ್ತಿ ಪರಿಕಲ್ಪನೆಯು ಬುಡಕಟ್ಟುಗಳಲ್ಲಿ ಬರಲಿಲ್ಲ. ಇಡೀ ಅರಣ್ಯದಲ್ಲೇ ಶತಶತಮಾನ ಕಳೆದ ಎಷ್ಟೋ ಬುಡಕಟ್ಟುಗಳು ಅರಣ್ಯದ ಒಂದು ತುಂಡು ಭೂಮಿಯನ್ನು ಸಹ ತಮ್ಮದೆಂದು ಭಾವಿಸಲಿಲ್ಲ, ಅಂದರೆ ಅರಣ್ಯ ತಮ್ಮ ವಾಸಸ್ಥಾನ, ಅದು ಎಂದೆಂದಿಗೂ ತಮ್ಮದೇ, ಅದಕ್ಕಾಗಿ ದಾಖಲೆ ಪತ್ರಗಳ ಅಗತ್ಯ ಬುಡಕಟ್ಟುಗಳಿಗೆ ಕಾಣಲಿಲ್ಲ. ಆದರೆ ಇಂದು ಸರಕಾರಕ್ಕೆ ಬೇಕಾಗಿರುವುದು ದಾಖಲೆಗಳು, ಯಾರ ಬಳಿ ದಾಖಲೆಗಳು ಇರುವುದಿಲ್ಲವೊ ಅದು ಅವರದಲ್ಲ ಎಂದು ಎಷ್ಟೋ ಬುಡಕಟ್ಟುಗಳು ಅರಣ್ಯ ಪ್ರವೇಶ ನಿಷೇಧ ಕಾಯ್ದೆಯ ಪರಿಣಾಮ ನೆಲೆ ಕಳೆದುಕೊಂಡವು. ಬೇರೆ ದಾರಿ ಕಾಣದೆ ಕುಂಬ್ರಿ ಮರಾಠಿಗರು ಮೇಲ್ಜಾತಿಗಳ ಮನೆ, ಗದ್ದೆ, ತೋಟ, ಹೊಲಗಳಲ್ಲಿ ಜೀತದಾಳಾಗಿ ದುಡಿಯುವ ಅನಿವಾರ್ಯತೆ ಸೃಷ್ಟಿಯಾಯಿತು. ಬ್ರಿಟಿಷರು ಕುಂಬ್ರಿ ಮರಾಠಿಗರಂತಹ ನೂರಾರು ಬುಡಕಟ್ಟು ಸಮುದಾಯಗಳಿಗೆ ಅರಣ್ಯ ಪ್ರವೇಶ ನಿಷೇಧ ತಂದು ಕಾಡಿನಿಂದ ಹೊರಹಾಕುವ ಕೆಲಸ ಮಾಡಿತು. ಇತ್ತ ಅರಣ್ಯದಲ್ಲಿ ಆಶ್ರಯವಿಲ್ಲದೆ ನಾಡಿನಲ್ಲೂ ನೆಲೆಗಳಿಲ್ಲದೆ, ಅಲೆಮಾರಿಗಳಾಗಿ ಊರಿಂದ ಊರಿಗೆ ಅಲೆಯುವವರಾದರು.

### ಕುಂಬ್ರಿ ಮರಾಠಿಗರ ಇತರೆ ಉತ್ಪಾದನಾ ಚಟುವಟಿಕೆಗಳು

#### ಕಾಡಿನ ಉಪ ಉತ್ಪನ್ನಗಳ ಸಂಗ್ರಹಣೆ

ಅರಣ್ಯವಾಸಿಗಳು ಕಾಡಿನ ಉಪಯುಕ್ತ ಸಸ್ಯಗಳನ್ನು ತಲೆಮಾರುಗಳಿಂದ, ಶತಮಾನಗಳಿಂದ ರಕ್ಷಿಸಿಕೊಂಡು ಬಂದಿದ್ದಾರೆ. ಅದರಲ್ಲೂ ಪಶುಪಾಲನೆ ಮತ್ತು ಲಘು ಕೃಷಿಯನ್ನು ಅವಲಂಬಿಸಿರುವ ಸಮುದಾಯಗಳು ಕಾಡಿನ ಸಹಜ ರಕ್ಷಕರೂ ಹೌದು. ಕುಂಬ್ರಿ ಮರಾಠಿಗರು ಮೂಲತಃ ಆಹಾರ ಸಂಗ್ರಾಹಕರು. ಅರಣ್ಯದಲ್ಲಿ ಸಹಜವಾಗಿ ಬೆಳೆಯುವ ಗಡ್ಡೆ–ಗೆಣಸು ಅವರ ಪ್ರಾಚೀನ ಆಹಾರ. ಕುಮ್ರಿ ಬೇಸಾಯ ಕರಗತವಾದ ಮೇಲೆ ಕಾಡಿನ ಗಡ್ಡೆ–ಗೆಣಸುಗಳನ್ನು ಹಿತ್ತಲಲ್ಲಿ ಬೆಳೆಯುವ ಪದ್ಧತಿಯನ್ನು ರೂಢಿಗೆ ತಂದರು, ಇದು ಕೂಡ ಸಾವಿರಾರು ವರ್ಷಗಳ ಪರಂಪರೆಯ ರೂಢಿಬದ್ಧ ಕೃಷಿ. ಇದಲ್ಲದೆ ತಮ್ಮ ಮನೆಗಳ ಸುತ್ತಮುತ್ತ ಹಾಗೂ ನೀರು ಹರಿದಾಡುವ ಸ್ಥಳಗಳಲ್ಲಿ ಕೈತೋಟ ಮಾಡಿಕೊಂಡಿದ್ದಾರೆ. ಈ ತೋಟದಲ್ಲಿ ಇರುಳ್ಳಿ, ಸಬ್ಬಸ್ಸಿಗೆ, ಪಾಲಕ, ಸೊಪ್ಪು, ಬದನೆಕಾಯಿ, ಇವಲ್ಲದೆ ವಿವಿಧ ಬಗೆಯ ಸೊಪ್ಪು, ತರಕಾರಿಗಳನ್ನು ಹಿತ್ತಲಿನಲ್ಲಿ ಬೆಳೆಯುತ್ತಾರೆ. ಕುಂಬ್ರಿ ಮರಾಠಿಗರು ವಾಸಿಸುವ ದಟ್ಟ ಅರಣ್ಯಗಳಲ್ಲಿ ಇಡೀ ವರ್ಷಪೂರ್ತಿಯಲ್ಲದಿದ್ದರೂ ಸಾಂದರ್ಭಿಕವಾಗಿ ಆಹಾರ ಸಂಗ್ರಹಣೆ ಕಾರ್ಯವನ್ನು ಕೈಗೊಳ್ಳುತ್ತಾರೆ.

ಜೇನು ಸಂಗ್ರಹದಲ್ಲಿ ಕುಣಬಿಯರು ನಿಷ್ಣಾತರು. ಈ ಕೆಳಗಿನ ಕೋಷ್ಟಕದಲ್ಲಿ ಕಿರು ಅರಣ್ಯ ಉತ್ಪನ್ನದ ಅವಲಂಬನೆ ಯಾವ ಪ್ರಮಾಣದಲ್ಲಿದೆ ಎಂದು ನೋಡಬಹುದು. ಶೇ.99.34 ಜನ ಅರಣ್ಯ ಕಿರು ಉತ್ಪನ್ನಗಳನ್ನು ಸಂಗ್ರಹಿಸುವ ಕೆಲಸದಲ್ಲಿ ನಿರತರಾಗಿದ್ದಾರೆ.

**ಕೋಷ್ಟಕ 1**

**ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ಲಿಂಗವಾರು ತಾತ್ಕಾಲಿಕ ಕಸುಬುಗಳ ಪ್ರಮಾಣ**

| ತಾತ್ಕಾಲಿಕ ಕಸುಬುಗಳು | ಗಂಡು | ಹೆಣ್ಣು | ಒಟ್ಟು | % |
|---|---|---|---|---|
| ಅರಣ್ಯ ಕಿರು ಉತ್ಪನ್ನಗಳ ಸಂಗ್ರಹ | 5023 | 4281 | 9304 | 99.34 |
| ಬಿದಿರಿನ ಕೆಲಸ | 35 | 0 | 35 | 0.374 |
| ಕಂಟ್ರ್ಯಾಕ್ಟರ್ | 10 | 0 | 10 | 0.107 |
| ಸರಕಾರಿ | 9 | 0 | 9 | 0.096 |
| ತಾತ್ಕಾಲಿಕ | 8 | 0 | 8 | 0.085 |
| ಇತರೆ | 0 | 0 | 0 | 0 |
| | 5085 | 4281 | 9366 | |

**ಕಾಡಿನ ಉತ್ಪನ್ನಗಳ ಸಂಗ್ರಹಣೆ**

ಕುಂಬ್ರಿ ಮರಾಠಿಗರು ಕಾಡಿನ ಉಪಉತ್ಪನ್ನಗಳನ್ನು ಸಂಗ್ರಹಿಸುವುದರಲ್ಲಿ ನಿಷ್ಣಾತರು. ಜೇನು, ಅಂಟು ರಾಳದ ಜೊತೆ ಅನೇಕ ಕಾಡುತ್ಪನ್ನಗಳನ್ನು ಕುಂಬ್ರಿ ಮರಾಠಿಗರು ಸಂಗ್ರಹಿಸುತ್ತಾರೆ. ಅವುಗಳು ಹೀಗಿವೆ.

1. ಮುರುಗನ ಹುಳಿ
2. ಸೀಗೆಕಾಯಿ
3. ವಾಟೆಹುಳಿ
4. ಪುನರ್‌ಪುಳಿ
5. ಅಂಟುವಾಳ
6. ಲವಂಗ
7. ಕಾಳು ಮೆಣಸು
8. ಜಾಯಿಪತ್ರೆ

9. ಅಣಬೆಗಳು

10. ಅಂಟು

11. ರಾಳ

12. ದಾಲ್ಚಿನ್ನಿ

**ಕಾಡು ಹಣ್ಣುಗಳು**

1. ಹಲಸು

2. ಚಾಪೇರ

3. ಔಳು

4. ಚುನ್ನ

5. ಚಿವಾರ, ಇತ್ಯಾದಿ.

ಇದಲ್ಲದೆ ಕಾಡಿನ ಅನೇಕ ಔಷಧಿ ಸಸ್ಯಗಳನ್ನು, ಬೇರುಗಳನ್ನು ಇವರು ಸಂಗ್ರಹಿಸುತ್ತಾರೆ. ಇವುಗಳನ್ನು ಕುಂಬ್ರಿ ಮರಾಠಿಗರು ವಾಣಿಜ್ಯ ಉದ್ದೇಶಕ್ಕೆ ಸಂಗ್ರಹಿಸುವುದಿಲ್ಲ. ಇವರು ಇವುಗಳನ್ನು ನೇರವಾಗಿ ಮಾರಾಟ ಮಾಡುವುದೂ ಇಲ್ಲ. ಇವರಿಗೆ ಮಾರಾಟದ ಜಾಲವೂ ಇಲ್ಲ. ಇತ್ತೀಚೆಗೆ ಈ ಕಾಡುತ್ಪನ್ನುಗಳನ್ನು ಮಲಯಾಳಿ ಏಜೆಂಟರು, ಬಂಡವಾಳಶಾಹಿಗಳು ಖರೀದಿಸುವುದು ನಡೆಯುತ್ತಿದೆ. ಅವೆಲ್ಲವನ್ನೂ ನಾಗರಿಕ ಸಮಾಜ ಹೆಣೆದಿರುವ ವ್ಯವಸ್ಥಿತ ಜಾಲದ ಏಜೆಂಟರುಗಳು ಖರೀದಿಸುತ್ತಾರೆ.

**ಕೃಷಿಯ ಕೂಲಿ**

ಪ್ರಸ್ತುತ ಕುಂಬ್ರಿ ಮರಾಠಿಗರಲ್ಲಿ ಅತಿಹೆಚ್ಚಿಮ ಜನ ಅವಲಂಬಿಸಿರುವುದು ಕೃಷಿಕೂಲಿಯನ್ನು. ಕುಂಬ್ರಿ ಮರಾಠಿಗರಲ್ಲಿ ಭೂರಹಿತರೇ ಬಹುಸಂಖ್ಯಾತರು. ತಲೆಮಾರುಗಳಿಂದ ಇವರು ಅವಲಂಬಿಸಿದ್ದ ತುಂಡು ಭೂಮಿ ಇಂದು ಯಾರದೋ ವಶದಲ್ಲಿದೆ. ಹೀಗಾಗಿ ಕುಂಬ್ರಿ ಮರಾಠಿಗರಲ್ಲಿ ಹಲವರು ಕೃಷಿಕೂಲಿಯನ್ನು ಅವಲಂಬಿಸಿದ್ದಾರೆ. ಕುಂಬ್ರಿ ಮರಾಠಿಗರಲ್ಲಿ ಈಗ ಬೇರೆಯವರ ಗದ್ದೆಯಲ್ಲಿ ಕೃಷಿ ಕೂಲಿಗಳಾಗಿ ದುಡಿಯುತ್ತಿದದಾರೆ. ಇದರ ಪರಿಣಾಮವಾಗಿ ಬೇರೆಯವರ ಹೊಲದಲ್ಲಿ ಅಥವಾ ಗದ್ದೆಗಳಲ್ಲಿ ಅದರಲ್ಲೂ ಬಂಡವಾಳವನ್ನು ಕ್ರೋಢೀಕರಿಸಿಕೊಂಡಿರುವವರ ಗದ್ದೆಗಳಲ್ಲಿ ಕೃಷಿ ಕೂಲಿಗಳಾಗಿ ದುಡಿಯುತ್ತಿರುವುದನ್ನು ನೋಡಬಹುದು. ಈ ರೀತಿಯಾಗಿ ಕೆಲವರು ಕೂಲಿಯನ್ನು ತಮ್ಮ ಕಸುಬು ಮಾಡಿಕೊಂಡು ಜೀವನವನ್ನು ನಡೆಸುತ್ತಿದ್ದಾರೆ.

### ಕೃಷಿ ಮತ್ತು ಪಶುಪಾಲನೆಗಾಗಿ ಗುಡಿ ಕೈಗಾರಿಕೆ

ಕುಂಬ್ರಿ ಮರಾಠಿಗರು ಕೃಷಿ ಮತ್ತು ಪಶುಪಾಲನೆಗೆ ಪೂರಕವಾಗಿ ಕೆಲವು ಕರಕುಶಲ ವಸ್ತುಗಳನ್ನು ತಯಾರಿಸುವಲ್ಲಿ ಸಿದ್ಧಹಸ್ತರು. ಇವರು ಕಾಡಿನ ಮಧ್ಯೆಯೇ ಬೆಳೆದವರಾದ್ದರಿಂದ ಕಾಡಿನಲ್ಲಿ ಸಿಗುವ ವಸ್ತುಗಳನ್ನು ಬಳಸಿ ಕೆಲ ಉಪಯುಕ್ತ ಸಾಮಾಗ್ರಿಗಳನ್ನು ತಯಾರಿಸುತ್ತಾರೆ. ಕುಂಬ್ರಿ ಮರಾಠಿಗರು ಪಶುಪಾಲನೆಗೆ, ಕೃಷಿಗೆ ಬೇಟೆಗೆ, ಮೀನುಗಾರಿಕೆಗೆ ಕೆಲ ಉಪಕರಣಗಳನ್ನು ತಾವೇ ಸ್ವತಃ ತಯಾರಿಸುತ್ತಾರೆ. ಜೊತೆಗೆ ಕೃಷಿಗೆ ಪೂರಕವಾದ ಉಪಕರಣಗಳನ್ನೂ ತಾವೇ ತಯಾರಿಸಿಕೊಳ್ಳುತ್ತಾರೆ. ಬುಡಕಟ್ಟು ಸಮುದಾಯದಲ್ಲಿ ಬಹುಮಟ್ಟಿಗೆ ಎಲ್ಲರೂ ಚಾಪೆ ತಯಾರಿಕೆ, ಬುಟ್ಟಿ ಹೆಣೆಯುವಿಕೆ, ಬಿದರಿನ ವಸ್ತು ತಯಾರಿಕೆ, ನೇಯುವಿಕೆ ಹಾಗೂ ಹೆಣೆಯುವಿಕೆಯಲ್ಲಿ ವಿಶಿಷ್ಟ ಪರಿಣತಿ ಹೊಂದಿರುತ್ತಾರೆ. ಅವರಿಗೆ ಇದು ಕಲೆಯೂ ಹೌದು, ಉಪಕಸಬೂ ಹೌದು. ಈ ಕರಕುಶಲಕಲೆಯನ್ನು ಬುಡಕಟ್ಟು ಜನರು ಸಾಂಪ್ರದಾಯಿಕ ಹಾಗೂ ಭಾವನಾತ್ಮಕ ಮೋಹದಿಂದ ಕಾಪಾಡಿಕೊಂಡು ಬಂದಿದ್ದಾರೆ. ಕುಂಬ್ರಿ ಮರಾಠಿ ಸಮುದಾಯದ ಕರಕುಶಲ ಕಲೆಯನ್ನು ಅದ್ವಿತೀಯ, ಏಕಪಕ್ಷೀಯ, ಸಾಂಪ್ರದಾಯಿಕ ಕಲೆಗಳಾಗಿ ವಿಂಗಡಿಸಬಹುದು. ಬಿದಿರುಗಳು, ಗುಮಟೆ, ನೃತ್ಯ ಕೋಲು, ಗರಿಟೊಪ್ಪಿಗೆ, ಮುಂತಾದವು ರೂಢಿಗತ ಸಾಂಪ್ರದಾಯಿಕ ನೃತ್ಯ ಸಂಗೀತ ಕಾರ್ಯಕ್ರಮದಲ್ಲಿ ಉಪಯೋಗಿಸಲ್ಪಡುತ್ತವೆ. ಅವರು ತೊಟ್ಟಿಲು, ಬುಟ್ಟಿ, ಮರ, ಚಾಪೆ, ಸಿಂಬಿ, ಮೂಡೆ, ಟೊಪ್ಪಿಗೆ, ಬೀಸಣಿಕೆ, ಲಘು ಪಿಠೋಪಕರಣ, ದಿನನಿತ್ಯದ ಪ್ರಯೋಗಾತ್ಮಕತೆ, ಪ್ರತಿಭೆಗಳನ್ನು, ಬಲೆನೇಯುವಿಕೆ ಕಲೆಗಳು ಕುಂಬ್ರಿ ಮರಾಠಿಗರಲ್ಲಿ ಸಾಮುದಾಯಿಕ ಕಲಾ ಪ್ರತಿಭೆಯನ್ನು ತೋರಿಸುತ್ತವೆ. ಮೊದಲು ಕುಂಬ್ರಿ ಮರಾಠಿಗರು ಮರತೊಗಟೆಯಿಂದ ಪಾದುಕೆಗಳನ್ನು ತಯಾರಿಸುವುದು ಮತ್ತು ಕಾಳು-ಕಡಿ ಸಂಗ್ರಹಕ್ಕಾಗಿ ಪಣತಗಳನ್ನು ತಯಾರಿಸುವುದು, ಬಿದಿರು, ಈಚಲು, ನಾರಿನಿಂದ ಮಳೆ ಉಡುಪು, ಮೇಲು ಹೊದಿಕೆ, ಕೆರೆಕಟ್ಟೆಯಿಂದ ನೀರು ತರಲು, ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಸ್ತುಗಳನ್ನು ಸಾಗಿಸಲು ನಾವಿನಾಕಾರದ ಕಟ್ಟಿಗೆಯ ದೊನ್ನೆ ತಯಾರಿಸುತ್ತಿದ್ದರು. ಚಾಪೆ ಹೆಣೆಯುವಿಕೆಯು ಕುಂಬ್ರಿ ಮರಾಠಿ ಮಹಿಳೆಯರ ಅದ್ವಿತೀಯ ಕೌಶಲ್ಯ. ಚಾಪೆಯನ್ನು ಈಚಲ ಮರದ ಗರಿ, ತೆಂಗಿನ ಗರಿ ಮತ್ತು ಕರ್ಜೂರದ ಎಳೆಗರಿಯಿಂದ ಹೆಣೆಯುವರು. ಆನಂತರ ನಾರಿನ ಎಳೆಯಿಂದ ಹೊಲೆಯುವರು, ಇದು ಅತೀ ಕಲಾತ್ಮಕತೆಯಿಂದ ಜೋಡಿಸಿದ ವಸ್ತುವೆನಿಸುವುದು, ಅಲ್ಲದೇ ಬಹುಕಾಲ ತಾಳಬಲ್ಲ ಗೃಹಪಯೋಗಿ ಸಾಧನವಾಗಿದೆ, ಈ ತರಹದ ಚಾಪೆಗಳನ್ನು ವಿವಿಧ ಆಕಾರಗಳಲ್ಲಿ ತಯಾರಿಸಿ ಕುಂಬ್ರಿ ಮರಾಠಿ ಮಹಿಳೆಯರು ಗ್ರಾಮ ಸಂತೆ ಅಥವಾ ನಗರದ ಮಾರುಕಟ್ಟೆಗಳಲ್ಲಿ ಮಾರಾಟ

ಮಾಡುತ್ತಾರೆ, ಇವುಗಳಿಗೆ ಬಹಳ ಬೇಡಿಕೆಯೂ ಇದೆ. ಈ ಚಾಪೆ ಮಾರಾಟದ ಹಣ ಮಹಿಳೆಯರಿಗೆ ಸೇರಿದ್ದು, ಅವರ ವೈಯಕ್ತಿಕ ಖರ್ಚಿಗಾಗಿ ಉಪಯೋಗಿಸಲ್ಪಡುತ್ತದೆ. ಬುಟ್ಟಿ ಹೆಣೆಯುವಿಕೆಯು ಬಿದಿರು ಮೆಳೆ, ಈಚಲು, ತಾಳೆ ಗರಿಯಿಂದ ವಿವಿಧ ಆಕಾರಗಳಲ್ಲಿ ತಯಾರಿಸಲ್ಪಡುತ್ತದೆ. ಸಿಲಿಂಡರ್ ಆಕಾರದ ದೊಡ್ಡ ಬುಟ್ಟಿಗಳನ್ನು ಅರಣ್ಯ ಪ್ರದೇಶದಿಂದ ಒಣಗಿದ ಎಲೆ, ಹಣ್ಣು, ಹಂಪಲುಗಳನ್ನು ಹೆಕ್ಕಿ ತರಲು ಉಪಯೋಗಿಸುವರು. ದುಂಡಗಿನ ಬುಟ್ಟಿಗಳನ್ನು ಗೊಬ್ಬರ, ಬೀಜ ಮತ್ತು ಇನ್ನಿತರ ಧವಸ ಧಾನ್ಯ ತರಲು ಉಪಯೋಗಿಸುವರು. ಬಿದಿರು ಮೆಳೆಯ ಗರಿಯಿಂದ ತೊಟ್ಟಿಲು, ಸೌಟು, ಸಟ್ಟುಗ, ಟ್ರೇ, ಜರಡಿ, ಮುಂತಾದ ಗೃಹ ಸಲಕರಣೆಗಳನ್ನು ತಯಾರಿಸುವರು. ಈ ಸಿದ್ಧ ವಸ್ತುಗಳನ್ನು ಕುಂಬ್ರಿ ಮರಾಠಿ ಮಹಿಳೆಯರು ತಮ್ಮ ಜನರಿಗೆ ಮಾರುತ್ತಾರೆ, ಇಲ್ಲವೆ ಗ್ರಾಮದ ವಾರದ ಸಂತೆ ಅಥವಾ ನಗರದ ಮಾರುಕಟ್ಟೆಗಳಲ್ಲಿ ಮಾರಾಟ ಮಾಡುತ್ತಾರೆ. ಈ ಗುಡಿ ಕೈಗಾರಿಕೆಯಿಂದ ಕುಂಬ್ರಿ ಮರಾಠಿ ಸಮುದಾಯದ ಆದಾಯ ವೃದ್ಧಿಗಾಗಿ ಆರ್ಥಿಕ ಸುಧಾರಣೆಯಲ್ಲಿ ಪ್ರಮುಖ ಪಾತ್ರವಹಿಸುವುದು ಈ ಕರಕುಶಲ ಕಲೆಯಿಂದ ಅವರ ಎಲ್ಲ ದಿನನಿತ್ಯದ ಬೇಡಿಕೆಗಳು ಪೂರೈಸುವುದಿಲ್ಲ. ಇವುಗಳನ್ನು ಕೂಡ ನೇರ ಮಾರಾಟ ಮಾಡುವ ಹಾಗಿಲ್ಲ, ಬಿದಿರು ಬೆತ್ತದ ಮೇಲೆ ನಿಷೇಧ ಇರುವುದರಿಂದ ಬಹಿರಂಗವಾಗಿ ಉತ್ಪಾದಿಸುವ ಹಾಗಿಲ್ಲ, ಅದಲ್ಲದೇ ಇವರ ಕಲಾ ನಿಪುಣತೆಯನ್ನು ಮಧ್ಯ ವರ್ತಿಗಳಿಗೆ ಕಳ್ಳದಾರಿಗಳಲ್ಲಿ ಬರುವ ಏಜೆಂಟರು ಇವುಗಳನ್ನು ಅತಿ ಕಡಿಮೆ ಬೆಲೆಯಲ್ಲಿ ಪಡೆದು ಶೋಷಿಸುವುದರಿಂದ ಈ ಸಮುದಾಯದ ಆರ್ಥಿಕ ಪರಿಸ್ಥಿತಿ ಸುಧಾರಣೆಯಾಗದು, ಹೀಗಾಗಿ ಇವರು ಈಗ ಬುಟ್ಟಿ, ಚಾಪೆ, ಕಾಯಕವನ್ನು ಮುಂದುವರಿಸಿದ್ದಾರೆ.

**ಕುಂಬ್ರಿ ಮರಾಠಿಗರ ವರ್ತಮಾನದ ದುಡಿಮೆಯ ಮಾದರಿಗಳು**

**ವರ್ತಮಾನದ ಕೃಷಿ**

ಕುಂಬ್ರಿ ಮರಾಠಿಗರ ಮುಖ್ಯ ಕಸುಬು ಕೃಷಿ, ಕೃಷಿ ಕೂಲಿ, ಅರಣ್ಯ ಕಿರು ಉತ್ಪನ್ನಗಳ ಸಂಗ್ರಹವೇ ಆಗಿದೆ. ಆರಂಭದಲ್ಲಿ ಸ್ಥಳಾಂತರ ಬೇಸಾಯ ಮಾಡಿಕೊಂಡಿದ್ದ ಕುಂಬ್ರಿ ಮರಾಠಿಗರು ಪಶ್ಚಿಮ ಘಟ್ಟದ ಕಾಡುಗಳ ಕೊಳ್ಳ ಪ್ರದೇಶಗಳಲ್ಲಿ ನೆಲೆ ನಿಂತರು. ಆರಂಭದಲ್ಲಿ ರಾಗಿ ಬೆಳೆಯುತ್ತಿದ್ದು ಈಗ ಕೆಲವರು ಸಣ್ಣ ಪ್ರಮಾಣದಲ್ಲಿ ಅಡಿಕೆ, ಕಬ್ಬು, ಯಾಲಕ್ಕಿ, ಕಾಳು ಮೆಣಸು, ಬಾಳೆ, ತೆಂಗು ಬೆಳೆಯುತ್ತಿದ್ದಾರೆ. ಹೀಗೆ ಬೆಳೆದರೂ ಸಹ ಮುಖ್ಯ ಕಸುಬು ಕಿರುಅರಣ್ಯ ಉತ್ಪನ್ನಗಳ ಸಂಗ್ರಹವೆ ಆಗಿರುತ್ತದೆ. ಕೆಲವರು ಹತ್ತಿರದ ಗ್ರಾಮಗಳಿಗೆ ಕೃಷಿ

ಕೂಲಿಗಾಗಿ ಹೋಗುತ್ತಿದ್ದಾರೆ. ಅರಣ್ಯ ಉತ್ಪನ್ನಗಳ ಲಭ್ಯತೆಯ ಪ್ರಮಾಣ ಇಳಿಕೆಯಿಂದ ಕೆಲವು ಕಡೆಗಳಲ್ಲಿ ಹತ್ತಿರದ ಊರುಗಳಿಗೆ ಕೃಷಿ ಕೂಲಿಗಾಗಿ ಹಾಗೂ ಇತರ ಕೂಲಿ ಕೆಲಸಗಳಿಗಾಗಿ ಹೋಗುತ್ತಿರುವುದು ಕ್ಷೇತ್ರಕಾರ್ಯದ ಸಮಯದಲ್ಲಿ ಕಂಡು ಬರುತ್ತದೆ. ಸಾಮಾನ್ಯವಾಗಿ ಈ ಸಮುದಾಯಗಳು ಸಂಗ್ರಹಿಸಿದ ಅರಣ್ಯ ಉತ್ಪನ್ನಗಳನ್ನು ದಲ್ಲಾಳಿಗಳು ಇವರ ಹಳ್ಳಿಗಳಿಗೆ ಬಂದು ಖರೀದಿಸಿ ಅವರೇ ನಿಗದಿಪಡಿಸಿದ ದರಕೊಟ್ಟು ಹೋಗುತ್ತಿದ್ದರು. ಇದರಿಂದ ತಮಗೆ ಆಗುತ್ತಿರುವ ಮೋಸ ಅಥವಾ ತಾವು ಸಂಗ್ರಹಿಸಿದ ಉತ್ಪನ್ನಗಳಿಗೆ ಇರುವ ಬೆಲೆ ತಿಳಿದಿರಲಿಲ್ಲ. ಈಗ ಕೆಲವು ಕಡೆಗಳಲ್ಲಿ ಈ ಸಮುದಾಯದ ಯುವಕರೇ ಉತ್ಪನ್ನಗಳನ್ನು ಸಂಗ್ರಹಿಸಿ ನ್ಯಾಯಯುತ ಬೆಲೆಗೆ ಮಾರುವ ಕಾರ್ಯದಲ್ಲಿ ತೊಡಗಿರುವುದು ಕಂಡು ಬರುತ್ತದೆ. ಇದರಿಂದ ದಲ್ಲಾಳಿಗಳ ಹಾವಳಿ ಕಡಿಮೆ ಆಗಿದೆ ಎಂದು ಸಮುದಾಯದ ಹಿರಿಯರು ಹೇಳುತ್ತಾರೆ. ಆರಂಭದಲ್ಲಿ ಸ್ಥಳಾಂತರ ಬೇಸಾಯ ಪದ್ಧತಿ ಹೊಂದಿರುವ ಕುಂಬ್ರಿ ಮರಾಠಿಗರ ಕುಟುಂಬಗಳು ನೆಲಸಮತಟ್ಟು ಮಾಡಿ ಭತ್ತ, ಕಬ್ಬು, ಅಡಿಕೆ, ಬಾಳೆ ಬೆಳೆಯುತ್ತಿದ್ದರೂ ಸಹ ಅದರ ಪ್ರಮಾಣ ಅತಿ ಚಿಕ್ಕ ಮಟ್ಟದ್ದಾಗಿರುತ್ತದೆ. ಕಾಡು ಪ್ರದೇಶದಿಂದಾವೃತ ಹಿಡುವಳಿಗಳು 10 ಗುಂಟೆ, 20 ಗುಂಟೆ ಜಾಗವನ್ನು ಹೊಂದಿದ್ದು, ಇವರಲ್ಲಿ 1–2 ಎಕರೆ ಹೊಂದಿದವರು ಎಂದರೆ ದೊಡ್ಡ ಜಮೀನ್ದಾರರಿದ್ದಂತೆ. ಸಾಮಾನ್ಯವಾಗಿ ಸಣ್ಣ ಪುಟ್ಟ ಜಮೀನು ಹೊಂದಿದವರೂ ಸಹ ಆಕಳು, ಎಮ್ಮೆ, ಕುರಿ, ಎತ್ತುಗಳನ್ನೂ ಸಾಕುವುದು ಸಾಮಾನ್ಯವಾಗಿದೆ. ದನಕರುಗಳನ್ನು ತುಂಬಾ ಪ್ರೀತಿಯಿಂದ ಸಾಕುವ ಇವರು ದೀಪಾವಳಿ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸಿ ದನಕರುಗಳನ್ನು ಪೂಜಿಸುತ್ತಾರೆ. ವಿಶೇಷವಾಗಿ ಹಾಲು ಮತ್ತು ಗೊಬ್ಬರಕ್ಕಾಗಿ ದನಗಳನ್ನು ಸಾಕುವುದೇ ಹೆಚ್ಚು. ಕುಂಬ್ರಿ ಮರಾಠಿಗರು ಮಾಡುವ ಎಲ್ಲಾ ಕೃಷಿ ಚಟುವಟಿಕೆಗಳು ನೈಸರ್ಗಿಕ ಕೃಷಿ, ಸಾವಯವ ಕೃಷಿ ಪದ್ಧತಿ ಎಂಬುವುದು ವಿಶೇಷ. ಇವರಲ್ಲಿ ಶೇಕಡಾ 5 ರಿಂದ 10 ಜನ ರಾಸಾಯನಿಕ ಬಳಸುವುದು ಕಂಡು ಬಂದರೂ ಸಹ ಅದು ತುಂಬಾ ಕಡಿಮೆ ಪ್ರಮಾಣದಲ್ಲಿ. ಈ ಸಮೂದಾಯದಲ್ಲಿ ಈವರೆಗೆ 09 ಜನ ಶಿಕ್ಷಕರು, ಪೋಸ್ಟ್ ಮಾಸ್ಟರ್, ಕ್ಲರ್ಕ, ಅರಣ್ಯ ಇಲಾಖೆಯಲ್ಲಿ ಗಾರ್ಡ್ ಇತ್ಯಾದಿ ಆಗಿ ನೇಮಕಗೊಂಡಿದ್ದಾರೆ. ಕೆಲವರು ಕೋಳಿ ಫಾರಂ ಮಾಡಿದ್ದಾರೆ. ಉಳಿದವರಲ್ಲಿ ಕೆಲವರು ಗುತ್ತಿಗೆ ಇತ್ಯಾದಿ ವ್ಯಾಪಾರ ವ್ಯವಹಾರಗಳನ್ನು ಮಾಡಿಕೊಂಡು ಶ್ರಮಿಸುತ್ತಿರುವುದನ್ನು ಗಮನಿಸಲಾಗಿದೆ.

ಕುಂಬ್ರಿ ಮರಾಠಿ ಸಮುದಾಯದವರು ಬೆಟ್ಟ ಪ್ರದೇಶ ಮತ್ತು ಕಣಿವೆಯ ಇಳಿಜಾರು ಪ್ರದೇಶಗಳಲ್ಲಿ ನೆಲೆನಿಂತು ಕೃಷಿಕರಾಗಿ ಬದುಕುತ್ತಿದ್ದಾರೆ. ಮೂಲತಃ ಕುಮ್ರಿ ಬೇಸಾಯ ಪದ್ಧತಿಯನ್ನು

ಅನುಸರಿಸಿ ಗಣ ವ್ಯವಸ್ಥೆಯಲ್ಲಿ ಬದುಕುತ್ತಿದ್ದ ಕುಂಬ್ರಿ ಮರಾಠಿಗರು ಭೂಮಿಯ ಖಾಸಗಿ ಒಡೆತನವನ್ನು ಹೊಂದಿದ್ದಾರೆ. ಭೂಮಿಯ ಆಕಾರ ಹಾಗೂ ಗುಣವನ್ನು ಅರಿತ ಸಾಗುವಳಿ ಯೋಜನೆಗಳು ಬುಡಕಟ್ಟು ಸಮುದಾಯದವರ ಆರ್ಥಿಕ ಸ್ಥಿತಿ ಹಾಗೂ ಜೀವನಮಟ್ಟವನ್ನು ನಿಶ್ಚಿತವಾಗಿ ನಿರ್ಧರಿಸಬಲ್ಲವು. ಒಂದು ಗಮನಾರ್ಹ ಸಂಗತಿ ಎಂದರೆ ಬಹುತೇಕ ಕುಂಬ್ರಿ ಮರಾಠಿ ಕುಟುಂಬಗಳು ಒಂದು ಎಕರೆಗಿಂತ ಕಡಿಮೆ ಸಾಗುವಳಿಗೆ ಯೋಗ್ಯ ಜಮೀನು ಪಡೆದಿದ್ದು, ಕೃಷಿ ಯೋಗ್ಯವಲ್ಲದ ಜಮೀನಿನ ಪ್ರಮಾಣವೂ ಸಾಕಷ್ಟು ಪ್ರಮಾಣದಲ್ಲಿದೆ. ಹೀಗಾಗಿ ಒಣ ಭೂಮಿ ಹಾಗೂ ಕೃಷಿ-ಅಯೋಗ್ಯ ಭೂಮಿ ಹೊಂದಿದ ಕುಂಬ್ರಿ ಮರಾಠಿ ಸಮುದಾಯಕ್ಕೆ ಆರ್ಥಿಕ ಕೊರತೆ ಹಾಗೂ ಇಳಿಮುಖ ಜೀವನ ಮಟ್ಟಕ್ಕೆ ಇದೇ ಕಾರಣ. ಕರ್ನಾಟಕ ಸರಕಾರದ ಭೂಸುಧಾರಣೆ ಕಾಯ್ದೆ-1971ರಲ್ಲಿ ಜಾರಿಗೆ ಬಂದ ನಂತರ ಕುಂಬ್ರಿ ಮರಾಠಿ ಸಮುದಾಯದ ಅನೇಕ ಗೇಣಿದಾರರು ತಮ್ಮ ಭೂಮಾಲೀಕರಿಂದ ಕೃಷಿ ಭೂಮಿ ಪಡೆದು ಕೃಷಿ ಮಾಡುತ್ತಿದ್ದಾರೆ. ಮೊದಲು ಇವರು ಗೇಣಿಗೆ ಜಮೀನನ್ನು ಪಡೆದು ಗೇಣಿದಾರರಾಗಿದ್ದರು. ಹಲವೆಡೆ ಕುಂಬ್ರಿ ಮರಾಠಿ ಸಮುದಾಯದ ಗೇಣಿದಾರರು ಭೂಮಾಲಿಕರ ಹೆದರಿಕೆಯಿಂದ ಮತ್ತು ತಮ್ಮ ಅಜ್ಞಾನ ಹಾಗೂ ಬಡತನಗಳಿಂದ ಭೂಮಿಯ ಮೇಲಿನ ತಮ್ಮ ಸಹಜ ಹಕ್ಕನ್ನು ಮಂಡಿಸಲು ಸಾಧ್ಯವಾಗಲಿಲ್ಲ. ಈ ಕಾರಭಕ್ಕಾಗಿ ಕುಂಬ್ರಿ ಮರಾಠಿ ಸಮುದಾಯದ ಜನ ಕೃಷಿ ಕೂಲಿಗಳಾಗಿ ತಮ್ಮ ಗೇಣಿ ಜಮೀನನ್ನು ತೊರೆದು ಬೆಟ್ಟ-ಗುಡ್ಡಗಾಡು ಪ್ರದೇಶಗಳಿಗೆ ವಲಸೆ ಹೋದರು. ಅನಂತರ ಈ ಪ್ರದೇಶಗಳಲ್ಲಿ ಕೃಷಿ ಯೋಗ್ಯ ಭೂಮಿ ಪಡೆಯಲು ಸಾಧ್ಯವಾಯಿತು. ಕುಂಬ್ರಿ ಮರಾಠಿ ಸಮುದಾಯ ಕೃಷಿ ಚಟುವಟಿಕೆಗಳಲ್ಲಿ ಪರಿಣಿತಿ ಹೊಂದಿದ್ದು ಶ್ರಮಜೀವಿಗಳಾಗಿದ್ದಾರೆ. ಇವರಲ್ಲಿ ಖಾಯಂ ಕೃಷಿಕರಾಗಿ ನೆಲೆಸಿದ ಕುಂಬ್ರಿ ಮರಾಠಿ ಜನರು ಉಳಿಮೆ-ಕೃಷಿ ಮಾಡುತ್ತಿರುವವರು. ಅವರು ಸಾಮಾನ್ಯವಾಗಿ ಭತ್ತ ಹಾಗೂ ಬೇಳೆ ಕಾಳುಗಳ ಬೇಸಾಯ ಮಾಡುತ್ತಿದ್ದಾರೆ. ಇವಲ್ಲದೆ ಸಿಹಿ ಗೆಣಸು ಕೂಡಾ ಬೆಳೆಯುತ್ತಾರೆ. ಇತ್ತೀಚೆಗೆ ಕೆಲವು ಪ್ರಗತಿಪರ ಮನೋಭಾವದ ಕುಂಬ್ರಿ ಮರಾಠಿ ಸಮುದಾಯ ವಾಣಿಜ್ಯ ಬೆಳೆಗಳೆನಿಸಿದ ಕಬ್ಬು, ಅರಿಶಿಣ, ಮೆಣಸಿನಕಾಯಿ, ಶುಂಠಿ, ತೆಂಗು ಹಾಗೂ ಅಡಿಕೆ ಕೂಡ ಬೆಳೆಯುತ್ತಿದ್ದಾರೆ. ಕೆಲವರು ಕಾಯಿಪಲ್ಲೆ ಹಾಗೂ ಹಣ್ಣು-ಹಂಪಲು ಬೆಳೆಯುವರು. ಸಾಮಾನ್ಯವಾಗಿ ಕುಂಬ್ರಿ ಮರಾಠಿ ಸ್ತ್ರೀಯರೇ ತಮ್ಮ ಹಿತ್ತಲ ಕೈತೋಟಗಳಲ್ಲಿ ತರಕಾರಿ ಹಾಗೂ ಹಣ್ಣು-ಹಂಪಲ ಬೆಳೆಯುವರು. ಕೆಲವರು ತಮ್ಮ ಬತ್ತದ ಕೊಯ್ಲು ಮುಕ್ತಾಯವಾದ ನಂತರ ಬತ್ತದ ಗದ್ದೆಗಳಲ್ಲಿಯೇ ತರಕಾರಿ ಬೆಳೆಯುತ್ತಾರೆ. ಪ್ರತಿ ವಾರವೂ ಸಮೀಪದ ಸಂತೆಗಳಲ್ಲಿ ತಮ್ಮ ಕರಕುಶಲ ವಸ್ತುಗಳೊಂದಿಗೆ

ಹೆಚ್ಚು ಬೆಳೆದ ತರಕಾರಿಯನ್ನು ಮಾರಾಟ ಮಾಡಿ ಉಪ ಆದಾಯ ಪಡೆದು ತಮ್ಮ ದಿನನಿತ್ಯದ ಅವಶ್ಯಕತೆಗಳಾದ ಬಟ್ಟೆ-ಬರೆ, ಕಿರಾಣಿ, ಪಾತ್ರೆ-ಪಗಡಗಳನ್ನು ಖರೀದಿಸುವವರು. ಗಿಡ ಮೂಲಿಕೆಯ ಸಸ್ಯಗಳನ್ನು ಬೆಳೆಯುತ್ತಿದ್ದು ಇವುಗಳಿಗೆ ವಾರದ ಸಂತೆಗಳಲ್ಲಿ ಬಹಳ ಬೇಡಿಕೆ ಇದೆ.

ಕುಂಬ್ರಿ ಮರಾಠಿಗರಿಗೆ ತಮ್ಮ ಪೂರ್ವಜರಿಂದ ತಲಾಂತರಗಳಿಂದ ಬಂದ ಕಾನೂನುಬದ್ಧ ದಾಖಲೆಗಳಿರುವ ಕೃಷಿ ಭೂಮಿ ಇಲ್ಲ. ಇವರಲ್ಲಿ ಬಹುಪಾಲು ಕುಟುಂಬಗಳು ಕೃಷಿಕೂಲಿಗಳಾಗಿ ಬದಕುತ್ತಿವೆ. ನದಿಗಳ ತಡದಲ್ಲಿ, ನಿರ್ಜನ ಕಣಿವೆಗಳಲ್ಲಿ ಸಿಗುವ ಸ್ವಲ್ಪ ಭೂಮಿಯನ್ನೇ ಇವರು ಕೃಷಿ ಯೋಗ್ಯವಾಗಿಸಿಕೊಂಡಿದ್ದಾರೆ. ಈ ಭೂಮಿ ಯಾವುದೇ ಕಾಲಘಟ್ಟದ ಕಾನೂನುಗಳ ಪ್ರಕಾರ ಪಟ್ಟ ಭೂಮಿಯಾಗಿ ಕೈಸೇರಿದೆ. ಕುಂಬ್ರಿ ಮರಾಠಿಗರಿಗೆ ಇರುವ ಕೃಷಿ ಭೂಮಿ ಎಕ್ಕರೆಗಟ್ಟಲೆ ಇಲ್ಲ, ಅದೇನೇ ಇದ್ದರು ಗುಂಟೆಗಳಲ್ಲಿದೆ. ಈ ಅಲ್ಪ ಕೃಷಿ ಜಮೀನು ಕುಂಬ್ರಿ ಮರಾಠಿಗರ ಕುಟುಂಬಗಳನ್ನು ಆರ್ಥಿಕವಾಗಿ ಸಬಲೀಕರಿಸಲು ಸಾಧ್ಯವಿಲ್ಲ. ನಾನು ಅಧ್ಯಯನ ಮಾಡಿದ ಎಂಟು ತಾಲೂಕುಗಳ ಕುಂಬ್ರಿ ಮರಾಠಿಗರ **3387** ಕುಟುಂಬಗಳ ಭೂ ಹಿಡುವಳಿ ಈ ಕೆಳಗಿನಂತಿದೆ.

## ಕೋಷ್ಟಕ 2

### ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ತಾಲೂಕುವಾರು ಕುಟುಂಬ ಭೂಹಿಡುವಳಿ ಹಾಗೂ ಭೂಶ್ರೇಣಿಗಳ ಪ್ರಮಾಣ

| ಕ್ರ.ಸಂ. | ತಾಲೂಕುಗಳು | ಕುಟುಂಬ | ಭೂ ಹಿಡುವಳಿ (ಎಕರೆಗಳಲ್ಲಿ) | | | ಭೂ ಹಿಡುವಳಿ ಶ್ರೇಣಿಗಳು (ಎಕರೆಗಳಲ್ಲಿ) | | | | | |
|---|---|---|---|---|---|---|---|---|---|---|---|
| | | | ಒಣ ಭೂಮಿ | ನೀರಾ ವರಿ | ಒಟ್ಟು | 2 ಎಕರೆ ಮೇಲ್ಪಟ್ಟು ಎ | 1–2 ಎಕರೆ ಬಿ | 20 ಗುಂಟೆ 1 ಎಕರೆ ಸಿ | 10–20 ಗುಂಟೆ ಡಿ | 10 ಗುಂಟೆ ಇ | ಭೂ ರಹಿತ ಎಫ್ |
| 1 | ಅಂಕೋಲಾ | 247 | 18 | 46 | 64 | 4 | 9 | 25 | 32 | 18 | 159 |
| 2 | ಕುಮಟಾ | 399 | 15 | 63 | 78 | 6 | 11 | 28 | 34 | 12 | 308 |
| 3 | ಹೊನ್ನಾವರ | 328 | 19 | 56 | 75 | 5 | 13 | 19 | 42 | 15 | 234 |
| 4 | ಭಟ್ಕಳ | 401 | 12 | 86 | 98 | 8 | 19 | 26 | 36 | 8 | 304 |
| 5 | ಶಿರಸಿ | 1282 | 10 | 115 | 125 | 12 | 22 | 30 | 26 | 6 | 1186 |
| 6 | ಸಿದ್ದಾಪುರ | 429 | 6 | 56 | 62 | 3 | 18 | 42 | 18 | 13 | 335 |
| 7 | ಯಲ್ಲಾಪುರ | 188 | 8 | 63 | 71 | 6 | 12 | 24 | 38 | 8 | 100 |
| 8 | ಮುಂಡಗೊಡ | 113 | 12 | 80 | 92 | 16 | 29 | 31 | 18 | 4 | 15 |
| | **ಒಟ್ಟು** | **3387** | **100** | **565** | **665** | **60** | **133** | **225** | **244** | **84** | **2641** |

ಉತ್ತರ ಕನ್ನಡದ ಎಂಟು ತಾಲೂಕುಗಳ 3387 ಕುಟುಂಬಗಳಲ್ಲಿ 60 ಕುಟುಂಬಗಳು ಮಾತ್ರ 2 ಎಕರೆ ಮೇಲ್ಪಟ್ಟು ಕೃಷಿ ಭೂಮಿಯನ್ನು ಹೊಂದಿವೆ. 1 ರಿಂದ 2 ಎಕರೆ ಕೃಷಿ ಜಮೀನು ಹೊಂದಿರುವ ಕುಟುಂಬಗಳು 133ರಷ್ಟು ಕುಟುಂಬಗಳು 20 ಗುಂಟೆಯಿಂದ 1 ಎಕರೆವರೆಗೆ ಜಮೀನು ಹೊಂದಿದೆ, ಅಂದರೆ ಈ ಜಮೀನು 219 ಕುಟುಂಬಗಳಲ್ಲಿ ಹಂಚಿಕೆಯಾಗಿದೆ. 1 ರಿಂದ 20 ಗುಂಟೆವರೆಗೆ ಜಮೀನು ಹೊಂದಿರುವ ಕುಟುಂಬಗಳು 225 ಕುಟುಂಬಗಳು. ಇನ್ನೂ 10 ಗುಂಟೆ ಕೃಷಿ ಜಮೀನು ಹೊಂದಿರುವುದು 84 ಕುಟುಂಬಗಳು ಮಾತ್ರ. ಭೂರಹಿತ ಕುಟುಂಬಗಳು 2641.




ಕುಂಬ್ರಿ ಮರಾಠಿ ಸಮುದಾಯದ ಶೇ 85 ಕುಟುಂಬಗಳು ಭೂರಹಿತವಾಗಿವೆ. ಈ ಬೃಹತ್ ಸಂಖ್ಯೆಯ ಕುಟುಂಬಗಳು ಅವಲಂಬಿಸಿರುವುದು ಕೃಷಿಕೂಲಿಯನ್ನು. ಮಲೆನಾಡಿನ ಆದಿವಾಸಿಗಳಲ್ಲಿ ಅತ್ಯಧಿಕ ಸಂಖ್ಯೆಯ ಕೃಷಿಕೂಲಿಗಳಾಗಿ ಬದುಕುತ್ತಿರುವವರು ಮುಂಬ್ರಿ ಮರಾಠಿಗರೇ ಆಗಿದ್ದಾರೆ.

## ಕೋಷ್ಟಕ 3

### ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ಲಿಂಗವಾರು ಕಸುಬುಗಳ ಪ್ರಮಾಣ

| ಕಸುಬುಗಳು | ಗಂಡು | ಹೆಣ್ಣು | ಒಟ್ಟು | % |
|---|---|---|---|---|
| ಕೃಷಿ/ಕೃಷಿಕೂಲಿ | 4760 | 4736 | 9496 | 82.65 |
| ದಿನಗೂಲಿ | 680 | 630 | 1310 | 11.4 |
| ಮನೆಕೆಲಸ | 68 | 279 | 347 | 3.02 |
| ತರಕಾರಿ ವ್ಯಾಪಾರ | 51 | 149 | 200 | 1.741 |
| ಹೂವಿನ ವ್ಯಾಪಾರ | 12 | 40 | 52 | 0.453 |
| ಕಾಡುಜನ್ಯ ಮಾರಾಟ | 85 | 0 | 85 | 0.74 |
| ಕಟ್ಟಿಗೆ ಮಾರಾಟ | 0 | 0 | 0 | 0 |
| **ಒಟ್ಟು** | **5656** | **5834** | **11490** | |

ಈ ಅಧ್ಯಯನಕ್ಕಾಗಿ ನಾನು ಸಮೀಕ್ಷೆ ಮಾಡಿದ ಕುಂಬ್ರಿ ಮರಾಠಿ ಸಮುದಾಯದಲ್ಲಿ ಶೇ 82.65 ಜನ ಕೃಷಿಕೂಲಿಗಳಾಗಿ ಬದುಕುತ್ತಿದ್ದಾರೆ. ಶೇ 11.4 ಜನ ದಿನಗೂಲಿ, ಶೇ 3.02 ಜನ ಮನೆಕೆಲಸ, ಉಳಿದಂತೆ ಸಣ್ಣಮಟ್ಟ ವ್ಯಾಪಾರಗಳನ್ನು ನಡೆಸುತ್ತಿದ್ದಾರೆ. ಪಾರಂಪರಿಕ ಕೃಷಿಕರಾದ ಕುಂಬ್ರಿ ಮರಾಠಿಗರಲ್ಲಿ ಹೆಚ್ಚಿನವರು ವರ್ತಮಾನದಲ್ಲಿ ಕೃಷಿ ಕೂಲಿಗಳಾಗಿ ಬದುಕುತ್ತಿದ್ದಾರೆ. ಕೂಲಿ ಎಂದರೆ ಬೇರೆಯವರ ಜಮೀನಿನಲ್ಲಿ ಗೊತ್ತುಪಡಿಸಿದ ಕೆಲಸಕ್ಕಾಗಿ ಸಂಬಳದ ರೂಪದಲ್ಲಿ ಹಣ ಇಲ್ಲವೆ ಧಾನ್ಯಗಳನ್ನು ಪರ್ಯಾಯವಾಗಿ ಪಡೆಯುವುದು. ಕೊಪ್ಪಗಳಲ್ಲಿ ಹೆಚ್ಚಾಗಿ ಪುರುಷರಷ್ಟೇ ಮಹಿಳೆಯರು ಕೃಷಿ ಕೂಲಿ ಮಾಡಲು ಹೋಗುವುದು ಕಂಡುಬಂದಿತು. ಕುಂಬ್ರಿ ಮರಾಠಿ ಮಹಿಳೆಗೆ ಕೃಷಿ ಕೂಲಿ ಮಹತ್ವವಾದ ಆರ್ಥಿಕ ಚಟುವಟಿಕೆಯಾಗಿದೆ, ಶ್ರಮಕ್ಕೆ ಪ್ರತಿಫಲವಾಗಿ ಇವರು ಪಡೆಯುವ ಕೂಲಿಯು ಅವರ ಆರ್ಥಿಕ ಸ್ಥಿತಿಗತಿಯ ಜೊತೆಗೆ ಇವರ ಸಾಮಾಜಿಕ ಜೀವನ ವಿಧಾನವನ್ನು ಸಹ ತೋರಿಸುತ್ತದೆ. ಕೂಲಿ ಮಾಡಲು ಮೇಲ್ಜಾತಿಯ ಹಾಗೂ ತಮ್ಮ ಸುತ್ತಮುತ್ತಲಿನ ಕೃಷಿಕರ ಜಮೀನುಗಳಿಗೆ, ತೋಟಗಳಿಗೆ ಹೋಗುತ್ತಾರೆ. ಕೃಷಿ ಕೂಲಿಯನ್ನು ಸಾಮಾನ್ಯವಾಗಿ ಮಳೆಗಾಲ ಕಳೆದು ಚಳಿಗಾಲ ಪ್ರಾರಂಭವಾಗುತ್ತಿದ್ದಂತೆಯೇ ಹಾಗೂ ನಾಟಿ ಮಾಡುವಾಗ ಮಾಡುತ್ತಾರೆ.

ಬಹಳಷ್ಟು ಕುಂಬ್ರಿ ಮರಾಠಿ ಮಹಿಳೆಯರಿಗೆ ಉತ್ಪಾದನಾ ಮಾರ್ಗವಾಗಿ ಕುಟುಂಬದ ನಿರ್ವಹಣೆಗೆ ಕಂಡುಕೊಂಡ ಪರ್ಯಾಯ ಮಾರ್ಗಗಳಲ್ಲಿ ಕೃಷಿ ಕೂಲಿ ಮುಖ್ಯವಾಗಿದೆ.

ಕೂಲಿಯನ್ನು ಬೆಳಿಗ್ಗೆಯಿಂದ ಸಂಜೆಯವರೆಗೆ ನಿಗದಿಪಡಿಸಲಾಗಿದ್ದರು. ದಿನದ ಕೂಲಿ ಮಾಡುವವರಿಗೆ ಸಾಮಾನ್ಯವಾಗಿ ದಿನವಿಡೀ ದುಡಿದರು 50–60 ರೂಪಾಯಿ ಕೂಲಿ ಹಣ ಅಥವಾ ನಾಲ್ಕು ಕೊಳಗ ಭತ್ತ ನೀಡಲಾಗುತ್ತದೆ. ಕ್ಷೇತ್ರಕಾರ್ಯ ಮಾಡುವ ಸಮಯದಲ್ಲಿ ನಾನು 'ನೀವು ಯಾಕೆ ಇಷ್ಟು ಕಡಿಮೆ ಕೂಲಿ ಹಣ ಪಡೆಯುತ್ತೀರಿ? ಹೆಚ್ಚಿಗೆ ಹಣ ಕೇಳುವುದಿಲ್ಲ ಏಕೆ? ಇಷ್ಟೇ ಭತ್ತ ಹೇಗೆ ತಾನೇ ಸಾಕಾಗುತ್ತದೆ?' ಎಂದು ಪ್ರಶ್ನೆಯನ್ನು ಕೇಳಿದರೆ, 'ನಾವೇನಾದರೂ ಹೆಚ್ಚಿಗೆ ಕೂಲಿ ಹಣ, ಒಳ್ಳೆಯ ಅಕ್ಕಿ, ಹೆಚ್ಚಿಗೆ ಭತ್ತ ಕೊಡಿ ಎಂಬುದಾಗಿ ಕೇಳಿದರೆ ನಾಳೆಯಿಂದ ಕೆಲಸಕ್ಕೆ ಬರಬೇಡಿ ಅಂತ ಕೆಲಸದಿಂದ ತೆಗೆಯುತ್ತಾರೆ. ಈ ಕೂಲಿ ಕೆಲಸ ಮಾಡಿದರೆ ನಮಗೆ ಸಂಜೆ ಊಟ ಸಿಗುವುದು, ಕಾರಣ ಕೊಟ್ಟಷ್ಟನ್ನು ಪಡೆದು ಎದುರು ಮಾತನಾಡದೆ ದುಡಿಯುತ್ತೇವೆ' ಎಂದುತ್ತರಿಸಿದರು. ಕುಂಬ್ರಿ ಮರಾಠಿ ಸಮುದಾಯದವರು ಹವ್ಯಕ ಬ್ರಾಹ್ಮಣ, ಕೊಂಕಣಿ, ನಾಡವ, ಶೆಟ್ಟಿ, ಜಾತಿಯ ಗದ್ದೆ, ತೋಟಗಳಲ್ಲಿ ಕೂಲಿ ಮಾಡಲು ಹೋಗುತ್ತಾರೆ. ಸರಕಾರದ ಉದ್ಯೋಗ ಖಾತ್ರಿ ಯೋಜನೆಯ ಮಾಹಿತಿ ಇವರಿಗಿಲ್ಲ. ವಾರದ 7 ದಿನಗಳು ಇವರು ಕೂಲಿ ಮಾಡುತ್ತಾರೆ. ಮನೆಯಲ್ಲಿ 'ಒಂದು ದಿನ ವಿಶ್ರಾಂತಿ ತೆಗೆದುಕೊಂಡರೆ ಸಂಜೆ ಊಟದ ಗತಿ ಏನು?' ಎಂದು ವಿಶ್ರಾಂತಿ ಇಲ್ಲದೆ ಕುಂಬ್ರಿ ಮರಾಠಿ ಸಮುದಾಯದ ಜನ ದುಡಿಯುತ್ತಾರೆ ಹಾಗೆ ಪುರುಷರಿಗೆ ಹೋಲಿಸಿದರೆ ಅವರಿಗಿಂತ ಚೆನ್ನಾಗಿ, ಹೆಚ್ಚಾಗಿ ಕೆಲಸ ಮಾಡುವ ಮಹಿಳೆಯರಿಗೆ ಕೂಲಿ ನೀಡುವಾಗ ತಾರತಮ್ಯ ಎಲ್ಲಡೆ ಇರುವಂತೆ ಕುಂಬ್ರಿ ಮರಾಠಿ ಮಹಿಳೆಯರಿಗೂ ಮಾಡಲಾಗುತ್ತದೆ. ಪುರುಷರಿಗೆ 80 ರೂಪಾಯಿ, ಮಹಿಳೆಯರಿಗೆ 40–45 ರೂಪಾಯಿ ನೀಡುವರು. ಇಬ್ಬರೂ ಸಮಾನ ಕೆಲಸ ಮಾಡಿದರೂ ಕೂಲಿ ಹಣದಲ್ಲಿ ತಾರತಮ್ಯ ಮಾಡಲಾಗುತ್ತದೆ. ವಾರದ ಕೂಲಿಯನ್ನು ಪುರುಷರಿಗೆ 300–350 ರೂಪಾಯಿ ಇದ್ದರೆ, ಮಹಿಳೆಯರಿಗೆ 250–300 ರೂಪಾಯಿ ಮಾತ್ರ. ಕೃಷಿ ಕೂಲಿ ಹೆಚ್ಚಾಗಿ ಮಳೆಗಾಲದಲ್ಲಿಯೇ ದೊರೆಯುವುದು. ಕೃಷಿ ಕೂಲಿ ಋತುಮಾನಗಳಿಗೆ ಅನುಸರಿಸಿರುತ್ತದೆ, ಸುಮಾರು 3–4 ತಿಂಗಳು ಕೃಷಿ ಕೂಲಿ ಇವರಿಗೆ ದೊರೆಯುತ್ತದೆ. ಕೃಷಿಗೆ ಸಂಬಂಧಿಸಿದ ಕೂಲಿಯನ್ನು ಮಹಿಳೆಯರು ನಾಟಿ ಸಮಯದಿಂದ ಹಿಡಿದು ಬೆಳೆಯ ಕೊಯ್ಲು ಬರುವರೆಗೂ ಮಾಡುತ್ತಾರೆ.




ಕುಮ್ರಿ ಬೇಸಾಯದ ಸಂದರ್ಭದಲ್ಲಿ ಸ್ವತಂತ್ರವಾಗಿ ಎಲ್ಲೆಂದರಲ್ಲಿ ಕಾಡಿನ ಒಡಲಲ್ಲಿ ಕೃಷಿ ಮಾಡುತ್ತಿದ್ದ ಕುಂಬ್ರಿ ಮರಾಠಿಗರು ಅದು ರದ್ದಾದ ನಂತರ ತಮ್ಮ ಅಲೆಮಾರಿ ಕೃಷಿಯನ್ನು ನಿಲ್ಲಿಸಬೇಕಾಯಿತು. ವಸಾಹತು ಸಂದರ್ಭದಲ್ಲಿ ಕೃಷಿ ಭೂಮಿಗೆ ದಾಖಲೆಗಳು ಸೃಷ್ಟಿಯಾದವು ಜೊತೆಗೆ ಸ್ಥಳೀಯ ಭೂಮಾಲಿಕ ವರ್ಗವು ತನಗೆ ಬೇಕಾದಂತೆ ಭೂಮಿಯ ದಾಖಲೆಗಳನ್ನು ಸೃಷ್ಟಿಸಿ ಕೃಷಿ ಭೂಮಿಯನ್ನು ತಮ್ಮದಾಗಿಸಿಕೊಂಡರು. ಉತ್ತರ ಕನ್ನಡದ ಅಭೇದ್ಯ ಕಾಡುಗಳಲ್ಲಿನ ಕುಂಬ್ರಿ ಮರಾಠಿಗರಂತಹ ಆದಿವಾಸಿ ಸಮುದಾಯಗಳು ಶಾಶ್ವತವಾಗಿ ತಮ್ಮ ಪಾರಂಪರಿಕ ಕೃಷಿ ಭೂಮಿಗಳನ್ನು ಕಳೆದುಕೊಂಡವು. ಆನಂತರ ಅವರು ನೆಲೆನಿಂತ ಕಡೆಯಲ್ಲಿ ಸಿಕ್ಕ ತುಂಡು ಭೂಮಿಯನ್ನೆ ಕೃಷಿ ಯೋಗ್ಯ ಮಾಡಿಕೊಂಡರು. ಈ ತುಂಡು ಭೂಮಿಯು ಆನಂತರ ಉತ್ತರ ಕನ್ನಡ ಜಿಲ್ಲೆಯಲ್ಲಿ ಸರಕಾರದ ವಿವಿಧ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ನೆಪದಲ್ಲಿ ಈ ಸಮುದಾಯದವರನ್ನು ಭೂರಹಿತರನ್ನಾಗಿ ಮಾಡುವ ವ್ಯವಸ್ಥಿತ ಸಂಚನ್ನು ಹೂಡಿರಬಹುದು. ಕುಂಬ್ರಿ ಮರಾಠಿಗರು ಈಗ ತಾವು ಹೊಂದಿರುವ ಜಮೀನುಗಳಲ್ಲಿ ಲಘು ಕೃಷಿ ಮಾಡುತ್ತಿರುವರು, ಈ ಲಘು ಕೃಷಿ ಕುಂಬ್ರಿ ಮರಾಠಿ ಕುಟುಂಬಗಳನ್ನು ನಿತ್ಯ ಪೋಷಿಸುವ ಜೀವದಾಯಕ ಆರ್ಥಿಕ ಚಟುವಟಿಕೆಯಾಗಿ ಪರಿಣಮಿಸಿದೆ. ಅಧ್ಯಯನದ ಪ್ರಕಾರ ಕುಂಬ್ರಿ ಮರಾಠಿ ಸಮುದಾಯಕ್ಕೆ ಭೂಮಿಯು ಅತಿ ಕಡಿಮೆಯಾಗಿದ್ದು ಅಂದರೆ ಒಂದು ಕುಟುಂಬಕ್ಕೆ ಗುಂಟೆಗಳಲ್ಲಿ ಜಮೀನು ಇರುವದು ಕಂಡುಬಂದಿದೆ. ಕುಂಬ್ರಿ ಮರಾಠಿಗರ ಭೂಮಿಯ ಅಳತೆ ಮತ್ತು ಅವರು ಅದನ್ನು ಬಳಸುವ ರೀತಿಯ ಮೇಲೆ ಅವರ ಆರ್ಥಿಕ ಜೀವನ ಪದ್ಧತಿಗಳು ಅವಲಂಬಿತವಾಗಿವೆ. ಈಗ ಕುಣಬಿ ಸಮುದಾಯದಲ್ಲಿ ಕೃಷಿ ಚಟುವಟಿಕೆಗಳು

ಸಾಮಾನ್ಯವಾಗಿದ್ದರೂ, ಆಧುನಿಕ ಕೃಷಿ ಪದ್ಧತಿ ಹಾಗೂ ತಂತ್ರಜ್ಞಾನದ ಬಳಕೆ ತೀರಾ ವಿರಳ. ಇದೀಗ ಆಧುನಿಕ ಕೃಷಿ ಚಟುವಟಿಕೆಗಳೆನಿಸಿದ ರಾಸಾಯನಿಕ ಗೊಬ್ಬರ ಬಳಕೆ, ಕೀಟನಾಶಕಗಳ ಸಿಂಪರನೆ, ಕ್ರಮಬದ್ಧ ನಿರಾವರಿ, ಸಂಸ್ಕರಿತ ಬೀಜಗಳ ಬಳಕೆ, ಆಧುನಿಕ ಕೃಷಿ ಸಲಕರಣೆಗಳ ಬಳಕೆಯಿಂದ ನಿಜವಾಗಿಯು ಅಧಿಕ ಉತ್ಪನ್ನ ಹಾಗೂ ಉತ್ತಮ ಆದಾಯ ದೊರೆಯಬಹುದು.

**ಕೋಷ್ಟಕ 4**

**ಕುಂಬ್ರಿ ಮರಾಠಿ ಸಮುದಾಯದಲ್ಲಿ ಆಧುನಿಕ ಕೃಷಿ ಪದ್ಧತಿಯ ಅಳವಡಿಕೆಯ ವಿವರ**

| ಕ್ರಸಂ. | ವಿವರ | ಮಾಹಿತಿದಾರರ ಸಂಖ್ಯೆ | ಪ್ರತಿಶತ |
|---|---|---|---|
| 1 | ರಾಸಾಯನಿಕ ಗೊಬ್ಬರ | 45 | 21 |
| 2 | ಕ್ರಿಮಿನಾಶಕ ಬಳಕೆ | 15 | 6 |
| 3 | ಮಾನವ ನಿರ್ಮಿತ ನೀರಾವರಿ | 20 | 26 |
| 4 | ಸಂಸ್ಕರಿತ ಬೀಜ, ಗೊಬ್ಬರ, ಕ್ರಿಮಿನಾಶಕ | 05 | 11 |
| 5 | ಮೇಲ್ಕಾಣಿಸಿದ ಎಲ್ಲಾ ಪದ್ಧತಿಗಳು | 26 | 8 |
| 6 | ಅನ್ವಯವಾಗದಿದ್ದವರು | 83 | 28 |
| | ಒಟ್ಟಾರೆ | 100 | 100 |

ಮೇಲಿನ ಕೋಷ್ಟಕದಲ್ಲಿ ಕಂಡುಬಂದಿರುವಂತೆ ಆಧುನಿಕ ಕೃಷಿ ಪದ್ಧತಿಯ ಬಗ್ಗೆ ಕೇಳಲಾದ ಪ್ರಶ್ನಾವಳಿಗೆ ಉತ್ತರಿಸಿದ ಮಾಹಿತಿದಾರರಲ್ಲಿ ಪ್ರತಿಶತ 21 ಜನರು ರಾಸಾಯನಿಕ ಗೊಬ್ಬರ ಬಳಕೆ ಮಾಡುತ್ತಿದ್ದು, 18 ಜನರು ತಮ್ಮ ಬೆಳೆಗಳನ್ನು ಕ್ರಿಮಿಕೀಟಗಳಿಂದ ರಕ್ಷಿಸಿಕೊಳ್ಳಲು ಬಯಸುತ್ತಾರೆ, 77 ಜನರು ಮಾನವ ನಿರ್ಮಿತ ನೀರಾವರಿ ಪ್ರಯೋಗ ಮಾಡುವರು, 34 ಜನರು ಸಂಸ್ಕರಿತ ಬೀಜ, ರಾಸಾಯನಿಕ ಗೊಬ್ಬರ ಹಾಗೂ ಕ್ರಿಮಿನಾಶಕ ಉಪಯೋಗಿಸುತ್ತಾರೆ.

ಈ ಮೇಲೆ ಕಾಣಿಸಿದ ಅಂಕಿ–ಅಂಶಗಳಿಂದ ಕಂಡುಬರುವುದೇನೆಂದರೆ ಗರಿಷ್ಠ ಸಂಖ್ಯೆಯ 217 ಮಾಹಿತಿಗಾರರಲ್ಲಿ ಪ್ರತಿಶತ 72 ರಷ್ಟು ಜನರು ಯಾವುದಾದರೊಂದು ನೂತನ ಕೃಷಿ ಪದ್ಧತಿಯನ್ನು ಅಳವಡಿಸಿರುವರು. ಮತ್ತೊಂದು ಅಂಶವೆಂದರೆ ಕಾಲು ಭಾಗ ಮಾಹಿತಿದಾರರು ನೂತನ ಕೃಷಿ ತಂತ್ರಜ್ಞಾನದ ಅಳವಡಿಕೆಯಲ್ಲಿ ನಿರಾಸಕ್ತಿ ಅಥವಾ ಹೊಸ ಕೃಷಿ ಪದ್ಧತಿಯ ಬಗ್ಗೆ ಇಷ್ಟಪಡಲಿಲ್ಲ ಅಥವಾ ಅವರಿಗೆ ಅವು ಗೊತ್ತೇ ಇಲ್ಲ ಎಂದು ತಿಳಿಯುತ್ತದೆ. ಒಂದು ಮಹತ್ವದ ಸಂಗತಿ ಎಂದರೆ ಕುಣಬಿಯರ ಪ್ರತಿಯೊಂದು ಹಳ್ಳಿಯಲ್ಲಿಯೂ ಕುಡಿಯುವ ನೀರು ಹಾಗೂ ಕೃಷಿಗಾಗಿ ನೀರು ಪೂರೈಕೆಯ ಗಂಭೀರ ಸಮಸ್ಯೆ ಇದ್ದೇ ಇದೆ. ಹೀಗಾಗಿ ಕೃಷಿಯಾಧಾರಿತ ಚಟುವಟಿಕೆಗಳೆಲ್ಲ ಮಳೆಯನ್ನು ಅವಲಂಬಿಸಿದೆ. ಕೆಲವರು ಭಾವಿ ನೀರನ್ನು

ನಂಬಿಕೊಂಡರೆ, ಇನ್ನಿತರರು ಸಮೀಪದ ನದಿ, ಹಳ್ಳ, ಕೆರೆ-ಕಟ್ಟೆಗಳ ನೀರು ಪೂರೈಕೆಯನ್ನು ಅವಲಂಬಿಸುತ್ತಾರೆ, ಹೀಗಾಗಿ ಕೃಷಿ ಚಟುವಟಿಕೆಗಳ ಆದಾಯ ಅನಿಶ್ಚಿತತೆಯ ಸುಳಿಯಲ್ಲಿರುತ್ತದೆ. ದಿನನಿತ್ಯ ಕುಡಿಯುವ ನೀರಿಗಾಗಿ ನದಿ ಅಥವಾ ಕೆರೆ, ಹಳ್ಳಗಳನ್ನು ಅವಲಂಬಿಸಿದ ಕೆಲವರು ಜಲಮಾಲಿನ್ಯದಿಂದ ಅನೇಕ ರೋಗರುಜಿನಗಳಿಗೆ ತುತ್ತಾಗುತ್ತಾರೆ. ಅದಲ್ಲದೆ ಬೇಸಿಗೆಯಲ್ಲಿ ಬಹುತೇಕ ನದಿ, ಹಳ್ಳ, ಕೆರೆಗಳು ಬತ್ತುವುದರಿಂದ ದಿನನಿತ್ಯದ ಅವಶ್ಯಕತೆಗಳಿಗೂ ನೀರು ದೊರಕುವುದಿಲ್ಲ.

**ಕುಂಬ್ರಿ ಮರಾಠಿಗರ ಸಮುದಾಯದ ಪಶು ಸಂಪತ್ತು**

ಕುಂಬ್ರಿ ಮರಾಠಿಗರು ಸಮುದಾಯದ ಪ್ರಧಾನವಾಗು ಅವಲಂಬಸಿರುವುದು ಕೃಷಿಯನ್ನು. ಆದರೆ ಅವರು ಪಾರಂಪರಿಕ ಪಶುಪಾಲಕರೂ ಹೌದು ಇತ್ತೀಚೆಗೆ ಪಶುಪಾಲನೆಯನ್ನು ಕೃಷಿಯ ಜೊತೆಗೆ ಉಪಕಸುಬಾಗಿ ಅವಲಂಬಿಸಿದ್ದಾರೆ. ಇನ್ನೊಂದು ಸಂಗತಿಯೆಂದರೆ ಶಾಶ್ವತ ಕೃಷಿ ಹಾಗೂ ಪಶುಪರಿಪಾಲನೆ ಚಟುವಟಿಕೆಗಳಿಗೆ ನೇರ ಸಂಬಂಧವಿದೆ. ದನಕರಗಳನ್ನು ಬೆಳೆಸುವದು ಕುಂಬ್ರಿ ಮರಾಠಿ ಸಮುದಾಯದ ಆರ್ಥಿಕ ವ್ಯವಸ್ಥೆಯ ಭಾಗವಾಗಿದೆ, ಅಧ್ಯಯನ ಕೈಗೊಂಡ ಪ್ರತಿಯೊಂದು ಮನೆಯಲ್ಲಿಯೂ ಎತ್ತು, ಆಕಳು, ಎಮ್ಮೆ, ಕೋಣ ಮತ್ತು ಕರುಗಳನ್ನು ಹೊಂದಿದ್ದು, ಅದರಲ್ಲೂ ಆಕಳುಗಳು ಇರುವುದರಿಂದ ಸಮೃದ್ಧ ಹಾಲು ಮತ್ತು ಉತ್ತಮ ಸಾವಯವ ಗೊಬ್ಬರ ದೊರೆಯುತ್ತದೆ. ಕುಂಬ್ರಿ ಮರಾಠಿ ಸಮುದಾಯದಲ್ಲಿ ಉತ್ತಮ ಕೋಣಗಳ ತಳಿಗಳನ್ನೂ ಅಭಿವೃದ್ಧಿಪಡಿಸುತ್ತಿದ್ದಾರೆ.

**ಕೋಷ್ಟಕ 5**

**ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ತಾಲೂಕುವಾರು ಹಾಗೂ ಕುಟುಂಬವಾರು ಪಶುಸಂಪತ್ತಿನ ಪ್ರಮಾಣ**

| ಕ್ರಸಂ. | ತಾಲೂಕುಗಳು | ಕುಟುಂಬ | ಪಶು ಸಂಪತ್ತು | | | | | |
|---|---|---|---|---|---|---|---|---|
| | | | ಎತ್ತು | ಆಕಳು | ಎಮ್ಮೆ | ಕೋಣ | ಕರು | % |
| 1 | ಅಂಕೋಲಾ | 247 | 62 | 70 | 32 | 28 | 45 | 8.9232 |
| 2 | ಕುಮಟಾ | 399 | 81 | 118 | 36 | 21 | 56 | 1.747 |
| 3 | ಹೊನ್ನಾವರ | 328 | 43 | 86 | 30 | 16 | 40 | 8.0949 |
| 4 | ಭಟ್ಕಳ | 401 | 66 | 130 | 60 | 48 | 65 | 13.893 |
| 5 | ಶಿರಸಿ | 1282 | 160 | 230 | 116 | 70 | 123 | 26.318 |

| | | | | | | | | |
|---|---|---|---|---|---|---|---|---|
| 6 | ಸಿದ್ದಾಪುರ | 429 | 90 | 130 | 38 | 16 | 40 | 11.822 |
| 7 | ಯಲ್ಲಾಪುರ | 188 | 60 | 128 | 40 | 21 | 30 | 10.505 |
| 8 | ಮುಂಡಗೋಡ | 113 | 36 | 80 | 60 | 22 | 33 | 8.6973 |
| | ಒಟ್ಟು | **3387** | **598** | **972** | **412** | **242** | **432** | |

ಈ ಮೇಲೆ ಕಾಣಿಸಿದ ಅಂಕಿ-ಅಂಶಗಳು ತೋರುವಂತೆ, ಅಧ್ಯಯನ ಕೈಗೊಂಡ **3387** ಕುಟುಂಬದಲ್ಲಿ ಎತ್ತು, ಆಕಳು, ಎಮ್ಮೆ, ಕೋಣ ಮತ್ತು ಕರುಗಳನ್ನು ಹೊಂದಿದ್ದು, ಅವುಗಳ ಸಂಖ್ಯೆ 598, 972, 412, 242 ಮತ್ತು 432 ಅನುಕ್ರಮವಾಗಿ ಇದೆ. ಈ ಮೇಲಿನ ಕೋಷ್ಟಕದಿಂದ ತಿಳಿದುಬರುವ ವಿಷಯವೆಂದರೆ ಕುಂಬ್ರಿ ಮರಾಠಿ ಸಮುದಾಯ ಭೂಮಿಯ ಉಳಮೆ ಮಾಡಲು ಎತ್ತುಗಳ ಜೊತೆ ಎಮ್ಮೆ ಮತ್ತು ಕೋಣಗಳನ್ನು ಉಪಯೋಗ ಮಾಡುತ್ತಿದ್ದು, ಅವುಗಳ ಸಂಖ್ಯೆ ಹೆಚ್ಚಿದೆ. ಹಾಗೆ ಮೇಲ್ಕಾಣಿಸಿದಂತೆ ಆಕಳು ಮತ್ತು ಎಮ್ಮೆಗಳನ್ನು ಹೈನುಗಾರಿಕೆಗೆ ಉಪಯೋಗಿಸುವುದು ಕಂಡುಬಂದಿದೆ. ಬಹಳಷ್ಟು ಜನರಿಗೆ ಪಶುಪಾಲನೆಗಾಗಿ ಸರಕಾರದ ಸಾಲ ಸೌಲಭ್ಯ ಮತ್ತು ಸಹಾಯ ದನ ದೊರೆಯುವುದೆಂಬ ಸಂಗತಿಯು ಪೂರ್ಣ ಅರಿವೆ ಇರುವುದಿಲ್ಲ, ಅಲ್ಲದೆ ಉತ್ತಮ ಮಿಶ್ರತಳಿ ಹಸುಗಳನ್ನು ಸಾಕಬಹುದೆಂಬ ಪ್ರಜ್ಞೆಯೂ ಅವರಲ್ಲಿಲ್ಲ. ಅಲ್ಲದೆ ಅರಣ್ಯ ನಾಶ, ಕನಿಷ್ಠ ಮಟ್ಟದ ಬೇಸಾಯ ಭೂಮಿ, ಸಾಧಾರಣ ಹುಲ್ಲುಗಾವಲು ಹಾಗೂ ಭೂರಾಹಿತ್ಯತೆಗಳು ಅವರ ಪಶುಸಂಗೋಪನೆಗೆ ಬಾಧಕತೆ ತಂದಿವೆ.



ಈ ಕೋಷ್ಟಕದಲ್ಲಿ ಕಂಡುಬಂದಂತೆ ಈ ಸಮುದಾಯವು ಹೆಚ್ಚು ಪಶುಸಂಪತ್ತನ್ನು ಹೊಂದಿದ್ದು ಅವರು ಪಾರಂಪರಿಕ ಕಸಬುನ್ನು ಮುಂದುವರೆಸಿರುವುದನ್ನು ನೋಡಬಹುದಾಗಿದೆ. ಜೊತೆಗೆ ಎಮ್ಮೆ ಮತ್ತು ಕೋಣಗಳನ್ನು ಕೃಷಿ ಚಟುವಟಿಕೆಗಳಿಗೂ ಬಳಸುವುದನ್ನು ನೋಡಬಹುದು.

**ವ್ಯಾಪಾರ**

ಕುಂಬ್ರಿ ಮರಾಠಿ ಮಹಿಳೆಯರ ಇನ್ನೊಂದು ಮುಖ್ಯ ಉದ್ಯೋಗ ತರಕಾರಿ, ಹೂವು, ಅರಣ್ಯೋತ್ಪನ್ನ ಸಂಗ್ರಹ ಮಾಡಿ ಮಾರುವದು ಮತ್ತು ಕಟ್ಟಿಗೆ ವ್ಯಾಪಾರ. ಕುಂಬ್ರಿ ಮರಾಠಿ ಸಮುದಾಯಗಳಿಗೆ ಪೂರ್ವಜರಿಂದ ಬಂದ ಜಮೀನು ಅಂತ ಏನೂ ಇಲ್ಲ. ದೇವರಾಜ ಅರಸು ಅವರ ಅವಧಿಯಲ್ಲಿ ಬಂದ 'ಉಳುವವನೇ ಭೂ ಒಡೆಯ' ಎಂಬ ಈ ಕಾನೂನು ಇವರಿಗೆ ಸ್ವಲ್ಪ ಜಮೀನು ದೊರೆಯುವಂತೆ ಮಾಡಿತು. ಕ್ಷೇತ್ರಕಾರ್ಯಕ್ಕೆ ಒಳಪಟ್ಟ ಒಟ್ಟು ಕುಂಬ್ರಿ ಮರಾಠಿ ಜನಸಂಖ್ಯೆಯಲ್ಲಿ 232 ಜನ ವ್ಯಾಪಾರ ಮಾಡುವುದು ಕಂಡುಬಂದಿತು. ಅದರಲ್ಲಿ 195 ಜನ ಮಹಿಳೆಯರು ಮತ್ತು 37 ಜನ ಪುರುಷರು. ತರಕಾರಿ, ಹೂವು, ಅರಣ್ಯೋತ್ಪನ್ನ ಸಂಗ್ರಹ ಮತ್ತು ಕಟ್ಟಿಗೆ ವ್ಯಾಪಾರ ಮಾಡುತ್ತಿದ್ದಾರೆ. ಈ ಹಿಂದೆಯೂ ಹೋದಂತೆ ಕುಂಬ್ರಿ ಮರಾಠಿಗರು ಇರುವ ಸ್ವಲ್ಪ ಭೂಮಿಯಲ್ಲಿ ಪುರುಷ ವ್ಯವಸಾಯ ಮಾಡಲು ಸಾಧ್ಯವಿಲ್ಲ, ತರಕಾರಿ ಬೆಳೆಯಂತಹ ಲಘು ಕೃಷಿ ಈ ಚಿಕ್ಕ ಕೃಷಿ ಜಮೀನಿನಲ್ಲಿ ಸಾಧ್ಯ. ಇದನ್ನು ನಿರ್ವಹಿಸುವವಳು ಕುಣಬಿ ಮಹಿಳೆ, ಈ ವ್ಯಾಪಾರಗಳಿಂದ ದೊರಕುವ ಎಲ್ಲ ಹಣವನ್ನು ಕುಂಬ್ರಿ ಮರಾಠಿ ಮಹಿಳೆ ಕುಟುಂಬದ ದಿನನಹಿ ಖರ್ಚುಗಳಿಗೆ ವಿನಿಯೋಗಿಸುತ್ತಾಳೆ. ಬಹುಪಾಲು ಕುಂಬ್ರಿ ಮರಾಠಿ ಕುಟುಂಬಗಳು ಅವರ ಹೆಣ್ಣುಗಳ ದುಡಿಮೆಯಲ್ಲಿ ಬದುಕುತ್ತಿರುವದನ್ನು ಕಾಣಬಹುದು. ಇಂದು ಮಹಿಳೆಯರು ಎಲ್ಲಾ ರಂಗಗಳಲ್ಲೂ ತಮ್ಮ ಛಾಪನ್ನು ಮೂಡಿಸುತ್ತಿದ್ದಾಳೆ. ಸಾಮಾಜಿಕ ರಂಗದ ಉತ್ಪಾದನೆ ಮೂಲಕ ಅಥವಾ ಮನೆಯೊಳಗಿನ ಉತ್ಪಾದನಾ ಚಟುವಟಿಕೆಯ ಮೂಲಕ ಮಹಿಳೆಯರು ಆರ್ಥಿಕತೆಗೆ ಸಲ್ಲಿಸುವ ಕೊಡುಗೆಗೆ ನೀಡಲಾಗುವ ಬೆಲೆ ಅತ್ಯಲ್ಪ ಅಥವಾ ಸೊನ್ನೆಯಾಗಿದೆ. ಮಹಿಳೆ ಇಂದು ಇಬ್ಬಗೆಯ ದುಡಿಮೆಯನ್ನು ಮಾಡುವುದು ಎಲ್ಲಡೆ ಕಾಣಬಹುದು, ಹಾಗೆಯೇ ಮನೆಯಲ್ಲಿ ದುಡಿಯುವ ದುಡಿಮೆ ಮೌಲ್ಯವೆಂಬುದು ಇಲ್ಲ. ಅದೇ ಮನೆಯ ಆಚೆ ದುಡಿಯುವ ದುಡಿಮೆಗೆ ಮೌಲ್ಯವಿದೆ. ಮನೆಕೆಲಸ ಮನೆಯಲ್ಲಿ ಮಾಡಿದರೆ ಅದು ಕರ್ತವ್ಯ, ಜವಾಬ್ದಾರಿಯೆಂದು ಪರಿಗಣಿಸಿದರೆ ಇದೇ ಮನೆಕೆಲಸ ಮಾಡಲು ಬೇರೆಯವರ ಮನೆ, ತೋಟ, ಗದ್ದೆಗಳಿಗೆ ಹೋಗುವ ಮಹಿಳೆಯು ತಿಂಗಳಿಗೆ ಇಂತಿಷ್ಟು ಅಂತ ಕೂಲಿ ಪಡೆದು ದುಡಿಯುತ್ತಾಳೆ. ಈ ಇಬ್ಬಗೆಯ ದುಡಿಮೆಯಲ್ಲಿಯೂ ಮಹಿಳೆಯನ್ನು ತಾತ್ಸಾರದಿಂದ ನೋಡಲಾಗುತ್ತದೆ. ಇದರಿಂದ ಕುಂಬ್ರಿ ಮರಾಠಿ ಮಹಿಳೆಯರು ಕೂಡ ಹೊರತಾಗಿಲ್ಲ. ಇಲ್ಲಿ

ನಾನು ಮನೆಯಲ್ಲಿ ಕೆಲಸ ಮಾಡುವ ಕುಂಬ್ರಿ ಮರಾಠಿ ಮಹಿಳೆಯರ ಕೆಲಸವನ್ನು ಸಹ ದುಡಿಮೆಯೆಂದು ಹಾಗೆಯೇ ಮನೆ ಆಚೆ ಹೋಗಿ ತಿಂಗಳ ಬಿಡಿಗಾಸಿನ ಸಂಬಳಕ್ಕೆ ಮನೆಕೆಲಸ ಮಾಡುವ ದುಡಿಮೆಗಳೆರಡನ್ನು ಮೌಲ್ಯರೂಪ ದುಡಿಮೆಯೆಂದು ಪರಿಗಣಿಸಬೇಕಿದೆ.

**ಸರಕಾರಿ ಉದ್ಯೋಗ**

ಇಂದು ಸರಕಾರಿ ನೌಕರಿ ಎಂಬುದು ಬಹುಶಃ ಅಂಚಿನಲ್ಲಿರುವ ಎಲ್ಲಾ ಸಮುದಾಯಗಳಿಗೂ ಕನಸಿನ ಮಾತಾಗಿದೆ. ಸರಕಾರಿ ಉದ್ಯೋಗ ಬೇಕೆಂದರೆ ಕೆಲವೊಂದು ಮಾನದಂಡಗಳಿವೆ. ಶಿಕ್ಷಣ, ನೈಪುಣ್ಯತೆ, ತರಬೇತಿ ಮುಂತಾದವುಗಳನ್ನು ಹೊಂದಿದವರಿಗೆ ಪ್ರಥಮ ಆದ್ಯತೆ. ಇಂದಿನ ಶಿಕ್ಷಣ ಹಣವಂತನಿಗೆ ಮಾತ್ರ ಎನ್ನಲಾಗಿದೆ. ದಿನವೊಂದಕ್ಕೆ 40–50 ರೂಪಾಯಿ ಕೂಲಿ ಹಣ ದೊರೆಯುವ, ಎರಡೊತ್ತಿನ ಗಂಜಿಗೆ ಪರದಾಡುವ ಸಮುದಾಯಗಳು ಹೇಗೆ ತಾನೇ ಉದ್ಯೋಗ ಪಡೆಯಲು ಸಾಧ್ಯ. ಕುಂಬ್ರಿ ಮರಾಠಿಗರಲ್ಲಿ ಉನ್ನತ ಶಿಕ್ಷಣ ಪಡೆದವರು ಅತ್ಯಂತ ವಿರಳ, ಅಲ್ಪ ಸ್ವಲ್ಪ ಶಿಕ್ಷಣ ಪಡೆದವರಿಗೆ ಸರಕಾರಿ ನೌಕರಿ ಸಿಗುವುದು ಕಷ್ಟ. ಬಡತನದ ಕಾರಣಕ್ಕಾಗಿ ಕುಂಬ್ರಿ ಮರಾಠಿ ಸಮುದಾಯದವರು ಶಿಕ್ಷಣ ಪಡೆದಿರುವವರ ಸಂಖ್ಯೆ ಕಡಿಮೆ ಹಾಗೂ ಇತರೆ ಹಿಂದುಳಿದ ಜಾತಿಗಳ ಪಟ್ಟಿಯಲ್ಲಿರುವುದರಿಂದ ಕರ್ನಾಟಕದ ಪ್ರಭಾವಿ ಹಿಂದುಳಿದ ಸಮುದಾಯಗಳ ಜೊತೆ ಸ್ಪರ್ಧಿಸಬೇಕಿದೆ. ರಾಜಕೀಯ ಬಲವಿಲ್ಲದ ಕಾರಣ ಕರ್ನಾಟಕ ಪ್ರಭಾವಿ ಹಿಂದುಳಿದ ಜಾತಿಗಳ ಜೊತೆ ಕುಂಬ್ರಿ ಮರಾಠಿಗರು ಸ್ಪರ್ಧಿಸುವುದು ಕಷ್ಟಸಾಧ್ಯ. ಆದಿವಾಸಿಗಳ ಎಲ್ಲ ಲಕ್ಷಣಗಳಿದ್ದಾಗ್ಯೂ ಕುಂಬ್ರಿ ಮರಾಠಿಗರು ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿ ಸ್ಥಾನ ಪಡೆದಿಲ್ಲ. ಕುಂಬ್ರಿ ಮರಾಠಿಗರಲ್ಲಿ ಪ್ರೌಢ ಮತ್ತು ಪದವಿಪೂರ್ವ ಹಂತದ ವರೆಗೆ ಶಿಕ್ಷಣ ಪಡೆದವರೇ ಹೆಚ್ಚು. ಇದರಲ್ಲಿ ಕೆಲವರು ಸರಕಾರಿ ಕಛೇರಿಗಳಲ್ಲಿ ಸಣ್ಣ ಪುಟ್ಟ ಕೆಲಸ ಪಡೆದುಕೊಂಡಿದ್ದಾರೆ. ನನ್ನ ಸರ್ವೆಯ ಅಂಕಿ–ಅಂಶಗಳು ತೋರಿಸುವಂತೆ ಕುಂಬ್ರಿ ಮರಾಠಿಗರಲ್ಲಿ ಸರಕಾರಿ ನೌಕರಿ ಪಡೆದವರಲ್ಲಿ ಪುರುಷರೇ ಇದ್ದಾರೆ. ನಾನು ಸರ್ವೆ ಮಾಡಿದ ಕುಟುಂಬಗಳ ಪೈಕಿ ಸರಕಾರಿ ನೌಕರಿಯಲ್ಲಿರುವವರು ಕೇವಲ 9 ಜನ ಪುರುಷರು ಮಾತ್ರ, ಅದರಲ್ಲಿ ಮಹಿಳೆ ಯಾರೊಬ್ಬರೂ ಸರಕಾರಿ ನೌಕರಿಯನ್ನು ಹೊಂದಿಲ್ಲ. 9 ಜನ ಪುರುಷರಲ್ಲಿ ಒಬ್ಬ ಪ್ರಾಥಮಿಕ ಶಾಲಾ ಶಿಕ್ಷಕ, ಇನ್ನೊಬ್ಬ ಪ್ರೌಢ ಶಾಲಾ ಶಿಕ್ಷಕನಾಗಿರುವು ಬಿಟ್ಟರೆ, ಉಳಿದವರೆಲ್ಲ 'ಸಿ' ಮತ್ತು 'ಡಿ' ದರ್ಜೆಯ ನೌಕರರುಗಳಾಗಿ ಕೆಲಸ ಮಾಡುತ್ತಿರುವರು. ಸರಕಾರಿ ನೌಕರಿ ಸಿಗದಿರುವುದಕ್ಕೆ ಮುಖ್ಯ ಕಾರಣ ಬಡತನದ ಕಾರಣಕ್ಕಾಗಿ ಶಿಕ್ಷಣ ಪಡೆಯದೇ ಇರುವುದು. ಶಿಕ್ಷಣ ಪಡೆದರೂ ಸೂಕ್ತ ಸಾಂವಿಧಾನಿಕ ಮೀಸಲಾತಿ ದೊರೆಯದೇ ಇರುವುದು ಇನ್ನೊಂದು ಮಹತ್ವದ ಕಾರಣವಾಗಿದೆ. ಅದರಲ್ಲೂ ಕುಂಬ್ರಿ ಮರಾಠಿ ಮಹಿಳೆಯರು ಸರಕಾರಿ ನೌಕರಿ

ಪಡೆಯುವುದು ಕನಸಿನ ಮಾತಾಗಿದೆ. ಕುಂಬ್ರಿ ಮರಾಠಿ ಮಹಿಳೆಯರಲ್ಲಿ ಶಿಕ್ಷಣ ಪಡೆದವರ ಸಂಖ್ಯೆ ತುಂಬಾ ಕಡಿಮೆ. ಶಿಕ್ಷಣ ಪಡೆದ ಕೆಲವರು ಅಸಂಘಟಿತ ವಲಯಗಳಲ್ಲಿ ಕೆಲಸ ಮಾಡುತ್ತಿದ್ದಾರೆ.

### ಇತರೆ ಉದ್ಯೋಗಿಗಳು

ಕುಂಬ್ರಿ ಮರಾಠಿಗರಲ್ಲಿ ಭೂರಹಿತರೇ ಹೆಚ್ಚೆಂದು ಈ ಹಿಂದೆ ನೋಡಿದ್ದೇವೆ. ಇದರಿಂದಾಗಿ ಕೆಲಸ ಹುಡಕಿಕೊಂಡು ಕುಂಬ್ರಿ ಮರಾಠಿಗರು ಕೊಪ್ಪಗಳಿಂದ ದೂರದ ಪಟ್ಟಣಗಳಿಗೆ ವಲಸೆ ಹೋಗಿರುವುದು ಕಂಡುಬರುತ್ತದೆ. ಹೀಗಾಗಿ ಇತರೇ ಉದ್ಯೋಗಿಗಳಾಗಿ ಮಾಡುವ ಕುಂಬ್ರಿ ಮರಾಠಿಗರಲ್ಲಿ 149 ಪುರುಷ ಸಂಖ್ಯೆ ಮತ್ತು 93 ಮಹಿಳೆಯರದು ಎಂಬುದನ್ನು ಈ ಹಿಂದೆ ನೋಡಿದ್ದೇವೆ. ಇಲ್ಲಿ ಪುರುಷರ ಸಂಖ್ಯೆ ಬಹಳ ಇರುವುದಕ್ಕೆ ಮುಖ್ಯ ಕಾರಣ ಅವರಿಗೆ ಸಿಕ್ಕಿರುವ ಅಲ್ಪಸ್ವಲ್ಪ ಶಿಕ್ಷಣ. ಪ್ರೌಢ ಮತ್ತು ಪದವಿಪೂರ್ವ ಹಂತದವರೆಗೆ ಶಿಕ್ಷಣ ಪಡೆದ ಬಹುಪಾಲು ಕುಂಬ್ರಿ ಮರಾಠಿ ಪುರುಷರು ಹೀಗೆ ಅನೇಕ ಬಗೆಯ ತಾತ್ಕಾಲಿಕ ಉದ್ಯೋಗಗಳನ್ನು ಮಾಡುತ್ತಿರುವುದು ಕಂಡುಬರುತ್ತದೆ.

### ಅಡಿಟಿಪ್ಪಣಿಗಳು

1. ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂ. 1, ಅಂಬೇಡ್ಕರ್ ಪು. 7, 1990
2. ಪ್ರಭಾಕರ. ಎ ಎಸ್, ಅಲೆಮಾರಿಗಳ ಶಾಪಗ್ರಸ್ತ ಪಯಣ, ಆದಿವಾಸಿ ಆಖ್ಯಾನ, ಪು 459, 2006
3. ಚಂದ್ರಶೇಖರ್ ಟಿ ಆರ್, ಬುಡಕಟ್ಟುಗಳ ಅಭಿವೃದ್ಧಿ, ಪು 390, ಆದಿವಾಸಿ ಆಖ್ಯಾನ, 2006
4. Singh. K S, Economics of the Tribes and their Transformation', Vol. XIV, 131:1982
5. ಪ್ರಭಾಕರ, ಎ ಎಸ್, ಬುಡಕಟ್ಟು ಮೀಮಾಂಸೆ, ಕರ್ನಾಟಕ ಬುಡಕಟ್ಟು ಸಚಿತ್ರ ಕೋಶ, ಪು 12, 2014
6. Fuch Stephen, 'The Aboriginal Tribes of India', Mac Millan, p. 37, 1973.
7. Thurston, 'Caste and Tribes of Southern India', Government Press, Madras, p. 100, 1909.

8. ಪ್ರಭಾಕರ, ಎ ಎಸ್, ಬುಡಕಟ್ಟು ಮೀಮಾಂಸೆ, ಕರ್ನಾಟಕ ಬುಡಕಟ್ಟು ಸಚಿತ್ರ ಕೋಶ, ಪು 14, 2014

9. ಅದೇ ಪು 15, 2014

10. ಅದೇ ಪು ಪು 18, 2014

# ಅಧ್ಯಾಯ: ಐದು

# ಕುಂಬ್ರಿ ಮರಾಠಿಗರ ಸಾಂಸ್ಕೃತಿಕ ಸ್ಥಿತಿಗತಿ ಮತ್ತು ವರ್ತಮಾನದ ಸವಾಲುಗಳು

1. ಕುಂಬ್ರಿ ಮರಾಠಿಗರ ಜೀವನಾವರ್ತನ ಆಚರಣೆಗಳು
2. ಕುಂಬ್ರಿ ಮರಾಠಿಗರ ವಾರ್ಷಿಕಾವರ್ತನ ಆಚರಣೆಗಳು
3. ಕುಂಬ್ರಿ ಮರಾಠಿಗರ ದೈವಗಳು
4. ಕುಂಬ್ರಿ ಮರಾಠಿಯರ ಉಡುಗೆ-ತೊಡಿಗೆ, ಆಭರಣಗಳು
5. ಕುಂಬ್ರಿ ಮರಾಠಿಗರ ಪಾರಂಪರಿಕ ವೈದ್ಯ ಪದ್ಧತಿ ಮತ್ತು ವಿಧಿಗಳು

# ಅಧ್ಯಾಯ: ಐದು

# ಕುಂಬ್ರಿ ಮರಾಠಿಗರ ಸಾಂಸ್ಕೃತಿಕ ಸ್ಥಿತಿಗತಿ ಮತ್ತು ವರ್ತಮಾನದ ಸವಾಲುಗಳು

## ಪೀಠಿಕೆ

ಸಂಸ್ಕೃತಿ ಎಂಬುದು ಆಯಾ ಸಮುದಾಯದ ಒಟ್ಟಾರೆ ತಿಳುವಳಿಕೆಯ ಆಚರಣೆಯ ರೂಪ. ಸಂಸ್ಕೃತಿ ಅನೇಕ ಸಲ ಆಚರಣೆಯಲ್ಲಿ ಮಾತ್ರ ಇರದೆ ಜ್ಞಾನದ ರೂಪದಲ್ಲೂ ಸಮುದಾಯಗಳ ಸ್ಮೃತಿಗಳಲ್ಲಿ ಅಡಕವಾಗಿರುತ್ತದೆ. ಜೊತೆಗೆ ಸಮುದಾಯದ ಸಾಮಾಜಿಕ ನಡವಳಿಕೆಗಳಲ್ಲೂ ಈ ಸಂಸ್ಕೃತಿಯು ಸಂವೇದನೆಯ ಮಟ್ಟದಲ್ಲಿ ವ್ಯಕ್ತವಾಗುತ್ತಿರುತ್ತದೆ. ಸಂಸ್ಕೃತಿಯು, ಜ್ಞಾನ, ಆಚರಣೆ ಮತ್ತು ಸಂವೇದನೆಯಾಗಿ ಸಮುದಾಯಗಳಲ್ಲಿ ಅಂತರ್ಗತವಾಗಿರುತ್ತದೆ. ಆದಿವಾಸಿಗಳ ಈ ಸಂಸ್ಕೃತಿಯನ್ನು ಕುರಿತು ಬೋರಲಿಂಗಯ್ಯನವರು ಹೀಗೆ ಹೇಳುತ್ತಾರೆ. 'ತನ್ನ ನಿರಂತರತೆಯಲ್ಲಿ ಸಂಸ್ಕೃತಿ ಎಂಬುದು ತನಗೆ ಆಪ್ತವಾದ ಹೊರಗಿನದನ್ನು ಪಡೆಯುತ್ತಾ ತನ್ನ ಸಂಚಯದಲ್ಲಿ ಸೇರಿಸಿಕೊಳ್ಳುತ್ತದೆ. ಹಾಗೆ ಸೇರಿಸಿಕೊಂಡ ಸರಕು ಯಥಾವತ್ತಾಗಿ ಇರಲಾರದು. ಅದು ಯಾವುದಕ್ಕೆ ಸೇರುತ್ತದೋ ಆ ಸಮುದಾಯದ ಆಶೋತ್ತರಗಳಿಗನುಗುಣವಾಗಿ ಮಾರ್ಪಾಟು ಹೊಂದಬಹುದು. ಹಾಗೆಯೇ ಅದು ಚಲನಶೀಲವಾದುದು. ಹೀಗಾದಾಗ ಒಂದು ಸಂಸ್ಕೃತಿಯಿಂದ ಯಾವುದಾದರೂ ಅಂಶಗಳನ್ನು ಪಡೆದುಕೊಂಡರೆ ಅದು ನೇರ ಅನುಸರಣೆ ಆಗಿರುವುದಿಲ್ಲ. ಬದಲಾಗಿ ಹಾಗೆ ಪಡೆದುಕೊಂಡ ಸಮುದಾಯದ ಆಶೋತ್ತರಗಳಿಗೆ ಅನುಗುಣವಾಗಿ ಮಾರ್ಪಡುತ್ತದೆ. ಹೀಗೆ ಕೊಟ್ಟು ಪಡೆದುಕೊಳ್ಳುವ ಕ್ರಿಯೆಯಲ್ಲಿ ಅಸಮತೋಲನವಿರುತ್ತದೆ ನಿಜ. ಬಹುಸಂಖ್ಯಾತ ಮತ್ತು ಮೇಲ್ವರ್ಗದ ಸಮುದಾಯಗಳು ಕೆಳಗಿನಿಂದ ಪಡೆಯುವುದು ಕಡಿಮೆ. ಕೆಳಗಿನ ಸ್ತರದಲ್ಲಿರುವುಂಥವು (ಶ್ರೇಣೀಕರಣದಲ್ಲಿ ಮಾತ್ರ) ಮೇಲಿನಿಂದ ಪಡೆಯುವುದು ಸ್ವಾಭಾವಿಕ. ಅದು ಹೇರಿಕೆಯಿಂದಲೂ, ವೈಭವೀಕರಣದಿಂದಲೂ ಅಥವಾ ಸಹಜವಾಗಿಯೂ

ಆಗಬಹುದು. ಇಷ್ಟಾಗಿಯೂ ಅವು ಹೇಗೆ ಸ್ವೀಕರಿಸುತ್ತವೆ ಮತ್ತು ಯಾವ ರೀತಿಯಲ್ಲಿ ತಮ್ಮಲ್ಲಿ ವಿಲೀನಗೊಳಿಸಿಕೊಳ್ಳುತ್ತವೆ ಎಂಬುದೇ ಮುಖ್ಯ. ಇದಕ್ಕೆ ಉದಾಹರಣೆಯನ್ನು ನೀಡಬೇಕೆಂದರೆ, ಮೇಲ್ವರ್ಗದ ಸಂಸ್ಕೃತಿಗಳು ಪರಿಭಾವಿಸಿದ ರಾಮಾಯಣ ಮಹಾಭಾರತಗಳು ಶೂದ್ರಾತಿಶೂದ್ರರುಗಳಲ್ಲಿ ಏನಾಗಿದೆ ಎಂಬುದನ್ನು ನೋಡಿದಾಗ ಗೊತ್ತಾಗುತ್ತದೆ. ಹಾಗೆ ನೋಡಿದರೆ ಪಾತಿವ್ರತ್ಯವನ್ನು ಸಾರಿ ಹೇಳುವ ರಾಮಾಯಣ, ಬುಡಕಟ್ಟುಗಳ ಕಲ್ಪನೆಯಲ್ಲಿ ಛಿದ್ರಗೊಂಡಿರುವುದನ್ನು ನೋಡಬಹುದು. ಸಂಸ್ಕೃತಿ ಎಂಬುದು ಚಲನಶೀಲವಾದುದು ಎಂಬುದು ನಿಜ. ಮೂರು ಸಾವಿರ ವರ್ಷಗಳಿಂದ ನಿರಂತರವಾಗಿ ವೈದಿಕ ಮೌಲ್ಯಗಳ ಹೇರಿಕೆ ಆಗುತ್ತಾ ಬಂದಿದ್ದರೂ, ಇಂದಿಗೂ ತಮ್ಮತನವನ್ನು ಆಂತರಿಕವಾಗಿ ಉಳಿಸಿಕೊಂಡು ಬಂದ ಅನೇಕ ಸಮುದಾಯಗಳ ಸತತ ಸಂಘರ್ಷ ಮಾತ್ರ ನಮ್ಮಲ್ಲಿ ಹೆಮ್ಮೆಯನ್ನುಂಟು ಮಾಡುತ್ತದೆ. ಹೀಗೆ, ಹೊರಗಿನದನ್ನು ಎಷ್ಟು ಬೇಕೋ ಅಷ್ಟು ಪಡೆದು ವಿಕಾಸಗೊಳ್ಳುತ್ತಲೇ ತನ್ನ ಆಂತರಿಕ ಪ್ರವಾಹವನ್ನು ಹಾಗೇ ಕಾಪಾಡಿಕೊಳ್ಳುವ ಪ್ರಕ್ರಿಯೆಯನ್ನು ಗಮನಿಸಿದಾಗ ಇಲ್ಲಿ ಯಾವುದೂ 'ಉಪಸಂಸ್ಕೃತಿ' ಎಂಬುದಿಲ್ಲ. ಹಾಗೆ ನಾಶವಾಗಲು ಒಪ್ಪದ ಅನನ್ಯತೆ ಗಿರಿಜನರಲ್ಲಿದೆ. ಆ ಅನನ್ಯತೆಯ ವಿವಿಧ ರೂಪವೇ ಈ ಗಿರಿಜನ ಕಾವ್ಯ ಎಂಬುದನ್ನು ಒಪ್ಪಬೇಕಾಗುತ್ತದೆ. ಆದ್ದರಿಂದ, ಅನ್ಯ ಸಂಸ್ಕೃತಿಗಳ ಪ್ರಭಾವದಿಂದ ಪಡೆಯಬೇಕಾದ್ದನ್ನು ಪಡೆಯುತ್ತಾ ತನ್ನೊಳಗೆ ವಿಲೀನಗೊಳಿಸಿಕೊಳ್ಳುತ್ತಾ ಸ್ಥಿರದ ಸಂಚಯಿತ ಮೊತ್ತಕ್ಕೆ ಸೇರಿಸಿಕೊಳ್ಳುತ್ತಾ ಹೋಗುವುದೇ ಸಂಸ್ಕೃತಿಯ ಲಕ್ಷಣ. ಭ್ರಮಾತ್ಮಕ ಪ್ರಭಾವಗಳು ಕೇವಲ ತಾತ್ಕಾಲಿಕ ಅಷ್ಟೇ.'[1] ಅನೇಕ ಸಲ ನಮ್ಮ ಸಮುದಾಯಗಳ ಅತ್ಯಂತ ಸರಳ ಜೀವನ ವಿಧಾನದಲ್ಲಿಯೇ ಅಡಗಿರುವ ಸಂಗತಿಗಳಲ್ಲಿ ದರ್ಶನದ ಮಟ್ಟದ ಜ್ಞಾನ ಅಡಗಿರುವುದನ್ನು ನಾವು ಗಮನಿಸುವುದಿಲ್ಲ. ಅದನ್ನು ಜ್ಞಾನ ಎಂದಾಗಲಿ, ತಿಳುವಳಿಕೆ ಎಂದಾಗಲಿ, ಸಂಸ್ಕೃತಿ ಎಂದಾಗಲಿ ನಾವು ಗುರುತಿಸುವುದೂ ಇಲ್ಲ. ಆದರೆ ಶತಮಾನಗಳ ಕಾಲ ಬದುಕಿ ಬಂದ ಸಮುದಾಯಗಳ ಆಂತರ್ಯದಲ್ಲಿ ಈ ಎಲ್ಲವೂ ಅಂತಸ್ಥವಾಗಿರುತ್ತವೆ. ಇದನ್ನು ಮಂಜುನಾಥ ಬೇವಿನಕಟ್ಟಿಯವರು ಹೀಗೆ ವಿವರಿಸುತ್ತಾರೆ, 'ಬುಡಕಟ್ಟು ಜನಪದರು ತಮ್ಮದೇ ಆದ ಸಂಸ್ಕೃತಿಯನ್ನು ಹೊಂದಿರುತ್ತಾರೆ. ಈ ಸಂಸ್ಕೃತಿಯನ್ನು ವಂಶ ಪಾರಂಪರ್ಯವಾಗಿ ಉಳಿಸಿಕೊಂಡು, ಬೆಳೆಸಿಕೊಂಡು ಬಂದಿರುತ್ತಾರೆ. ಸಾಮಾನ್ಯವಾಗಿ ಬುಡಕಟ್ಟು ಜನಪದಗಳು ಒಂದು ದೇಶದ ಮೂಲ ನಿವಾಸಿಗಳಾಗಿರುತ್ತಾರೆ. ಅನೇಕ ಶತಮಾನಗಳಿಂದಲೂ ಬೆಟ್ಟಗುಡ್ಡಗಳ ಪ್ರದೇಶಗಳಲ್ಲಿ, ಹಿಮಪ್ರದೇಶಗಳಲ್ಲಿ, ದ್ವೀಪಗಳಲ್ಲಿ ವಾಸವಾಗಿರುತ್ತ, ನಗರ ಮತ್ತು ಗ್ರಾಮೀಣ ಸಂಸ್ಕೃತಿಗಳ ಪ್ರಭಾವಕ್ಕೆ ಸಿಕ್ಕಿಯೂ, ತಮ್ಮದೇ ಸಂಸ್ಕೃತಿಯನ್ನು ಪ್ರತ್ಯೇಕವಾಗಿಯೇ ಉಳಿಸಿಕೊಂಡು ಬಂದಿರುವುದುಂಟು. ಈ ಜನಪದಗಳು ಹೊರಗಿನ ಯಾರನ್ನೇ ಆದರೂ ಅನುಮಾನದಿಂದಲೇ ನೋಡುತ್ತವೆ. ಬುಡಕಟ್ಟು ಜನಪದಗಳು ತಮ್ಮದೇ ಆದ ಕುಲ ಸಂಬಂಧ, ರಕ್ತ ಸಂಬಂಧ

ಹೊಂದಿದ್ದು, ತಮ್ಮದೇ ಆದ ಕುಲ ದೇವತಾ ಚಿಹ್ನೆ, ಹಬ್ಬ ಹರಿದಿನ, ಶವ ಸಂಸ್ಕಾರ ಪದ್ಧತಿ, ಲೋಕಾರೂಢಿ, ವಿವಾಹ, ಕುಟುಂಬ ವ್ಯವಸ್ಥೆ, ಧಾರ್ಮಿಕ ಆಚರಣೆಗಳನ್ನು ಹೊಂದಿರುತ್ತಾರೆ. ಇಂತಹ ಸಾಮಾಜಿಕ ವರ್ಗಗಳನ್ನು ಬುಡಕಟ್ಟು ಜನಪದರು ಎನ್ನಬಹುದು.'[2] ಅಂದರೆ ಆದಿವಾಸಿಗಳ ಭೌತಿಕ ಮತ್ತು ಬೌದ್ಧಿಕ ಬದುಕಿನಲ್ಲಿ ಸಂಸ್ಕೃತಿ ಹಾಸುಹೊಕ್ಕಾಗಿರುತ್ತದೆ. ಅದು ಹೂವಿನ ರೀತಿಯಲ್ಲಿ, ಹೂವಿನ ಒಳಗಿರುವ ಮಕರಂದದ ರೀತಿಯಲ್ಲಿ ಅಸ್ತಿತ್ವದಲ್ಲಿರುತ್ತದೆ. ಒಂದೆಡೆ ಬಡತನ, ಶತಮಾನಗಳ ಕಾಲದ ಅಧೀನತೆ, ಇನ್ನೊಂದೆಡೆ ಆಳುವ ವರ್ಗಗಳು. ಈ ಎಲ್ಲ ಚಾರಿತ್ರಿಕ ಒತ್ತಡಗಳ ನಡುವೆ ಆದಿವಾಸಿಗಳು ತಮ್ಮ ಬೌದ್ಧಿಕ ಮತ್ತು ಭೌತಿಕ ಬದುಕನ್ನು ಕಟ್ಟಿಕೊಂಡು ಬಂದಿದ್ದಾರೆ. ಆದರೆ, ಶತಮಾನಗಳ ಕಾಲ ಇವರನ್ನು ಶೋಷಣೆ ಮಾಡಿದ ಸಾಂಪ್ರದಾಯಿಕ ಸಮಾಜದ ಒಳಸಂಚುಗಳನ್ನು ಶತಮಾನಗಳ ಕಾಲ ಅರಿತು ತಮ್ಮ ಅಭಿವ್ಯಕ್ತಿಗಳನ್ನು ಜೋಪಾನದಿಂದ ಕಾಪಾಡಿಕೊಂಡು ಬಂದ ಬಹುಸಂಖ್ಯಾತ ಜನಪದರನ್ನು ಮತ್ತು ಆದಿವಾಸಿಗಳನ್ನು ಜೀರ್ಣಿಸಿಕೊಳ್ಳುವುದು ಆಳುವ ವರ್ಗಕ್ಕೆ ಸಾಧ್ಯವಿರಲಿಲ್ಲ. ದುಡಿವ ಜನ ಸಮುದಾಯಗಳ ಅಭಿವ್ಯಕ್ತಿ ಹಲವು ಪ್ರಕಾರಗಳಲ್ಲಿ ಅವ್ಯಾಹತವಾಗಿಯೇ ಮುಂದುವರಿಯುತ್ತಾ ಬಂದಿತು. 'ಮಾತು' ಈ ದುಡಿವ ವರ್ಗದ ಪ್ರಬಲ ಅಭಿವ್ಯಕ್ತಿ ಮಾಧ್ಯಮ. ಬರಹದಲ್ಲಿ ಒಡಮೂಡದ ಸಮುದಾಯಗಳ ನೋವು ಮತ್ತು ಅಸಹಾಯಕತೆಗಳು ಮಾತುಗಳಲ್ಲಿ ರೂಪುಗೊಳ್ಳುತ್ತಾ ಸ್ಮೃತಿ ಪ್ರಪಂಚದಲ್ಲಿ ಸಂಚಯಗೊಳ್ಳುತ್ತಾ ತಲೆಮಾರುಗಳನ್ನು ದಾಟಿ ಬೀಜಗಟ್ಟುತ್ತಾ ಬಂದವು. ಈ ಸ್ಮೃತಿಗಳಲ್ಲಿ ಸಂಘರ್ಷವಿದೆ, ನಿರಾಕರಣೆ ಇದೆ, ಸ್ವೀಕಾರವಿದೆ, ಅನುಸಂಧಾನದ ಜೊತೆ ತೀವ್ರ ಮುಖಾಮುಖಿಯ ತಲ್ಲಣಗಳೂ ಇವೆ. ಒಂದು ಅರ್ಥದಲ್ಲಿ ಅಂಚಿನ ಶೋಷಿತ ಸಮುದಾಯಗಳು ತಮ್ಮದೇ ವರ್ತಮಾನದ ಜೊತೆ ಅನುಸಂಧಾನ ಮಾಡುತ್ತಲೇ ಸಂಘರ್ಷಕ್ಕಿಳಿಯುತ್ತ ಬಂದಿವೆ. ನಿತ್ಯದ ದುಮ್ಮಾನಗಳನ್ನು ಅವುಡುಗಚ್ಚಿ ಸಹಿಸುತ್ತಲೇ ಬಂಡೆದ್ದು ಪ್ರತಿಭಟಿಸುತ್ತ ಬಂದಿವೆ. ವರ್ತಮಾನದ ಬದುಕಿಗೆ ಹೀಗೆ ದ್ವಂದ್ವಾತ್ಮಕವಾಗಿ ಮುಖಾಮುಖಿಯಾದ ಅಂಚಿನ ಸಮುದಾಯಗಳು 'ಆಚರಣೆ' ಮತ್ತು 'ಮಾತು'ಗಳೆರಡರಲ್ಲೂ ತಮ್ಮ ಅಂತರಂಗವನ್ನು ಅಭಿವ್ಯಕ್ತಿಸುತ್ತಾ ಬಂದಿವೆ. ಹೀಗೆ 'ಆಚರಣೆ', 'ಮಾತು' ಮತ್ತು 'ಬರಹ'ಗಳ ಮೂಲಕ ಅಭಿವ್ಯಕ್ತಗೊಂಡ ಅಂಚಿನ ಸಮುದಾಯಗಳ ಅಂತರಂಗ ಹಲವು ನುಡಿರೂಪಗಳಲ್ಲಿ ಅನಾವರಣಗೊಂಡಿದೆ. ಈ ಸಮುದಾಯಗಳು ಕಟ್ಟಿಕೊಂಡು ಬಂದ ಗಾದೆ, ಒಗಟು, ಒಡಪು, ಹಾಡು, ಕಥೆ, ಮಹಾಕಾವ್ಯ ಮತ್ತು ಆತ್ಮಕಥೆಗಳಲ್ಲಿ ಅಂಚಿನ ಸಮುದಾಯಗಳ ಅಂತಸ್ಥ ಜಗತ್ತು ಹರಳುಗಟ್ಟುತ್ತಾ ಬಂದಿದೆ.

ಮಿಶಿನರಿಯಾಗಿ ಬಂದು ಭಾರತದ ಬುಡಕಟ್ಟುಗಳನ್ನು ಅಧ್ಯಯನ ಮಾಡಿದ ವೆರಿಯರ್ ಎಲ್ವಿನ್ ಇಲ್ಲಿನ ಆದಿವಾಸಿಗಳ ಸಂಸ್ಕೃತಿಯ ಕುರಿತು ಹೀಗೆ ಹೇಳುತ್ತಾರೆ. 'ಭಾರತದ ಬೆಟ್ಟ, ಕಾಡುಗಳಲ್ಲಿ ಬುಡಕಟ್ಟು ಜನರ ನಡುವೆ ವಾಸಮಾಡಬಲ್ಲವರು ಸುಖಿಗಳು; ಏಕೆಂದರೆ,

ಅವರು ಅನೇಕ ಕಷ್ಟಗಳನ್ನು ಎದುರಿಸಬೇಕಾದರೂ, ಕರುಣೆಯ ಅಸಂಖ್ಯ ಕಾರ್ಯಗಳಿಂದ ಆ ಜನರಿಗೆ ಲಕ್ಷ್ಯಕೊಡುವ ಅನಿರ್ವಚನೀಯ ಆನಂದ ಅವರದಾಗುತ್ತದೆ. ಸೆಕ್ರೆಟೇರಿಯಟ್‌ನಲ್ಲಿ ದೂರ ವಾಸಿಸಬೇಕಾದ ಚಿಂತಕರು, ಯೋಜಕರು, ಆಡಳಿತಗಾರರ ಪಾಲಿಗೆ ಕಠಿನತರ ಕಾರ್ಯವಿದೆ, ಏನೆಂದರೆ ಅವರಿಗೆ ಈ ಸದ್ಯ ಸಂತೃಪ್ತಿಯಿಲ್ಲ; ಆದರೆ ಅವರು ಪರಿಣಾಮಕಾರಿಯಾಗಿ ಕೆಲಸ ಮಾಡಬೇಕಾದರೆ ಪ್ರೇಮದಿಂದ ಅವರೂ ಸ್ಫೂರ್ತಿಗೊಳ್ಳಬೇಕು. ಅಹಿಂಸೆ ಶೋಷಣೆಯನ್ನು ಅಸಾಧ್ಯಗೊಳಿಸುತ್ತದೆ ಮತ್ತು ಪ್ರಾಯಶಃ ಬುಡಕಟ್ಟು ಗಳಿಗಿರುವ ಅತಿ ದೊಡ್ಡ ಅಪಾಯ ಸಾಂಸ್ಕೃತಿಕ ವಿನಾಶವಲ್ಲ, ಆರ್ಥಿಕ ಶೋಷಣೆ–ಎಂದು ಗಾಂಧಿ ಒಮ್ಮೆ ನುಡಿದರು. ಅವರು ತಮ್ಮ ಭೂಮಿಯ ವಿಸ್ತಾರ ಪ್ರದೇಶಗಳನ್ನು ಕಳೆದು ಕೊಂಡಿದ್ದಾರೆ, ಈಗಲೂ ಕಳೆದುಕೊಳ್ಳುತ್ತಿದ್ದಾರೆ; ಅವರಲ್ಲಿ ಲಕ್ಷಾಂತರ ಮಂದಿ ಋಣಬಂಧನ ದಲ್ಲಿದ್ದಾರೆ. ಅನೇಕರು ಜೀತಗಾರರ ಮಟ್ಟಕ್ಕಿಳಿಸಲ್ಪಟ್ಟಿದ್ದಾರೆ. ಬೃಹದ್ ಕೈಗಾರಿಕೆ ಯೋಜನೆಗಳು ಅನಿವಾರ್ಯವಾಗಿ ಅವರ ಪರಂಪರಾಗತ ಭೂಮಿಯನ್ನು ತಪ್ಪಿಸುತ್ತವೆ; ಪುನರ್ವಸತಿಕಾರ್ಯ ಯಾವಾಗಲೂ ಸಮರ್ಪಕವಾಗಿ ಜಾರಿ ಗೊಳ್ಳುವುದಿಲ್ಲ, ಆದ್ದರಿಂದ, ಭಾರತ ತನ್ನ ಸಂವಿಧಾನದ ಆದರ್ಶಗಳನ್ನು ಈಡೇರಿಸುವುದಾದರೆ, ಒಂದೊಂದಾಗಿ ಎಲ್ಲ ರಾಜ್ಯಗಳಲ್ಲಿ ಮತ್ತು ಜಿಲ್ಲೆಗಳಲ್ಲಿ, ಪ್ರೇಮ ಕರುಣೆಗಳ ಶಕ್ತಿಗಳನ್ನು ಬಿಡುಗಡೆಗೊಳಿಸುವುದರ ಮೂಲಕ ಶೋಷಣೆಯ ಪ್ರತಿಯೊಂದು ಪ್ರಕಾರವನ್ನೂ ವರ್ಜಿಸಬೇಕಾದುದು ಅತ್ಯವಶ್ಯ.'[3] ಹೀಗಾಗಿ ಆದಿವಾಸಗಳ ಸಂಸ್ಕೃತಿ ಎಂಬುದು ಸರಳವಾಗಿ ರೂಪುಗೊಂಡದ್ದಲ್ಲ. ಅದು ಅನೇಕ ಶತಮಾನಗಳ ಜಟಿಲ ಬದುಕಿನ ಭಾಗವಾಗಿ ಅಸ್ತಿತ್ವದಲ್ಲಿದೆ. ಅದರಲ್ಲೂ ಶತಮಾನಗಳಿಂದ ಅರಣ್ಯದಲ್ಲಿಯೇ ವಾಸಿಸುತ್ತ ಬಂದ ಅನೇಕ ಆದಿವಾಸಿಗಳ ಸಂಸ್ಕೃತಿ ಮತ್ತು ಬೌದ್ಧಿಕ ಸಂಕಥನಗಳು ಸರಳವಾಗಿರದೆ, ಸಂಕೇತದ ಮಟ್ಟದಲ್ಲಿರುತ್ತವೆ. ಜೊತೆಗೆ, ಭಾಷೆ ಮತ್ತು ತಮ್ಮ ಪಾರಂಪರಿಕ ಗಡಿಗಳನ್ನು ಬದಲಿಸಿ ವಲಸೆ ಹೋಗುವ ಮತ್ತು ಅಲೆಮಾರಿಗಳಾಗಿರುವ ಸಮುದಾಯಗಳ ಸಂಸ್ಕೃತಿ ಇನ್ನೂ ಜಟಿಲವಾಗಿರುತ್ತದೆ. ಅಂತಹ ಸಮುದಾಯಗಳಲ್ಲಿ ಕುಂಬ್ರಿ ಮರಾಠಿ ಸಮುದಾಯವೂ ಒಂದು. ಈ ಅಧ್ಯಾಯದಲ್ಲಿ ಕುಂಬ್ರಿ ಮರಾಠಿ ಸಮುದಾಯದ ಸಂಸ್ಕೃತಿಗೆ ಸಂಬಂಧಿಸಿದ ಸಂಗತಿಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

## 1. ಕುಂಬ್ರಿ ಮರಾಠಿಗರ ಜೀವನಾವರ್ತನ ಆಚರಣೆಗಳು

ಕುಂಬ್ರಿ ಮರಾಠಿ ಸಮುದಾಯವು ಮೂಲತಃ ಒಂದು ವಲಸಿಗ ಮತ್ತು ಅಲೆಮಾರಿ ಸಮುದಾಯವಾಗಿದೆ. ಕುಂಬ್ರಿ ಮರಾಠಿ ಸಮುದಾಯದ ಭಾಷೆ, ಬದುಕುವ ಪರಿಸರ ಮತ್ತು ಅವಲಂಬಿಸಿಕೊಂಡು ಬಂದಿರುವ ಕುಲಕಸಬೂ ಸಹ ಸಂಕೀರ್ಣವಾದದ್ದು. ಜೊತೆಗೆ ಈ

ಸಮುದಾಯ ಶತಮಾನಗಳ ಕಾಲ ಅನುಭವಿಸಿಕೊಂಡು ಬಂದಿರುವ ದುಮ್ಮಾನಗಳ ಹಿನ್ನೆಲೆಯಲ್ಲಿ ಈ ಸಮುದಾಯದ ಸಂಸ್ಕೃತಿ ಮತ್ತು ಆಚರಣೆಗಳೂ ಸಂಕೀರ್ಣವಾಗಿವೆ.

**ಬಂಧುತ್ವ ಸ್ವರೂಪ**

ಯಾವುದೇ ಆದಿವಾಸಿ ಸಮುದಾಯ ಪಾರಂಪರಿಕವಾಗಿ ಬಂಧುತ್ವದ ಕುರಿತು ನಿಖರವಾಗಿರುತ್ತದೆ. ಕುಲಮೂಲದ ಅನೇಕ ವಿಧಿನಿಷೇಧಗಳು ಬಂಧುತ್ವದ ಸಂದರ್ಭದಲ್ಲಿ ಕಟ್ಟುನಿಟ್ಟಾಗಿ ಚಾಲ್ತಿಯಲ್ಲಿರುತ್ತವೆ. ಕುಂಬ್ರಿ ಮರಾಠಿಗರು ಬಂಧುತ್ವವನ್ನು ಏರ್ಪಡಿಸಿಕೊಳ್ಳುವಾಗ ಮುಖ್ಯವಾಗಿ ಬೆಡಗನ್ನು ಆಧರಿಸುತ್ತಾರೆ. ಬೆಡಗು ಅಥವಾ ಬಳಿಯು ಕುಲಮೂಲದ ಚರಿತ್ರೆ ಹೇಳುವಂತಾದ್ದು. ಒಂದು ಬೆಡಗಿಗೆ ಸೇರಿದವರು ಒಂದೇ ಕುಟುಂಬ, ವಂಶಕ್ಕೆ ಸೇರಿದವರು ಎಂಬುದನ್ನು ಪ್ರತಿನಿಧಿಸುತ್ತದೆ. ಹೀಗಾಗಿ ಸಜಾತಿ ಬೆಡಗಿನಲ್ಲಿ ವಿವಾಹ ನಡೆಯುವುದಿಲ್ಲ. ವಿಜಾತಿ ಬೆಡಗಿನಲ್ಲಿ ಮಾತ್ರ ವಿವಾಹ ಜರುಗುತ್ತದೆ. ಹೆಣ್ಣು ಯಾವುದೇ ಬೇರೆ ಬೆಡಗಿನ ಕುಟುಂಬದಿಂದ ಗಂಡನನ್ನು ಮದುವೆಯಾಗಿ ಬಂದರೆ, ಅವಳು ತನ್ನನ್ನು ಗಂಡನ ಬೆಡಗಿನೊಂದಿಗೆ ಗುರುತಿಸಿಕೊಳ್ಳುತ್ತಾಳೆ. ಸಾಮಾನ್ಯವಾಗಿ ಸೋದರ ಮಾವ, ಸೋದರತ್ತೆ, ಸಹೋದರಿಯ ಮಗಳು, ಸಹೋದರನ ಮಗಳೊಂದಿಗೆ ವಿವಾಹವನ್ನು ಏರ್ಪಡಿಸಿಕೊಳ್ಳುತ್ತಾರೆ. ಇತ್ತೀಚೆಗೆ ಕುಂಬ್ರಿ ಮರಾಠಿಗರ ಯುವ ಸಮಾಜಕ್ಕೆ ಬಳಿಯ ಕುರಿತಾಗಿ ಅಷ್ಟಾಗಿ ತಿಳುವಳಿಕೆ ಇಲ್ಲವಾಗಿದೆ. ಆದರೆ ಕೊಪ್ಪದ ಮುಖಂಡನಾದ ಬುದುವಂತನಿಗೆ ತಮ್ಮ ಕೊಪ್ಪದ ಪ್ರತಿ ಕುಟುಂಬದ ಬಳಿಯ ತಿಳುವಳಿಕೆ ಇರುತ್ತದೆ. ಬುದುವಂತ ವಿವಾಹದಂತಹ ಕಾರ್ಯಗಳಲ್ಲಿ ನಿರ್ಣಾಯಕ ಪಾತ್ರವಹಿಸುತ್ತಾನೆ. ಹಾಗಾಗಿ ಬುದುವಂತನೇ ಆಗಿರುವುದರಿಂದ ಸರಿಯಾಗಿ ಪ್ರತಿಯೊಂದು ಕುಟುಂಬಗಳ ಬಳಿಯ ವಿವರಗಳನ್ನು ಗುರುತಿಸಿಕೊಂಡು ವಿಜಾತಿ ಬಳಿಯನ್ನು ಹೊಂದಿದವರ ಮಧ್ಯದಲ್ಲಿಯೇ ವಿವಾಹ ಏರ್ಪಡಿಸುತ್ತಾನೆ.

**ಮದುವೆ ಮತ್ತು ಸಂಪ್ರದಾಯಗಳು**

ಮದುವೆ ಮತ್ತು ರಕ್ತಸಂಬಂಧದ ವಿಷಯದಲ್ಲಿ ಆದಿಮ ಸಮಾಜಗಳು ಕುಲದ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತವೆ. ಒಳಸಂಬಂಧ ಮತ್ತು ಹೊರಸಂಬಂಧಗಳ ಕುರಿತು ಜಾಗರೂಕವಾಗಿ ವರ್ತಿಸುತ್ತವೆ. ಬುಡಕಟ್ಟುಗಳು ಈಗ ಜಾತಿಯ ವರ್ತುಲದೊಳಗೆ ಬಂದಿರುವುದರಿಂದ ಜಾತಿನಿಷ್ಠ ಸಮಾಜದ ಮಡಿಮೈಲಿಗೆಗಳು ಈ ಸಮುದಾಯಗಳಲ್ಲೂ ದಟ್ಟವಾಗಿ ಅಸ್ತಿತ್ವದಲ್ಲಿವೆ. ಹಾಗಾಗಿ ಮದುವೆಯ ಕುರಿತ ನಿರ್ಣಯ, ಮದುವೆಯನ್ನು ಆಗುಮಾಡುವ ವಿಧಾನಗಳನ್ನು ಸಮುದಾಯದ ಹಿರಿಯರೇ ನಿರ್ಣಯಿಸುತ್ತಾರೆ. ಮದುವೆ ಎಂಬುದು ಇಲ್ಲಿ ಕೇವಲ ಗಮಡು ಹೆಣ್ಣುಗಳ ನಡುವೆ ನಡೆಯುವ ಖಾಸಗಿ ವ್ಯವಹಾರವಲ್ಲ, ಸಮಾಜವೊಂದರ

ಸಾಮುದಾಯಿಕ ಜವಾಬ್ದಾರಿ. ಯಾವುದೇ ಸಮುದಾಯದಲ್ಲಿ ಮನುಷ್ಯನಿಗೆ ಮದುವೆಯಂಬುದು ಒಂದು ಮಹತ್ವದ ಕಾರ್ಯ. ಮದುವೆಯಾಗುವ ಮೂಲಕ ಒಂದು ಕುಟುಂಬ ಹೊಸದಾಗಿ ಸೃಷ್ಟಿಯಾದಂತೆ. ಕುಂಬ್ರಿ ಮರಾಠಿಗರಲ್ಲಿ ಹುಡುಗಿ ಋತುಮತಿಯಾಗುವ ಪೂರ್ವದಲ್ಲಿಯೇ ಮದುವೆ ಮಾಡಲಾಗುತಿತ್ತು.. ಈಗ ಈ ರೀತಿಯ ಮದುವೆಗಳು ಕುಂಬ್ರಿ ಮರಾಠಿಗರಲ್ಲಿ ಕಡಿಮೆ ಪ್ರಮಾಣದಲ್ಲಾಗುತ್ತಿವೆ. ಕುಂಬ್ರಿ ಮರಾಠಿಗರಲ್ಲಿ ಮದುವೆಯನ್ನು ಕಡ್ಡಾಯವೆಂದು ಪರಿಗಣಿಸಲಾಗುತ್ತದೆ. ಒಂದು ಕಾಲಕ್ಕೆ ಮಾತೃಮೂಲ ಕುಟುಂಬವಾಗಿದ್ದಿರ ಬಹುದಾದ ಕುಂಬ್ರಿ ಮರಾಠಿ ಸಮುದಾಯ ಈಗ ಪೂರಕವಾಗಿ ಪಿತೃಪ್ರಧಾನ ಸಮಾಜವಾಗಿದೆ. ಹಾಗಾಗಿ ಮದುವೆ ಗಂಡಿನ ಮನೆಯಲ್ಲಿಯೇ ನಡೆಯುತ್ತದೆ. ಬುಡಕಟ್ಟು ಸಮುದಾಯಗಳು ತಂದೆಯ ಕುಲ ಗೋತ್ರ ಅಥವಾ ಬಳಿಗೆ ಸಂಬಂಧಿಸಿದಂತೆ ವೈವಾಹಿಕ ಸಂಬಂಧಗಳನ್ನು ಏರ್ಪಡಿಸುವುದಿಲ್ಲ. ಇಲ್ಲಿ ಮೊದಲು ಹೆಣ್ಣು ನೋಡಲು ಹೋಗುವವನು ಗಂಡಿನ ತಂದೆಯಲ್ಲ. ಕುಂಬ್ರಿ ಮರಾಠಿಗರಲ್ಲಿ ಒಬ್ಬ ಹಿರಿಯ ಹೆಣ್ಣಿನ ಮನೆಗೆ ರಾಯಭಾರಿಯಂತೆ ಹೋಗುತ್ತಾನೆ, ಅವನು ಹೋಗಿ ಗಂಡು ಮತ್ತು ಹೆಣ್ಣಿನ ಬಳಿಗಳು ಬೇರೆ ಬೇರೆ ಎಂದು ಖಚಿತಪಡಿಸಿಕೊಂಡ ನಂತರ ಗಂಡಿನ ಕಡೆಯವರಿಗೆ ಹಸಿರು ನಿಶಾನೆ ತೋರುತ್ತಾನೆ. ಒಂದೆ ಬಳಿಯಲ್ಲಿ ಮದುವೆ ನಿಷಿದ್ಧ. ತಂದೆಯ ಸಹೋದರಿ ಅಥವಾ ಸೋದರತ್ತೆಯ ಮಕ್ಕಳಲ್ಲಿ, ತಾಯಿಯ ಸಹೋದರರ ಮಕ್ಕಳಲ್ಲಿ ವಿವಾಹಕ್ಕೆ ಸಂಬಂಧಿಸಿದ ಕೊಡುಕೊಳ್ಳುವಿಕೆ ನಡೆಯುವುದು ಸಾಮಾನ್ಯ. ಒಂದೇ ಕುಲದವರು, ಒಳಪಂಗಡ ಅಥವಾ ಉಪಜಾತಿಗಳಲ್ಲಿ ವಿವಾಹ ಸಂಬಂಧ ಬೆಳೆಸುವುದನ್ನು ನಿಷೇಧಿಸಿದ್ದಾರೆ. ಊರಿನ ಪ್ರಮುಖರು ಗಂಡು ಹೆಣ್ಣು ನೋಡುವ ಶಾಸ್ತ್ರವನ್ನು ಮಾಡುತ್ತಾರೆ. ಇಬ್ಬರಿಂದಲೂ ಒಪ್ಪಿಗೆ ಪಡೆದು ಜಾತಕವನ್ನು ನೋಡುತ್ತಾರೆ. ಜಾತಕದಲ್ಲಿ ಹೊಂದಾಣಿಕೆ ಬಂದಾಗ ಗಂಡಿನವರು ಹೆಣ್ಣಿನ ಮನೆಗೆ ಮಾತುಕತೆಗೆ ಹೊಗುತ್ತಾರೆ. ಆ ಸಂದರ್ಭದಲ್ಲಿ ಗಂಡಿನ ಕಡೆಯವರು ಸೌಂದರ್ಯ ವರ್ಧಕ ವಸ್ತುಗಳನ್ನು ತೆಗೆದುಕೊಂಡು ಹೊಗುತ್ತಾರೆ. ವಧುದಕ್ಷಿಣೆ ಕೊಡುವ ಪದ್ಧತಿ ಇವರಲ್ಲಿ ರೂಢಿಯಲ್ಲಿದ್ದು ನಾಲ್ಕು ವರಗಳನ್ನು ಕೊಟ್ಟು ಹುಡುಗಿಯನ್ನು ಪಡೆಯುವ ಶಾಸ್ತ್ರ ನಡೆಯುತ್ತದೆ. ಹೆಣ್ಣಿನ ಮನೆಯಲ್ಲಿಯೇ ಮದುವೆ ನಡೆಯುತ್ತದೆ. ಮದುವೆ ಹಿಂದಿನ ದಿನ ದೇವರ ಊಟ (ಕುಲದೇವರ ಊಟ) ಎಂಬ ಶಾಸ್ತ್ರ ನಡೆಯುತ್ತದೆ. ಊರಿನ ಗೌಡನಿಗೆ ತೆಂಗಿನ ಕಾಯಿಯನ್ನು ಕೊಟ್ಟು ಊರಿನಲ್ಲಿರುವ ದೇವರಿಗೆ ಪೂಜೆ ಮಾಡಿಸಿ ಕೊಡಲು ಕೊಡುತ್ತಾರೆ. ಎಲ್ಲಾ ದೇವರಿಗೂ ಪೂಜೆ ಸಲ್ಲಿಸಿ ತೆಂಗಿನ ಕಾಯಿಗಳನ್ನು ಪ್ರಸಾದ ರೂಪದಲ್ಲಿ ಮರಳಿ ತರುತ್ತಾರೆ. ದೇವರ ಊಟದ ದಿನ ಮದುಮಗನಿಗೆ ಕೂದಲು ತೆಗೆಯುವ ಶಾಸ್ತ್ರ ಮಾಡಲಾಗುತ್ತದೆ. ಹುಡುಗಿಯಿಂದ ಗಂಗಮ್ಮನ ಶಾಸ್ತ್ರ ಮಾಡಿಸುತ್ತಾರೆ. ಸೊಸೆಯಿಂದ ಧಾರೆ ನೀರಿನ ಶಾಸ್ತ್ರ ಮಾಡಿಸುತ್ತಾರೆ. ಹುಡುಗ ಮತ್ತು ಹುಡುಗಿಯ ಜೊತೆ ಅಂದಿನಿಂದ ಮದುವೆ

ಮುಗಿಯುವವರೆಗೂ ಅಕ್ಕ-ಭಾವ ಜೊತೆ ಇರಬೇಕು. ಕೆಲವು ಬಳಿಯವರಿಗೆ (ಕುಲ) ಗಂಡು ಹೆಣ್ಣು ಮದುವೆಯಾದ ಮೇಲೆ ಊಟ ಮಾಡುವಂತಿಲ್ಲ. ಹಿಟ್ಟಿನ ಗೊಂಬೆ ಮಾಡಿ ಎತ್ತು, ನೇಗಿಲು ಮತ್ತು ನೊಗ ಮಾಡಿ ಮಧ್ಯದಲ್ಲಿ ಬಾಳೆ ಎಲೆಯನ್ನಿಟ್ಟು ಪೂಜೆ ಮಾಡಿಸಿ ಮೂರನೇ ದಿನ ಊಟ ಮಾಡಿಸುತ್ತಾರೆ.

**ಮದುವೆಗೆ ಹೆಣ್ಣು ನೋಡುವ ಪದ್ಧತಿ**

ಸಾಮಾನ್ಯವಾಗಿ ಕುಂಬ್ರಿ ಮರಾಠಿಗರಲ್ಲಿ ಮದುವೆಯಾಗಲು ಆಪೇಕ್ಷಿಸುವ ಹುಡುಗಿಯರನ್ನು ನೇರವಾಗಿ ಮನೆಗೆ ಹೋಗಿ ಹೆಣ್ಣು ನೋಡುವ ಶಾಸ್ತ್ರ ಮಾಡುವುದಿಲ್ಲ. ಮಂಜುಗುಣಿಯ ಜಾತ್ರೆಯಲ್ಲೋ, ಮಾರಿಕಾಂಬೆಯ ಜಾತ್ರೆಯಲ್ಲೋ ಹುಡುಗಿಯರನ್ನು ನೋಡುವ ಪ್ರಸಂಗ ನಡೆಯುತ್ತದೆ. ಮೊದಲಿಗೇ ಯಾವ ಮನೆಯಲ್ಲಿ ಮದುವೆಗೆ ಬಂದ ಹುಡುಗಿ ಇದ್ದಾಳೆ ಎಂದು ಗಂಡಿನ ಕಡೆಯವರು ತಮ್ಮ ಬಂಧು ಬಳಗದ ಮೂಲಕ ತಿಳಿದಿರುತ್ತಾರೆ. ಹುಡುಗಿ ಯಾವ ಜಾತ್ರೆಗೆ ಬರುತ್ತಾಳೆಂಬುದನ್ನು ಊಹಿಸಿ ಗಂಡಿನ ಕಡೆಯವರು ಜಾತ್ರೆಗೆ ತೆರಳುತ್ತಾರೆ. ಅಲ್ಲಿ ಅನೌಪಚಾರಿಕವಾಗಿ ಹುಡುಗಿಯ ತಂದೆ ತಾಯಿಯರನ್ನು ಮಾತನಾಡಿಸುತ್ತಾರೆ. ತಮಗೆ ಹುಡುಗಿ ಇಷ್ಟವಾದಳೆಂದರೆ ತರುವಾಯ ವರನ ತಂದೆ ಅಥವಾ ಅವನ ಕಡೆಯ ಹಿರಿಯರು ಊರಿನ ಬುದುವಂತರನ್ನು ಕರೆದುಕೊಂಡು ಬಂದು ಹೆಣ್ಣು ಗೊತ್ತುಪಡಿಸುವ ಸಂಪ್ರದಾಯವಿದೆ. ಈ ಸಂಬಂಧ ಒಪ್ಪಿಗೆಯಾದಲ್ಲಿ ಊರಿನ ಬುದವಂತನನ್ನು ಕರೆದು ಮಾತುಕತೆಯಾಡುತ್ತಾರೆ. ಗಂಡಿನ ಕಡೆಯ ನಾಲ್ಕಾರು ಜನ, ಹೆಣ್ಣಿನ ಕಡೆಯ ನಾಲ್ಕಾರು ಜನ ಒಂದೆಡೆ ಸೇರಿ ಬುದುವಂತ ಮತ್ತು ಕೋಲ್ಕಾರರ ಸಮ್ಮುಖದಲ್ಲಿ ಮಾತುಕತೆ ನಡೆಯುತ್ತದೆ. ತೆರಕೊಡುವ ಪದ್ದತಿ ಕುಂಬ್ರಿ ಮರಾಠಿಗರಲ್ಲಿ ಇನ್ನು ರೂಢಿಯಲ್ಲಿದೆ. ಕನಿಷ್ಟ ಒಂದು ವರಹದಿಂದ ಆರಂಭವಾಗಿ ಹತ್ತು ವರಹದವರೆಗೆ ಇದು ಇರುತ್ತಿತ್ತು. ಪ್ರಸ್ತುತ ವರಹದ ಜಾಗದಲ್ಲಿ ರೂಪಾಯಿಗಳು ಬಂದಿವೆ. ಮದುವೆಯ ಮಾತುಕತೆ ಹೆಣ್ಣಿನ ಮನೆಯಲ್ಲಿ ನಡೆಯುವುದರಿಂದ ಆ ದಿನದ ಊಟವನ್ನು ಹೆಣ್ಣಿನ ಕಡೆಯವರೇ ಹಾಕಬೇಕು. ಮೊದಲು ಮದುವೆಗಳು ಐದು ದಿನಗಳವರೆಗೆ ಜರುಗುತ್ತಿತ್ತು. ಈಗ ಅವರವರ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಆದಷ್ಟು ಕಡಿಮೆ ದಿನಗಳಲ್ಲಿ ಗಂಡಿನ ಮನೆಯ ಮುಂದೆ ಮದುವೆಗಳು ನಡೆಯುತ್ತವೆ.

**ಕೂದಲು ಕೊಡುವ ಶಾಸ್ತ್ರ (ಚೌಲ)**

ಕುಂಬ್ರಿ ಮಾರಾಠಿಗರಲ್ಲಿ ಮದುವೆಯ ದಿನದಂದು ವರನ ಕೂದಲನ್ನು ಕತ್ತರಿಸಿ ಅವನಿಗೆ ಸ್ನಾನ ಮಾಡಿಸುತ್ತಾರೆ. ಈ ಪದ್ಧತಿಗೆ 'ಚೌಲ' ಎನ್ನುವರು. ಇದೇ ರೀತಿ ಮದುಮಗಳ ಮನೆಯಲ್ಲಿ ಆಕೆಗೆ ಅರಿಷಿಣ ಹೂವು ಚೆನ್ನಾಗಿ ಅರೆದು ನೀರಿನಲ್ಲಿ ಎಣ್ಣೆ ಹಾಕಿ ಸ್ನಾನ

ಮಾಡಿಸುತ್ತಾರೆ. ಮದುವೆಯ ಮೊದಲ ದಿನ ಗಂಡಿನ ಕಡೆಯವರು ಹೆಣ್ಣಿಗೆ ತಮ್ಮ ಯೋಗ್ಯತೆಗೆ ತಕ್ಕಂತೆ ಆಭರಣಗಳನ್ನು ನೀಡುವ ಸಂಪ್ರದಾಯವಿದೆ. ಇದನ್ನು ನಿಕ್ಕಿ ಮಾಡುವುದು ಅಥವಾ ಹೂ ಮುಡಿಸುವುದು ಎಂದೆಲ್ಲ ಕರೆಯುತ್ತಾರೆ. ಬುದುವಂತ, ಕೋಲಕಾರ ಹಾಗೂ ಗಂಡಿನ ಕಡೆಯ ಎಂಟತ್ತು ಜನ ಈ ಕಾರ್ಯಕ್ರಮಕ್ಕೆ ಹೋಗುತ್ತಾರೆ. ಗಂಡಿನ ಅಕ್ಕ ಅಥವಾ ತಂಗಿ ಆಭರಣವನ್ನು ತೊಡಿಸುತ್ತಾರೆ. ಅಂದು ಹೆಣ್ಣಿನ ಮನೆಯಲ್ಲಿಯೇ ಅವರೆಲ್ಲ ಉಳಿದುಕೊಳ್ಳುತ್ತಾರೆ.

**ಹಂದರ ಹಾಕುವುದು**

ಕುಂಬ್ರಿ ಮಾರಾಠಿಗರಲ್ಲಿ ಮದುವೆಯಾಗುವ ಗಂಡಿನ ಮನೆಯ ಮುಂದೆ ಕಾಡಿನಿಂದ ತಂದ ಗೂಟಗಳನ್ನು ಹೂಳುತ್ತಾರೆ. ಮೇಲೆ ತೆಂಗಿನ ಗರಿ ಹಾಕಲಾಗುತ್ತದೆ. ಚಪ್ಪರವನ್ನು ಪೂರ್ಣಗೊಳಿಸಿದ ನಂತರ ಮದುವೆ ಗಂಡಿನ ಸೋದರಮಾವನಾಗುವವನು ಅತ್ತಿ ಮರದ ಟೊಂಗೆಯನ್ನು ತಂದು ಮಧ್ಯದಲ್ಲಿರುವ ಗೂಟಕ್ಕೆ ಕಟ್ಟುತ್ತಾರೆ. ಇದನ್ನು ಹಂದರ ಹಾಕುವುದು ಎನ್ನುತ್ತಾರೆ. ಹಂದರದ ಕಂಬಗಳ ಎರಡು ಬದಿಗಳಲ್ಲಿ ನೀರು ತುಂಬಿದ ಎರಡು ಗಡಿಗೆಗಳನ್ನು ಇಡುತ್ತಾರೆ. ಈ ಗಡಿಗೆಗಳು ವಧು-ವರನ ಸಂಸಾರ ಅಭಿವೃದ್ಧಿ ಹೊಂದಲಿ ಎಂಬ ಆಶಯದಿಂದ ಇರಿಸಲಾಗುವುದಂತೆ. ಗಂಡಿನ ಮನೆಯ ಮತ್ತು ಹೆಣ್ಣಿನ ಮನೆಯ ಯಜಮಾನರು ಸೇರಿ ಒಂದು ಬಿಳಿ ಬಟ್ಟೆಯನ್ನು ಧಾರೆ ಎರೆಯುವ ಸ್ಥಳದ ಮೇಲ್ಭಾಗದಲ್ಲಿ ಚಪ್ಪರಕ್ಕೆ ಕಟ್ಟುತ್ತಾರೆ. ಇದನ್ನು ಗುರುಗಪ್ಪಡ ಕಟ್ಟುವುದು ಎನ್ನುತ್ತಾರೆ. ಮದುವೆ ಮನೆಯಲ್ಲಿ ಚಪ್ಪರ ಹಾಕುವ ಕ್ರಿಯೆಯಲ್ಲಿ ಕೋಲಕಾರನು ಮುಖ್ಯವಾಗಿರುವುದರಿಂದ ಆತನಿಗೆ ಚಪ್ಪರ ಕಾಣಿಕೆ ಎಂದು ಹಿಂದೆ ನಾಲ್ಕು ರೂಪಾಯಿ ನಾಲ್ಕಾಣೆ ಕೊಡಲಾಗುತ್ತಿತ್ತು. ಈಗ ಅದು ಇಪ್ಪತ್ತೈದು ರೂಪಾಯಿವರೆಗೆ ಏರಿದೆ.

**ತುಳಸಿ ಪೂಜೆ**

ಉತ್ತರ ಕನ್ನಡದ ಅನೇಕ ಬುಡಕಟ್ಟುಗಳಂತೆ ಕುಂಬ್ರಿ ಮಾರಾಠಿಗರೂ ಸಹ ತುಳಸಿಗೆ ದೈವತ್ವದ ಸ್ಥಾನವನ್ನು ನೀಡಿದ್ದಾರೆ. ಮದುವೆಯ ದಿನ ಮದುಮಗ ಬಂದು ಮೊದಲಿಗೆ ತುಳಸಿ ಪೂಜೆ ಮಾಡುತ್ತಾನೆ. ಅದಾದ ನಂತರವೇ ಮದುವೆಯ ಇತರ ಕಾರ್ಯಗಳು ಪ್ರಾರಂಭಗೊಳ್ಳುವವು. ಮದುವೆ ಕಾರ್ಯಗಳನ್ನೇ ಕುಂಬ್ರಿ ಮಾರಾಠಿಗರು ಚಡಂಗ ಎಂದು ಕರೆಯುತ್ತಾರೆ. ಕುಂಬ್ರಿ ಮರಾಠಿಗರು ಈ ಪೂಜೆಯನ್ನು ನಿತ್ಯ ಮಾಡುತ್ತಾರಾದರೂ, ಕಾರ್ತಿಕ ಮಾಸದಲ್ಲಿ ವಿಶೇಷವಾಗಿ ಮಾಡುತ್ತಾರೆ. ಇದನ್ನು ಗಂಟ್ ಹುಣ್ಣಿಮೆ ಎಂತಲೂ ಕರೆಯುತ್ತಾರೆ ಎನ್ನುತ್ತಾರೆ. ಆ ದಿನ ತುಳಸಿ ಕಟ್ಟೆಯ ಮೇಲೆ ಒಂದು ಕಬ್ಬು ನಿಲ್ಲಿಸಿ ಸಿಂಗಾರ, ದಾಸಾಳ, ಸೇವಂತಿಗೆ ಇತ್ಯಾದಿ ಹೂವುಗಳು ಮತ್ತು ಅಡಿಕೆ ಕೊನೆ ಮತ್ತು ಮಾವಿನ ಎಲೆಗಳಿಂದ ಸಿಂಗರಿಸುತ್ತಾರೆ. ಆ ತುಳಸಿ

ಕಟ್ಟೆಯ ಸುತ್ತ ತಮ್ಮ ದುಡಿಮೆಗೆ ಬೇಕಾಗುವ ಕೆಲಸ ಸಲಕರಣೆಗಳನ್ನು ಇಟ್ಟು ಅವುಗಳಿಗೆ ಸೇಡಿ ಬರೆಯುತ್ತಾರೆ. ಆಗ ಸಾಯಂಕಾಲ ಪೂಜೆ ಪ್ರಾರಂಭವಾಗುತ್ತದೆ. ಈ ಪೂಜೆ ಮಾಡುವವರು ತಿರುಪತಿಗೆ ಹೋಗಿ ಬಂದವರಾಗಿರುತ್ತಾರೆ. ಒಂದು ಮನೆಯಿಂದ ಇನ್ನೊಂದು ಮನೆಗೆ ಪೂಜೆ ಮುಂದುವರೆಯುತ್ತಿರುತ್ತದೆ. ಕೆಲವು ವಿಶೇಷ ಸಿಹಿ ತಿಂಡಿಯ ನೈವೇದ್ಯ ಮಾಡಿ ಸಮರ್ಪಿಸುತ್ತಾರೆ. ಈ ಪೂಜೆ ಮುಗಿದ ಮೇಲೆ ಪ್ರತಿಯೊಂದು ಮನೆಯ ಯಜಮಾನನಿಗೆ ಕಾಯಿ ಒಳು ಕೊಡುತ್ತಾರೆ. ಆಗ ಪಟಾಕಿ ಸಿಡಿಮದ್ದನ್ನು ಸಿಡಿಸುತ್ತಾರೆ ಮತ್ತು ಈ ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಾರೆ.

**ಬಳಿ ಮೀಯಿಸುವ ಮತ್ತು ಬಾಸಿಂಗ ಕೊಳಿಗೆ ಕಟ್ಟುವ ಪದ್ಧತಿ**

ಕುಂಬ್ರಿ ಮಾರಾಠಿಗರಲ್ಲಿ ತುಳಸಿ ಪೂಜೆಯ ತರುವಾಯ ಮದುಮಗನಿಗೆ ಅವನ ಬಳಿಗೆ ಸೇರಿದ ಐದು ಜನ ಮುತ್ತೈದೆ ಹೆಂಗಸರು ವರನಿಗೆ ನೀರನ್ನು ಮೀಯಿಸುತ್ತಾರೆ. ಇದನ್ನು ಬಳಿ ಮೀಯಿಸುವದು ಎಂದು ಕರೆಯಲಾಗುತ್ತದೆ. ಹುಡುಗನಿಗೆ ಬಳಿ ಮೀಯಿಸಿದ ನಂತರ ಪಂಚೆ ಉಡಲು ಕೊಡುತ್ತಾರೆ. ಹುಡುಗನು ಬಟ್ಟೆ ತೊಟ್ಟ ತರುವಾಯ ಬುದುವಂತನು ಹುಡುಗನಿಗೆ ವೀಳ್ಯದ ಎಲೆಯ ಬಾಸಿಂಗವನ್ನು ಕಟ್ಟುತ್ತಾನೆ. ಆ ನಂತರ ದಿಬ್ಬಣ ಹೊರಡುತ್ತದೆ. ಮದುಮಗನ ಕೈಲಿ ಒಂದು ಕಾಯನ್ನು ಹಿಡಿದುಕೊಳ್ಳಲು ಕೊಡುತ್ತಾರೆ. ಮದುಮಗನಿಗೆ ಸೋದರಮಾವನಾಗುವವನು ಕೊಡೆ ಹಿಡಿಯುತ್ತಾನೆ. ಕೊಡೆಯನ್ನು ಅವರ ಕೈಯಲ್ಲಿಯೇ ತಯಾರಿಸಿಕೊಳ್ಳಲಾಗಿರುತ್ತದೆ. ಒಂದು ಬಿದರಿನ ಗಳದ ಮೇಲ್ಭಾಗದಲ್ಲಿ ಕತ್ರಿಯಾಕಾರದಲ್ಲಿ ಬಿದಿರನ್ನು ಕಟ್ಟುತ್ತಾರೆ. ಅದರ ಮೇಲೆ ಬಿಳಿಯ ವಸ್ತ್ರವನ್ನು ಹಾಕಿ ಬಿಗಿಗೊಳಿಸುತ್ತಾರೆ. ಇದನ್ನೇ ಕೊಡೆ ಎಂದು ಕರೆಯಲಾಗುತ್ತದೆ. ಆದರೆ ಇತ್ತೀಚೆಗೆ ಬಟ್ಟೆಯ ಸಿದ್ಧ ಕೊಡೆಗಳನ್ನೇ ಬಹುತೇಕ ಬಳಸಲಾಗುತ್ತದೆ. ಕೊಡೆ ಹಿಡಿದವನಿಗೆ ಚೆಂಚಿ ಅಣ್ಣ ಎಂದು ಕರೆಯುತ್ತಾರೆ. ಮಲೆನಾಡಿನ ಕಡೆಗೆ ಬಿಳಿಗೊಡೆಯವನು ಎಂದು ಹೇಳಲಾಗುತ್ತದೆ. ಕೊಡೆಹಿಡಿದವನ ಹೆಂಡತಿಗೆ ತಳಗಕ್ಕ ಎನ್ನುತ್ತಾರೆ. ತಳಗದ ಬಟ್ಟಲನ್ನು ಅವಳು ಹಿಡಿದುಕೊಂಡಿರುವುದರಿಂದ ಅವಳನ್ನು ಹಾಗೆ ಕರೆಯುತ್ತಾರೆ. ತಳಗದ ಬಟ್ಟಲಲ್ಲಿ ಒಂದು ತಂಬಿಗೆಯನ್ನಿಟ್ಟು, ಅದಕ್ಕೆ ಮಾವಿನ ಕೊನಕಲನ್ನು ಅದರೊಳಗೆ ಹಾಕಿ, ಬಟ್ಟಲಲ್ಲಿ ಅಕ್ಕಿ ಸಣ್ಣ ದೀಪ ಇಟ್ಟುಕೊಂಡಿರುತ್ತಾರೆ. ಬಾಸಿಂಗ, ಎಲೆ, ಕಾಯಿ, ಅಕ್ಕಿಯನ್ನು ಸೇರಿಸಿ ಮಧು ಮಗನಿಂದ ಮನೆಯ ಮಧ್ಯ ಭಾಗದಲ್ಲಿ ಕಟ್ಟಿಸುತ್ತಾರೆ. ಅಂದಿನಿಂದ ಮದುವೆಯ ಹೆಣ್ಣು ನಮ್ಮ ಕುಟುಂಬಕ್ಕೆ ಸೇರಿದ್ದಾರೆ ಎಂದು ಅರ್ಥ.ಇದಕ್ಕೂ ಮುನ್ನ ಬಾಸಿಂಗ ಕಟ್ಟುವ ಜಾಗದಲ್ಲಿ ಬಾಳೆಕೊನೆ ಕಟ್ಟಿರುತ್ತಾರೆ. ಬಾಸಿಂಗ ಕಟ್ಟಿದ ಮೇಲೆ ಬಾಳೆಕೊನೆ ಕೆಳಗಡೆ ಎಸೆಯುತ್ತಾರೆ. ಇದನ್ನು ಮನೆಯವರೆಲ್ಲಾ ತಿನ್ನುತ್ತಾರೆ.

**ಮದುವೆ ವಿಧಾನಗಳು**

ಕುಂಬ್ರಿ ಮಾರಾಠಿಗರಲ್ಲಿ ಮದುವೆ ದಿಬ್ಬಣವು ಕೊಪ್ಪವನ್ನು ತಲುಪಿದಾಗ ಆ ಊರಿನ ಬುದುವಂತನು ನೆಂಟರನ್ನು ಒಳಗೆ ಕರೆದುಕೊಳ್ಳುತ್ತಾನೆ. ಗಂಡಿನ ಮಾವನು ಹುಡುಗಿಯ ತಂದೆ ತಾಯಿಯರಿಗೆ ಸೀರೆ ಪಂಚೆ, ಟವಲು ಉಡುಗೊರೆ ಕೊಡುತ್ತಾನೆ. ಮದುವೆ ಮುಗಿಸಿ ದಿಬ್ಬಣ ತಿರುಗಿ ಹೋಗುವಾಗ ಹೆಣ್ಣಿನ ಮನೆಯವರು ಗಂಡಿನ ತಂದೆ ತಾಯಿಯರಿಗೆ ಕೊಡಪಾನ, ಚೆಂಬು, ತೆಂಗಿನ ಗಿಡವನ್ನು ಬಳವಳಿಯಾಗಿ ಕೊಡುತ್ತಾರೆ.

**ಎದುರು ತೋರಣ**

ಕುಂಬ್ರಿ ಮಾರಾಠಿಗರಲ್ಲಿ ಮದುವೆ ಮನೆಯವರು ತಮ್ಮ ಮನೆಯಿಂದ ಇಪ್ಪತ್ತು ಇಪ್ಪತ್ತೈದು ಅಡಿಗಳಷ್ಟು ದೂರದಲ್ಲಿ ಒಂದು ಮಾವಿನ ತೋರಣವನ್ನು ಕಟ್ಟುತ್ತಾರೆ. ಇದನ್ನು ಎದುರು ತೋರಣ ಎನ್ನುತ್ತಾರೆ. ಹೆಣ್ಣಿನ ದಿಬ್ಬಣವು ನೇರವಾಗಿ ಮದುವೆ ಮನೆಗೆ ಬರುವಂತಿಲ್ಲ. ಆ ತೋರಣದ ಬಳಿ ಬಂದು ನಿಲ್ಲುತ್ತದೆ. ತರುವಾಯ ವರನ ಕಡೆಯವರು ವಧುವಿನ ಕಡೆಯವರನ್ನು ಸ್ವಾಗತಿಸಿ ಮದುವೆಯ ಚಪ್ಪರಕ್ಕೆ ಕರೆದೊಯ್ಯುತ್ತಾರೆ. ಮದುವೆ ದಿನ ಗೊತ್ತಾದ ಬಳಿಕ ರಾಯಬಾರಿ ಮತ್ತು ಅವರ ಜೊತೆ ಹೋದ ಗಂಡಸರು, ಹೆಂಗಸರು ಹೆಣ್ಣಿನ ಮನೆಗೆ ಹೋಗಿ ಹೂವು, ಸೀರೆ, ಹೊಸ ಬಳೆಗಳನ್ನು ಹೆಣ್ಣಿನ ದೇವರ ಮನೆಯಲ್ಲಿಟ್ಟು ದಿಬ್ಬಣ ಬರುವಂತೆ ಹೇಳುತ್ತಾರೆ. ಮದುಮಗಳನ್ನು ಕರೆದುಕೊಂಡು ಮಾರನೆ ಬೆಳಿಗ್ಗೆ ಸೂರ್ಯ ಹುಟ್ಟುವ ಮೊದಲೆ ಗಂಡಿನ ಮನೆಗೆ ಹೊರಡಬೇಕು, ಅಷ್ಟರಲ್ಲಾಗಲೆ ಗಂಡಿನ ಮನೆಯಲ್ಲಿ ಮದುವೆ ಸಿದ್ಧತೆ ನಡೆದಿರುತ್ತದೆ. ಈಗಾಗಲೆ ಬಂಧುಬಳಗದವರಿಗೆಲ್ಲ ವರ್ತಮಾನ ಕೊಟ್ಟಿರುತ್ತಾರಾದ್ದರಿಂದ ಹಿಂದಿನ ಸಂಜೆಯಿಂದಲೆ ಅವರೆಲ್ಲ ನೆರೆದಿರುತ್ತಾರೆ. ಗಂಡಿನ ಮನೆಯ ಮುಂದಿನ ವಿಶಾಲ ಅಂಗಳವೆ ಮದುವೆ ಮಂಟಪ. ಮೇಲೆ ಮಾವಿನ ಸೊಪ್ಪಿನ ಹಸಿರು ಚಪ್ಪರ, ಚಪ್ಪರದ ಕೆಳಗೆ ವಿಶಾಲ ಅಂಗಳದಲ್ಲಿ ಅದೇ ಲಕ್ಕಿ ಸೊಪ್ಪಿನ ಹಸಿರು ಆವರಣ ನಿರ್ಮಿಸಿರುತ್ತಾರೆ. ಆಚರಣೆಗಳು ಈ ಹಸಿರು ಆವರಣದೊಳಗೆ ನಡೆಯಬೇಕು. ಕುಂಬ್ರಿ ಮರಾಠಿ ಸಮುದಾಯದವರು ಮದುವೆಗೆ ಅತಿ ಅವಶ್ಯಕವಾಗಿ ಬೇಕಾಗಿರುವ ಬೂರುಗ ಮರದ ಕಾಂಡವನ್ನು ಮದುವೆಯ ಹಿಂದಿನ ಸಂಜೆ ಪೂಜೆ ಮಾಡುತ್ತಾರೆ. ಅದರ ಒಂದು ಕೊಂಬೆಯನ್ನು ಕತ್ತರಿಸಿ ತಂದು ಚಪ್ಪರದ ಮದ್ಯ ಮುಹೂರ್ತ ಕಂಬವಾಗಿ ನಿಲ್ಲಿಸುತ್ತಾರೆ. ಈ ಕೊಂಬೆಗೆ ಪೂಜೆ ಮಾಡಿದ ನಂತರವೆ ಮದುವೆ ಕಾರ್ಯಾಚರಣೆ ನಡೆಯುತ್ತವೆ. ಈ ಕೊಂಬೆಯನ್ನು ಬುಡಕಟ್ಟಿನ ಮುಖಂಡ, ಮನೆಯ ಯಜಮಾನ ಹಾಗೂ ಹಿರಿಯರೆಲ್ಲ ಸೇರಿಕೊಂಡು ತರುತ್ತಾರೆ. ಚಪ್ಪರದ ಅಡಿಯಲ್ಲಿ ಕುಲ ದೇವರ ಹೆಸರಿನಲ್ಲಿ ಮತ್ತು ಪ್ರದೇಶದ ಮುಖ್ಯ ದೈವದ ದೇವರ ಹೆಸರಿನಲ್ಲಿ ತೆಂಗಿನಕಾಯಿ

ಕಳಸ ಮಾಡಿ ಪೂಜಿಸುತ್ತಾರೆ. ಹೆಣ್ಣು ಮತ್ತು ಗಂಡು ಇಬ್ಬರನ್ನು ಅವರವರ ಸೋದರ ಮಾವಂದಿರು ಎತ್ತಿಕೊಂಡು ಬಂದು ಹಸೆಯ ಮೇಲೆ ನಿಲ್ಲಿಸುತ್ತಾರೆ. ನಂತರ ಗಂಡು ಹೆಣ್ಣಿಗೆ ಮತ್ತು ಹೆಣ್ಣು-ಗಂಡಿಗೆ ಬಕುಳದ ಹೂವಿನ ಮಾಲೆಯನ್ನು ಹಾಕಿ ಬದಲಾಯಿಸಿಕೊಳ್ಳುವ ಮೂಲಕ ವಿವಾಹ ಬಂಧನವಾಗುತ್ತದೆ. ಕುಂಬ್ರಿ ಮರಾಠಿ ಸಮುದಾಯದ ಹಿರಿಯ ಪೂಜಾರಿ ಮದುವೆಯ ಪೂಜಾ ವಿಧಿಗಳನ್ನು ನೆರವೇರಿಸುತ್ತಾನೆ. ಮದುವೆಯ ಸಂಪ್ರದಾಯದಲ್ಲಿ ಮದುಮಕ್ಕಳಿಗೆ ಫಲ ನೀಡುವ ಮರಗಳಾದ ಮಾವು, ಹಲಸು, ತೆಂಗು ಮುಂತಾದ ಮರಗಳಿಗೆ ಮುಟ್ಟಿ ನಮಸ್ಕರಿಸುವಂತೆ ಹೇಳುತ್ತಾರೆ. ಕುಂಬ್ರಿ ಮರಾಠಿ ಸಮುದಾಯದಲ್ಲಿ ಪ್ರಕೃತಿಯನ್ನೆ ಸಾಕ್ಷಿಯನ್ನಾಗಿಸಿಕೊಂಡು ಮದುವೆ ಮಾಡುವ ಪದ್ಧತಿ ಒಂದು ವಿಶಿಷ್ಟ ಪದ್ಧತಿಯಾಗಿದೆ.

ಕುಂಬ್ರಿ ಮರಾಠಿಗರ ಮದುವೆ ಎಷ್ಟು ಸರಳವೊ ಅವರ ಮದುವೆ ಊಟವು ಅಷ್ಟೇ ಸರಳ. ಮದುವೆಯ ದಿನ ತಾವೆ ಬೆಳೆಯುವ ವಿವಿಧ ಗಡ್ಡೆ ಗೆಣಸುಗಳ ಪಲ್ಲೆ, ಸಾರು, ಅನ್ನ ಹಾಗೂ ಗುಳ್ಳಾಣಿ ಪಾಯಸ, ಇದಿಷ್ಟೇ ಅಂದಿನ ಊಟ. ಕುಂಬ್ರಿ ಮರಾಠಿಗರ ಮದುವೆಯಲ್ಲಿ ವಿಶೇಷತೆಯನ್ನು ನನ್ನ ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಅದು ಏನೆಂದರೆ ಮದುವೆಯ ಸಂದರ್ಭದಲ್ಲಿ ಮದುಮಗಳಿಗೆ ತಾಯಿ ಮನೆಯಿಂದ ಒಂದು ಮಂಗಳಸೂತ್ರ ಕೊಡುತ್ತಾರೆ, ಅದರಲ್ಲಿ ಕರಿಮಣಿ ಹಾಕಿದ ಬಂಗಾರದ ಮಣಿ ಒಂದು ಇರುತ್ತದೆ, ನಂತರ ಗಂಡನ ಮನೆಗೆ ಮದುಮಗಳು ಬಂದಾಗ ಅಲ್ಲಿ ಮುಹೂರ್ತದ ಸಮಯದಲ್ಲಿ 'ಮುಹೂರ್ತ ಮಂಗಳಸೂತ್ರ' ಎಂದು ಅದನ್ನು ಕೊರಳಿಗೆ ಹಾಕುತ್ತಾರೆ. ಹೀಗೆ ಅವರ ಮದುವೆ ಪದ್ಧತಿಯನ್ನು ನೋದಿದಾಗ ಪ್ರತಿಯೊಂದು ಮದುವೆಯಾದ ಹೆಂಗಸರ ಕೊರಳಲ್ಲಿ ಎರಡು ಮಂಗಳಸೂತ್ರವನ್ನು ಕಾಣುವುದು ಒಂದು ವಿಶೇಷ. ಆದರೆ ಆದಿವಾಸಿಗಳಲ್ಲಿ ವಿವಾಹವನ್ನು ಒಂದು ಒಪ್ಪಂದವೆಂದು ಪರಿಗಣಿಸಲಾಗಿದೆ. ಅದು ಕೇವಲ ಇಬ್ಬರ ಲೈಂಗಿಕ ಸಂಬಂಧ ಮಾತ್ರವಾಗಿರದೆ ಎರಡು ಕುಟುಂಬದ ನಡುವೆ ಏರ್ಪಡುವ ಸಂಬಂಧವಾಗಿರುತ್ತದೆ.

**ಧಾರೆ ಎರೆಯುವ ಪದ್ಧತಿ**

ಕುಂಬ್ರಿ ಮಾರಾಠಿಗರಲ್ಲಿ ಧಾರೆ ಎರೆಯುವ ಪದ್ಧತಿ ವಿಶಿಷ್ಟವಾಗಿದೆ. ಮದುಮಗನಿಗೆ ಬಾಸಿಂಗ ಕಟ್ಟಿದ ತರುವಾಯ ವಧು ವರರನ್ನು ಹಂದರಕ್ಕೆ ಕರೆತರಲಾಗುತ್ತದೆ. ಹಂದರದ ಮಧ್ಯಭಾಗದಲ್ಲಿ ಕುಳಿತ ಬುದುವಂತನು ವಧು ವರರು ಉಟ್ಟ ಬಟ್ಟೆಗಳ ಎರಡೂ ತುದಿಯನ್ನು ಗಂಟು ಹಾಕಿ ವಧುವಿನ ಬಲಗೈ ವರನ ಬಲಗೈ ಮೇಲೆ ಇಡಿಸಿ ತುಳಸಿ ದೇವತೆಯ ಸಾಕ್ಷಿಯಾಗಿ ಪಂಚಾಮೃತವನ್ನು ಎರೆಯುತ್ತಾನೆ. ಬುದುವಂತರು ಗಟ್ಟಿಯಾಗಿ ಇಂಥವರ ಮಗಳನ್ನು ಇಂಥವರ ಮಗನಿಗೆ ಕೊಟ್ಟು ದೈವದ ಸಮಕ್ಷಮದಲ್ಲಿ ವಧು-ವರರ ಕೈ ಸೇರಿಸಿ

ಧಾರೆ ಎರೆಯುತ್ತಿದ್ದಾರೆ. ಸೇರಿದ ಸಮಸ್ತ ಜನರಿಗೆ, 'ಸಮುದಾಯದ ಹಿರಿಯರೂ ಮತ್ತು ದೈವದವರದೂ  ಒಪ್ಪಿಗೆಯಾ ಎಂದು ಕೇಳುತ್ತಾನೆ.' ಎಲ್ಲರೂ ಆಗಲಿ ನಮ್ಮ ಒಪ್ಪಿಗೆ ಇದೆ ಎಂದು ಹೇಳಿದ ತರುವಾಯ ಬುದುವಂತನು ತನ್ನ ಮೇಲ್ವಿಚಾರಣೆಯಲ್ಲಿ ಧಾರೆಶಾಸ್ತ್ರ ಮಾಡುತ್ತಾನೆ. ಹಂದರದೊಳಗಿನ ಧಾರೆಶಾಸ್ತ್ರ ಪೂರ್ಣಗೊಳಿಸಲಾಗುತ್ತದೆ. ಆಮೇಲೆ ಮನೆಯ ಒಳಗೆ ಗಂಡು-ಹೆಣ್ಣನ್ನು ದೇವರ ಮುಂದೆ ಕೂಡಿಸಿ ಅಕ್ಷತೆಯನ್ನು ಹಣೆಯ ಮೇಲೆ ಒತ್ತಿ ಹಚ್ಚುತ್ತಾರೆ. ನಂತರ ತಂದೆ-ತಾಯಿಗಳು, ಬುದುವಂತರು, ಹಿರಿಯರು ಅಕ್ಷತೆಯನ್ನು ತಲೆಯ ಮೇಲೆ ಹಾಕುತ್ತಾರೆ. ವರನು ವಧುವಿಗೆ ಮಾಂಗಲ್ಯ ಕಟ್ಟುತ್ತಾನೆ. ಇದಾದ ತರುವಾಯ ಮನೆಯಿಂದ ಹೊರಬಂದು ಸೇರಿದ ದೈವದ ಹಿರಿಯರಿಗೆ, ಬಂಧುಬಳಗದವರಿಗೆ ಕಾಲಿಗೆ ನಮಸ್ಕಾರ ಮಾಡುತ್ತಾರೆ.

**ಅಕ್ಕಿ ಚೆಲ್ಲುವ ಪದ್ಧತಿ**

ಕುಂಬ್ರಿ ಮಾರಾಠಿಗರಲ್ಲಿ ತಾಳಿ ಕಟ್ಟಿದ ನಂತರ ವಧು ವರರು ಮನೆಯ ಹೊರಗೆ ಬಂದು ಹಿರಿಯರಿಗೆ ನಮಸ್ಕಾರ ಮಾಡಿ ಮರಳಿ ಮನೆಯೊಳಗೆ ಹೋಗಬೇಕು. ಅವರು ಮನೆಯೊಳಗೆ ಹೋಗುವ ಪೂರ್ವದಲ್ಲಿಯೇ ಹೊಸ್ತಿಲ ಮೇಲೆ ಸೇರಿನಲ್ಲಿ ಅಕ್ಕಿಯನ್ನು ತುಂಬಿ ಇಟ್ಟಿರುತ್ತಾರೆ. ಆ ಅಕ್ಕಿಯನ್ನು ವಧು ವರರು ಮನೆಯೊಳಗೆ ಅಕ್ಕಿ ಚೆಲ್ಲುವಂತೆ ಬಲಗಾಲಿನಿಂದ ಸೇರನ್ನು ಒದ್ದು ಒಳಹೋಗುತ್ತಾರೆ. ಪ್ರಾಯಶಃ ಈ ಪದ್ಧತಿ ಕರ್ನಾಟಕದ ಎಲ್ಲಾ ಕಡೆಯೂ ಎಲ್ಲಾ ಸಮುದಾಯಗಳಲ್ಲಿಯೂ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಪ್ರಚಲಿತವಿದೆ. ಮಗಳನ್ನು ಕೊಟ್ಟ ಮನೆ ಬರಿದಾಗಬಾರದು ಎನ್ನುವ ಆಶಯ ಅದರ ಹಿಂದಿರಬಹುದು. ಮದುವೆಯಲ್ಲಿ ಅತೀ ಮುಖ್ಯ ಪಾತ್ರವಹಿಸುವುದೇ ಸೋಬಾನೆ ಹಾಡುಗಳು. ಪ್ರತಿಯೊಂದು ಕಾರ್ಯಕ್ಕೂ ಆಯಾ ಸಂದರ್ಭಕ್ಕೆ ತಕ್ಕಂತಹ ಪದಗಳನ್ನು ಕುಂಬ್ರಿ ಮಾರಾಠಿ ಮಹಿಳೆಯರು ಹಾಡುತ್ತಾರೆ. ಹಿಂದೆಲ್ಲ ಮದುವೆಯಾದ ಮಾರನೆ ದಿನ ದಿಬ್ಬಣ ವಾಪಸ್ಸು ಹೋಗುತ್ತಿತ್ತು. ಈಗ ಆ ದಿನದಂದೆ ದಿಬ್ಬಣ ಹೊರಡುತ್ತದೆ. ವರನೇ ಖುದ್ದಾಗಿ ಕೊಪ್ಪದ ಪ್ರತಿ ಮನೆಗೆ ಹೋಗಿ ತನ್ನ ಮನೆಗೆ ಬರುವಂತೆ ಅಹ್ವಾನಿಸುತ್ತಾನೆ. ಹೆಣ್ಣಿನ ತಂದೆಯು ನಮ್ಮ ಮಗಳಿಗೆ ಹೊಟ್ಟೆಗೆ ಅನ್ನ, ನೆತ್ತಿಗೆ ಎಣ್ಣೆ, ಉಡಲು ಸೀರೆ ಇವುಗಳನ್ನು ಕೊಡುವವರು ಯಾರು ಎಂದು ಗಟ್ಟಿಯಾಗಿ ಕೇಳುತ್ತಾನೆ. ಆಗ ಗಂಡಿನ ಮನೆಯವರು ನಾವು ಎಂದು ಗಟ್ಟಿಯಾಗಿ ಹೇಳುತ್ತಾರೆ. ಮದುವೆಯಾದ ಹೆಣ್ಣನ್ನು ಗಂಡಿನ ತಂದೆ ಕೈಹಿಡಿದು ಒಳಗೆ ಕರೆದುಕೊಳ್ಳುತ್ತಾನೆ. ಬಾಗಿಲ ಹೊಸಿಲಿಗೆ ರಂಜಲೆ ಮರ, ಬೊರಲ ಹತ್ತಿ ಮರದ ಕಡ್ಡಿ ತಂದು ಹೊಸಲಿಗೆ ನೆಟ್ಟಿರುತ್ತಾರೆ. (ಕಂಕಣ ಕಟ್ಟುವ ದಿನ) ಈ ಎರಡು ವಸ್ತುಗಳನ್ನು ಕಂಕಣ ಬಿಚ್ಚುವ ದಿನ ತೆಗೆಯುತ್ತಾರೆ.ಈ ದಿನ ಮಾಂಸದ ಅಡುಗೆ ಮಾಡಿ ತಿನ್ನುತ್ತಾರೆ. ಈ ಶಾಸ್ತ್ರ ಗಂಡು ಮತ್ತು ಹೆಣ್ಣಿನ ಮನೆಯವರ ಸಮ್ಮುಖದಲ್ಲಿ ನಡೆಯುತ್ತದೆ.

ಈ ಶಾಸ್ತ್ರಗಳು ಗಂಡಿನ ಮನೆಯಲ್ಲಿಯೇ ನಡೆಯುತ್ತವೆ. ಕುಂಬ್ರಿ ಮರಾಠಿಗರಲ್ಲಿ ಈ ಹಿಂದೆ ಬಾಲ್ಯ ವಿವಾಹ ಪದ್ಧತಿ ಇದ್ದ ಕಾರಣಕ್ಕಾಗಿ, ಹುಡುಗಿ ಮೈನೆರೆಯುವವರೆಗೂ ಪ್ರಸ್ಥದ ಶಾಸ್ತ್ರ ಮಾಡುತ್ತಿರಲಿಲ್ಲ. ಆದರೆ ಇತ್ತೀಚೆಗೆ ಮೈನೆರೆತ ಹೆಣ್ಣಿಗೆ ಮದುವೆ ಮಾಡುವುದರಿಂದ ಪ್ರಸ್ಥದ ಶಾಸ್ತ್ರವೂ ಬೇಗ ನಡೆಸಲಾಗುತ್ತದೆ. ಮದುವಣಗಿತ್ತಿಯು ಮದುವೆಯಾದ ತರುವಾಯ ಮೊದಲ ಮುಟ್ಟಿಗೆ ಮಿಂದ ಐದನೇ ದಿನ ಸಾಯಂಕಾಲ ಅನ್ನ ಪಾಯಸ ಮಾಡಿ ಹಸೆ ಹಾಸುತ್ತಾರೆ. ಹಸೆ ಹಾಸಿದವರಿಗೆ ದುಡ್ಡು ಕೊಡುವ ಅಥವಾ ಅಕ್ಕಿ, ತೆಂಗಿನ ಕಾಯಿ ಕೊಡುವ ಪದ್ಧತಿ ಇದೆ. ಶೋಭನವು ಗಂಡಿನ ಮನೆಯಲ್ಲಿಯೇ ನಡೆಯುತ್ತದೆ. ಇತ್ತೀಚೆಗೆ ಅನಿವಾರ್ಯ ಕಾರಣಗಳಿದ್ದಾಗ ಹೆಣ್ಣಿನ ಮನೆಯಲ್ಲಿ ಶೋಭನ ಕಾರ್ಯ ಮಾಡುವುದೂ ಉಂಟು.

**ಹೆರಿಗೆ ಮತ್ತು ಸೀಮಂತ ಪದ್ಧತಿಗಳು**

ಕುಂಬ್ರಿ ಮರಾಠಿಗರಲ್ಲಿ ಹೆಣ್ಣು ಏಳು ತಿಂಗಳು ಗರ್ಭಿಣಿಯಾದಾಗ ಸೀಮಂತ ಕಾರ್ಯ ನಡೆಯುತ್ತದೆ. ಇದು ಗಂಡು ಮತ್ತು ಹೆಣ್ಣಿನ  ಮನೆಯಲ್ಲೂ ನಡೆಯುತ್ತದೆ. ಗರ್ಭಿಣಿಯಾದ ಮಹಿಳೆಗೆ ಅಕ್ಕಿ ರೊಟ್ಟಿ ಶಾವಿಗೆ ಹೆಚ್ಚು ತಿನ್ನಿಸುತ್ತಾರೆ. ಗರ್ಭಿಣಿಯಾದ ಐದನೇ ಅಥವಾ ಏಳನೇ ತಿಂಗಳಲ್ಲಿ ಚೊಚ್ಚಲ ಹೆರಿಗೆಗೆ ತವರಿಗೆ ಕಳಿಸುವ ಸಂಪ್ರದಾಯವು ಕುಂಬ್ರಿ ಮರಾಠಿಗರಲ್ಲಿದೆ. ಹೆರಿಗೆಯ ನೋವು ಪ್ರಾರಂಭವಾದ ಕೂಡಲೆ ಕುಂಬ್ರಿ ಮರಾಠಿಗರಲ್ಲಿಯೇ ಇರುವ ಸೂಲಗಿತ್ತಿಯನ್ನು ಕರೆಸಲಾಗುತ್ತಿತ್ತು. ಅವರು ಸಾರಾಗವಾಗಿ ಹೆರಿಗೆಯನ್ನು ಮಾಡಿಸುತ್ತಾರೆ. ಈ ಹಿಂದೆ ಹೆರಿಗೆಯನ್ನು, ಅದಕ್ಕಾಗಿಯೇ ನಿರ್ಮಿಸಿದ ಪ್ರತ್ಯೇಕ ಗುಡಿಸಿನಲ್ಲಿ ನಡೆಸಲಾಗುತ್ತಿತ್ತು. ಮಗುವಾದ 11 ದಿನದವರೆಗೂ ತಾಯಿ ಮಗು ಆ ಗುಡಿಸಲಲ್ಲೇ ಇರಬೇಕಾಗಿತ್ತು. ತರುವಾಯ 11ನೇ ದಿನ ನಾಮಕರಣ ಮಾಡಲೆಂದು ತಾಯಿ ಮಗುವಿಗೆ ಸ್ನಾನ ಮಾಡಿಸಿ ಮೈಲಿಗೆ ಕಳೆಯಲಾಗುತ್ತಿತ್ತು. 11ನೇ ದಿನ ನಾಮಕರಣಶಾಸ್ತ್ರ ಪೂರ್ಣಗೊಂಡ ತರುವಾಯ ತಾಯಿ ಮಗುವನ್ನು ಮನೆಯೊಳಗೆ ಕರೆತರಲಾಗುತ್ತಿತ್ತು. ಹೆರಿಗೆಯಾದ ಮನೆಯನ್ನು ಮೈಲಿಗೆ ಮನೆಯಂದು ಸಮುದಾಯದೊಳಗಿನ ಬೇರೆ ಕುಟುಂಬಗಳು ಇವರ ಮನೆಗೆ ಬರುವಂತಿರಲಿಲ್ಲ. ಮೈಲಿಗೆ ಕಳೆದ ನಂತರವೇ ಕೊಪ್ಪದ ಇತರ ಸದಸ್ಯರು ಹೆರಿಗೆಯಾದ ಮನೆಗೆ ಬಂದುಹೋಗುವುದನ್ನು ಮಾಡಬಹುದು. ಇತ್ತೀಚೆಗೆ ಹೆರಿಗೆಗಾಗಿ ಪ್ರತ್ಯೇಕ ಗುಡಿಸಲನ್ನು ನಿರ್ಮಿಸುವುದನ್ನು ಬಿಟ್ಟಿದ್ದಾರೆ. ಬಹುತೇಕ ಸರ್ಕಾರಿ ಆಸ್ಪತ್ರೆಗಳಿಗಾಗಿ ಹೆರಿಗೆಗೆ ಕರೆದುಕೊಂಡು ಹೋಗಲಾಗುತ್ತದೆ. ಹೆರಿಗೆಯಾದ ಕೂಡಲೇ ಬಾಣಂತಿಗೆ ನಂಜು ಆಗದಂತೆ ನಂಜಟ್ಲೆ ಬೇರನ್ನು ನಿಂಬೆ ರಸ ಅಥವಾ ಅಕ್ಕಚ್ಚಿನಲ್ಲಿ ಗಂಜಿ ತೇದು ನೆಕ್ಕಿಸಲಾಗುತ್ತದೆ.

## ನಾಮಕರಣ ಮತ್ತು ಮಗುವಿನ ಪೋಷಣೆ

ಕುಂಬ್ರಿ ಮರಾಠಿ ಸಮುದಾಯದಲ್ಲಿ, ಮಗು ಜನನವಾದ 11ನೇ ದಿನ ನಾಮಕರಣ ಮಾಡುತ್ತಾರೆ. ಅಂದು ಮಡಿವಾಳಗಿತ್ತಿ ತಂದ ಕಾರಬೂದಿಯಿಂದ ಮನೆ ಶುದ್ಧಿ ಮಾಡಿ, ಮನೆಯವರೆಲ್ಲ ಶುದ್ಧಿ ಆಗಿ ಮಗುವಿಗೆ ಸ್ನಾನ ಮಾಡಿಸಿಕೊಂಡು ಬರುವಾಗ ಮನೆ ಮುಂದಿನ ದಾರಂದದಲ್ಲಿ ನಿಲ್ಲಿಸಿ ಮುಖಕ್ಕೆ ದ್ವಾರದಲ್ಲಿ ನೀರು ಹೊಡಿಯುತ್ತಾರೆ. ಇದಕ್ಕೆ ಚಳ್ಳನೀರು ಹೊಡೆಯುವುದು ಎನ್ನುತ್ತಾರೆ. ಈ ನೀರು ಹೊಡೆಯುವಾಗ ಮಗು ಬೆಚ್ಚಿ ಬೀಳಬೇಕು. ಇದರಿಂದ ಮುಂದೆ ಎಲ್ಲವನ್ನು ಎದುರಿಸುವ ಶಕ್ತಿ ಬರುತ್ತದೆ ಎಂಬ ನಂಬಿಕೆ ಇದೆ. ಮನೆಯ ಮುಂಭಾಗದಲ್ಲಿ ಮಾಸವನ್ನು ಚಿಕ್ಕ ಗಡಿಗೆಯಲ್ಲಿ ಹಾಕಿ ಹೂತಿರುತ್ತಾರೆ. ಮಾಸ ಹೂತ ಜಾಗದಲ್ಲಿ ಕಳ್ಳಿಗಿಡದ ಟೊಂಗೆಯೊಂದನ್ನು ನಿಲ್ಲಿಸುತ್ತಾರೆ. ಅದಕ್ಕೆ ಸಣ್ಣಗೆ ಅಕ್ಕಿ ರೊಟ್ಟಿ ಮಾಡಿ ಟೊಂಗೆಗೆ ಚುಚ್ಚಿರುತ್ತಾರೆ. ಸಾಮಾನ್ಯವಾಗಿ ಕುಂಬ್ರಿ ಮರಾಠಿ ಸಮುದಾಯದವರು ಮರದ ಬೀಳಿಲಿನ ಇಲ್ಲವೇ ಅಡಿಕೆ ದಬ್ಬೆಯಿಂದ ಮಾಡಿದ ತೊಟ್ಟಿಲ್ಲನ್ನು ಉಪಯೋಗಿಸುತ್ತಾರೆ. ಮಗುವನ್ನು ತೊಟ್ಟಿಲಿಗೆ ಹಾಕುವ ಪೂರ್ವದಲ್ಲಿ ರುಬ್ಬುವ ಗುಂಡನ್ನು ಹಾಕಿ ತೊಟ್ಟಿಲು ತೂಗುತ್ತಾರೆ. ತರುವಾಯ ಗುಂಡುಕಲ್ಲನ್ನು ತೆಗೆದು ತೊಟ್ಟಿಲಿಗೆ ಮಗುವನ್ನು ಹಾಕುತ್ತಾರೆ. ಮಗುವಿನ ನಾಮಕರಣವನ್ನು ಬುದುವಂತನೇ ಮಾಡುತ್ತಾನೆ. ತೊಟ್ಟಿಲುಶಾಸ್ತ್ರ ಮಾಡುವ ಪೂರ್ವದಲ್ಲಿ ಮನೆ ದೈವಕ್ಕೆ ನೈವೇದ್ಯ ಮಾಡಿ ಮನೆಯವರೆಲ್ಲಾ ದೈವಕ್ಕೆ ನಮಸ್ಕಾರ ಮಾಡುತ್ತಾರೆ. ಈ ಕಾರ್ಯ ಮುಗಿದ ತರುವಾಯ ಮಗುವಿಗೆ ಹೆಸರಿಡುವ ಶಾಸ್ತ್ರ ಮಾಡಲಾಗುತ್ತದೆ. ಬಾಣಂತಿಯರಿಗೆ ಕಾಸ್ಗನಮರಕ್ಕೆ ಸುತ್ತಿದ ಬಳ್ಳಿ, ನಂಜಟ್ಟೆ ಬೇರು, ಮೆಣಸಿನ ಕಾಳು ನೀರು, ಮೆಣಸಿನಕಾಳಿನ ಚಟ್ನಿ, ಪ್ರತಿದಿನ ರಾತ್ರಿ ಗೇರು ಹಣ್ಣಿನ ಅಥವಾ ತೆಂಗಿನ ಸಾರಾಯಿಯನ್ನು ಬಾಣಂತಿಯರಿಗೆ ನೀಡಲಾಗುತ್ತದೆ.

## ಋತುಮತಿಯಾದಾಗ ನಡೆಯುವ ಆಚರಣೆಗಳು

ಕುಂಬ್ರಿ ಮರಾಠಿಗರಲ್ಲಿ ಹೆಣ್ಣು ಮಕ್ಕಳು ಋತುಮತಿಯಾದಾಗ ನಡೆಯುವ ಆಚರಣೆಗಳು ವಿಶಿಷ್ಟವಾಗಿವೆ. ಹೆಣ್ಣಿಗೆ ಹರೆಯ ಮತ್ತು ಸಂಸಾರಿಕ ವ್ಯವಸ್ಥೆಯ ಕುರಿತಾಗಿ ಹಿರಿಯರು ಕೆಲವು ಕಟ್ಟುಪಾಡುಗಳನ್ನು ಅವಳಿಗೆ ನೋವಾಗದ ರೀತಿಯಲ್ಲಿಯೇ ಕುಟುಂಬದ ಅಥವಾ ದೈವದ ಹಿರಿಯರು ನೀಡಬಯಸುತ್ತಾರೆ. ಕುಂಬ್ರಿ ಮರಾಠಿಗರಲ್ಲಿ ಋತುಮತಿಯಾದ ಹೆಣ್ಣನ್ನು ಮಾವು, ಹಲಸು ಅಥವಾ ನಿಂಬೆ ಗಿಡದಡಿಯೇ ಇರಿಸಲಾಗುತ್ತದೆ. ಆ ಮರಗಳ ಕೆಳಗೆ ಚಿಕ್ಕದಾದ ಗುಡಿಸಲನ್ನು ನಿರ್ಮಿಸಿ ಕುಂಬ್ರಿ ಮರಾಠಿಗರ ಮೈನೆರೆತ ಹೆಣ್ಣನ್ನು ಗುಡಿಸಿಲಲ್ಲಿ ಇರಿಸಲಾಗುತ್ತದೆ. ಉತ್ತರ ಕನ್ನಡದ ಕುಂಬ್ರಿ ಮರಾಠಿಗರು ಕಾಡಿಗೆ ಹೊಂದಿಕೊಂಡ ಪ್ರದೇಶದಲ್ಲಿರುವುದರಿಂದ

ಮಾವು ಹಲಸಿನ ಮರಗಳಿಗೇನೂ ಕೊರತೆ ಇರುವುದಿಲ್ಲ. ಇನ್ನು ನಿಂಬೆಯ ಗಿಡವು ಸಾಮಾನ್ಯವಾಗಿ ಕುಂಬ್ರಿ ಮರಾಠಿಗರ ಮನೆ ಗುಡ್ಲಿನ ಹಿಂಭಾಗದಲ್ಲಿರುತ್ತದೆ. ಅಲ್ಲಿ ಯಾವುದು ಹತ್ತಿರವಿದೆಯೋ ಆ ಮರದ ಕೆಳಗೆ ಗುಡ್ಲು ನಿರ್ಮಿಸಲಾಗುತ್ತದೆ. ಹೆಣ್ಣು ಮೈನೆರೆದಿದ್ದಾಳೆಂದು ತಿಳಿದ ತರುವಾಯ ಅಕ್ಕಪಕ್ಕದ ಐದು ಜನ ಕುಂಬ್ರಿ ಮರಾಠಿಗರ ಹೆಂಗಸರೊಂದಿಗೆ ಅರಿಶಿಣ ನೀರು ಹಾಕಲಾಗುತ್ತದೆ. ಐದು ದಿನ ಅಥವಾ ಒಂಭತ್ತು ದಿನ ಗುಡಿಸಲಲ್ಲಿ ಮೈನೆರೆದ ಹೆಣ್ಣು ಇರಬೇಕಾಗುತ್ತದೆ. ಐದು ಅಥವಾ ಒಂಭತ್ತನೇ ದಿನ ಅರಿಸಿಣ ನೀರನ್ನು ಮತ್ತೆ ಎರೆಯಲಾಗುತ್ತದೆ. ಅಂದು ಸಾಧ್ಯವಾದ ಮಟ್ಟಿಗೆ ಮೈನೆರೆದ ಹುಡುಗಿಗೆ ಹೊಸ ಸೀರೆ ಕೊಡಲಾಗುತ್ತದೆ. ಹೊಸ ಬಟ್ಟೆ ಕೊಳ್ಳಲು ಯೋಗ್ಯತೆ ಇಲ್ಲದವರು ಹಳೆಯ ಆದರೆ ಶುಚಿಯಾದ ಬಟ್ಟೆಗಳನ್ನು ಹೆಣ್ಣಿಗೆ ತೊಡಿಸುತ್ತಾರೆ. ಕರಿಯ ಬಳೆಯನ್ನು ಹಾಕಿಸಲಾಗುತ್ತದೆ. ಗುಡಿಸಲಿನಲ್ಲಿರುವ ಸಮಯದಲ್ಲಿ ಹುಡುಗಿಗೆ ಗಂಡಸರ ನೆರಳು ಬೀಳದಂತೆ ನೋಡಲಾಗುತ್ತದೆ. ಹೆಣ್ಣೂ ಕೂಡ ಯಾವ ಗಂಡಿನ ಮುಖ ದರ್ಶನ ಮಾಡುವಂತಿಲ್ಲ. ಮೇಲ್ವಿಚಾರಕಿಯ ಹೊರತಾಗಿ ಕುಟುಂಬದ ಯಾವ ಸದಸ್ಯರನ್ನೂ ಮುಟ್ಟಿಸಿಕೊಳ್ಳುವಂತಿಲ್ಲ. ಗುಡಿಸಲನ್ನು ಬಿಟ್ಟು ಹೊರಗೆ ಹೋಗುವಂತಿಲ್ಲ. ಶೌಚ ಕಾರ್ಯಗಳನ್ನು ಯಾರೂ ನೋಡದ ವೇಳೆಯಲ್ಲಿಯೇ ಪೂರೈಸಿಕೊಳ್ಳಬೇಕು. ಹೆಣ್ಣು ಗುಡಿಸಲಲ್ಲಿ ಇರುವವರೆಗೂ ಮೈಲಿಗೆ ಕಾಲವೆಂದು ಭಾವಿಸಲಾಗುತ್ತದೆ. ಐದು ಅಥವಾ ಒಂಬತ್ತನೇ ದಿನ ಹುಡುಗಿಗೆ ನೀರೆರದ ತರುವಾಯ ಮೈನೆರೆದ ಹೆಣ್ಣಿನ ಅಜ್ಜ ಅಜ್ಜಿಯರು ತುಳಸಿ ಪೂಜೆ ಮಾಡಿ ಹಿರಿಯರಿಗೆಲ್ಲ ಅವಳಿಂದ ಕಾಲು ಬೀಳಿಸುತ್ತಾರೆ. ಅಂದು ಮನೆಯವರು ದೈವದವರಿಗೆ ತಮ್ಮ ಕೈಲಾದಮಟ್ಟಿಗೆ ಊಟ ನೀಡುತ್ತಾರೆ.

**ಚೌಲ ಪದ್ಧತಿ**

ಕುಂಬ್ರಿ ಮರಾಠಿಗರಲ್ಲಿ ಮಗು ಹುಟ್ಟಿದ ತರುವಾಯ ಪ್ರತಿಯೊಂದು ಮಗುವಿಗೂ ಹುಟ್ಟು ಕೂದಲನ್ನು ತೆಗೆಯುವುದು ಪದ್ಧತಿ. ಬಹುಶಃ ಭಾರತೀಯ ಪರಂಪರೆಯ ಎಲ್ಲಾ ಸಮುದಾಯಗಳು ಹುಟ್ಟು ಕೂದಲನ್ನು ತೆಗೆಯುವ ಶಾಸ್ತ್ರವನ್ನು ಮಾಡುತ್ತಾರೆ. ಕುಂಬ್ರಿ ಮರಾಠಿಗರಲ್ಲಿ ಗಂಡು ಮಗುವಿಗೆ ಆರು ವರ್ಷ ತುಂಬುವುದರ ಒಳಗಾಗಿ ಚೌಲಶಾಸ್ತ್ರ ಮಾಡಲಾಗುತ್ತದೆ. ಚೌಲಶಾಸ್ತ್ರ ಮಾಡುವ ದಿನ ತಾಯಿ, ಮಗುವಿಗೆ ಸ್ನಾನ ಮಾಡಿಸಲಾಗುತ್ತದೆ. ಮಗುವಿಗೆ ಒಂದು ಬಿಳಿ ಶೆಲ್ಯೆಯನ್ನು ಕಟ್ಟುತ್ತಾರೆ. ಸೋದರಮಾವನು ಮಗುವಿಗಾಗಿ ಬಂಗಾರದ ಅಥವಾ ಬೆಳ್ಳಿಯ ಮುರವನ್ನು ತಂದಿರುತ್ತಾನೆ. ಬುದುವಂತನು ಮಗುವಿಗೆ ಮುರುವನ್ನು ಚುಚ್ಚುತ್ತಾನೆ. ಮಗುವಿನ ತಂದೆಯು ಕೂದಲು ಕತ್ತರಿಸುವ ವ್ಯಕ್ತಿಗೆ ಹೊಸ ಬಟ್ಟೆಯನ್ನು ಕೊಡುತ್ತಾನೆ. ಹುಡುಗಿಯರಿಗಾದರೆ ನಾಲ್ಕು ವರ್ಷದೊಳಗೆ ಕೂದಲನ್ನು ತೆಗೆಯುತ್ತಾರೆ. ಹೆಣ್ಣು

ಮಗುವಿಗೆ ಸಂಬಂಧಿಸಿಯೂ ಇದೇ ರೀತಿಯ ಆಚರಣೆಯನ್ನು ಮಾಡಲಾಗುತ್ತದೆ. ದೈವದವರಿಗೆಲ್ಲ ಪಾಯಸದೂಟವನ್ನು ಕೊಡಲಾಗುತ್ತದೆ.

**ಮರಣ ಸಂಬಂಧಿ ವಿಧಿಗಳು**

ಕುಂಬ್ರಿ ಮರಾಠಿ ಸಮುದಾಯದಲ್ಲಿ ಮರಣ ಸಂಬಂಧಿ ವಿಧಿವಿಧಾನಗಳು ಆದಿಮ ಸ್ಥಿತಿಯಲ್ಲಿವೆ. ಮಾನವನು ಹುಟ್ಟಿಗೆ ಸಂಭ್ರಮಿಸಿದಂತೆಯೇ ಸಾವಿಗೆ ಹೆದರುತ್ತಾನೆ. ಸಾವಿನ ಹೆದರಿಕೆಯೇ ಅದರ ಕುರಿತಾದ ಆಚರಣೆಗಳ ಮೂಲವಿರಬೇಕು. ಯಾವುದಾದರು ದುಷ್ಟಶಕ್ತಿಯ ಪರಿಣಾಮವಾಗಿ ತಮ್ಮ ಕುಟುಂಬದಲ್ಲಿರುವ ವ್ಯಕ್ತಿಯ ಸಾವಿಗೆ ಕಾರಣವೆಂದು ನಂಬುತ್ತಾರೆ. ಕುಂಬ್ರಿ ಮರಾಠಿ ಕೊಪ್ಪದಲ್ಲಿ ಯಾವುದೇ ಕುಟುಂಬದಲ್ಲಿ ಸಾವುಂಟಾದರೂ ಕುಂಬ್ರಿ ಮರಾಠಿ ಸಮುದಾಯದ ಪ್ರತಿ ಮನೆಯಿಂದಲೂ ಕನಿಷ್ಠ ಒಬ್ಬ ವ್ಯಕ್ತಿಯಾದರೂ ಸಾವಾದ ಮನೆಯ ಮುಂದಿರಬೇಕು. ವ್ಯಕ್ತಿಯ ಸಾವಿನ ಸುದ್ದಿಯನ್ನು ಕೋಲಕಾರನು ಪ್ರತಿ ಕುಟುಂಬಕ್ಕೂ ತಿಳಿಸುತ್ತಾನೆ.

**ಸಾವಿಗೆ ಸಂಬಂಧಿಸಿದ ಆಚರಣೆ:** ಸಾವಿನ ದಿನ ಸತ್ತ ವ್ಯಕ್ತಿಯ ತಲೆಯ ಬಳಿ ದೀಪ ಹಚ್ಚಿಟ್ಟಿರುತ್ತಾರೆ. ನಂತರ ನೆಂಟರಿಷ್ಟರಿಗೆಲ್ಲಾ ಬರಲು ಹೇಳುತ್ತಾರೆ.ಸತ್ತ ವ್ಯಕ್ತಿಯನ್ನು ಸ್ನಾನ ಮಾಡಿಸಿ, ಸಿಂಗಾರವನ್ನು ಮಾಡುತ್ತಾರೆ. ಗಂಡ ಸತ್ತರೆ ಹೆಂಡತಿಗೆ ಬಳೆ ಒಡೆಯುವ ಪದ್ಧತಿ ಇದೆ (ಹೆಂಡತಿಯ ತಮ್ಮ ಅಥವಾ ಅಣ್ಣ ಈ ಕೆಲಸ ಮಾಡುತ್ತಾರೆ).ಸತ್ತ ವ್ಯಕ್ತಿ ಗಂಡಾಗಿದ್ದರೆ (ತಂದೆಯಾಗಿದ್ದರೆ) ಕಾರ್ಯವನ್ನು ಮಕ್ಕಳು ಮಾಡುತ್ತಾರೆ. ಹೆಂಡತಿ ಸತ್ತರೆ ಗಂಡ ಮಾಡುತ್ತಾರೆ. ಗಂಡ ಇಲ್ಲದಿದ್ದರೆ ಮಕ್ಕಳು ಮಾಡುತ್ತಾರೆ. ಗಂಡು ಮಕ್ಕಳು ಒಂದಕ್ಕಿಂತಲು ಹೆಚ್ಚು ಇದ್ದರೆ ಹಿರಿಯ ಮಗ ಅಥವಾ ಕೊನೆಯವನು ಮಾಡುತ್ತಾರೆ. ಗಂಡು ಮಕ್ಕಳು ಇಲ್ಲದಿದ್ದರೆ ಹೆಣ್ಣು ಮಕ್ಕಳು ಈ ಶಾಸ್ತ್ರವನ್ನು ಮಾಡುವ ಪದ್ಧತಿ ಇದೆ. ಕುಂಬ್ರಿ ಮರಾಠಿಗರು ಸತ್ತ ವ್ಯಕ್ತಿಯನ್ನು ಸುಡುತ್ತಾರೆ. ಶವವನ್ನು ಸುಡಲು ಮತ್ತಿ ಮರದ ಕಟ್ಟಿಗೆಯನ್ನು ಬಳಸಬೇಕೆಂಬ ನಿಯಮವಿತ್ತು. ಆದರೆ ಇದು ಸಡಿಲವಾಗಿದೆ. (ಇತ್ತೀಚೆಗೆ ಅರಣ್ಯ ಇಲಾಖೆಯವರು ಮರ ಕಡಿಯಲು ಬಿಡುತ್ತಿಲ್ಲ). ಶವವನ್ನು ಸುಡುವಾಗ ಮೂರು ದಿಕ್ಕಿಗೂ ಬೆಂಕಿ ಇಡುತ್ತಾರೆ. ಸಂಸ್ಕಾರ ಮಾಡುವ ವ್ಯಕ್ತಿ ಹಿಮ್ಮುಖವಾಗಿ ಹೆಗಲ ಮೇಲೆ ಮಡಿಕೆಯನ್ನು ಹೊತ್ತುಕೊಂಡು ಸುತ್ತಬೇಕು. ಆ ಮಡಿಕೆಗೆ ಮೂರು ಬಾರಿ ಕುಡಗೋಲಿನಿಂದ ಒಡೆದು ಕೊನೆಯ ಬಾರಿಗೆ ಅದನ್ನು ಕೆಳಗೆ ಬಿಸಾಡುತ್ತಾರೆ. ಶವ ಸಂಸ್ಕಾರಕ್ಕೆ ಬಳಸಿದ ವಸ್ತುಗಳನ್ನು ಗುದ್ಲಿ, ಕುಡುಗೋಲು, ಚಲ್ಕೆ, ಕಂಬಳಿಯಲ್ಲಿ ಸುತ್ತಿ ಉರಿಯುತ್ತಿರುವ ಶವದ ಮೇಲೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಎಸೆಯುತ್ತಾರೆ. ಶವ ಸಂಪೂರ್ಣವಾಗಿ ಸುಟ್ಟು ಹೋಗುವವರೆಗೂ ಅಲ್ಲಿಯೇ ಇದ್ದು ಆ ನಂತರ ಸತ್ತ ವ್ಯಕ್ತಿಯ ಮನೆಗೆ ಬರುತ್ತಾರೆ. ಮಾರ್ಗ ಮಧ್ಯೆ ಸ್ನಾನ ಮಾಡಿ ಸತ್ತ ವ್ಯಕ್ತಿಯ ಮನೆಗೆ ಬರುತ್ತಾರೆ. ಸತ್ತ

ವ್ಯಕ್ತಿಯ ಮನೆಯ ಮುಂದೆ ಬೆಂಕಿಯ ಕೊಳ್ಳಿ ಇಟ್ಟಿರುತ್ತಾರೆ. ಇದನ್ನು ದಾಟಿಕೊಂಡು ಒಳಗಡೆ ಬರಬೇಕು. ಸಗಣಿ, ತುಳಸಿ ನೀರಿನ ಮಿಶ್ರಣವನ್ನು ಕಾಲಿಗೆ ಹಾಕಿಕೊಳ್ಳಬೇಕು. ಇಲ್ಲಿಗೆ ಬಂದಂತಹ ವ್ಯಕ್ತಿಗಳನ್ನು ಹಾಲು ಇಲ್ಲದ ಚಹಾ ಮಾಡಿ ಕುಡಿಯಲು ಕೊಡುತ್ತಾರೆ. ಆದರೆ ಎಲ್ಲರೂ ಕುಡಿಯಲೇಬೇಕೆಂಬ ನಿಯಮವೇನಿಲ್ಲ. ಈ ಕಾರ್ಯ ಮುಗಿದ ಮೇಲೆ ಅವರವರ ಮನೆಗೆ ಹೋಗಬಹುದು. ಕೆಲವು ಸಂದರ್ಭದಲ್ಲಿ ಹೆಣವು ಸುಟ್ಟಿರುವುದಿಲ್ಲ. ಆಗ ಊರಿನ ಹಿರಿಯರು ಶವ ಸುಟ್ಟ ಪ್ರದೇಶಕ್ಕೆ ಹೋಗಿ ಮತ್ತೊಮ್ಮೆ ಬೆಂಕಿ ಹಾಕಿ ಶವ ಸುಟ್ಟು ಬೂದಿ ಆಗುವ ವರೆಗೂ ಅಲ್ಲಿಯೇ ಇದ್ದು ಆ ಸ್ಥಳಕ್ಕೆ ಚಪ್ಪರ ಮಾಡಿ ನೆಲ್ಲಿ ಗಿಡದ ಸೊಪ್ಪನ್ನು ಇದರ ಮೇಲೆ ಹಾಕಿ ಬರುತ್ತಾರೆ. ಮೂರು ಹಂಡೆಗಳನ್ನು ತೆಗೆದುಕೊಂಡು ಶವ ಸುಟ್ಟ ಜಾಗಕ್ಕೆ ಹೊಗುತ್ತಾರೆ. 1. ಪಂಚಗವ್ಯ 2. ಗಂಜಿ 3. ನೀರು ಇವುಗಳನ್ನು ಶವ ಸುಟ್ಟ ಜಾಗದಲ್ಲಿ ಹಾಕಿ ಬಾಳೆಗಿಡ ಅಥವಾ ತುಳಸಿ ಗಿಡವನ್ನು ನೆಟ್ಟಿ ಬರುತ್ತಾರೆ. ಬ್ರಾಹ್ಮಣ ಪುರೋಹಿತರನ್ನು ಕರೆಸಿ ಮದುವೆ ದಿನ ಯಾವ ಯಾವ ಕಾರ್ಯಗಳನ್ನು ಮಾಡಿರುತ್ತಾರೋ ಆ ಕಾರ್ಯವನ್ನೆಲ್ಲ ಹನ್ನೊಂದನೇ ದಿನದಲ್ಲಿ ಮಾಡಲಾಗುತ್ತದೆ. ಶವದ ಅಸ್ತಿಯನ್ನು ತಂದು ನೀರಿನಲ್ಲಿ ಬಿಡುತ್ತಾರೆ. ಮನೆಯಲ್ಲಿ ತಿಥಿಗೆಂದು ಮಾಡಿದ ಅಡುಗೆಯನ್ನು ಮನೆಯ ಹೊರಗಡೆ ಕಾಗೆಗೆ ಹಾಕಲಾಗುತ್ತದೆ. ಕಾಗೆ ತಿನ್ನದೆ ಹೊದರೆ ಈ ಕಾರ್ಯವನ್ನು ಮತ್ತೊಂದು ದಿನ ಮಾಡಬೇಕು. ಸತ್ತವರ ಮನೆಗೆ ಸಂಬಂಧಿಕರು ಬಟ್ಟೆ ಹಾಕುವ ಶಾಸ್ತ್ರ ಮಾಡುತ್ತಾರೆ. ಈ ದಿನ ಮನೆಯಲ್ಲಿ ಸಸ್ಯಹಾರ ಮತ್ತು ಮಾಂಸಹಾರ ಎರಡನ್ನು ಮಾಡುತ್ತಾರೆ. ಚಿತೆಗೆ ಕೊಳ್ಳಿ ಇಟ್ಟವನು ಹನ್ನೆರಡು ದಿನಗಳ ವರೆಗೆ ಊಟ ಮಾಡದೇ ಮೂರು ಹೊತ್ತು ಗಂಜಿ ಮತ್ತು ಹಣ್ಣುಗಳನ್ನು ಮಾತ್ರ ಸೇವಿಸಬೇಕು. ಒಂದು ಮನೆಯ ಮೇಲೆ ಎರಡು ದೀಪವನ್ನು ಇಟ್ಟು ಸತ್ತ ವ್ಯಕ್ತಿಯ ಆತ್ಮವನ್ನು ಕರೆಸುತ್ತಾರೆ. ಎರಡು ದೀಪಗಳು ಒಂದು ಕಡೆ ಸೇರಿದರೆ ಆ ವ್ಯಕ್ತಿ ಬಂದಿದ್ದಾರೆ, ಅವರ ಆತ್ಮಕ್ಕೆ ಶಾಂತಿ ಸಿಕ್ಕಿದೆ ಎಂಥರ್ಥ. ಈ ಎಲ್ಲಾ ಶಾಸ್ತ್ರಗಳು ಇವರ ಸಮುದಾಯದಲ್ಲಿ ಹುಟ್ಟಿದ ಮಗು ಹನ್ನೆರಡು ದಿನದ ಕಿವಿ ಚುಚ್ಚಿದ ನಂತರ ಸತ್ತಿದ್ದರೆ ಮಾತ್ರ ಈ ಕಾರ್ಯ ಮಾಡುತ್ತಾರೆ. ಹನ್ನೆರಡು ದಿನದ ಒಳಗೆ ಸತ್ತರೆ ಈ ಮೇಲಿನ ಯಾವ ಕಾರ್ಯವನ್ನು ಮಾಡುವುದಿಲ್ಲ.

## 2. ಕುಂಬ್ರಿ ಮರಾಠಿಗರ ವಾರ್ಷಿಕಾವರ್ತನ ಆಚರಣೆಗಳು

### ಹಬ್ಬ ಮತ್ತು ಕುಲಸಂಬಂಧಿ ಆಚರಣೆಗಳು

ಮೊದಲೇ ಹೇಳಿದಂತೆ ಕುಂಬ್ರಿ ಮರಾಠಿಗರದು ಒಂದು ಸಂಕೀರ್ಣ ಸಮಾಜ. ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ ಮತ್ತು ಆದಿಮ ಕುಮ್ರಿ ಬೇಸಾಯದಂತಹ ಪಾರಂಪರಿಕ ದುಡಿಮೆಗಳಲ್ಲಿ ತೊಡಗಿಕೊಂಡಿರುವ ಕಾರಣ, ಅವರ ದೈನಂದಿನ ಮತ್ತು

ವಾರ್ಷಿಕ ಆಚರಣೆಗಳೂ ಅತ್ಯಂತ ವೈವಿಧ್ಯಮಯವಾಗಿವೆ. ಭಾರತವು ಒಂದು ಜಾತ್ಯಾತೀತ ರಾಷ್ಟ್ರವಾಗಿದೆ, ಅಲ್ಲದೆ ಹಲವಾರು ಭಾಷೆ, ಸಮುದಾಯ, ಧರ್ಮ ಮುಂತಾದವುಗಳನ್ನು ಒಳಗೊಂಡಂತಹ ದೇಶವಾಗಿದೆ. ಅಲ್ಲದೆ ತನ್ನ ಒಡಳಾಲದಲ್ಲಿ ನೂರಾರು ಸಂಸ್ಕೃತಿಗಳನ್ನು ಪೋಷಿಸಿಕೊಂಡು ಬಂದಿದೆ. ಭಾರತದಲ್ಲಿನ ಜನಸಮುದಾಯಗಳ ವಿಶಿಷ್ಟ ಸಾಂಸ್ಕೃತಿಕ ಪರಂಪರೆಗಳು ಆಯಾ ಜನ ಸಮುದಾಯದ ಅಪ್ರಜ್ಞಾಪೂರ್ವಕ ಸ್ಥಿತಿಯಲ್ಲಿ ಸಂರಕ್ಷಿಸಲ್ಪಟ್ಟು ಉಳಿದುಕೊಂಡು ಬಂದಿವೆ. ಈ ಪರಂಪರೆಯ ಯಾವುದೇ ಒಂದು ಅಂಗ ಊನವಾದರೂ ಆಂತರಿಕ ವ್ಯವಸ್ಥೆಯನ್ನು ಕಾಯ್ದುಕೊಳ್ಳಲು ಉತ್ಸುಕ ಜನಸಮುದಾಯ ಅದನ್ನು ಅತ್ಯಂತ ಮುತುವರ್ಜಿಯಿಂದ ಸರಿಪಡಿಸಲು ಪ್ರಯತ್ನಿಸುತ್ತದೆ. ಒಂದು ಜನಸಮುದಾಯವು ಆಚರಿಸುವ ಹಬ್ಬಗಳು ಸಾಮಾಜಿಕವೂ, ಸಾರ್ವತ್ರಿಕವೂ ಆದವುಗಳಾಗಿರುತ್ತವೆ. ಜಗತ್ತಿನ ಎಲ್ಲ ಕಡೆಗಳಲ್ಲಿ ಕಂಡುಬರುವ ಹಬ್ಬ ಹರಿದಿನಗಳು, ಜಾತ್ರೆಗಳು ವಿಶಿಷ್ಟವಾದಂತಹ ಸ್ಥಾನಮಾನಗಳನ್ನು ಹೊಂದಿರುವುದು ಕಂಡುಬರುತ್ತದೆ. ಅವುಗಳು ಆಯಾ ಸಮುದಾಯಕ್ಕನುಗುಣವಾಗಿ ಆಚರಣೆಗಳನ್ನು ಒಳಗೊಂಡಿರುತ್ತವೆ ಅಂತೆಯೇ ಕುಂಬ್ರಿ ಮರಾಠಿ ಸಮುದಾಯದಲ್ಲಿಯೂ ಸಹ ಹಬ್ಬ ಹರಿದಿನಗಳು, ಜಾತ್ರೆಗಳು ಉಳಿದುಕೊಂಡು ಬಂದಿವೆ.

**ಹಬ್ಬಗಳು**

ಕುಂಬ್ರಿ ಮರಾಠಿ ಸಮುದಾಯದಲ್ಲಿ ವಿಶಿಷ್ಟವಾದ ಹಬ್ಬ, ಜಾತ್ರೆಗಳು ನಡೆಯುತ್ತವೆ. ದಸರಾ ಸಮಯದಲ್ಲಿ ಸೋಮೇಶ್ವರನ ದೊಡ್ಡ ಜಾತ್ರೆ ನಡೆಯುತ್ತದೆ. ಮಂಜುಗುಣಿಯಲ್ಲಿ ದೊಡ್ಡ ಜಾತ್ರೆ ಆಗುತ್ತದೆ. ಸಾಮಾನ್ಯವಾಗಿ ಪಶ್ಚಿಮಘಟ್ಟ ಪ್ರದೇಶದ ಆದಿವಾಸಿಗಳು ಅದರಲ್ಲೂ ಕುಣಬಿ, ಕುಡುಬಿ ಮತ್ತು ಮರಾಠಿ ನಾಯ್ಕ ಸಮುದಾಯಗಳು ಆಚರಿಸುವ ಹಬ್ಬಗಳನ್ನು ಕುಂಬ್ರಿ ಮರಾಠಿಗರೂ ಆಚರಿಸುತ್ತಾರೆ. ಮುಖ್ಯವಾದ ಹಬ್ಬಗಳೆಂದರೆ ಹೋಳಿ. ಹೋಳಿ ಕುಂಬ್ರಿ ಮರಾಠಿಗರ ಸಡಗರದ ಸಂಭ್ರಮದ ಹಬ್ಬ. ಹೋಳಿ ಹಬ್ಬದಲ್ಲಿ 'ಹೋಳಿಸಿಗ್ಮ' ಕುಣಿತ ಅತ್ಯಂತ ವಿಶಿಷ್ಟವಾದದ್ದು. 'ದೀಪಾವಳಿ' ಕೂಡ ಕುಂಬ್ರಿ ಮರಾಠಿಗರಿಗೆ ತುಂಬಾ ಮುಖ್ಯವಾದ ಹಬ್ಬ, ಈ ಹಬ್ಬದಲ್ಲಿ ಗಂಡಸರು ಗುಮಟೆ ಬಾರಿಸಿದರೆ ಹೆಂಗಸರು ಆ ಗುಮಟೆ ಸದ್ದಿಗೆ ತಕ್ಕಂತೆ 'ದಿವಾಳಿ ಚೌಕೇಳ' ಎಂಬ ದೀಪಾವಳಿ ನೃತ್ಯ ಪ್ರದರ್ಶಿಸುತ್ತಾರೆ. ನೂಲ ಹುಣ್ಣಿಮೆ, ನಾಗರಪಂಚಮಿ, ಚೌತಿ ಕುಂಬ್ರಿ ಮರಾಠಿಗರ ಮತ್ತೊಂದು ಪ್ರಮುಖ ಹಬ್ಬ. ಈ ಸಂದರ್ಭದಲ್ಲಿ ಗಂಡಸರು ಮತ್ತು ಹೆಂಗಸರು ಪ್ರತ್ಯೇಕವಾಗಿ ಪುಗಡಿ ಕುಣಿತ ನಡೆಸಿಕೊಡುತ್ತಾರೆ. ಕೈಯಲ್ಲಿ ಮಣ್ಣಿನ ಕೊಡಗಳನ್ನು ಹಿಡಿದು ವೃತ್ತಾಕಾರವಾಗಿ ಸುತ್ತುತ್ತ ಕುಣಿಯುವ ಈ ನೃತ್ಯ ಕೂಡ ತುಂಬಾ ಆಕರ್ಷಕವಾದದ್ದು.

**ಭೂಮಿ ಹುಣ್ಣಿಮೆ** : ಕುಂಬ್ರಿ ಮರಾಠಿಗರು ಮೂಲತಃ ಕೃಷಿಕರಾಗಿರುವ ಕಾರಣ ಭೂಮಿ ಹುಣ್ಣಿಮೆಯನ್ನು ಆಚರಿಸುತ್ತಾರೆ. ಅಂದು ಐದು ಆರು ಜಾತಿಯ ವನಸ್ಪತಿಯ ಎಲೆ ತಂದು ಅದರ ಕಡುಬು ಮಾಡಿ ಗದ್ದೆಗೆ ಬೀರುತ್ತಾರೆ. ನಂತರ ಮಾಡಿದ ಸಿಹಿಯನ್ನು ತೆಗೆದುಕೊಂಡು ಹೋಗಿ ಭೂಮಿಗೆ ಹಾಕಿ ಅಲಂಕರಿಸಿ ನೈವೇದ್ಯ ಇಟ್ಟು ಬರುತ್ತಾರೆ.

**ಒಪ್ಪತ್ತು ಹಬ್ಬ (ಶೂನ್ಯ ಮಾಸ)** : ಇದು ಮಂಗಳವಾರ ಅಥವಾ ಶುಕ್ರವಾರ ಬರುತ್ತದೆ. ಮಂಗಳವಾರ ಬಂದರೆ ಅದರ ಹಿಂದಿನ ಶುಕ್ರವಾರ ಉಪವಾಸವಿದ್ದು ತುಳಸಿಗೆ ಕಾಯಿ ಒಡೆದು ಮಂಗಳವಾರದ ಒಪ್ಪತ್ತಿಗೆ ಚಾಲನೆ ಕೊಡುತ್ತಾರೆ. ಊರಿನವರೆಲ್ಲಾ ಒಂದು ಕಡೆ ಸೇರಿ ಊಟ ಮಾಡುತ್ತಾರೆ. ಈ ಹಿಂದೆ ಈ ಹಬ್ಬದಲ್ಲಿ ಮಾಂಸಹಾರ ಮಾಡುವ ಪದ್ಧತಿ ಇತ್ತು. ಈಗ ಇರುವುದಿಲ್ಲ.

**ಬಲೀಂದ್ರನ ಆಚರಣೆ** : ದೀಪಾವಳಿಯಲ್ಲಿ ಬರುವ ಅಮವಾಸ್ಯೆಯ ಹಿಂದಿನ ದಿನ ಬಲೀಂದ್ರನ ಆಚರಣೆ ಮಾಡಲಾಗುತ್ತದೆ. ಬಾವಿಗೆ ಪೂಜೆ ಮಾಡಿ ಬಾವಿಯಿಂದ ನೀರು ತಂದು ಕಳಸ ಮಾಡುತ್ತಾರೆ. ಈ ಕಳಸದಲ್ಲಿ ಮಾವಿನ ಎಲೆ ಇಟ್ಟು ಇದರ ಮೇಲೆ ತೆಂಗಿನ ಕಾಯಿಯನ್ನು ಇಡುತ್ತಾರೆ. ಪಕ್ಕದಲ್ಲಿ ಸವತೆಕಾಯಿಯನ್ನು ತುಳಸಿ ಗಿಡದ ಬಳಿ ಇಟ್ಟು ಎಲೆ ಅಡಿಕೆ ಪೂಜಿಸುತ್ತಾರೆ. ದನಕ್ಕೆ ಕಟ್ಟುವ ಮೂಗುದಾರವನ್ನು ಇಟ್ಟಿರುತ್ತಾರೆ. ಇದನ್ನು ಗೋವಿನ ಪೂಜೆಯ ದಿನ ದನಕ್ಕೆ ಕಟ್ಟುತ್ತಾರೆ. ಕಳಸದ ನೀರನ್ನು ಬಲೀಂದ್ರನ ನೀರು ಎಂದು ಕರೆಯುತ್ತಾರೆ. ಇದು ತುಂಬಾ ಪವಿತ್ರವಾದ ನೀರಾಗಿರುತ್ತದೆ. ಮರುದಿನ ಆ ನೀರನ್ನು ಆಕಳಿಗೆ ಮತ್ತು ಹಂಡೆಗೆ ಹಾಕಿ ಸ್ನಾನ ಮಾಡುತ್ತಾರೆ.

**ಮದ್ದರಸೇ ಮರ** : ಬಲೀಂದ್ರನ ಪೂಜೆಯ ಸಮಯದಲ್ಲಿ ಮದ್ದರಸೇ ಮರದ ರೆಂಬೆಯನ್ನು ಕಲ್ಲಿನಿಂದ ಜಜ್ಜಿ ಅದರಲ್ಲಿ ಬರುವ ಹಾಲು ಮತ್ತು ರಸವನ್ನು ಮನೆಗೆ ತಂದು ಮನೆಯವರೆಲ್ಲರೂ ಕುಡಿಯುತ್ತಾರೆ. ಇದನ್ನು ಕಡ್ಡಾಯವಾಗಿ ಕುಡಿಯಲೇಬೇಕು.

**ಕೃಷಿ ಸಂಬಂಧಿ ಆಚರಣೆಗಳು**

**ಕೊಯ್ಲು ಪೂಜೆ** : ಫಸಲಿಗೆ ಬಂದಂತಹ ಭತ್ತವನ್ನು ಕಠಾವು ಮಾಡುವ ಮುನ್ನ ಭೂತಾಯಿಗೆ ಪೂಜೆ ಮಾಡಲಾಗುತ್ತದೆ. ಇದನ್ನೆ ಕೊಯ್ಲು ಪೂಜೆ ಎನ್ನುವರು.

**ಭೂತಪ್ಪ** : ಇವರು ಬೆಳೆದಂತಹ ಭತ್ತವನ್ನು ಕಟಾವು ಮಾಡಿದ ಮೇಲೆ ಅಕ್ಕಿಯನ್ನು ಮಾಡಿಸಿಕೊಂಡು ಮೊದಲು ಈ ಭೂತರಾಯಪ್ಪನಿಗೆ ಭಟ್ಟರನ್ನು ಕರೆಸಿ ಪೂಜೆಯನ್ನು ಮಾಡುತ್ತಾರೆ. ಆ ಭತ್ತದ ಅಕ್ಕಿಯಿಂದ ಮೊದಲ ಅಡುಗೆಯನ್ನು (ಅನ್ನ) ಇವತ್ತೇ ಮಾಡುತ್ತಾರೆ.

ಬೆಳೆ ಹಾಳಗದಂತೆ ತಡೆಯುವುದು ಮತ್ತು ಪ್ರಾಣಿಗಳಿಂದ ರಕ್ಷಿಸುವುದು ಇದೇ ಭೂತರಾಯಪ್ಪ ಎನ್ನುವ ನಂಬಿಕೆ ಇವರಲ್ಲಿ ಇದೆ. ಈ ಆಚರಣೆಯನ್ನು ಇವರು ಪೂರ್ವಿಕರ ಕಾಲದಲ್ಲಿ ಕುರಿ ಮತ್ತು ಕೋಳಿಯನ್ನು ಬಲಿ ಕೊಡುವ ಆಚರಣೆ ಇತ್ತು ಶ್ರೀಧರ ಸ್ವಾಮಿಜಿಯವರ ಆಜ್ಞೆಯಂತೆ ಬಲಿಕೊಡುವ ಬದಲು ಕುಂಬಳಕಾಯಿಯನ್ನು ಹೊಡೆಯುತ್ತಾರೆ.

**ಗೊಬ್ಬರ ಕಂಬಳ :** ಗೊಬ್ಬರ ಗುಂಡಿಯಿಂದ ಗೊಬ್ಬರವನ್ನು ತೆಗೆದುಕೊಂಡು ಜಮೀನಿಗೆ ಹಾಕುವ ಕೆಲಸಕ್ಕೆ ಗೊಬ್ಬರ ಕಂಬಳ ಎನ್ನುವರು. ಜಮೀನು ಎಷ್ಟು ಮಂದಿಗೆ ಇದೆಯೋ ಅಷ್ಟು ಮಂದಿ ಈ ಕೆಲಸವನ್ನು ಮಾಡುತ್ತಾರೆ.

**ಮುರಿಯಾಳು ಪದ್ಧತಿ :** ಒಬ್ಬರ ಮನೆಯಲ್ಲಿ ಗೊಬ್ಬರವನ್ನು ಎತ್ತುವಂತ ಸಮಯದಲ್ಲಿ ಜಮೀನು ಉಳ್ಳ ಮತ್ತೊಬ್ಬರು ಬಂದು ಕೆಲಸವನ್ನು ಮಾಡುತ್ತಾರೆ. ಇದಕ್ಕೆ ಕೂಲಿ ಇರುವುದಿಲ್ಲಾ. ಇದನ್ನು ಮುರಿಯಾಳು ಪದ್ಧತಿ ಎಂದು ಕರೆಯುತ್ತಾರೆ. ಜಮೀನಿಗೆ ಗೊಬ್ಬರವನ್ನು ಹಾಕುವ ಕೆಲಸವು ಆದ ಮೇಲೆ ಯಾರ ಮನೆಯಲ್ಲಿ ಕೆಲಸ ಇರುತ್ತದೆಯೋ (ಗೊಬ್ಬರ ಎತ್ತಿದ ಮನೆಯಲ್ಲಿ) ಅವರ ಮನೆಯಲ್ಲಿ ಅಂದು ಸಂಜೆ ಕೆಲಸ ಮಾಡಿದ ಎಲ್ಲರಿಗೂ ಊಟದ ವ್ಯವಸ್ಥೆ ಇರುತ್ತದೆ. ಊಟಕ್ಕೆ ಉದ್ದಿನ ದೋಸೆಯನ್ನೇ ಮಾಡಲಾಗುತ್ತದೆ. ಇದರ ಜೊತೆ ಮೊಟ್ಟೆ ಮತ್ತು ಕೋಳಿ ಮಾಂಸ ಮಾಡಲಾಗುತ್ತದೆ.

**ಗೊಬ್ಬರ ಗುಂಡಿ ಪೂಜೆ :** ಗೊಬ್ಬರವನ್ನು ತೆಗೆದ ಮೇಲೆ ಒಂದು ಬುಟ್ಟಿಯಲ್ಲಿ ಗೊಬ್ಬರವನ್ನು ತುಂಬಿ ಇಟ್ಟು ಪೂಜೆ ಮಾಡಲಾಗುತ್ತದೆ. ಯಾರು ಪುಟ್ಟಿಗೆ ಗೊಬ್ಬರವನ್ನು ತುಂಬಿರುತ್ತಾರೋ ಅವರೇ ಈ ಪೂಜೆಯನ್ನು ಮಾಡಬೇಕು ಈ ಪೂಜೆಗೆ ತೆಂಗಿನ ಕಾಯಿಯನ್ನು ಹೊಡಿಯಲಾಗುತ್ತದೆ. ಹೊಡೆದಾಗ ತೆಂಗಿನ ಕಾಯಿಯಿಂದ ಬರುವ ನೀರನ್ನು ಮೇಲಕ್ಕೆ ಎರಚುತ್ತಾರೆ. ಈ ನೀರು ಎಷ್ಟು ಮೇಲೆ ಹೋಗುತ್ತದೆಯೋ ಅಲ್ಲಿಯವರೆಗೆ ಮುಂದಿನ ಸಲ ಗೊಬ್ಬರ ಗುಂಡಿ ತುಂಬಲಿ ಎಂದು ಪ್ರಾರ್ಥಿಸುತ್ತಾರೆ. 5 ಜನ ಸೇರಿ ಆ ಗೊಬ್ಬರವನ್ನು ಎತ್ತಿ ಒಬ್ಬನ ತಲೆಯ ಮೇಲೆ ಇಡುತ್ತಾರೆ. ಈ ಪುಟ್ಟಿಯ ಒಳಗೆ ಮಾವಿನ ಎಲೆಯನ್ನು ಇಟ್ಟಿರುತ್ತಾರೆ. ಈ ಕೊನೆಯ ಪುಟ್ಟಿಯಲ್ಲಿರುವ ಗೊಬ್ಬರವನ್ನು ನೆಲಕ್ಕೆ ಎಸೆಯುವಾಗ ಮಾವಿನ ಎಲೆ ಗೊಬ್ಬರದ ತಲೆಕೆಳಗಾಗಿ ಬೀಳಬಾರದೆನ್ನುವ ಪದ್ಧಿತಿ ಇದೆ. ಹಾಗೆಯೇ ಗೊಬ್ಬರವನ್ನು ಜಮೀನಿಗೆ ಹಾಕುವಾಗ ಮಾವಿನ ಎಲೆ ಗೊಬ್ಬರದ ಮೇಲೆ ಬರುವ ಹಾಗೆ ಜಮೀನಿಗೆ ಹಾಕುತ್ತಾರೆ.ಈ ಕೊನೆಯ ಗೊಬ್ಬರ ಪುಟ್ಟಿಯನ್ನು ಉಲ್ಕೇ ಎಂದು ಕರೆಯುತ್ತಾರೆ. ಗೊಬ್ಬರ ಗುಂಡಿಯಲ್ಲೂ ದೇವರನ್ನು ಕಾಣುವ ಸಂಸ್ಕೃತಿ ಈ ಸಮುದಾಯದವರಲ್ಲಿ ಇದೆ.

**ಭಿತ್ತಿಗೆ ಪೂಜೆ :** ಭತ್ತವನ್ನು 24 ಗಂಡೆ ನೀರಿನಲ್ಲಿ ಮುಳುಗಿಸಿ ಮುಚ್ಚಿಡಲಾಗುತ್ತದೆ. ಭತ್ತವನ್ನು ದೇವರೆಂದು ನಂಬಿರುವುದರಿಂದ ಇದಕ್ಕೆ ಪೂಜೆ ಮಾಡಿ ಒಳ್ಳೆಯ ಫಸಲನ್ನು ನೀಡಬೇಕೆಂದು ಪ್ರಾರ್ಥನೆ ಮಾಡಿ ಜಮೀನಿಗೆ ಹಾಕುತ್ತಾರೆ.

**ಕೊಯ್ಲು ಪೂಜೆ :** ಫಸಲು ಬಂದಂತಹ ಸಂದರ್ಭದಲ್ಲಿ ಭೂಮಿ ತಾಯಿಗೆ ಪೂಜೆ ಮಾಡಿ ಭತ್ತವನ್ನು ಕೋಯ್ಯಲು ಪ್ರಾರಂಭಿಸುತ್ತಾರೆ.

**ನೋಟ ನೋಡುವಿಕೆ :** ಊರಿನಲ್ಲಿ ಯಾರಿಗಾದರು ಆರೋಗ್ಯ ತಪ್ಪಿದಾಗ, ದೆವ್ವ ಪೀಡೆ ತಟ್ಟಿದಾಗ ಊರಿನಲ್ಲಿ ಇರುವಂತಹ ನೋಟ ನೋಡುವ ವ್ಯಕ್ತಿಯನ್ನು ಸಂಪರ್ಕಿಸಲಾಗುತ್ತದೆ. ಆ ವ್ಯಕ್ತಿಯು ಆಗ ಒಂದು ಪೂಜೆಯನ್ನು ಮಾಡುತ್ತಾನೆ ಅದನ್ನು ನೋಟ ನೋಡುವಿಕೆ ಎಂದು ಕರೆಯುತ್ತಾರೆ. ನೋಟ ನೋಡುವ ವ್ಯಕ್ತಿ ಒಂದು ಮಣೆಯನ್ನು ತೆಗೆದುಕೊಂಡು ಶುದ್ಧಮಾಡಿ ಅದರ ಮೇಲೆ ಅಕ್ಕಿಯನ್ನು ಹಾಕಿ ದೇವರನ್ನು ಕರೆಸಿ ಸಮಸ್ಯೆಯನ್ನು ಹೇಳಿಕೊಂಡ ವ್ಯಕ್ತಿಯ ಬಗ್ಗೆ ವಿಚಾರಿಸುತ್ತಾರೆ. ಕಾಯಿಲೆಗೆ ಸಂಬಂಧಿಸಿದಂತೆ ಬೇರೆ ಬೇರೆ ದೈವ ಶಕ್ತಿಯನ್ನು ಕರೆಸಿಕೊಂಡು ದುಷ್ಟ ಶಕ್ತಿಯನ್ನು ಬಂಧನ ಮಾಡಿಕೊಳ್ಳುತ್ತಾನೆ, ದೇವರು ಮೈ ಮೇಲೆ ಬಂದ ಆ ವ್ಯಕ್ತಿಗೆ ಏನು ಸಮಸ್ಯೆ ಬಂದಿದೆ ಎಂದು ನೋಟ ಮಾಡುವ ವ್ಯಕ್ತಿಯ ಬಾಯಿಂದ ಹೇಳಿಸಲಾಗುತ್ತದೆ.ನಂತರ ಅದಕ್ಕೆ ಸಂಬಂಧಿಸಿದಂತಹ ಪರಿಹಾರವನ್ನು ಆ ವ್ಯಕ್ತಿಯೇ ನೀಡುತ್ತಾನೆ. ಕೆಲವು ವೇಳೆ ಅನಾರೋಗ್ಯದಿಂದ ಬಂದ ವ್ಯಕ್ತಿಯ ಮೇಲೆ ದೆವ್ವ, ಭೂತಗಳು ಬಂದು ಅವರವರ ಸಮಸ್ಯೆಯನ್ನು ಹೇಳಿಕೊಳ್ಳುತ್ತವೆ. ಆಚರಣೆಯಲ್ಲಿ ಉಪಯೋಗಿಸುವ ಉಪಕರಣಗಳು ಮತ್ತು ಸಾಮಗ್ರಿಗಳು.

1. ಗುಮಟೆ
2. ಮೃದಂಗ
3. ತಾಳ
4. ಕೋಲು.

**ಪ್ರಕೃತಿ ಸಂಬಂದಿ ಆಚರಣೆಗಳು**

**ಗಡಿ ಹಬ್ಬ:** ಪ್ರಕೃತಿಯಿಂದ ಊರಿಗೆ ತೊಂದರೆಯಾಗಬಾರದೆಂದು ಊರಿನ ಗಡಿಯಲ್ಲಿ ಇರುವ ಶಿರ್ಶಿ ಅಮ್ಮಳಿಗೆ ಮಂಗಳವಾರ ಅಥವಾ ಶುಕ್ರವಾರದ ದಿನ ಆರಿದ್ರಾ ನಕ್ಷತ್ರದ ದಿನ ಜೂನ್ ತಿಂಗಳಲ್ಲಿ ಈ ಹಬ್ಬ ಮಾಡಲಾಗುತ್ತದೆ. ಕುಂಬ್ರಿ ಮರಾಠಿಗರ ಅನೇಕ ಕುಳಾವಿಗಳು ಸೇರಿದ 'ಸೀಮೆ' ಒಂದು ವಿಶಿಷ್ಟವಾದ ರೇಖೆ ಹಾಗೂ ವಿವಿಧ ಗಡಿಗಳನ್ನು ಒಳಗೊಂಡಿರುತ್ತದೆ. ಅವರ

ಬೇಟೆ, ಕುಮರಿ ಬೇಸಾಯ, ಅವರನ್ನು ಕಾಯುವ ವಿವಿಧ ದೈವಗಳ ವ್ಯಾಪ್ತಿಗಳನ್ನು ಈ ಸೀಮೆ ನಿರ್ದಿಷ್ಟಪಡಿಸುತ್ತದೆ. 'ಯಾವುದೇ ಬುಡಕಟ್ಟು ಸಮುದಾಯ ತಾವು ತಲತಲಾಂತರಗಳಿಂದ ಜೀವಿಸಿದ ಪರಿಚಿತ ಪರಿಸರದಲ್ಲಿ ತಮ್ಮ ಪೂರ್ಣಮಟ್ಟದ ಬುಡಕಟ್ಟು ಸಂಸ್ಕೃತಿಯ ನೆಮ್ಮದಿಯ ಬದುಕಿನ ಚಟುವಟಿಕೆಗಳಿಗಾಗಿ ತಮಗೆ ಬೇಕಾದಷ್ಟು ಸಂಪನ್ಮೂಲಾಧಾರಿತ ಕಾಡನ್ನು ಹಳ್ಳಿಯ ಸುತ್ತಲು ಸಾಂಪ್ರದಾಯಿಕವಾಗಿ ಗುರುತಿಸಿಕೊಂಡ ಸಾಂಸ್ಕೃತಿಕ ಗಡಿ ರೇಖೆಯನ್ನು ಸೀಮಾ, ಜಮ್ಮಾ ಗಡಿಯೆಂದು ಕರೆಯಲಾಗುತ್ತದೆ. ಹೀಗೆ ಸಾವಿರಾರು ವರ್ಷಗಳಿಂದಲೂ ನಿರ್ಮಿಸಿಕೊಂಡ ಈ ಗಡಿ ರೇಖೆಯೊಳಗೆ ನಿರ್ಧಿಷ್ಟ ಬುಡಕಟ್ಟು ಸಮುದಾಯ ತನ್ನ ಬದುಕಿದಾಗಿ ಕಾಡಿನ ಉತ್ಪನ್ನ, ಆಹಾರಕ್ಕಾಗಿ ಬೇಸಾಯ ಹಾಗೂ ಇಡೀ ಬುಡಕಟ್ಟು ಸಮುದಾಯದ ಸಾಂಸ್ಕೃತಿಕ ಬದುಕಿನ ಅವಿಚ್ಛಿನ್ನ ಚಟುವಟಿಕೆಯ ಭಾಗವಾಗಿರುತ್ತದೆ. ಇದನ್ನೇ ಸೀಮಾ ಪದ್ಧತಿಯೆಂದು ಕರೆಯಲಾಗುತ್ತದೆ. ತಲೆತಲಾಂತರಗಳಿಂದ ಮಡಿದ ಬುಡಕಟ್ಟು ಪೂರ್ವಜರ ಆತ್ಮಗಳು ಈ ಸೀಮಾ ರೇಖೆಯ ಒಳಗಿನ ಕ್ಷೇತ್ರದಲ್ಲಿ ನೆಲೆಸಿದ್ದು, ಕಾಡನ್ನು ಮತ್ತು ಕಾಡಿನ ಸಂಪನ್ಮೂಲಗಳನ್ನು ಬುಡಕಟ್ಟು ಹಳ್ಳಿಯವರಿಗಾಗಿ ರಕ್ಷಿಸುತ್ತಾ ಸಂಚರಿಸುತ್ತಿರುತ್ತವೆ, ಇವರ ಆತ್ಮಗಳು ಹಳ್ಳಿಯ ಗಡಿ ರೇಖೆಯ ಅಂಚುಗಳಲ್ಲಿ ಕಲ್ಲಿನ ಗುಂಡಿನ ರೂಪದಲ್ಲಿಯೂ, ಮರಗಳಲ್ಲಿಯೂ ಇದ್ದು ಸೀಮೆಯನ್ನು ರಕ್ಷಿಸಿತ್ತಾರೆಂಬ ಗಾಢವಾದ ನಂಬಿಕೆಯಿಂದಾಗಿ ಆ ಬುಡಕಟ್ಟು ಸಮುದಾಯಕ್ಕೆ ಗಡಿಯ ವ್ಯಾಪ್ತಿಯ ಒಳಗಿನ ಬದುಕು ನಿಶ್ಚಿಂತೆಯಿಂದ ಇರುತ್ತದೆ. ಹೀಗೆ ಮಡಿದವರ ಆತ್ಮಗಳಲ್ಲದೇ ಆತ್ಮಗಳನ್ನು ರಕ್ಷಿಸುವ ದೇವತೆಗಳು, ರಕ್ಷಣಾ ದೇವರುಗಳು ಬೇರೆ ಬೇರೆಯವೆ ಇದ್ದು, ಒಂದಕ್ಕೊಂದು ಪರಸ್ಪರ ಪೂರಕವಾಗಿ ಸೀಮಾ ಕ್ಷೇತ್ರದ ವ್ಯಾಪ್ತಿಯ ಸಂರಕ್ಷಣೆಯ ಜವಾಬ್ದಾರಿಯನ್ನು ಹೊಂದಿರುತ್ತವೆ'.[೪]

ಯಾವುದೇ ಕುಳಾವಿಯ ಸೀಮೆಯೊಳಗೆ ಬೇರೆ ಸೀಮೆ ಪ್ರವೇಶ ನಿಶದ್ದವಾಗಿರುತ್ತದೆ. ಒಂದು ಕುಳಾವಿಗೆ ಸಂಬಂಧಪಟ್ಟ ಕಾಡಿನ ಸೀಮಾ ಕಾರ್ಯಕ್ಷೇತ್ರ ೨-೫ ಮಿ. ರೇಡಿಯೆಸ್ ನಿಂದ ಹಿಡಿದು ೫.೬ ಕಿ.ಮಿ. ವ್ಯಾಪ್ತಿಯವರೆಗೂ ಆಗಿರಬಹುದಾಗಿದ್ದು, ಅದರ ವ್ಯಾಪ್ತಿಯೊಳಗೆ ಸಂಬಂಧಪಟ್ಟ ಕುಳಾವಿಯ ಅಷ್ಟು ಬುಡಕಟ್ಟು ಸಮುದಾಯದ ಜೀವನ ನೆಮ್ಮದಿಯಿಂದ ನಡೆಯುತ್ತಿರುತ್ತದೆ. ನಿರ್ದಿಷ್ಟ ಕುಳಾವಿಯ ಕಿರು ಅರಣ್ಯ ಉತ್ಪನ್ನಗಳ ಒಡೆತನ ನಿರ್ದಿಷ್ಟ ಕುಳಾವಿಗೆ ಮಾತ್ರ ಮೀಸಲಿರುತ್ತದೆ. ಅಲ್ಲಿ ಸಿಗುವ ಸೀಗೆ, ಜೇನು, ಮುರುಗಲು, ಅಮಸೋಲ್, ಅಂಟುವಾಳ, ಔಷಧಿ ಸಸ್ಯಗಳು, ಕಾಡು ಮೃಗ ಬೇಟೆ ಹಾಗೂ ಅಪಾರ ಕಾಡಿನ ಉತ್ಪನ್ನಗಳನ್ನು ಬೇರೆ ಕುಳಾವಿಯರು ಪಡೆಯುವ ಹಕ್ಕಿರುವುದಿಲ್ಲ ಹಾಗೂ ಆಕ್ರಮಿಸುವಂತಿಲ್ಲ. ಹಾಗೊಂದು ವೇಳೆ ನಿರ್ದಿಷ್ಟ ಹಳ್ಳಿಗೆ ಸೇರಿದ ಕಾಡಿನ ಗಡಿ ವ್ಯಾಪ್ತಿಯಲ್ಲಿ ಬೇರೆ ಕುಳಾವಿಯವರಾಗಲಿ ಅಥವಾ ಬೇರೆಯವರಾಗಲಿ ಅತಿಕ್ರಮಣ ಮಾಡಿ ಸಂಪನ್ಮೂಲ ಪಡೆದವರಾದರೆ ಸಂಬಂಧಪಟ್ಟ

ಆತ್ಮಗಳು ಅಥವಾ ಗಡಿ ದೇವತೆಗಳು ಸಂಬಂಧಪಟ್ಟವರನ್ನು ಸುಮ್ಮನೆ ಬಿಡುವುದಿಲ್ಲವೆಂಬ ನಂಬಿಕೆ ಅವರಲ್ಲಿ ಗಾಢವಾಗಿವೆ. ಈ ಗಡಿಯೊಳಗಿನ ಸೀಮಾಕ್ಷೇತ್ರಗಳಲ್ಲಿ ಸಂಬಂಧಪಟ್ಟ ಕುಳಾವಿಯವರಾದರು ಆತ್ಮಗಳಿಗೆ, ದೇವತೆಗಳಿಗೆ ಕೇಳದೆ ಕಾಡಿನ ಯಾವುದೇ ಉತ್ಪನ್ನ ತೆಗೆಯುವಹಾಗಿಲ್ಲ. ಒಂದು ಸಣ್ಣ ಸಸಿ ಇರಲಿ, ಒಣಗಿದ ಮರ ಕಡಿಯಬೇಕಾದರೂ ಸಂಬಂಧಪಟ್ಟ ಆತ್ಮಗಳಿಗೆ ಕೇಳಿ ಪೂಜೆ ಮಾಡಿ ಅನುಮತಿ ಪಡೆದ ನಂತರವೇ ಮಾಡಬೇಕಾಗುತ್ತದೆ. ಸಂಬಂಧಪಟ್ಟ ಪೂರ್ವಜರ ಆತ್ಮಗಳು, ಗಡಿ ದೇವತೆಗಳು, ಕುಳಾವಿಯ ಸಮುದಾಯವನ್ನು ಯಾವತ್ತೂ ಕಾಯುತ್ತಿರುತ್ತಾರೆ. ಹಾಗಾಗಿ ಗಡಿ ವ್ಯಾಪ್ತಿಯ ಕ್ಷೇತ್ರದಲ್ಲಿ ಕುಂಬ್ರಿ ಮರಾಠಿ ಬುಡಕಟ್ಟು ಸಮುದಾಯ ಯಾವುದೇ ಭೂತ-ಪ್ರೇತಗಳ, ಕಾಡಿನ ಕೆಟ್ಟ ಮೃಗಗಳ ಭಯವಿಲ್ಲದೆ ನೆಮ್ಮದಿಯಿಂದ ರಾತ್ರಿಯ ವೇಳೆಯಲ್ಲೂ ಸಂಚರಿಸಿರುತ್ತಾರೆ. ಇವರು ಕಾಡನ್ನಷ್ಟೇ ಅಲ್ಲ, ಇವರು ವ್ಯವಸಾಯ ಮಾಡಿರುವ ಕೃಷಿ ಜಮೀನನ್ನು ಕೂಡ ದನಕರು, ಇತರು ಕಾಡು ಮೃಗಗಳಿಂದ ಆತ್ಮಗಳು, ವಾಗ್ರೋಗಳು ಕಾಪಾಡುತ್ತವೆ. ಗಡಿರೇಖೆ ಅಂಚುಗಳಲ್ಲಿ ಬೇರೆ ಬೇರೆ ಆತ್ಮಗಳ ಕಲ್ಲುಗಳನ್ನು ಇಟ್ಟು ಗಡಿರೇಖೆಯನ್ನು ಗುರುತಿಸಿರುತ್ತಾರೆ. ಕಾಡಿನಲ್ಲಿ ಕುಂಬ್ರಿ ಮರಾಠಿ ಪ್ರತಿಯೊಂದು ಹಳ್ಳಿಗಳಿಗೆ ಪ್ರತ್ಯೇಕವಾದ ಗಡಿ ವ್ಯಾಪ್ತಿಯ ಪ್ರದೇಶಗಳಿದ್ದು, ಪ್ರತಿ ಹಳ್ಳಿಗಳಿಗೂ ವಿಭಿನ್ನವಾದ ಆತ್ಮಗಳೂ, ದೇವತೆಗಳೂ, ಗಡಿವ್ಯಾಪ್ತಿ ಪ್ರದೇಶವನ್ನು ರಕ್ಷಿಸುತ್ತಿರುತ್ತವೆ. ಇವುಗಳಿಗೆ ಪ್ರತಿ ಹಳ್ಳಿಯ ಸಮುದಾಯ ಪೂಜೆಗಳನ್ನು ಹಾಗೂ ಜಾತ್ರೆಗಳನ್ನು ನಡೆಸುತ್ತಿರುತ್ತಾರೆ.

**ಕೆಂಪು ನೀರಿನ ಹಬ್ಬ :** ವರ್ಷದ ಪ್ರಥಮ ಮಳೆ ಬಂದಾಗ ಕೆಂಪು ನೀರಿನ ಹಬ್ಬವೆಂದು ಮಾಡಲಾಗುತ್ತದೆ.

**ತುಳಸಿ ಪೂಜೆ :** ತುಳಸಿ ಹಬ್ಬದ ದಿನದಂದು ಮುಂಡಗೆ ಗಿಡದ ಕಡ್ಡಿಯನ್ನು ತಂದು ಚಪ್ಪರ ಹಾಕಿ ಮಾವಿನ ತೋರಣ ಬಾಳೆಯ ದಿಂಡನ್ನು ಕಟ್ಟಿ ಇದಕ್ಕೆ ಸಿಂಗಾರ ಮಾಡಿ ಪಕ್ಕದಲ್ಲಿ ಕಬ್ಬನ್ನು ಇಟ್ಟು ಪೂಜೆ ಮಾಡುತ್ತಾರೆ. ಮನೆಯಲ್ಲಿ ಮಾಡುವ ನೈವೇದ್ಯವನ್ನು ತುಳಸಿಗಿಡದ ಮುಂದೆ ಇಡುತ್ತಾರೆ.

**ಹಬ್ಬ ಹರಿದಿನಗಳಲ್ಲಾದ ಬದಲಾವಣೆ**

ಕುಂಬ್ರಿ ಮರಾಠಿಗರ ಪೂರ್ವಜರು ಆಚರಿಸುತ್ತಿದ್ದ ಹಬ್ಬಗಳು ಅತ್ಯಂತ ಸಡಗರ ಸಂಭ್ರಮದಿಂದ ಕೂಡಿರುತ್ತಿದ್ದವು. ಆದರೆ ಇಂದು ಇವರು ಆಚರಿಸುವ ಹಬ್ಬಗಳಿಗೂ ಹಾಗೂ ಅವರ ಪೂರ್ವಜರು ಆಚರಿಸುವ ಹಬ್ಬಗಳಿಗೂ ಅಜಗಜಾಂತರ ವ್ಯತ್ಯಾಸ ಇರುವುದು ಕಂಡುಬರುತ್ತದೆ. ಮೂಲ ಆಚರಣೆಗಳಲ್ಲಿ ನಂಬಿಕೆ ಕಡಿಮೆಯಾಗಿದ್ದು, ಹಬ್ಬಗಳ ಆಚರಣೆಯು ಕುಟುಂಬದಿಂದ ಸಾಮೂಹಿಕವಾಗಿ ಬದಲಾವಣೆಯಾಗುತ್ತಿದೆ. ಹಿಂದೆ ವಿಜೃಂಭಣೆಯಿಂದ

ಆಚರಿಸುವ ಹಬ್ಬಗಳು ಇಂದು ಹೆಚ್ಚಿನ ವಿಜೃಂಭಣೆಯನ್ನು ಹೊಂದಿಲ್ಲ, ಆದರೆ ಕೆಲವು ಹಬ್ಬಗಳು ಮಾತ್ರ ವಿಜೃಂಭಣೆಯನ್ನು ಹೊಂದಿರದೆ ಇದ್ದು, ಅವುಗಳ ಆಚರಣೆಯನ್ನು ಅತ್ಯಾವಶ್ಯಕವಾಗಿ ಮಾಡಲೇಬೇಕಾದ ಧಾರ್ಮಿಕತೆಯನ್ನು ಹೊಂದಿವೆ. ಇಂದು ಕೆಲವು ಹಬ್ಬಗಳು ಸಡಗರ ಸಂಭ್ರಮದಿಂದ ಕೂಡಿದವುಗಳಾಗಿವೆ. ಈ ಮೇಲಿನ ಮಾಹಿತಿಯಿಂದ ಕುಂಬ್ರಿ ಮರಾಠಿಗರು ಹಬ್ಬಗಳ ಆಚರಣೆಯಲ್ಲಿ ಪೂರ್ವಜರ ಕಾಲಕ್ಕಿಂತಲೂ ಪರಿವರ್ತನೆಯನ್ನು ಹೊಂದಿರುವುದನ್ನು ತಿಳಿಯಬಹುದಾಗಿದೆ. ಒಟ್ಟಾರೆಯಾಗಿ ಸಮುದಾಯದವರು ನೀಡಿರುವ ಅಭಿಪ್ರಾಯದಲ್ಲಿ ಅವರ ಪೂರ್ವಜರು ಹೊಂದಿರುವ ಧಾರ್ಮಿಕ ನಂಬಿಕೆ, ದೇವರಲ್ಲಿ ಭಕ್ತಿ, ಹಬ್ಬ ಹರಿದಿನಗಳು, ಅವುಗಳ ಆಚರಣೆ, ಮೂಢನಂಬಿಕೆಗಳು ಮುಂತಾದವುಗಳನ್ನು ಅರಿತುಕೊಂಡಾಗ ಪರಿವರ್ತನೆಗಳು ಆಗಿವೆ. ಕಾಲಕಾಲಕ್ಕನುಗುಣವಾಗಿ ದೊರೆಯುತ್ತಿರುವ ಸೌಲಭ್ಯಗಳು ಮನುಷ್ಯನನ್ನು ಪರಿವರ್ತನೆಯತ್ತ ಸಾಗಿಸುತ್ತಿರುವವು. ಮಾನವನಿಗೆ ಕಾಲದಿಂದ ಕಾಲಕ್ಕೆ ದೊರೆಯುತ್ತಿರುವ ಶಿಕ್ಷಣ, ಆರ್ಥಿಕ ಪರಿಸ್ಥಿತಿಯ ಸುಧಾರಣೆ, ಕೈಗಾರೀಕರಣ, ನಗರೀಕರಣ, ವಿಜ್ಞಾನದ ಬೆಳವಣಿಗೆ, ತಂತ್ರಜ್ಞಾನದ ಬೆಳವಣಿಗೆ, ಪಾಶ್ಚಾತ್ಯೀಕರಣ, ಜಾಗತೀಕರಣಗಳ ಪ್ರಭಾವವು ಅಗಾಧವಾಗಿರುವುದು. ಈ ಮುಂತಾದ ಕಾರಣಗಳಿಂದ ಕುಂಬ್ರಿ ಮರಾಠಿಗರು ಅವರ ಪೂರ್ವಜರಿಗಿಂತ ಪರಿವರ್ತನೆಯನ್ನು ಹೊಂದಿರುವುದು ಈ ಅಧ್ಯಯನದಿಂದ ಕಂಡುಬಂದಿದೆ.

ಕುಂಬ್ರಿ ಮರಾಠಿ ಸಮುದಾಯದ ಆಚರಣೆಗಳಲ್ಲಿ, ಹಬ್ಬಗಳಲ್ಲಿ ಎಲ್ಲದರಲ್ಲೂ ಶಿಸ್ತು ಪರಿಪಾಲನೆ ನಿರ್ಬಂಧಗಳಿವೆ. 'ಪಂಚಮುಖಿ ಪರಮೇಶ್ವರ' ಎನ್ನುವ ವ್ಯವಸ್ಥೆ ಐದು ಜನರು ಕೂಡಿರುವ ನ್ಯಾಯ ವ್ಯವಸ್ಥೆಯಾಗಿದ್ದು, ಅವರ ತೀರ್ಮಾನವೇ ಅಂತಿಮವಾಗಿರುತ್ತದೆ. ಬುಡಕಟ್ಟು ಕಟ್ಟಳೆಗಳು ನಿರ್ಬಂಧಗಳನ್ನು ಕುಂಬ್ರಿ ಮರಾಠಿಗರು ತಮ್ಮದೇ ಆದ ಚೌಕಟ್ಟಿನಲ್ಲಿ ನಿರ್ಧರಿಸಿಕೊಳ್ಳುತ್ತಾರೆ. ಕುಂಬ್ರಿ ಮರಾಠಿಗರ ದೇವರಿಗೆ ದೇವಸ್ಥಾನಗಳಲ್ಲಿ ನಿರ್ದಿಷ್ಟ ರೂಪದ ಮೂರ್ತಿಗಳಿಲ್ಲ. ಇವರು ಕೆಲವೆಡೆ ಪೆಟ್ಟಿಗೆ ದೇವರನ್ನು ಪೂಜಿಸುತ್ತಾರೆ. ಯಾರಿಗೂ ದೇವರ ಮುಖವನ್ನು ತೋರಿಸುವುದಿಲ್ಲ. ಉದಾಹರಣೆಗೆ: ಮಲ್ಲಿಕಾರ್ಜುನ, ಸಿದ್ಧನಾಥ, ಸಿದ್ಧೇಶ್ವರ, ಕಾಫ್ರಿ, ಸೋಮನಾಥ, ಕಲ್ಲಿನಾಥ ಎಂಬ ಹೆಸರಿನಲ್ಲಿ ಶಿವನನ್ನು ಕರೆಯುತ್ತಾರೆ. ಸ್ತ್ರೀ ದೇವರುಗಳಾದ: ಚಾಪಲಾದೇವಿ, ದುರ್ಗಾ, ಸಾತೇರ, ಗೌಳಾದೇವಿ, ಮಹಾಮಾಯೆ, ಎಂಬ ಹೆಸರಿನ ಸ್ತ್ರೀ ಶಕ್ತಿ ದೇವತೆಗಳನ್ನು ಆರಾಧಿಸುತ್ತಾರೆ.

### 3. ಕುಂಬ್ರಿ ಮರಾಠಿಗಳ ದೈವಗಳು

ಕುಂಬ್ರಿ ಮರಾಠಿಗರು ಮೂಲತಃ ವಲಸಿಗರು ಮತ್ತು ಅಲೆಮಾರಿಗಳು. ಜೊತೆಗೆ ಪಶುಪಾಲಕರು, ಕೃಷಿಕರೂ ಹೌದು. ಈ ಕಾರಣದಿಂದ ಕುಂಬ್ರಿ ಮರಾಠಿಗರು ಪೆಟ್ಟಿಗೆ ದೇವರನ್ನು

ಪೂಜಿಸುತ್ತಾರೆ. ಆದಿಮ ಸಮುದಾಯಗಳ ಆರಾಧನೆಗಳಲ್ಲಿ ಇದೂ ಒಂದು. ಮನುಷ್ಯನ ಮತ್ತು ಅಲೌಕಿಕ ಶಕ್ತಿಗಳ ಸಂಬಂಧವನ್ನು ಧರ್ಮವು ಪ್ರತಿನಿಧಿಸುತ್ತದೆ. ಮನುಷ್ಯನ ಪುರಾತನ ಕರ್ತವ್ಯಗಳಲ್ಲಿ ಆಧ್ಯಾತ್ಮವೂ ಒಂದು. ಬುಡಕಟ್ಟು ಧರ್ಮವು ಬಹಳ ಪುರಾತನ ಧರ್ಮವೆಂದು ಪರಿಗಣಿಸಲಾಗಿದೆ. ಇಲ್ಲಿ ಪ್ರಾಣಿ ಪೂಜೆ, ಮರಗಳ ಪೂಜೆ, ಸೂರ್ಯ, ಚಂದ್ರ ಮತ್ತು ನದಿ ಪೂಜೆ, ದುಷ್ಟ ಶಕ್ತಿಗಳ ಪೂಜೆ ಮುಂತಾದವುಗಳನ್ನು ಕಾಣಬಹುದು. ಜೀವನದ ಎಲ್ಲಾ ಹಂತಗಳಲ್ಲೂ ಬುಡಕಟ್ಟು ಧರ್ಮವು ಹಾಸುಹೊಕ್ಕಾಗಿದೆ. ಭಾರತದಲ್ಲಿ ಹಲವಾರು ಜನಸಮುದಾಯಗಳು ತಮ್ಮದೇ ಆದ ವಿಶಿಷ್ಟ ಧಾರ್ಮಿಕತೆಯನ್ನು ಬೆಳೆಸಿಕೊಂಡು ಬಂದಿವೆ.

### ಧಾರ್ಮಿಕ ಪದ್ಧತಿಗಳು

ಕುಂಬ್ರಿ ಮರಾಠಿ ಸಮುದಾಯದವರಲ್ಲಿ ಹಲವಾರು ಧಾರ್ಮಿಕ ಪದ್ಧತಿಗಳಿದ್ದು, ಅವರು ತಮ್ಮ ಪೂರ್ವಜರ ಆರಾಧನೆಯನ್ನು ಕೂಡ ಮಾಡುತ್ತಾರೆ. ಪೂರ್ವಜರು ಹೊಂದಿರುವ ರೀತಿ–ನೀತಿ, ಸಂಸ್ಕೃತಿ, ರೂಢಿ, ಸಂಪ್ರದಾಯ, ಆಚರಣೆಗಳಲ್ಲಿ ತಮ್ಮದೇ ಆದ ವಿಶಿಷ್ಟ ಪದ್ಧತಿಯನ್ನು ಹೊಂದಿದ್ದಾರೆ. ಇವರು ಹಲವಾರು ದೇವಾನುದೇವತೆಗಳನ್ನು ಪೂಜಿಸುವವರಾಗಿದ್ದು, ದೇವ–ದೇವತೆಗಳ ಬಗ್ಗೆ ವಿಶಿಷ್ಟವಾದ ನಂಬಿಕೆಯುಳ್ಳವರಾಗಿದ್ದಾರೆ. ಆದರೂ ಸಹ ಪರಿವರ್ತನೆಯನ್ನು ಹೊಂದುತ್ತಿರುವ ಆಧುನಿಕ ಸಮಾಜದಲ್ಲಿಯ ಅನೇಕ ಕಾರಣಗಳಾದ ನಗರೀಕರಣ, ಕೈಗಾರೀಕರಣ, ಸಾರಿಗೆ ಸಂಪರ್ಕಗಳ ಸುಧಾರಣೆ, ಉದಾರೀಕರಣ, ಪಾಶ್ಚಿಮಾತ್ಯೀಕರಣ, ಹಾಗೂ ಜಾಗತೀಕರಣಗಳ ಪ್ರಭಾವದಿಂದ ತಮ್ಮ ಮೂಲ ಸ್ಥಳಗಳಿಂದ ಉದ್ಯೋಗವನ್ನರಸಿ ಬೇರೆ ಬೇರೆಡೆಗೆ ಹೋಗುವುದರಿಂದ ತಮ್ಮ ಕುಲದೇವತೆ, ಆರಾಧ್ಯ ದೇವತೆಗಳನ್ನು ಪೂಜಿಸುವುದನ್ನು ಕಡಿಮೆ ಮಾಡಿದ್ದಾರೆ. ತಮ್ಮ ಅನುಕೂಲಕ್ಕೆ ತಕ್ಕಂತೆ ಪೂಜಾ ವಿಧಿವಿಧಾನಗಳನ್ನು ಬದಲಿಸಿಕೊಂಡಿದ್ದಾರೆ.

### ಮೂರ್ತಿ ಪೂಜೆ ಮತ್ತು ಆಚರಣೆ

ಮನೆಯಲ್ಲೇ ಇಟ್ಟಿರುವ ದೇವರ ಮೂರ್ತಿಯ ಪೂಜೆಯನ್ನು ಕುಟುಂಬದ ಯಜಮಾನನು ಮಾಡುವನು. ಕುಂಬ್ರಿ ಮರಾಠಿಗರು ಬೇರೆ ಬೇರೆ ಹೆಣ್ಣು ಮತ್ತು ಗಂಡು ದೇವರುಗಳನ್ನು ಪೂಜಿಸುವರು. ದೇವರನ್ನು ಅಲಕ್ಷಿಸಿದರೆ ನಮಗೆ ಕಷ್ಟಗಳು ಬರುತ್ತವೆ ಎಂದು ಕುಂಬ್ರಿ ಮರಾಠಿಗರು ನಂಬುತ್ತಾರೆ. ಕುಂಬ್ರಿ ಮರಾಠಿಯರಿಗೆ ಅನೇಕ ದೈವಗಳಿವೆ, ಅವುಗಳಲ್ಲಿ ಮಲ್ಲಿಕಾರ್ಜುನ, ಸಿದ್ಧನಾಥ, ಸಿದ್ದೇಶ್ವರ, ಕಾಪ್ರೆ, ಸೋಮನಾಥ, ಕಲ್ಲಿನಾಥ, ಮಹಾದೇವ, ಮಾಬಳೇಶ್ವರ, ಇವು ಶಿವರೂಪಿಯಾದ ದೈವಗಳು, ಆದರೆ ನಾಡಿನ ಇತರೆಡೆಗಳಲ್ಲಿ ಇರುವಂತೆ ಇವಕ್ಕೆ ನಿರ್ದಿಷ್ಟ ಭೌತಿಕ ರೂಪಗಳೇನು ಇಲ್ಲ. ಒಂದು ಉರುಟುಕಲ್ಲು, ಅದರ ಪಕ್ಕದಲ್ಲೊಂದು

ತ್ರಿಶೂಲ ಇದ್ದರೆ ಅದು ಸಿದ್ಧನಾಥ ಅಥವಾ ಕಾಲಭೈರವ. ಕೆಲವು ಭಾಗಗಳಿಗೆ ನೆಟ್ಟಗೆ ಭೂಮಿಯಿಂದ ಮೇಲೆದ್ದು ಬರುವಂತೆ ಕಾಣುವ ಆರು ಕಲ್ಲಿನ ಸಮೂಹವಿರುತ್ತದೆ. ಅದಕ್ಕೆ 'ಸಾತ್ಪುರುಷ' ಎಂದು ಕರೆಯಲಾಗುತ್ತದೆ. ಅವು ತೀರಿಹೋದ ಹಿರಿಯರ ಆತ್ಮಗಳನ್ನು ಸಂಕೇತಿಸುವ ದೇವರು. ಇತರೆ ವಿವಿಧ ಕಲ್ಲಿನ ರೂಪಗಳನ್ನೆ 'ಕಾಫ್ರಿ' ದೇವರು ಎಂದು ಕರೆಯುತ್ತಾರೆ. ಇವು ಗಡಿಗಳನ್ನು ಕಾಯುವ ದೇವರುಗಳಾದುದರಿಂದ ಗಡಿಯಲ್ಲಿ ಇರುತ್ತವಷ್ಟೆ. ಸೋಮನಾಥ ಒಂದು ರೀತಿಯಲ್ಲಿ ಇವರಿಗೆ ಆರಾಧ್ಯ ದೈವ. ಸ್ತ್ರೀ ದೇವರುಗಳಾದ ಚಾಪಲಾದೇವಿ, ಸಾತೇರಿ, ಗೌಳಾದೇವಿ, ಮಹಾಮಾಯೆ, ದುರ್ಗಾ, ಎಂಬ ಹೆಸರಿನ ಸ್ತ್ರೀಶಕ್ತಿ ದೇವತೆಗಳನ್ನು ಆರಾಧಿಸುತ್ತಾರೆ.

ಶಿರಸಿ ಮಾರಿಕಾಂಬೆಯ ಬಗ್ಗೆ ಕುಂಬ್ರಿ ಮರಾಠಿಗರಿಗೆ ವಿಶೇಷ ನಂಬಿಕೆ. ಸಾಲ ಮಾಡಿಯಾದರೂ ಶಿರಸಿಯ ಜಾತ್ರೆಗೆ ಹೋಗುತ್ತಾರೆ. ತಮ್ಮ ಮಕ್ಕಳ ಮದುವೆ, ಶುಭಕಾರ್ಯ ಮುಂತಾದವುಗಳಿಗೆ ಶಿರಸಿ ಮಾರಮ್ಮನ ಜಾತ್ರೆಯಾದ ನಂತರವೇ ಪ್ರಾಶಸ್ತ್ಯ ದಿನಗಳು ಎನ್ನುವ ನಂಬಿಕೆ ಇದೆ. ಮೊದಲೆಲ್ಲ ಶಿರಸಿಗೆ ನಡೆದುಕೊಂಡು ಹೋಗುತ್ತಿದ್ದರಂತೆ. ಸಿಂಧೋಳ್ಳರು (ದುರುಗಮುರಿಗೆ ಯವರು) ಪುಟ್ಟಿಯಲ್ಲಿ ಹೊತ್ತು ತರುವ ದೈವಗಳನ್ನು ಅತ್ಯಂತ ಭಕ್ತಿಯಿಂದ ಪೂಜಿಸುತ್ತಾರೆ. ಅಮ್ಮಾ ಎಂದು ಕರೆಯುವ ತಾಡಿನಕೊಪ್ಪದ ದುರ್ಗಾದೇವಿಯನ್ನು ಪೂಜಿಸುತ್ತಾರೆ. ಇವಳು ಮಾರಿಯಮ್ಮನ ತಂಗಿ ಎಂದು ಕುಂಬ್ರಿ ಮರಾಠಿಗರು ಹೇಳುತ್ತಾರೆ. ಕುಂಬ್ರಿ ಮರಾಠಿಗರ ಪ್ರತಿ ಕೊಪ್ಪದಲ್ಲಿಯೂ ಒಂದು ಜಟ್ಟಿಗ ಇರುತ್ತಾನೆ. ಜಟ್ಟಿಗನು ಕುಂಬ್ರಿ ಮರಾಠಿಗರ ಸಾಂಸ್ಕೃತಿಕ ನಾಯಕ. ಮೇಲ್ಮುಖವಾಗಿ ಎದ್ದುನಿಂತ ಕಟ್ಟಿಗೆಯಲ್ಲಿ ತಯಾರಿಸಿದ ಶಿಶ್ನದ ರೂಪವನ್ನು ಹೋಲುವ ಜಟಿಗದ ಸ್ಥಾನವನ್ನು ಎಲ್ಲೆಲ್ಲೂ ಕಾಣಬಹುದು. 'ಪಶುಪಾಲನೆ ಮತ್ತೆ ಬೇಟೆಯ ವಿಕಾಸವಾಗುತ್ತಿರುವ ಕಾಲದಲ್ಲಿ ಈ ದೇವರು ಹುಟ್ಟಿರುವ ಸಾಧ್ಯತೆಗಳಿವೆ. ಪಶುಪಾಲನೆ ಮುಖ್ಯವಾದಾಗ ಪುರುಷ ಪ್ರಧಾನಗೊಳ್ಳುತ್ತಾನೆ. ನಾಡಿನ ಒಳಿತಿಗಾಗಿ ಪ್ರಾಣಾರ್ಪಣೆ ಮಾಡಿಕೊಂಡವರನ್ನು ಹೀಗೆ ಪೂಜಿಸಬಹುದೇನೋ.'[5] ತಿರುಪತಿ ವೆಂಕಟರಮಣನನ್ನು ಪೂಜಿಸುವ ಕುಂಬ್ರಿ ಮರಾಠಿಗರು ಅದರ ಮೂರ್ತಿಯನ್ನು ತುಳಸಿಕಟ್ಟೆಯಲ್ಲಿ ಇಡುತ್ತಾರೆ. ಶ್ರಾವಣ ಮಾಸದ ಶನಿವಾರ ಒಪ್ಪತ್ತು ಪೂಜೆ ಮಾಡುತ್ತಾರೆ. ತುಳಸಿಗೆ ತಪ್ಪುಗಾಣಿಕೆಯನ್ನು ಇಡುತ್ತಾರೆ. ವೈಶಾಖ ಮಾಸದ ಶನಿವಾರ ದೇವರಿಗೆ ಬಿದರಿನಿಂದ ಕಮಾನುಕಟ್ಟಿ ಮಾವಿನ ಎಲೆಗಳನ್ನು ಸೇರಿಸಿ ತುಳಸಿಗೆ ಕಾಯಿ ಒಡೆದು ತುಳಸಿ ಪೂಜೆ ಮಾಡುತ್ತಾರೆ.

ಕುಂಬ್ರಿ ಮರಾಠಿಗರು ಸ್ಥಳೀಯ ಗುಡ್ಡಬೆಟ್ಟಗಳನ್ನು ಇವರ ದೈವಗಳೆಂದು ಪೂಜಿಸುತ್ತಾರೆ. ದುರ್ಗಾ, ಆಗಡೊ, ದರೊ, ಗುರುತಿಂಜ್ ಎಂಬ ಗುಡ್ಡಗಳನ್ನು ಇವರ ರಕ್ಷಕ ದೈವಗಳಿರುವ ಪವಿತ್ರ ಜಾಗವೆಂದು ನಂಬಿ ಪೂಜಿಸುತ್ತಾರೆ. ರಾಮಲಿಂಗಕೊಂಡ, ಸಾಕಳಕೊಂಡ ಹಾಗೂ

ನಾಗಿನದಿಕೊಂಡ ಎಂಬ ಕಾಳಿ ನದಿಯ ಉಪ ನದಿಯ ನೀರಿನ ತಾಣಗಳನ್ನು ಅವರು ಪವಿತ್ರ ಸ್ಥಳಗಳೆಂದು ನಂಬುತ್ತಾರೆ. ಕುಂಬ್ರಿ ಮರಾಠಿಗರು ವೃಕ್ಷಗಳನ್ನು ಮತ್ತು ಪ್ರಾಣಿಗಳನ್ನು ಪೂಜಿಸುವವರು. ಅತ್ತಿ, ಆಲ, ಬನ್ನಿ, ಗೋಳಿ ಮತ್ತು ಮಾವು ಇವರ ಪವಿತ್ರ ಮರಗಳು – ಮದುವೆ ಮಂಟಪಕ್ಕೆ ಬೂರಗದ ಮರ ಇರಲೇಬೇಕು. ಕುಂಬ್ರಿ ಮರಾಠಿಗರು ಪ್ರತಿದಿನ ರಾತ್ರಿ ತುಳಸಿ ಗಿಡದ ಹತ್ತಿರ ದೀಪ ಹಚ್ಚುವರು ಮತ್ತು ನಿತ್ಯ ತುಳಸಿ ಪೂಜೆ ಮಾಡುವರು. ಉಗ್ರ ಪ್ರಾಣಿಗಳಾದ ಆನೆ, ಒಂಟೆ, ಹುಲಿ, ಸಿಂಹ, ಹಾವು, ಕಾಡು ಹಂದಿ, ಇವುಗಳನ್ನು ಅಕ್ಕಿ ಹಿಟ್ಟಿನಿಂದ ಗೊಂಬೆಗಳನ್ನು ಮಾಡಿ ಮದುವೆ ಸಮಯದಲ್ಲಿ ಪೂಜಿಸುವರು. ಪ್ರಾಣಿಗಳ ಜೊತೆ ಇವರ ಸಂಪರ್ಕವನ್ನು ಸೂಚಿಸುವ ಚಿಹ್ನೆಯನ್ನು ಪ್ರಾಣಿಗಳ ರೂಪದಲ್ಲಿ ಪೂಜಿಸುವರು. ತಮ್ಮ ವಿವಿಧ ಗುಂಪುಗಳಿಗೆ ಪ್ರಾಣಿಗಳ ಮತ್ತು ವೃಕ್ಷಗಳ ಹೆಸರುಗಳನ್ನಿಡುವರು. ಒಲೆಯನ್ನು ತಮ್ಮ ಪುರಾತನ ದೇವರುಗಳೊಂದಿಗೆ ಗುರುತಿಸಿಕೊಂಡಿರುವರು. ಮಾರುಕಟ್ಟೆಯಿಂದ ತಂದ ಮಾಂಸವನ್ನು ಅಡುಗೆಮನೆಯ ಒಲೆಯಲ್ಲಿ ಬೇಯಿಸುವುದಿಲ್ಲ.

ಬೇಟೆಗಾರಿಕೆಯನ್ನು ದೇವರಿಗೆ ಅರ್ಪಿಸುವ ಪವಿತ್ರ ಕಾರ್ಯವೆಂದು ತಿಳಿದು ಮಾಡುವರು. ಬೇಟೆಗಾಗಿ ಉಪಯೋಗಿಸುವ ಭಲ್ಲೆ, ಬಲೆ, ಭರ್ಚಿ ಮುಂತಾದವುಗಳನ್ನು ಪೂಜ್ಯ ದೃಷ್ಟಿಯಿಂದ ಕಾಣುವರು. ಮುಟ್ಟಾದ ಹೆಂಗಸರು ಬೇಟೆಯ ಉಪಕರಣಗಳನ್ನು ಮುಟ್ಟುವ ಹಾಗಿಲ್ಲ. ಕಾಡು ಹಂದಿಯ ಬೇಟೆಯನ್ನು ಕೆಂಪಣ್ಣ ದೇವರಿಗೆ ಅರ್ಪಿಸುವ ಕಾಣಿಕೆಯೆಂದು ಮಾಡುವರು. ಬೇಟೆಯ ಸಮಯದಲ್ಲಿ ಮಾಂಸ ಮತ್ತು ಜೇನನ್ನು ಹಂಚುವ ಮೊದಲು ಅದರ ಒಂದು ಭಾಗವನ್ನು ಬೇಟೆ ದೇವರಿಗೆ ತಮ್ಮನ್ನು ರಕ್ಷಿಸಲೆಂದು ಕೋರಿ ಅರ್ಪಿಸುವರು. ಪೂರ್ವಜರ ಪೂಜೆಗಳು ಕುಂಬ್ರಿ ಮರಾಠಿಗರ ಜೀವನದ ಮತ್ತು ಅವರ ಧಾರ್ಮಿಕ ನಂಬಿಕೆಗಳ ಮುಖ್ಯ ಅಂಗಗಳು. ಸತ್ತವರ ಆತ್ಮಗಳಿಂದ ಮುಕ್ತಿ ಪಡೆಯಲು ಕುಂಬ್ರಿ ಮರಾಠಿಗರು ಕಂಡಿ, ಕುಲೆ ಮತ್ತು ಜಕ್ಕಣಿ ಎನ್ನುವ ಭೂತಗಳನ್ನು ವರ್ಷಕ್ಕೊಮ್ಮೆಯಾದರು ಪೂಜಿಸುವರು. ಸತ್ತ ದಿನವನ್ನು 'ಮಲಕಾರ್ಯ' ಎಂದು ಆಚರಿಸುವರು. ಸ್ನಾನ ಮಾಡಿ, ಮನೆ ತೊಳೆದು, ಅನ್ನದೊಂದಿಗೆ ವಿವಿಧ ಅಡುಗೆಯನ್ನು ತಯಾರಿಸಿ ಪೂರ್ವಜರಿಗೆ ಅರ್ಪಿಸುವರು. ಸತ್ತ ಮೂರು ತಿಂಗಳ ನಂತರ ಎರಡು ತೆಂಗಿನಕಾಯಿಗಳನ್ನು ಅರ್ಪಿಸುವ ಮೂಲಕ ಗತಿಸಿದವರನ್ನು ಪುನಃ ಮರಳಿ ಆಹ್ವಾಹನೆ ಮಾಡುವರು.

**ನಂಬಿಕೆಗಳು**

ಕುಂಬ್ರಿ ಮರಾಠಿಗರು ಕಾಣಿಕೆಗಳನ್ನು ಅರ್ಪಿಸದಿದ್ದರೆ ದುಷ್ಟ ಶಕ್ತಿಗಳು ತಮಗೆ ಕೇಡು ಮಾಡುವರೆಂದು ನಂಬಿರುವರು. ಬುಡಕಟ್ಟು ಜನರು ಮಾಂತ್ರಿಕ ಜಗತ್ತಿನಲ್ಲಿ ಹೆಚ್ಚಿನ

ವಿಶ್ವಾಸವನ್ನಿಟ್ಟಿರುವರು. ಇಡಿ ಜಗತ್ತು ಮತ್ತು ಪ್ರತಿ ಮನುಷ್ಯನು ಅತಿಮಾನುಷ ಶಕ್ತಿಗಳ ಅಡಿಯಾಳುಗಳೆಂದು ನಂಬಿರುವರು. ಬುಡಕಟ್ಟು ಜನರಲ್ಲಿ ದುಷ್ಟ ಶಕ್ತಿಗಳಿಗೆ ತಮ್ಮದೆಯಾದ ಸ್ಥಾನವಿದೆ. ರೋಗಗಳಿಂದ ಮುಕ್ತಿ ಪಡೆಯಲು ದುಷ್ಟ ಶಕ್ತಿಗಳನ್ನು ಮತ್ತು ಸಸ್ಯ ಔಷಧಿಯನ್ನು ನಂಬಿರುವರು. ಯಾರಾದರು ಅಪಘಾತಕ್ಕೀಡಾದರೆ, ರೋಗ ಪೀಡಿತರಾದರೆ, ಸತ್ತರೆ, ಕುಂಬ್ರಿ ಮರಾಠಿಗರು ದುಷ್ಟ ಶಕ್ತಿಗಳನ್ನು ದೂರವಿಡಲು 'ಗದ್ಯರನ್ನು' ಸಂಪರ್ಕಿಸುವರು. ಎಲ್ಲ ಕಷ್ಟಗಳು, ಕೆಟ್ಟ ಗ್ರಹಗತಿಗಳು, ರೋಗರುಜಿನಗಳು, ಮಾಟಮಂತ್ರಗಳಿಂದ ಉಂಟಾಗುವವು ಎಂದು ಕುಂಬ್ರಿ ಮರಾಠಿಗರು ತಿಳಿದಿರುವರು. ಪೂರ್ವ ಕಾಲದಿಂದಲೂ ನಡೆದುಕೊಂಡು ಬಂದಂತಹ ಕುಂಬ್ರಿ ಮರಾಠಿಗರ ನಂಬಿಕೆಗಳಿಂದ ಕೂಡಿದ ಬದುಕನ್ನು, ಇಂದಿನ ಕುಂಬ್ರಿ ಮರಾಠಿಯರ ನಡೆನುಡಿಗಳಿಂದ ನಾವು ಕಾಣಬಹುದು. ಉದಾಹರಣೆಗೆ: ಆತ್ಮ ಹಾಗೂ ದೆವ್ವಗಳ ಪೂಜೆಯನ್ನು ಸಾಮಾನ್ಯವಾಗಿ ನಾವು ಕಾಣುತ್ತೇವೆ. ರೋಗರುಜಿನಗಳು ದೆವ್ವಗಳಿಂದ ಉಂಟಾಗುತ್ತವೆ, ಬೇಟೆ ಮಾಡಿದ ಮಾಂಸವನ್ನು ಮಾರಬಾರದು, ಇಲ್ಲದಿದ್ದರೆ ನಮ್ಮ ಕೆಲಸಗಳಲ್ಲಿ ಹಿನ್ನಡೆಯಾಗುತ್ತದೆ ಎಂದು ನಂಬಿರುವರು. ಪದೇ ಪದೇ ಮನೆಯಲ್ಲಿ ಜಗಳವಾಡುವದು ದುಷ್ಟ ಶಕ್ತಿಗಳನ್ನು ಮನೆಗೆ ಆಹ್ವಾನಿಸಿದಂತೆ ಎಂದು ನಂಬಿರುವರು. ಈ ಹಿಂದೆ ಕುಂಬ್ರಿ ಮರಾಠಿಗರು ತಮ್ಮ ದೇವಾನುದೇವತೆಗಳನ್ನು ಆರಾಧಿಸಲು ತಮ್ಮದೆ ಆದ ಪದ್ಧತಿಗಳನ್ನು ಹೊಂದಿದ್ದವರಾಗಿದ್ದರು. ಕೆಲವರು ದೇವರಿಗೆ ಬಲಿ ಕೊಡುವುದರ ಮುಖಾಂತರ ತಮ್ಮ ಹರಕೆಗಳನ್ನು ಮುಟ್ಟಿಸುತ್ತಿದ್ದರು. ಮತ್ತೆ ಕೆಲವರು ದೇವ ದೇವತೆಗಳಿಗೆ ಪೂಜೆ ಸಲ್ಲಿಸುವವರಾಗಿದ್ದರು. ಆದರೆ ಇತ್ತೀಚಿನ ದಶಕಗಳಲ್ಲಿ ಕುಂಬ್ರಿ ಮರಾಠಿಗರು ತಮ್ಮದೇ ಆದ ಪೂಜಾ ವಿಧಾನಗಳನ್ನು ತಾವು ವಾಸಿಸುವ ಪ್ರದೇಶಗಳಿಗೆ ಅನುಗುಣವಾಗಿ ಪರಿವರ್ತನೆಯನ್ನು ಮಾಡಿಕೊಂಡಿದ್ದಾರೆ.

### 4. ಕುಂಬ್ರಿ ಮರಾಠಿಯರ ಉಡುಗೆ-ತೊಡಿಗೆ ಆಭರಣಗಳು

ಉತ್ತರ ಕನ್ನಡದ ಮಲೆನಾಡು, ಕರಾವಳಿಯ ಆದಿವಾಸಿಗಳ ಉಡುಪುಗಳಂತೆ ಕುಂಬ್ರಿ ಮರಾಠಿಗರ ಉಡುಪುಗಳೂ ವಿಶಿಷ್ಟವಾಗಿವೆ. ಉಡುಪು ವ್ಯಕ್ತಿಯ ವ್ಯಕ್ತಿತ್ವದ ಅಭಿವ್ಯಕ್ತಿ. ಆಧುನಿಕ ಸಮಾಜದಲ್ಲಿ ಉಡುಗೆ ವಿಷಯವಾಗಿ ಅನೇಕ ಬದಲಾವಣೆಗಳು ಉಂಟಾಗಿವೆ. ಕಾರಣವೇನೆಂದರೆ ಪಾಶ್ಚಾತ್ಯರ ಅನುಕರಣೆ ಮತ್ತು ಕೆಳವರ್ಗದ ಜನರು, ಬುಡಕಟ್ಟು ಜನರು ಮೇಲ್ವರ್ಗದವರ ಉಡುಗೆ ಮತ್ತು ಮೌಲ್ಯಗಳ ಅನುಕರಣೆ ಮಾಡುತ್ತಿರುವರು. ಎಂ.ಎನ್. ಶ್ರೀನಿವಾಸರು ಈ ಪ್ರಕ್ರಿಯೆಯನ್ನು ಪಾಶ್ಚಾತೀಕರಣ ಮತ್ತು ಸಂಸ್ಕೃತೀಕರಣ ಎಂದು ಕರೆದಿದ್ದಾರೆ. ಬುಡಕಟ್ಟು ತೊಡುವ ಉಡುಗೆಗಳಲ್ಲಿ ಇಂದು ಬದಲಾವಣೆಯಾಗಿದೆ. ಆಧುನಿಕ ಶೈಲಿಯಲ್ಲಿ ಉಡುಪು, ಆಭರಣಗಳನ್ನು ಧರಿಸುವ ಪ್ರವೃತ್ತಿ ಇಂದು ಬುಡಕಟ್ಟುಗಳ ಸಂಸ್ಕೃತಿ, ಕಲೆ, ಸಂಗೀತ, ನೃತ್ಯ, ಕುಶಲ ಕಲೆಗಳಲ್ಲಿ ಬದಲಾವಣೆಗೆ ಎಡೆ ಮಾಡಿವೆ.

## ಮಹಿಳೆಯರ ಉಡುಗೆ

ಕುಂಬ್ರಿ ಮರಾಠಿಗರ ಸ್ತ್ರೀಯರು ಹಾಲಕ್ಕಿ ಸ್ತ್ರೀಯರಂತೆ ಉಡುಗೆಯನ್ನು ತೊಡುತ್ತಾರೆ. ಇವರ ಉಡಿಗೆ ತೊಡಿಗೆಯು ವೈಶಿಷ್ಟ್ಯತೆಯಿಂದ ಕೂಡಿದ್ದು, ಬಹುತೇಕ ಕೃಷಿ ಕೂಲಿಗಳಾಗಿರುವ ಕಾಡಿನ ನಡುವೆ ತಮ್ಮದೇ ಆದ ಬದುಕು ಕಟ್ಟಿಕೊಂಡಿರುವ ಕುಂಬ್ರಿ ಮರಾಠಿ ಮಹಿಳೆಯರು ರವಿಕೆ ಧರಿಸದೆ ದೇಹದ ಸುತ್ತ ಕೇವಲ ಸೀರೆಯನ್ನು ಮಾತ್ರ ಸುತ್ತಿಕೊಳ್ಳುವ ಸಂಪ್ರದಾಯವೆಂದಿದ್ದಾರೆ ಇದಕ್ಕೆ 'ದೇಟ್ಲೆ' ಎಂಬ ಹೆಸರಿನಿಂದ ಕರೆಯುವರು. ಸೀರೆಯನ್ನು ಉಡುವಾಗ ಸೀರೆಯ ಮೇಲಿನ ಬಲಭಾಗಕ್ಕೆ ಗಂಟು ಕಟ್ಟುವುದಕ್ಕೆ ದೇಟ್ಲೆ ಎಂದು ಹೇಳುವರು. ಕೆಲವು ಹೆಂಗಸರು ಮನೆಯಲ್ಲಿ ಮಾತ್ರ 'ದೇಟ್ಲೆ' ರೀತಿಯಲ್ಲಿ ಸೀರೆ ಉಡುತ್ತಾರೆ, ಹೊರಗೆ ಹೋಗುವಾಗ ಭಾರತೀಯ ಶೈಲಿಯಲ್ಲಿ ಸೀರೆ ಉಡುತ್ತಾರೆ. ಇತ್ತೀಚಿನವರೆಗೆ ರವಿಕೆಗಳ ಅರಿವೇ ಇರಲಿಲ್ಲ. ಇಂದಿಗೂ ಕೂಡ ಕೆಲವು ಸಂಪ್ರದಾಯಸ್ತ ಹಿರಿಯ ಹೆಂಗಸರು ರವಿಕೆ ಧರಿಸುವುದಿಲ್ಲ. ಅವರ ದೇವಿಯಾದ ಗೋವೆಯ 'ಅಂಬಾ' ಅಥವಾ 'ಆದಿಶಕ್ತಿ' ತನ್ನ ದೇಹದ ಮೇಲ್ಭಾಗದಲ್ಲಿ ರವಿಕೆ ಧರಿಸುತ್ತಾಳೆ; ಆದ್ದರಿಂದ ಕುಂಬ್ರಿ ಮರಾಠಿಗರ ಹೆಂಗಸರು ರವಿಕೆ ಧರಿಸುವುದನ್ನು ನಿಷೇಧಿಸಲಾಗಿದೆ. ಇದುವೆ ಕುಂಬ್ರಿ ಮರಾಠಿ ಹೆಂಗಸರು ಬ್ಲೌಸ್ ಧರಿಸದೆ ಇರಲು ಮುಖ್ಯ ಕಾರಣ. ಆದರೆ ಕುಂಬ್ರಿ ಮರಾಠಿ ವಧು ಮದುವೆಯ ದಿನದಂದು ಮಾತ್ರ ರವಿಕೆ ಧರಿಸುತ್ತಾಳೆ ಏಕೆಂದರೆ ಅಂದು ಅವಳು ಮಾತೃದೇವತೆಯ ಸಂಕೇತವೆಂದು ನಂಬಲಾಗುತ್ತದೆ. ಆದರೆ ಭಾರತದ ಮಹಿಳೆಯ ಪ್ರತೀಕವಾದ ಕುಂಕುಮ, ಬಳೆ, ತಲೆ ತುಂಬ ಹೂವು, ಕುಣಬಿ ಮಹಿಳೆಯರಿಗೆ ಇಷ್ಟವಾದವುಗಳಾಗಿವೆ. ಕಾಕಡೆ ಹೂವು, ಸೀತಾ ಹೂವು, ಸುರಗಿ ಹೂವು, ಅಬ್ಬಲಿಗೆ ಹೂವು ಪ್ರಮುಖವಾದವುಗಳಾಗಿವೆ. ಬಹುತೇಕ ಕೃಷಿ ಕೂಲಿಗಳಾಗಿರುವ ಕುಂಬ್ರಿ ಮರಾಠಿಗರ ಮನೆಯಲ್ಲಿ ಇತ್ತೀಚೆಗಷ್ಟೆ ವಿದ್ಯುತ್ ದೀಪಗಳು ಅಲಂಕರಿಸುತ್ತಿವೆ. ಮೊದಲಿನ ಚಿಮಣಿ ಬುಡ್ಡೆಗಳು ತೀರಾ ಕಡಿಮೆ. ಸಾರ್ವಜನಿಕವಾಗಿ ತಮ್ಮ ಸೀರೆ ಧರಿಸುವ ರೀತಿ ರಿವಾಜುಗಳಿಂದ ಗಮನ ಸೆಳೆಯುತ್ತಿದ್ದ ಕುಂಬ್ರಿ ಮರಾಠಿಗರಲ್ಲಿ, ಇಂದಿನ ಸಮಾಜದಲ್ಲಿ ಯುವ ಜನತೆಯು ಕ್ರಮೇಣ ಹಳೆಯ ಕಾಲದ ಉಡುಗೆ ಪದ್ಧತಿಯನ್ನು ಬಿಟ್ಟುಬಿಡುತ್ತಿದ್ದಾರೆ. ಎಲ್ಲ ಉಪ ಬುಡಕಟ್ಟುಗಳ ಹೆಂಗಸರು ಭಾರತೀಯ ಶೈಲಿಯಲ್ಲಿಯೇ ಸೀರೆ ಉಡುತ್ತಿದ್ದಾರೆ. ಸಾಂಪ್ರದಾಯಿಕ ಹೆಂಗಸರು ಸಾಮಾನ್ಯವಾಗಿ ತಿಳಿಬಣ್ಣದ ಹಳದಿ, ಕೆಂಪು, ಹಸಿರು ಚೌಕಡಿ ವಿನ್ಯಾಸದ ಸೀರೆಗಳನ್ನು ಇಷ್ಟಪಡುತ್ತಾರೆ. ಹುಡುಗಿಯರು ಮತ್ತು ಯುವ ಸ್ತ್ರೀಯರು ನೆರೆಯ ಸಮುದಾಯದ ಹೆಂಗಸರ ಪ್ರಭಾವದಿಂದಾಗಿ ಬಣ್ಣ ಬಣ್ಣದ ಸಿಂಥೆಟಿಕ್ ಸೀರೆಗಳನ್ನು ಉಡುತ್ತಾರೆ. ರವಿಕೆ ಧರಿಸುತ್ತಾರೆ, ಅಲ್ಲದೆ ಹಣೆಯ ಮೇಲೆ ಫ್ಯಾಶನಬಲ್ ಕೆಂಪು ಕುಂಕುಮ ಇಟ್ಟುಕೊಳ್ಳುತ್ತಾರೆ. ತಲೆಗೆ ಎಣ್ಣೆ ಹಚ್ಚಿ, ನಡುವೆ ಬೈತಲೆ ತೆಗೆದು, ಕೂದಲು ಬಾಚಿಕೊಳ್ಳುತ್ತಾರೆ.

**ಆಭರಣಗಳು**

ಹೆಂಗಸರು ವಿವಿಧ ವಿನ್ಯಾಸದ ಹಾಗೂ ಗಾತ್ರದ ಆಭರಣಗಳನ್ನು ಧರಿಸುತ್ತಾರೆ. ಅವರಿಗೆ ಬಂಗಾರ-ಬೆಳ್ಳಿಯ ಆಭರಣಗಳು ಬಹಳ ಪ್ರಮುಖವಾದವು. ಆದರೂ ಅಲ್ಯುಮಿನಿಯಂ, ಮಣಿಗಳು, ನಾಣ್ಯಗಳು, ತಾಮ್ರ ಮುಂತಾದವುಗಳಿಂದ ಮಾಡಿದ ಆಭರಣಗಳನ್ನು ಬಳಸುತ್ತಾರೆ. ದೇಹದ ವಿವಿಧ ಅಂಗಗಳಾದ ಕಿವಿ, ಮೂಗು, ತಲೆ, ಕೊರಳು, ಕೈ, ಕೈ ಬೆರಳು, ಮುಂತಾದವುಗಳ ಮೇಲೆ ಆಭರಣ ತೊಡುತ್ತಾರೆ. ಆಶ್ಚರ್ಯಕರವಾದ ಸಂಗತಿ ಎಂದರೆ ಹಿಂದೂ ಸಮಾಜದಲ್ಲಿ ಕೇವಲ ವಿವಾಹಿತ ಮಹಿಳೆ ಮಾತ್ರ ಧರಿಸುವಂತಹ ಮಂಗಳಸೂತ್ರ ಮತ್ತು ಕಾಲುಂಗರಗಳನ್ನು ಕುಂಬ್ರಿ ಮರಾಠಿಗರ ಅವಿವಾಹಿತ ಹುಡುಗಿ ಧರಿಸುತ್ತಾಳೆ. ಆದರೆ ಇತ್ತೀಚೆಗೆ ಈ ರೂಢಿ ಕ್ರಮೇಣ ಮರೆಯಾಗುತ್ತಿದೆ. ಕಿವಿಯಲ್ಲಿ ಧರಿಸುವ ಸಾಮಾನ್ಯ ಆಭರಣ ಎಂದರೆ ಅರ್ಧವೃತ್ತಾಕಾರದ ಓಲೆ, ರಿಂಗು, ಟಾಪ್, ಮುಗುಳು (ಕಿವಿಯ ಮೇಲ್ಭಾಗದಲ್ಲಿ ಧರಿಸುವಂತದ್ದು) ಮತ್ತು ಗುಂಡಾಲ (ಕಿವಿಯ ನಡುಭಾಗದಲ್ಲಿ ಧರಿಸುವಂತದ್ದು). ಮೂಗಬಟ್ಟು, ನತ್ತು ಮೂಗಿನಲ್ಲಿ ಧರಿಸ ಬಹುದಾದ ಸಾಮಾನ್ಯ ಆಭರಣ. ಹಿಂದಿನ ಕಾಲದಲ್ಲಿ ನತ್ತು ಬಹಳ ಉದ್ದವಾಗಿರುತ್ತಿತ್ತು, ಆದರೆ ಈಗಿನದು ಚಿಕ್ಕ ಗಾತ್ರದ್ದಾಗಿದೆ. ಆದರೂ ಸಂಪ್ರದಾಯಸ್ತ ಹೆಂಗಸರು ಇಂದಿಗೂ ಕೂಡ ಉದ್ದವಾದ ನತ್ತನ್ನೇ ಧರಿಸುತ್ತಾರೆ. ಬೇರೆ ಬೇರೆ ಲೋಹದ ಹಾಗೂ ಅಲ್ಯುಮಿನಿಯಂದ ಬಳೆಗಳನ್ನು ಮುಂಗೈಯಲ್ಲಿ ಹಳೆಯ ತಲೆಮಾರಿನ ಹೆಂಗಸರು ಧರಿಸುತ್ತಾರೆ. ಇಂದಿನ ಯುವ ಜನಾಂಗದ ಹೆಣ್ಣು ಮಕ್ಕಳು, ಹಿಂದೂಕರಣದ ಪ್ರಭಾವಕ್ಕೊಳಗಾಗಿ ಗಾಜಿನ, ಪ್ಲಾಸ್ಟಿಕ್ ಬಳೆಗಳನ್ನು ಧರಿಸುತ್ತಾರೆ. ಕೈ ಬೆರಳಿಗೆ ಅಲ್ಯುಮಿನಿಯಂ ಅಥವಾ ಬಂಗಾರದ ಉಂಗುರ ತೊಡುತ್ತಾರೆ. ಕಾಲಿನಲ್ಲಿ ಚೈನ್, ಸುತ್ತುಂಗರಗಳನ್ನು ಧರಿಸುತ್ತಾರೆ. ಹಸಿರು ಬಣ್ಣದ ಬಳೆ ಇವರಲ್ಲಿಯೂ ಶುಭ ಸಂಕೇತವಾಗಿದೆ. ಕುಂಬ್ರಿ ಮರಾಠಿಗರ ಹೆಂಗಸರು ವಿವಾಹಿತ ಮತ್ತು ಅವಿವಾಹಿತ – ಇಬ್ಬರೂ ಮಂಗಳಸೂತ್ರ ಧರಿಸುತ್ತಾರೆ. ಈ ಸರವನ್ನು ಚಿಕ್ಕ ಕರಿಮಣಿಗಳಿಂದ ಮಾಡುತ್ತಾರೆ. ತಾಳಿಮಣಿಯೊಂದಿಗೆ ಹವಳ ಮತ್ತು ಬಂಗಾರದ ಗುಂಡು ಸೇರಿಸುತ್ತಾರೆ. ಅವರ ಉಪ ಭಾಷೆಯಲ್ಲಿ ಇದನ್ನು 'ಪಿರುಕ' ಎನ್ನುತ್ತಾರೆ. ಯುವ ಜನಾಂಗದ ಹೆಣ್ಣು ಮಕ್ಕಳು ಪುರಾತನ ಕಾಲದ ಮಂಗಳಸೂತ್ರವನ್ನು ಬಿಟ್ಟು ಬಿಟ್ಟಿದ್ದಾರೆ, ಈಗ ಎಲ್ಲರೂ ಬಳಸುವ ಮಂಗಳಸೂತ್ರವನ್ನು ಸ್ವೀಕರಿಸಿದ್ದಾರೆ.

**ಪುರುಷರ ಉಡುಗೆ**

ಕುಂಬ್ರಿ ಮರಾಠಿ ಗಂಡಸರು ಸೊಂಟ ವಸ್ತ್ರವನ್ನು ತೊಡುತ್ತಿದ್ದರು. ಇದು ಅವರ ಸೊಂಟ ಮತ್ತು ತೊಡೆಯನ್ನು ಆವರಿಸಿ, ಉಳಿದ ದೇಹವನ್ನು ಬೆತ್ತಲೆಯಾಗಿ ಬಿಡುತ್ತಿದ್ದರು.

ಕುಂಬ್ರಿ ಮರಾಠಿ ಗಂಡಸಿನ ಸಾಂಪ್ರದಾಯಿಕ ಉಡುಗೆ ಎಂದರೆ ಧೋತಿ, ಚಡ್ಡಿ ಆಗಿದ್ದು, ವಿವಾಹದ ಸಮಯದಲ್ಲಿ ಧೋತಿಯನ್ನು ಕಡ್ಡಾಯವಾಗಿ ಧರಿಸುವರು. ಇನ್ನುಳಿದ ಸಮಯದಲ್ಲಿ ಅರ್ಧ ಚಡ್ಡಿ ಮತ್ತು ಅಂಗಿಯನ್ನು ಉಪಯೋಗಿಸುವುದು ಸಾಮಾನ್ಯ ಆದರೆ ಅತೀ ವಯಸ್ಸಾದ ಯಜಮಾನರು ಲಂಗೋಟಿಯನ್ನು ಹಾಕಿಕೊಂಡು ಹೆಗಲ ಬಲಭಾಗದ ಮೇಲೆ ಟವಲನ್ನು ಹಾಕಿಕೊಂಡಿರುವುದು ಸಾಮಾನ್ಯ ದೃಷ್ಯವಾಗಿದೆ. ಇತ್ತೀಚೆಗೆ ಇವರ ಮೇಲೂ ಫ್ಯಾಶನ್ ಗಾಳಿ ಬೀಸುತ್ತಿದ್ದು ಯುವಕರು, ಯುವತಿಯರು ಪ್ಯಾಂಟು, ಶರ್ಟ್, ಟಿ-ಶರ್ಟ್, ಚೂಡಿದಾರ, ಉದ್ದನೆಯ ಲಂಗ, ಸ್ಕರ್ಟ್‌ಗಳನ್ನು ಧರಿಸಲು ಪ್ರಾರಂಭಿಸಿದ್ದಾರೆ.

ಕುಂಬ್ರಿ ಮರಾಠಿಗರ ಸಂಪ್ರದಾಯದಂತೆ ಗಂಡಸರು ತಲೆಯ ಹಿಂಬದಿಗೆ ನೀಳವಾದ ಕೂದಲು ಬೆಳೆಸುತ್ತಿದ್ದರು. ಅವನು ಯಾವುದೇ ಉಪ ವಿಭಾಗಕ್ಕೆ ಸೇರಿರಲಿ, ಪ್ರತಿಯೊಬ್ಬ ಕುಂಬ್ರಿ ಮರಾಠಿಗನೂ ಈ ಪದ್ಧತಿಯನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ಈ ನೀಳಕೇಶ ರಾಶಿ ಅವರ ಬುಡಕಟ್ಟಿನ ಸಂಕೇತವೆಂದು ತಿಳಿಯಲಾಗುತ್ತಿತ್ತು. ಈ ಕೇಶ ರಾಶಿಯನ್ನು ಕತ್ತರಿಸುವುದನ್ನು ಸಂಪೂರ್ಣವಾಗಿ ಪ್ರತಿಬಂಧಿಸಲಾಗಿತ್ತು. ಯಾರಾದರೂ ನಿಯಮ ಉಲ್ಲಂಘಿಸಿದರೆ, ಅವರು ಬುಡಕಟ್ಟಿನ ಪಂಚಾಯತಿಗೆ ದಂಡ ಕಟ್ಟಬೇಕಾಗುತ್ತಿತ್ತು. ಚರ್ಮದ ಚಪ್ಪಲಿಗಳನ್ನು ಧರಿಸುವುದು ನಿರ್ಬಂಧಿಸಲಾಗಿತ್ತು. ಸೋಪು ಮತ್ತಿತರ ಸುಗಂಧ ದ್ರವ್ಯಗಳ ಬಳಕೆ ನಿಷೇಧಿತವಾಗಿತ್ತು. ಮದುವೆಗಿಂತ ಮುಂಚೆ ಕನ್ನಡಿ ನೋಡುವಂತಿರಲಿಲ್ಲ, ಇಂದು ಕೆಲವು ಪ್ರದೇಶಗಳಲ್ಲಿ ವರನ ಉಡುಗೆಯಲ್ಲಿ ಗಮನಾರ್ಹವಾದಂತ ಬದಲಾವಣೆಗಳಾಗಿವೆ. ಇಂದು ಅವರು ಜಿಲ್ಲೆಯ ಬ್ರಾಹ್ಮಣೇತರರ ಮದುವೆ ಉಡುಗೆಯನ್ನು ಅಂಗೀಕರಿಸಿದ್ದಾರೆ.

ಈ ಹಿನ್ನಲೆಯಲ್ಲಿ ಅವರ ಅನುಮೋದನೆ ಅಥವಾ ಅನುಮೋದಿಸದೇ ಇರುವುದಕ್ಕೆ ಕಾರಣವಾದ ಅಂಶಗಳನ್ನು ವಿವೇಚಿಸುವುದು ಮಹತ್ವ ಪೂರ್ಣವಾಗಿದೆ. ಆಧುನಿಕ ಉಡುಗೆ ಮತ್ತು ಆಭರಣಗಳು ಬದಲಾಗುತ್ತಿರುವ ಸನ್ನಿವೇಶಗಳಿಗೆ ಹೊಂದಿಕೊಳ್ಳಲು ಸಹಾಯಕಾರಿಯಾಗಿವೆ. ಅಲ್ಲದೆ ಆಧುನಿಕ ಉಡುಗೆ ಅವರ ಸಾಮಾಜಿಕ ಅಂತಸ್ತನ್ನು ಎತ್ತರಿಸುವಲ್ಲಿ ಸಹಾಯಕಾರಿಯಾಗಿದೆ ಎಂದು ನಂಬುತ್ತಾರೆ. ಈ ಅಂಶವನ್ನು ಹೆಚ್ಚು ಮಾಹಿತಿದಾರರು ಗಮನಿಸಿದಾಗ ಕುಂಬ್ರಿ ಮರಾಠಿ ಸಮುದಾಯದಲ್ಲಿ ಆಧುನಿಕ ವೇಷ-ಭೂಷಣಗಳ ಬಗ್ಗೆ ಪ್ರಗತಿಪರ ಮನೋಭಾವ ಹೊಂದಿದ್ದಾರೆ.

**ಆಹಾರ ಪದ್ಧತಿಗಳು**

ಕುಂಬ್ರಿ ಮರಾಠಿಗರಲ್ಲಿ ವಿಶಿಷ್ಟ ಆಹಾರ ಪದ್ಧತಿಗಳಿವೆ. ಎಲ್ಲ ಕಡೆಗಳಲ್ಲಿ ಬುಡಕಟ್ಟುಗಳು ತಮ್ಮದೇ ಆದ ನಂಬಿಕೆ ಹಾಗೂ ಆಹಾರ ಪದ್ಧತಿಗಳನ್ನು ಹೊಂದಿವೆ. ಆದರೆ ಈ ಆಹಾರ

ಪದ್ಧತಿಗಳು ವಿಭಿನ್ನ ಬುಡಕಟ್ಟುಗಳಲ್ಲಿ, ಅಷ್ಟೇ ಏಕೆ, ಒಂದೇ ಬುಡಕಟ್ಟಿನ ವಿವಿಧ ವಿಭಾಗ, ಉಪವಿಭಾಗಗಳಲ್ಲಿ ಕೂಡ ಬೇರೆ ಬೇರೆಯಾಗಿರುತ್ತವೆ. ಬುಡಕಟ್ಟು ಹಾಗೂ ಬುಡಕಟ್ಟೇತರ ಜನರ ಜೀವನಶೈಲಿ ಹಾಗೂ ಆಹಾರ ಪದ್ಧತಿಗಳಲ್ಲಿ ಯಾವಾಗಲೂ ಮಹತ್ವದ ವ್ಯತ್ಯಾಸವಿದೆ. ನೈರ್ಮಲ್ಯ, ಆರೋಗ್ಯಶಾಸ್ತ್ರ, ಆಹಾರ, ಪೌಷ್ಟಿಕತೆ ಮುಂತಾದ ಸೂಕ್ತವಾದ ಆರೋಗ್ಯ ಪಾಲನೆಯ ವಿಧಾನಗಳ ಅರಿವು ಇಲ್ಲದೇ ಇರುವದು ಬುಡಕಟ್ಟು ಪ್ರದೇಶಗಳಲ್ಲಿ ಅಧಿಕ ಪ್ರಮಾಣದ ರೋಗ ಪ್ರಸಾರಣೆಯ ಮುಖ್ಯ ಕಾರಣಗಳಲ್ಲಿ ಒಂದಾಗಿದೆ.

ಕುಂಬ್ರಿ ಮರಾಠಿಗರ ಪ್ರಧಾನ ಆಹಾರ ಕುದಿಸಿದ ಅಕ್ಕಿ (ಅನ್ನ). ಇದನ್ನು 'ಗಂಜಿ' ಅಥವಾ 'ಪೇಜ' ಎಂದು ಕರೆಯುತ್ತಾರೆ ಅಥವಾ ತರಕಾರಿ ಜೊತೆ ಬೇಯಿಸಿ, ಸೋಸಿ ತೆಗೆದ ದ್ರವ, ಮೀನು, ತೆಂಗಿನ ಕಾಯಿ ಹಾಗೂ ಮಸಾಲೆ ಪದಾರ್ಥಗಳಾದ ಜೀರಿಗೆ, ಬೆಳ್ಳೊಳ್ಳಿ, ಉಳ್ಳಾಗಡ್ಡಿ, ಮೆಣಸಿನಕಾಯಿ, ಮುಂತಾದವುಗಳನ್ನು ಅಡಿಗೆಯಲ್ಲಿ ಬಳಸುತ್ತಾರೆ. ಸಾಮಾನ್ಯವಾಗಿ ಮಣ್ಣಿನ ಗಡಿಗೆ ಹಾಗೂ ಅಲ್ಯೂಮಿನಿಯಂ ಪಾತ್ರೆಗಳನ್ನು ಅಡಿಗೆಗೆ ಬಳಸುತ್ತಾರೆ. ನೀರನ್ನು ಸಾಮಾನ್ಯವಾಗಿ ಬಾವಿಯಿಂದ ಅಥವಾ ಸಮೀಪದ ಕೆರೆ ಅಥವಾ ನದಿಯಿಂದ ತರುತ್ತಾರೆ. ಮುಂಜಾನೆ ಹೊತ್ತು ಅನ್ನದೊಂದಿಗೆ ಸಾರು, ಚಟ್ನಿ ಅಥವಾ ಉಪ್ಪಿನಕಾಯಿಯೊಂದಿಗೆ ಸೇವಿಸುತ್ತಾರೆ. ಮಧ್ಯಾಹ್ನದ ಊಟದಲ್ಲಿ ಅನ್ನದೊಂದಿಗೆ ತರಕಾರಿ ಹಾಕಿದ ಸಾರು ಇರುತ್ತದೆ. ರಾತ್ರಿಯ ವೇಳೆ ಉಳಿದ ಆಹಾರದೊಂದಿಗೆ ಸಾರು, ಒಮ್ಮೊಮ್ಮೆ ಮೀನಿನ ಸಾರು ಸೇರಿಸಿಕೊಂಡು ಸೇವಿಸುತ್ತಾರೆ. ಈ ಆಹಾರ ಪದಾರ್ಥಗಳು ಅವರ ಆಹಾರದ ಅಗತ್ಯಗಳನ್ನು ಪೂರೈಸುತ್ತವೆ ಆದರೆ ಇವುಗಳನ್ನು ಆರೋಗ್ಯಪೂರ್ಣವಾಗಿ ತಯಾರಿಸುವುದಿಲ್ಲ. ಇವರು ವಿವಿಧ ತರಕಾರಿಗಳನ್ನು ಬೆಳೆಯುತ್ತಾರೆ ಹಾಗೂ ತಿನ್ನುತ್ತಾರೆ. ಉದಾ: ವಟಾಣಿ, ಬೆಂಡೆ, ಚಪ್ಪವರೆ, ಸಿಹಿಗುಂಬಳ, ಹಾಗಲ, ಸವತೆಕಾಯಿ, ಬದನೆ, ಬೂದುಗುಂಬಳ ಮತ್ತು ಕೆಲವು ಎಲೆ ತರಕಾರಿಗಳು ಹಾಗೂ ಕೆಲವು ಕಂದ ಮೂಲಗಳು, ಗೆಣಸು ಮರಗೆಣಸು ಮುಂತಾದವುಗಳು. 'ಕುಣಬಿಗಳಿಗೆ ಕೆಸುವಿನ ಸಾರೆಂದರೆ ಬಹಳ ಇಷ್ಟ. ಎಲೆ ಅಲ್ಲದೆ ಅದರ ಕಾಂಡವನ್ನು ಬಹಳ ಮುಖ್ಯವಾದ ತರಕಾರಿಯಾಗಿ ಬಳಸುತ್ತಾರೆ. ಒಟಾಣಿ ಮತ್ತು ಬಸಳೆಯ ಸಾರು ಬಹಳ ಸಾಮಾನ್ಯವಾದದ್ದು. ಅನೇಕ ಬಗೆಯ ಕಾಡು ಸಸ್ಯಗಳನ್ನು ಹಾಗೂ ಗಡ್ಡೆಗಳನ್ನು ಆಹಾರವಾಗಿ ಉಪಯೋಗಿಸುತ್ತಾರೆ. ಸುತ್ತಮುತ್ತಲಿನ ಕಾಡು ಪ್ರದೇಶಗಳಲ್ಲಿ ಇಂದಿಗೂ ಕೂಡ ಕುಣಬಿಗಳು ಋತುಮಾನಕ್ಕನುಗುಣವಾಗಿ ಸಿಗುವ ಹಣ್ಣು, ಹಸಿ ಗಡ್ಡೆಗಳು, ಹಲಸಿನ ಹಣ್ಣು ಮತ್ತು ಜೇನು ತುಪ್ಪಗಳ ಮೇಲೆ ಅವಲಂಬಿಸಿ ಬದಕುತ್ತಾರೆ.'[6] ಹೋಳಿ, ದೀಪಾವಳಿ, ನಾಗರಪಂಚಮಿ, ನವರಾತ್ರಿ, ಹಾಗೂ ಮುಂತಾದ ಹಬ್ಬ ಹರಿದಿನಗಳಂದು ಕುಂಬ್ರಿ ಮರಾಠಿಗರು ವಿವಿಧ ಬಗೆಯ ಖಾದ್ಯ ತಯಾರಿಸುತ್ತಾರೆ. ಸಾಮಾನ್ಯವಾಗಿ

ಈ ಖಾದ್ಯಗಳನ್ನು ಸ್ಥಳೀಯ ಹಿಂದೂ ಜನರು ಮಾಡುವ ರೀತಿಯಲ್ಲೇ ಮಾಡುತ್ತಾರೆ. ಗುಂಡಾ (ಅಕ್ಕಿ ಹಾಗೂ ಮೆಣಸು ಸೇರಿಸಿ ಮಾಡಿದ್ದು), ಪತ್ರೊಡೆ (ಬಸಳೆ ಹಾಗೂ ಅನ್ನ ಸೇರಿಸಿದ್ದು), ಶ್ಯಾವಿಗೆ ಮತ್ತು ಪಾಥೋಳಿ (ಅರಿಶಿಣದ ಎಲೆಯ ಮೇಲೆ ಅನ್ನ ಮತ್ತು ತೆಂಗು ಸೇರಿಸಿ ಮಾಡುವರು). ಇಂತಹ ನಿರ್ದಿಷ್ಟ ದೇಶೀ ಖಾದ್ಯ ತಯಾರಿಸುತ್ತಾರೆ. ಅಮಾವಾಸೆಯಂದು ಬಸಳೆಯ ಸಾರು ಕಡ್ಡಾಯವಾಗಿ ಆಗಲೇಬೇಕು. ಈ ದಿನದಂದು ಊಟವನ್ನು ಕಾಡುಗಿಡದ ಎಲೆಯಲ್ಲಿ ಉಣ್ಣುತ್ತಾರೆ. ಹೋಳಿ ಹಬ್ಬದಂದು ಇಡ್ಲಿ, ಪಾಯಸ ಹಾಗೂ ವ್ಯಂಜನ ಪದಾರ್ಥಗಳನ್ನು ಮಾಡುತ್ತಾರೆ. ಇಂತಹ ಸಂದರ್ಭಗಳಲ್ಲಿ ಮಾಡುವ ಖಾದ್ಯ ಪದಾರ್ಥಗಳು ಸ್ಥಳೀಯ ಹಿಂದೂ ಜನರಿಂದ ಅನುವಾದಂಥವು. ಹಬ್ಬ ಹರಿದಿನಗಳಂದು ಮಾಂಸಹಾರ ನಿಷಿದ್ಧ. ಹಬ್ಬವಾದ ನಂತರ ತೆಗೆದುಕೊಳ್ಳಬಹುದು. ಅನಂತಕೃಷ್ಣ ಎಲ್.ಕೆ. ಅಯ್ಯರರ ಪ್ರಕಾರ 'ಪ್ರಾಚೀನ ಬುಡಕಟ್ಟುಗಳು ಆಹಾರದ ಪಾವಿತ್ರತೆಗೆ ಅತಿಯಾದ ಮಹತ್ವ ಕೊಡುತ್ತವೆ. ಆಹಾರ ಪದಾರ್ಥಗಳ ಆಯ್ಕೆ, ಅವುಗಳ ತಯಾರಿಕಾ ವಿಧಾನ, ಅವುಗಳನ್ನು ಸೇವಿಸುವ ರೀತಿ – ಇವುಗಳ ಬಗ್ಗೆ ಕಟ್ಟುನಿಟ್ಟಾದ ನಿಯಮಗಳನ್ನು ಆಯಾ ಧರ್ಮಗಳಲ್ಲಿ ಹೇಳಲಾಗಿರುತ್ತದೆ; ಇವುಗಳನ್ನು ಅವರು ಈಗಲೂ ಪಾಲಿಸುತ್ತಾರೆ'.[2] ವಿಭಿನ್ನವಾದ ನಂಬಿಕೆ, ಮೂಢನಂಬಿಕೆ ಹಾಗೂ ಆಹಾರದ ಬಗ್ಗೆ ವಿಧಿ–ನಿಷೇಧಗಳು ಇವುಗಳ ಕಾರಣದಿಂದಾಗಿ ಆಹಾರ ಪದ್ಧತಿಯಲ್ಲಿ ಕೆಲವು ನಿರ್ದಿಷ್ಟವಾದ ಕಟ್ಟುಪಾಡುಗಳಿವೆ. ಕುಂಬ್ರಿ ಮರಾಠಿಗರಲ್ಲಿ ಕೆಲವೊಂದು ಆಹಾರ ಪದಾರ್ಥಗಳ ಬಗ್ಗೆ ಪ್ರತಿಬಂಧವಿದೆ. ಹಾಲು ಮತ್ತು ಹಾಲಿನ ಉತ್ಪನ್ನಗಳಾದ ತುಪ್ಪ, ಬೆಣ್ಣೆ, ಮಜ್ಜಿಗೆ ಇವುಗಳ ಬಳಕೆ ನಗಣ್ಯವಾಗಿದೆ. ಕುಂಬ್ರಿ ಮರಾಠಿಗರು ಮಾಂಸಾಹಾರಿಗಳಾದರೂ ಕೂಡ, ಸಾಕು ಪ್ರಾಣಿಗಳಾದ ಕುರಿ, ಆಡು, ಹಂದಿ, ಇವುಗಳ ಮಾಂಸಗಳನ್ನು ತಿನ್ನುವುದಿಲ್ಲವೆಂಬುದು ಆಶ್ಚರ್ಯಕಾರಕ ವಿಷಯವಾಗಿದೆ. ಪಕ್ಷಿಗಳನ್ನು ಸಾಕುವುದು ಕಟ್ಟುನಿಟ್ಟಾಗಿ ನಿಷೇಧಿಸಲ್ಪಟ್ಟಿದೆ. ಅವುಗಳೊಂದಿಗೆ ಸಂಪರ್ಕ ಅಥವಾ ಅವುಗಳ ಹಿಕ್ಕೆಯ ಸಂಪರ್ಕ ಮಾಲಿನ್ಯದಲ್ಲಿ ಪರ್ಯಾವಸಾನವಾಗುತ್ತದೆ. ಹಿಂದಿನ ಕಾಲದಲ್ಲಿ ಯಾರಾದರು ಇವುಗಳ ಸಂಪರ್ಕದಲ್ಲಿ ಬಂದರೆ, ತನ್ನನ್ನು ಶುದ್ಧೀಕರಿಸಿಕೊಳ್ಳುವುದಕ್ಕಾಗಿ ಅವರು ಆಕಳ ಶೆಗಣಿ ಮಿಶ್ರಿತ ನೀರು ಕುಡಿಯಬೇಕಾಗುತ್ತಿತ್ತು. ಈ ಶುದ್ಧೀಕರಣದ ಪ್ರಕ್ರಿಯೆ ಹಿಂದೂಕರಣದ ಪ್ರಭಾವ ತೋರಿಸುತ್ತದೆ.

ಕುಂಬ್ರಿ ಮರಾಠಿಗರು ಯಾವುದೇ ಸಾಕು ಪ್ರಾಣಿಯ ಮಾಂಸ ತಿನ್ನುವುದಿಲ್ಲ. ಆದರೆ ಅವರು ಕಾಡು ಪ್ರಾಣಿಗಳನ್ನು, ಕಾಡು ಪಕ್ಷಿಗಳನ್ನು ಬೇಟೆಯಾಡಿ ಕೊಂದು ತಿನ್ನುತ್ತಾರೆ, ತಾವೇ ಹಿಡಿದ ಮೀನನ್ನು ತಿನ್ನುತ್ತಾರೆ. ಕುಂಬ್ರಿ ಮರಾಠಿಗರ ದೃಷ್ಟಿಯಲ್ಲಿ ಆಹಾರಕ್ಕಾಗಿ ಸಾಕು ಪ್ರಾಣಿಗಳನ್ನು ಕೊಲ್ಲುವುದು ಉಚಿತವಲ್ಲ. ಆದರೆ ಬೇಟೆಯಾಡಿ ಕಾಡು ಪ್ರಾಣಿಗಳನ್ನು ಕೊಲ್ಲುವುದು

ಸಮರ್ಥನೀಯ, ಏಕೆಂದರೆ ಅದರಲ್ಲಿ ಶ್ರಮ ಮತ್ತು ಹೋರಾಟ ಅಡಕವಾಗಿದೆ. ಆಹಾರವೆಂದು ಬಳಕೆಯಾದ ನಿರ್ಧಿಷ್ಟ ಕಾಡು ಪ್ರಾಣಿಗಳು ಕುಂಬ್ರಿ ಮರಾಠಿಗರಿಗೆ ಪವಿತ್ರವಾಗುತ್ತದೆ. ಅವುಗಳ ಹೆಸರನ್ನು ಕುಲದ ಕುಲದೇವತೆಯಾಗಿ ಉಪಯೋಗಿಸುತ್ತಾರೆ. ಇಂದಿಗೂ ಕೂಡ ಮಾರುಕಟ್ಟೆಯಲ್ಲಿ ಖರೀದಿಸಿದ ಮೀನನ್ನು ಮನೆಯ ಹೊರಗಡೆ ಬೇಯಿಸಿದರೆ, ಬೇಟೆ ಆಡಿದ ಕಾಡು ಪ್ರಾಣಿಗಳ ಮಾಂಸವನ್ನು ಮನೆಯ ಒಳಗೆ ಬೇಯಿಸುತ್ತಾರೆ. ಹಾಗೆಯೇ ಕುಲದೇವರೆಂದು ಪರಿಗಣಿತವಾದ ಕೆಲವು ಪ್ರಾಣಿಗಳ ಮಾಂಸಾಹಾರ ಕುಣಬಿಗಳಿಗೆ ನಿಷಿದ್ಧ. ಉದಾಹರಣೆಗೆ: ನವಿಲು, ಗಿಣಿ, ಗೋವು ಮುಂತಾದವು. ಗೋ ಮಾಂಸ ಭಕ್ಷಣೆ ಖಡಾಖಂಡಿತವಾಗಿ ನಿಷೇಧಿಸಲ್ಪಟ್ಟಿದ್ದು, ಹಿಂದೂ ಧರ್ಮದ ಬಗ್ಗೆ ಅವರಿಗಿರುವ ಶ್ರದ್ಧೆ ತೋರಿಸುತ್ತದೆ.

'ಆಹಾರ ಮತ್ತು ಬಟ್ಟೆ ಅತ್ಯವಶ್ಯಕವಾದ ಬಳಕೆಯಾಗುವ ಸರಕುಗಳು. ಬಹುತೇಕ ಆದಿಮ ಸಮಾಜಗಳಲ್ಲಿ ಇವುಗಳು ಹಂಚಿಕೆಯಾಗುವ ಆರ್ಥಿಕ ಪ್ರಕ್ರಿಯೆಗಳು ಬಹಳ ಸರಳವಾಗಿರುತ್ತವೆ. ಇಲ್ಲಿರುವ ನಿಜವಾದ ಸಮಸ್ಯೆ ಆರ್ಥಿಕ ವಲಯದಿಂದ ಹೊರಗೆ ಇರುತ್ತದೆ. ಕೇವಲ ಪ್ರಾಣ ಧಾರಣೆಯ ಮಟ್ಟದಲ್ಲಿರುವ ಜನರು ಕೂಡ ತಮಗೆ ಲಭ್ಯವಿರುವ ಆಹಾರ ಪದಾರ್ಥಗಳನ್ನು ಬಳಸುವುದಿಲ್ಲವೆಂಬುದನ್ನು ನಾವು ನೋಡಿದ್ದೇವೆ. ಇದಕ್ಕೆ ಕಾರಣವೆಂದರೆ ಸೇವನೆಗೆ ಯೋಗ್ಯವಾದ ಆಹಾರ ಯಾವುದೆಂಬುದರ ಬಗ್ಗೆ ಪ್ರಸ್ತಾಪಿತವಾದ ಕಲ್ಪನೆಗಳು ಅಥವಾ ಧಾರ್ಮಿಕ ಇಲ್ಲವೆ ಸಾಮಾಜಿಕ ಸ್ವರೂಪದ ವಿಶೇಷ ನಿಷೇಧಗಳು. ಇದೇ ತರದ ಆಯ್ಕೆ ಉಡುಪು ಹಾಗೂ ಬಟ್ಟೆಯ ವಿಚಾರದಲ್ಲಿಯೂ ಇದೆ. ಇಲ್ಲಿ ಉತ್ಪಾದಕ ಸಾಮರ್ಥ್ಯವು ವರ್ಗಗಳಲ್ಲಿಯ ಅಂತರವನ್ನು ಸೂಚಿಸುವಂತಿರುತ್ತದೆ, ಹಾಗೂ ಬಟ್ಟೆ/ಡ್ರೆಸ್ ಸಾಮಾಜಿಕ ಅಂತಸ್ಥಿನ ಕುರುಹು ಆಗುತ್ತದೆ.

ಸಾಮಾನ್ಯವಾಗಿ ಕುಂಬ್ರಿ ಮರಾಠಿಗರು ಆಹಾರಕ್ಕಾಗಿ ಈ ಕೆಳಗಿನ ಪ್ರಾಣಿಗಳನ್ನು ಬೇಟೆಯಾಡುತ್ತಾರೆ. ಕಾಡು ಹಂದಿ, ಮುಳ್ಳು ಹಂದಿ, ಮೊಲ, ಜಿಂಕೆ, ಮೊಸಳೆ ಸೂಚಕ ಹಲ್ಲಿ, ಅಳಿಲು, ಕಾಡು ಹಕ್ಕಿ ಮುಂತಾದವು. ಕೆಲವೊಂದು ಪಕ್ಷಿಗಳನ್ನು ಬಲೆ ಹಾಕಿ ಹಿಡಿದು ಆಹಾರಕ್ಕಾಗಿ ಬಳಸುತ್ತಾರೆ. ಅವರಿಗೆ ಕಾಡು ಹಂದಿ, ಮುಳ್ಳು ಹಂದಿ ಹಾಗೂ ಮೊಲದ ಮಾಂಸ ಬಹಳ ಇಷ್ಟ. ಆದರೆ ಬೇಟೆಯ ಹೊತ್ತಿನಲ್ಲಿ ಅಕಸ್ಮಾತಾಗಿ ನವಿಲು ಕೊಲ್ಲಲ್ಪಟ್ಟರೆ ಅದನ್ನು ತಿನ್ನುತ್ತಾರೆ. ಹಿಂದಿನ ಕಾಲದಲ್ಲಿ ಕುಂಬ್ರಿ ಮರಾಠಿಗರು ಗಂಜಿ, ರಾಗಿ, ಕಾಡು ಹಣ್ಣು, ಕಾಡು ಗಡ್ಡೆ, ಜೇನುತುಪ್ಪ, ಕಾಡು ಪಕ್ಷಿಗಳ ಮೇಲೆ ಜೀವಿಸಿದ್ದರು. ರಾಗಿ ಶಕ್ತಿದಾಯಕ ಆಹಾರವಾಗಿತ್ತು, ಏಕೆಂದರೆ ಅವರು ಬೇಸಾಯ, ಕೂಲಿ, ಬಾವಿ ತೋಡುವುದು ಹಾಗೂ ಇನ್ನಿತರ ಕೆಲಸಗಳಲ್ಲಿ ತೊಡಗಿ ಶ್ರಮಜೀವಿಗಳಾಗಿದ್ದರು. ತಿನ್ನುವ ಆಹಾರ ಮತ್ತು ಮಾಡುವ

ಕೆಲಸ ಇವೆರಡರ ನಡುವೆ ನಿಕಟ ಸಂಬಂಧವಿದೆ ಎಂಬುದು ಇದರಿಂದ ಗೊತ್ತಾಗುತ್ತದೆ. ಸದ್ಯಕ್ಕೆ ಕುಂಬ್ರಿ ಮರಾಠಿಗರಲ್ಲಿ ಚಹಾ ಅತ್ಯಂತ ಮುಖ್ಯ ಪೇಯ. ಇತ್ತೀಚೆಗೆ ಎಲೆ-ಅಡಿಕೆ ಜಗಿಯುವದು ಅವರಲ್ಲಿ ಜನಪ್ರಿಯವಾಗಿದೆ. ಹೆಂಗಸರು, ಗಂಡಸರು ಇಬ್ಬರೂ ತಂಬಾಕು ಸೇರಿಸಿ ಜಗಿಯುತ್ತಾರೆ. ಕೆಲವರು ಸುವಾಸನೆಗಾಗಿ ಕಾಚನ್ನು ಉಪಯೋಗಿಸುತ್ತಾರೆ, ಬೀಡಿಯು ಜನಪ್ರಿಯವಾಗಿದೆ. ಸ್ಥಿರ ಬೇಸಾಯ, ಕಾಡು ಸವರಿಕೆ, ಕಾಡು ಸಂರಕ್ಷಣೆ, ಪಟ್ಟಣಗಳಿಗೆ ವಲಸೆ ಈ ಕಾರಣಗಳಿಂದಾಗಿ ಕುಣಬಿಗಳು ಸೇವಿಸುತ್ತಿರುವ ಆಹಾರ ಪ್ರಕಾರಗಳಲ್ಲಿ ಅನೇಕ ಬದಲಾವಣೆಗಳಾಗುತ್ತಿರುವದು ಮೇಲಿನ ಚರ್ಚೆಯಿಂದ ವಿದಿತವಾಗಿತ್ತದೆ. ಇಂದು ಕುಂಬ್ರಿ ಮರಾಠಿಗರಿಗೆ ಅಕ್ಕಿ ಪ್ರಧಾನ ಆಹಾರವಾಗಿದೆ. ಕೆಲವು ನಿರ್ದಿಷ್ಟ ಪ್ರದೇಶಗಳಲ್ಲಿ ಪಕ್ಷಿಗಳು ಸೇರಿದಂತೆ ಸಾಕು ಪ್ರಾಣಿಗಳ ಮಾಂಸ ಸೇವನೆಯೂ ಕಂಡುಬಂದಿದೆ. ಮೊದಲಿಗೆ ಇದು ನಿಷಿದ್ಧವಾಗಿತ್ತು.

ಅರಣ್ಯ ನಾಶ ಹಾಗೂ ತತ್ಪರಿಣಾಮವಾಗಿ ಬೇಟೆಯ ಚಟುವಟಿಕೆಗಳು ಕ್ಷೀಣಿಸಿದ್ದರಿಂದ ಅವರು ತಮ್ಮ ಆಹಾರ ಪದ್ಧತಿಯಲ್ಲಿ ಬದಲಾವಣೆ ತರುವದು ಅನಿವಾರ್ಯವಾಗಿತ್ತು. ಕಾಡು ಪ್ರಾಣಿಗಳು ದೊರೆಯುವದು ಕಠಿಣವಾದದ್ದರಿಂದ ಸಾಕು ಪ್ರಾಣಿಗಳ ಮಾಂಸ ಸೇವನೆ ಅನಿಫಾರ್ಯವಾಯಿತು. ಕೆಲವು ಕುಟುಂಬಗಳಲ್ಲಿ ಪಕ್ಷಿಪಾಲನೆಯೂ ಕಂಡುಬಂದಿದೆ. ಗುರಿಕಾರ, ರಾಯಬಾರಿ ಮತ್ತು ಗದ್ಯಾ ಇವರು ಸಹ ಈಗ ಮಾಂಸಾಹಾರ ಸೇವಿಸುತ್ತಾರೆ; ಆದರೆ ಈ ಹಿಂದೆ ಇದು ನಿಷಿದ್ಧವಾಗಿತ್ತು. ಸ್ಥಿರ ಬೇಸಾಯ ಮತ್ತು ನೆರೆಹೊರೆಯ ಸಮುದಾಯಗಳ ಪ್ರಭಾವದಿಂದಾಗಿ ಕುಂಬ್ರಿ ಮರಾಠಿಗರು ಕೆಲವೊಂದು ಬಾಳಿಕೆ ಬರುವಂಥ ಆಹಾರ ಪದಾರ್ಥಗಳನ್ನು ತಯಾರಿಸುತ್ತಿದ್ದಾರೆ. ಉದಾ: ಪಾಪಡ, ಉಪ್ಪಿನಕಾಯಿ, ಹಣ್ಣಿನ ಜ್ಯಾಮ್ ಇತ್ಯಾದಿ. ಇವುಗಳನ್ನು ಡಬ್ಬಿಗಳಲ್ಲಿ ಜೋಪಾನವಾಗಿ ಸಂಗ್ರಹಿಸಿ, ಮಳೆಗಾಲದಲ್ಲಿ ಬಳಸುತ್ತಾರೆ. ಈ ಕಾಲದಲ್ಲಿ ಶ್ರಮದ ಕೆಲಸವನ್ನೇ ಅವಲಂಬಿಸಿದಂಥ ಕೆಲವರು ಕೆಲಸವಿಲ್ಲದೇ ಖಾಲಿ ಕೂಡಬೇಕಾಗುತ್ತದೆ ಮತ್ತು ಪ್ರಧಾನ ಆಹಾರ ಸಾಕಷ್ಟು ಪ್ರಮಾಣದಲ್ಲಿ ಸಿಗುವದಿಲ್ಲ.

ಹಿಂದಿನ ಕಾಲದಲ್ಲಿ ಅವರು ತಮ್ಮ ಆಹಾರಕ್ಕಾಗಿ ಕಾಡನ್ನೇ ಅವಲಂಬಿಸಿದ್ದರಿಂದ ಅವರ ಆಹಾರ ಕ್ರಮದಲ್ಲಿ ಕಾಳು, ತರಕಾರಿಗಳಿಗೆ ಸ್ಥಾನವೇ ಇರಲಿಲ್ಲ. ಆದರೆ ಅವರು ಇಂದು ಧಾನ್ಯಗಳನ್ನಲ್ಲದೆ ತರಕಾರಿಗಳನ್ನು ತಿನ್ನುತ್ತಾರೆ. ಆದರೆ ಅವರ ಆಹಾರ ಸೇವನೆಯ ಕ್ರಮ ಆರೋಗ್ಯದಾಯವಾಗಿಲ್ಲ. ಬಹುಸಂಖ್ಯಾತ ಜನರಿಗೆ ಸತ್ವಭರಿತ ಆಹಾರದ, ಪೌಷ್ಠಿಕ ಆಹಾರದ ಕಲ್ಪನೆಯೇ ಇಲ್ಲ. ಅರಣ್ಯದೊಂದಿಗೆ ಸಂಪರ್ಕ ಕಡಿಮೆಯಾಗುತ್ತಲಿರುವುದರಿಂದ, ಅರಣ್ಯದಿಂದ ದೊರಕುವ ಪೌಷ್ಠಿಕ ಆಹಾರ ಪದಾರ್ಥಗಳು ಕ್ಷೀಣವಾಗುತ್ತಲಿವೆ.

## 5. ಕುಂಬ್ರಿ ಮರಾಠಿಗರ ಪಾರಂಪರಿಕ ವೈದ್ಯ ಪದ್ಧತಿ ಮತ್ತು ವಿಧಿಗಳು

ಪ್ರತಿಯೊಂದು ಆದಿಮ ಸಮಾಜಗಳು ತಮ್ಮದೇ ಆದ ಪಾರಂಪರಿಕ ವೈದ್ಯ ಪದ್ಧತಿಗಳನ್ನು ರೂಢಿಸಿಕೊಂಡು ಬಂದಿರುತ್ತವೆ. ಇದನ್ನು ನಾಟಿ ಔಷಧ ಪದ್ಧತಿ ಎಂತಲೂ ಕರೆಯಲಾಗುತ್ತದೆ. ನಾಟಿ ಚಿಕಿತ್ಸೆಯನ್ನು ಮಾಡುವ ಕ್ರಮವು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತದೆ. ಆಯಾ ಸಮುದಾಯದ ನಂಬಿಕೆ, ವಿಶ್ವಾಸ, ಅನುಭವದ ಆಧಾರದ ಮೇಲೆ ನಾಟಿವೈದ್ಯವು ನಿಂತಿರುತ್ತದೆ. ಅರಣ್ಯವಾಸಿಗಳಾದ ಕುಂಬ್ರಿ ಮರಾಠಿಗರು ತಮ್ಮ ಪರಿಸರದಲ್ಲಿ ದೊರೆಯುವ ಸ್ಥಳೀಯವಾದ ಗಿಡಮೂಲಿಕೆಗಳನ್ನೇ ಔಷಧಿಯಾಗಿ ಬಳಕೆ ಮಾಡುತ್ತಾರೆ. ಇಂದಿಗೂ ಸಣ್ಣಪುಟ್ಟ ಖಾಯಿಲೆಗಳಿಗೆಲ್ಲ ಆಸ್ಪತ್ರೆಗೆ ತೆರಳದೆ ತಮ್ಮಲ್ಲಿಯೇ ದೊರೆಯುವ ಗಿಡಮೂಲಿಕೆಗಳನ್ನು ರೋಗ ಚಿಕಿತ್ಸೆಗೆ ಕುಂಬ್ರಿ ಮರಾಠಿಗರು ಬಳಸುತ್ತಾರೆ. ಈ ಔಷಧಿ ಬಲ್ಲವನು ಸಾಮಾನ್ಯವಾಗಿ ಕೊಪ್ಪದ ಹಿರಿಯನಾಗಿದ್ದು, ಆತ ಶಮನ್ ರೀತಿಯಲ್ಲಿ ಕಾಯಿಲೆಗಳಿಗೆ ತಾಂತ್ರಿಕ ವಿಧಾನ ಬಳಸಿ ಔಷಧೋಪಚಾರ ಮಾಡುತ್ತಾನೆ. ಉತ್ತರ ಕನ್ನಡದ ಪರಿಸರವು ಒಂದು ಕಡೆ ಕಾಡನ್ನು ಮತ್ತೊಂದು ಕಡೆ ಸಮುದ್ರದ ಕರಾವಳಿ ತೀರವನ್ನು ಹೊಂದಿರುವಂಥಾದ್ದು. ಇಲ್ಲಿ ಬಿಸಿಲಿರದಿದ್ದರೂ ಸಮುದ್ರದ ಮೇಲೆ ಗಾಳಿ ಹಾದುಬರುವುದರಿಂದ ವಿಪರೀತ ಸೆಕೆಯಾಗುತ್ತದೆ. ಜೊತೆಗೆ ಕಾಡಿರುವುದರಿಂದ ಸಂಜೆಯಾಗುತ್ತಲೇ ಚಳಿಯ ಅನುಭವವೂ ಆಗುತ್ತದೆ. ಕುಂಬ್ರಿ ಮರಾಠಿಗರು ತಮ್ಮನ್ನು ಸಹಜವಾಗಿ ಕಾಡುವ ಶೀತಜ್ವರಕ್ಕೆ ತುಳಸಿ ಮತ್ತು ಅಸಗುಂದಿ ಬೇರಿನ ಕಷಾಯವನ್ನು ಹಾಳು ಹೊಟ್ಟೆಗೆ ಕೊಡುತ್ತಾರೆ. ರಕ್ತ ಕೆಟ್ಟು ಮೈಮೇಲೆ ಕುರ ಎದ್ದರೆ ಕುರಕ್ಕೆ ಈಸು(ಈಶ್ವರ) ಬಳ್ಳಿಯ ಎಲೆಯನ್ನು ಕಾಯಿಸಿ ಹಾಕುತ್ತಾರೆ. ಈ ರೀತಿ ಎಲೆ ಹಾಕುವುದರಿಂದ ಕುರವು ಪಕ್ವಾಗಿ ಹೊಡೆದು ಗಾಯ ಗುಣವಾಗುತ್ತದೆ. ರಕ್ತ ಕಡಿಮೆಯಾಗಿ ಮೈ ಬಿಳಿಚಿಕೊಂಡಿದ್ದರೆ, ಬಿಳಿ ಕಾಮಿಣಿಗೆ ಈಸು ಬಳ್ಳಿಯ ಎಲೆಯ ರಸ, ಕಾಳು ಮೆಣಸು, ಬೆಳ್ಳೊಳ್ಳಿಯ ಫಲಕನ್ನು ಅರೆದು ಅದರ ರಸವನ್ನು ಐದು ದಿನದವರೆಗೆ ಬೆಳಿಗ್ಗೆ, ಸಾಯಂಕಾಲ ಕುಡಿಯಲು ಕೊಡುತ್ತಾರೆ. ಮಕ್ಕಳು ಮಲಗಿದಾಗ ಹಾಸಿಗೆಯಲ್ಲಿ ಮೂತ್ರ ವಿಸರ್ಜನೆ ಮಾಡಿಕೊಂಡರೆ ಮುಕ್ಕರಿಕೆ ಬೇರನ್ನು ನಡುವಿಗೆ ಕಟ್ಟುತ್ತಾರೆ. ವೀರ್ಯವರ್ಧನೆಗೆ ಬಿಳಿ ದಾಸವಾಳ ಹೂವನ್ನು ನೆರಳಿನಲ್ಲಿ ಒಣಗಿಸಿ ಪುಡಿಮಾಡಿ ಲಿಂಬೆ ರಸ, ಜೇನು ತುಪ್ಪದ ಮಿಶ್ರಣದೊಂದಿಗೆ ಬೆರೆಸಿ ಕೊಡಲಾಗುತ್ತದೆ. ಹೆಣ್ಣುಮಕ್ಕಳಿಗೆ ಹೆಚ್ಚು ಮುಟ್ಟು ಹರಿಯುತ್ತಿದ್ದರೆ ಕವಲೆ ಮರದ ಸೊಪ್ಪಿನ ರಸವನ್ನು ನಿಂಬೆಯ ರಸದೊಂದಿಗೆ ಬೆರೆಸಿ ಕೊಡಲಾಗುತ್ತದೆ. ವಿಷ ಜಂತುಗಳ ಕಡಿತಕ್ಕೆ ಈಶ್ವರ ಬೇರನ್ನು ನಿಂಬೆಯ ಹಣ್ಣಿನ ರಸದಲ್ಲಿ ತೇಯ್ದು ಕಡಿದ ಜಾಗಕ್ಕೆ ಲೇಪನ ಮಾಡಲಾಗುತ್ತದೆ ಮತ್ತು ಅದೇ ಗಂಧವನ್ನು ನಾಲಿಗೆಗೆ ನೆಕ್ಕಿಸುತ್ತಾರೆ. ಕೆಲವರು ಕಡಿದ ಜಾಗದಲ್ಲಿ ಜಮ್ಮನ ಸೊಪ್ಪನ್ನು ಜಜ್ಜಿ

ಅದರ ರಸ ಹಾಕುತ್ತಾರೆ. ಬಾಣಂತಿಯರಿಗೆ ಜೀರಿಗೆ ಕಷಾಯವನ್ನು ಹಾಲು ಹೊಟ್ಟೆಗೆ ನೀಡುತ್ತಾರೆ. ಹಾಗೆಯೇ ಕಾಸ್ಗನಮರಕ್ಕೆ ಸುತ್ತಿದ ಬಳ್ಳಿಯ ಎಲೆ, ನಂಜಟ್ಟೆ ಬೇರು, ಮೆಣಸಿನ ಕಾಳು, ಐದು ಪಲಕು ಬೆಳ್ಳೊಳ್ಳಿಗಳನ್ನು ಒಂದು ದೊಡ್ಡ ಲೋಟದ ನೀರಿಗೆ ಸೇರಿಸಿ ಅದರ ಅಳತೆಯ ಅರ್ಧ ಭಾಗಕ್ಕೆ ಬರುವವರೆಗೆ ಕುದಿಸುತ್ತಾರೆ. ಈ ರೀತಿ ಕುದಿಸಿದ ನೀರನ್ನು ಸೋಸಿ ಬಾಣಂತಿಯರಿಗೆ ಬೆಳಗ್ಗೆ ಸಂಜೆ ಕುಡಿಯಲು ಕೊಡುತ್ತಾರೆ. ಅಕ್ಕಿ ತೊಳೆದ ನೀರಿನಲ್ಲಿ ಕವಡೇಕಾಯಿಯ ಎಲೆಯ ರಸವನ್ನು ಬೆರೆಸಿ ಕೊಟ್ಟರೆ ಹಳೆಯ ರೋಗಗಳು ಹೊರಟುಹೋಗಿ ವ್ಯಕ್ತಿ ಗುಣವಾಗುತ್ತಾನೆಂದು ಕುಂಬ್ರಿ ಮರಾಠಿಗರು ಹೇಳುತ್ತಾರೆ.

ವಾತ ತೊಂದರೆಯಿಂದ ಬಳಲುತ್ತಿದ್ದರೆ ಅದರ ನಿವಾರಣೆಯ ಸಲುವಾಗಿ ಕಸರಕನ ಬಳ್ಳಿಯ ಎಲೆ, ಕಾಂಡ, ಬೇರು ಎಲ್ಲವನ್ನೂ ಒರಳಿನಲ್ಲಿ ಹಾಕಿ ರುಬ್ಬಿ ಅದರ ರಸವನ್ನು ಸೋಸಿ ಕುಡಿಯಲು ಕೊಡಲಾಗುತ್ತದೆ. ಈ ರೀತಿ ಮಾಡುವುದರಿಂದ ವಾತ ನಿವಾರಣೆಯಾಗುತ್ತದಂತೆ. ಚೇಳು ಅಥವಾ ಜರಿ ಕಡಿದರೆ ಕಡಿದ ಸ್ಥಳದಲ್ಲಿ ಔಡಲಕಾಯಿಯ ತೊಗಟೆಯನ್ನು ತೇದು ಹಚ್ಚುತ್ತಾರೆ. ಮಕ್ಕಳಿಗೆ ಕೆಮ್ಮು ಜಾಸ್ತಿ ಆದರೆ ಬೆಳದ ನುಗ್ಗೆಕಾಯಿಯನ್ನು ಒಣಗಿಸಿ ಅದರ ಬೀಜವನ್ನು ಜೇನುತುಪ್ಪದಲ್ಲಿ ತೇದು ತಿನ್ನಿಸಿದರೆ ಕಡಮೆಯಾಗುತ್ತದೆ. ಅತಿಸಾರಕ್ಕೆ ನಿಂಬೆಹಣ್ಣನ್ನು ನೀರೊಟ್ಟೆ ಬೇರಿನೊಂದಿಗೆ ತೇದು ತೆಗೆದುಕೊಂಡರೆ ಪರಿಹಾರವಾಗುತ್ತದೆ ಎಂದು ಕುಂಬ್ರಿ ಮರಾಠಿಗರು ನಂಬುತ್ತಾರೆ.

**ಪಾರಂಪರಿಕ ತಂತ್ರ ವೈದ್ಯ ಪದ್ಧತಿ**

ಈ ಮೊದಲೇ ಹೇಳಿದಂತೆ ಕುಂಬ್ರಿ ಮರಾಠಿಗರ ಆಯಾ ಕೊಪ್ಪದ ಹಿರಿಯ ಇಲ್ಲವೆ ಬುದುವಂತ ಔಷಧಿ ಸಸ್ಯಗಳ ಕುರಿತು ಅಪಾರ ತಿಳುವಳಿಯನ್ನು ಹೊಂದಿದವನಾಗಿರುತ್ತಾನೆ. ಆತ ಔಷಧಿ ಮಾಡುವ ಕ್ರಮ ಒಂದು ಅಲೌಖಿಕ ಕ್ರಿಯೆಯಂತೆ ನಡೆಯುತ್ತದೆ. ಲೌಕಿಕ ಜಗತ್ತನ್ನು ನಂಬಿದಷ್ಟೇ ಸಹಜವಾಗಿ ಅಲೌಕಿಕ ಜಗತ್ತನ್ನೂ ಕುಂಬ್ರಿ ಮರಾಠಿಗರು ನಂಬುತ್ತಾರೆ. ತಮಗೆ ರೋಗರುಜಿನಗಳು ಬಂದರೆ ಅದಕ್ಕೆ ಅಲೌಕಿಕ ಜಗತ್ತಿನ ಶಕ್ತಿಗಳೇ ಕಾರಣವೆಂದು ನಂಬುತ್ತಾರೆ. ದೈಹಿಕ ರೋಗಗಳಿಗೆ ತಮ್ಮೊಳಗೇ ಚಾಲ್ತಿಯಲ್ಲಿರುವ ನಾಟಿ ವೈದ್ಯವನ್ನು ಅವಲಂಬಿಸಿದಂತೆ ಮಾಂತ್ರಿಕ ವೈದ್ಯವನ್ನೂ ನಂಬುತ್ತಾರೆ. ಸಾಮಾನ್ಯವಾಗಿ ಪ್ರತಿ ಕೊಪ್ಪದಲ್ಲಿರುವ ಹಿರೀಕರು ನಾಟಿ ವೈದ್ಯ ಮಾಡಿದಂತೆ ಮಾಂತ್ರಿಕ ವೈದ್ಯವನ್ನು ಮಾಡುವವನಾಗಿರುತ್ತಾನೆ. ಹೀಗಾಗಿಯೇ ಗಾಡಿಗನಿಗೆ ಪ್ರತಿ ಕೊಪ್ಪದ ಕುಂಬ್ರಿ ಮರಾಠಿಗಳು ಇನ್ನಿಲ್ಲದಷ್ಟು ಗೌರವವನ್ನು ಕೊಡುತ್ತಾರೆ. ಕುಂಬ್ರಿ ಮರಾಠಿಗರಲ್ಲಿ ಸತ್ತವರು ದೆವ್ವವಾಗಿ ಕಾಡುತ್ತಾರೆಂಬ ನಂಬಿಕೆ ಇದೆ. ದೆವ್ವ ಭೂತಗಳ ಆಹ್ವಾನಿಕೆಯು ಮಾನಸಿಕವಾದ ಖಾಯಿಲೆಯ ರೂಪವೆಂಬುದನ್ನು ಕುಂಬ್ರಿ ಮರಾಠಿಗರು

ಒಪ್ಪುವುದಿಲ್ಲ. ಏಕೆಂದರೆ ಸತ್ತ ನಂತರವೂ ಆತ್ಮವು ನಿರಂತರವಾಗಿ ಓಡಾಡುತ್ತಲೇ ಇರುತ್ತದೆಂಬ ನಂಬಿಕೆ ಅವರದು. ನಾಟಿ ವೈದ್ಯಕ್ಕೆ ರೋಗ ಗುಣವಾಗದಿದ್ದಾಗ ಮಾಂತ್ರಿಕ ವೈದ್ಯಕ್ಕೆ ಮೊರೆಹೋಗಲಾಗುತ್ತದೆ. ಮಾಂತ್ರಿಕ ವೈದ್ಯದಲ್ಲಿ ಗಾಡಿಗನು ರೋಗ ಯಾವ ಕಾರಣಕ್ಕಾಗಿ ಬಂದಿದೆ ಅದರ ಮೂಲ ಯಾವುದು ಎಂಬುದನ್ನು ಅರಿಯಲು ಕಟ್ಟೆಗೆಯಲ್ಲಿ ತಯಾರಿಸಿದ ಮಣೆಯ ಮೇಲೆ ಅಕ್ಕಿ ಕಾಳನ್ನು ಹಾಕಿ ಸರಿ ಬೆಸ ಲೆಕ್ಕ ಮಾಡಿ ನೋಡಿ ಇಂತಹ ಕಾರಣಕ್ಕಾಗಿ ರೋಗ ಬಂದಿದೆ. ಅದರ ಮೂಲ ಯಾವುದೋ ಒಂದು ನಿರ್ಧಿಷ್ಟವಾದ ಆತ್ಮ ಎಂದು ನಿರ್ಧರಿಸುತ್ತಾನೆ. ವೀಳ್ಯೆದೆಲೆ, ಹಸಿ ತೆಂಗಿನ ಗರಿ, ಬಾಳೆದಿಂಡುಗಳನ್ನು ಚಾಕುವಿನಿಂದ ಕತ್ತರಿಸುತ್ತಾ ಬಂದವರ ಜೊತೆ ಕೇಳಿಕೆಗಳು ನಡೆಯುತ್ತವೆ. ಒಳ್ಳೆಯ ಆತ್ಮವಾಗಿದ್ದರೆ ಅದನ್ನು ನಿರ್ಬಂಧಿಸಿ ಅಲ್ಲಿಯೇ ತುಳಸಿಕಟ್ಟೆಯಲ್ಲಿ ಕೂಡಿ ಹಾಕಲಾಗುತ್ತದೆ. ಅಕಸ್ಮಾತ್ ಅಪಾಯಕಾರಿ ದುಷ್ಟ ಆತ್ಮವು ದೆವ್ವವಾಗಿ ಕಾಡುತ್ತಿದ್ದಲ್ಲಿ ಅದನ್ನು ಕೊಪ್ಪದ ಜಟ್ಟಿಗನ ಗುತ್ತಿನ ಮರದಲ್ಲಿ ಬಂಧಿಸಿಡಲಾಗುತ್ತದೆ. ದೆವ್ವ ಬಿಟ್ಟಿದೆಯಾ ಎಂದು ನೋಡಲು ಗಾಡಿಗ ಅವೇಶದಿಂದ ಕುಣಿಯುತ್ತಾ ತೆಂಗಿನ ಕಾಯನ್ನು ಮೇಲೆಕ್ಕೆ ತೂರುತ್ತಾನೆ. ಹೋಳಿಕೆಗಳು ಅಂಗಾತ ಬಿದ್ದರೆ ದೆವ್ವ ಬಿಟ್ಟಿದೆಯೆಂತಲೂ ಮಗುಚಿ ಬಿದ್ದರೆ ಬಿಟ್ಟಿಲ್ಲವೆಂತಲೂ ಅರ್ಥ ಮಾಡಿಕೊಳ್ಳುತ್ತಾರೆ. ಹೊಟ್ಟೆಯಲ್ಲಿ ಮದ್ದು ಇಡುವುದರ ಕುರಿತು ಕುಂಬ್ರಿ ಮರಾಠಿಗರಲ್ಲಿ ಹೆಚ್ಚು ನಂಬಿಕೆ ಇದೆ. ಮಂಜುಗುಣಿ ದೇವಳದ ಗುನಗರು ಹೊಟ್ಟೆಯಲ್ಲಿರಿಸಿದ ಮದ್ದನ್ನು ಕೀಳುತ್ತಾರೆ ಎಂದು ಹೇಳಲಾಗುತ್ತದೆ.

ಹಾನ ತೆಗೆಯುವ ಪದ್ಧತಿ ಕುಂಬ್ರಿ ಮರಾಠಿಗರಲ್ಲಿ ಇದೆ. ಯಾವುದೋ ಕಾರಣಕ್ಕೆ ಹೆದರಿದವರನ್ನು ಅಡಿಕೆ ಹಾಳೆಯನ್ನು ಬಿದಿರು ಕಡ್ಡಿಗಳಿಂದ ಚುಚ್ಚಿ ಮಾಡಿದ ಪಡಗದ ಎದರು ಕುಳ್ಳಿರಿಸಿ ಸಣ್ಣ ಕೋಲುಗಳಿಂದ ದೊಂದಿ ಹಚ್ಚಿ ಅಕ್ಕಿ ಕಾಳು, ಕೇಪಳ ಹೂವು, ಅರಿಶಿಣ ಕುಂಕುಮ ಹಾಕಿ ಕದಡಿದ ನೀರಿಗೆ ಹಾಕಿಕೊಂಡು ಹೆದರಿದವನ ಮುಖಕ್ಕೆ ರಾಚುತ್ತಾರೆ. ಆತ ಬೆಚ್ಚಿದಲ್ಲಿ ಆ ಹಾನವನ್ನು ಮೂರುದಾರಿ ಕೂಡಿದಲ್ಲಿ ಇಡಲಾಗುತ್ತದೆ. ಚೇಳು ಕಡಿತದ ವಿಷ ಏರುವಿಕೆಯನ್ನು ಕಬ್ಬಿಣದ ಮೊಳೆ ಅಥವಾ ಕುಡುಗೋಲನ್ನು ಕಡಿದ ಜಾಗದಿಂದ ಕೆಳಗೆ ನಿವಾಳಿಸುವ ಮೂಲಕ ವಿಷ ಏರಿದ್ದನ್ನು ಇಳಿಸುವುದಾಗಿ ಹೇಳುತ್ತಾರೆ. ಹಾಗೆಯೇ ಮಕ್ಕಳಿಗೆ ಆಗುವ ದಾಟುಬಕ್ಕೆಯ ನಿವಾರಣೆಗೆ ಮೂರು ದಾರಿ ಸೇರುವಲ್ಲಿ ಎಲೆ, ಅಡಿಕೆ, ನಿಂಬೆಹಣ್ಣು, ಕೋಳಿಮೊಟ್ಟೆ ಇರಿಸಿ ಅರಿಸಿಣದ ನೀರನ್ನು ಅಡ್ಡಕ್ಕೆ ಹಾಕಿ ಮಗುವನ್ನು ದಾಟಿಸಿದರೆ ದಾಟುಬಕ್ಕೆ ನಿವಾರಣೆಯಾಗುವುದಂತೆ. ಅದೇ ರೀತಿಯಾಗಿ ಬಳೆ ಚೂರು, ಬೇವಿನ ಕಡ್ಡಿಯಿಂದ ಸುಟ್ಟರೆ ಜ್ವರ ತೊಲಗುವುದೆಂಬ ನಂಬಿಕೆ ಇವರಲ್ಲಿದೆ. ಮಕ್ಕಳಿಗೆ ಹಾಗೂ ತಾವು ಸಾಕಿದ ದನಗಳಿಗೆ ದೃಷ್ಠಿ ತೆಗೆಯುವ ಪದ್ಧತಿ ಮುಕ್ರಿಗಳಲ್ಲಿದೆ. ಉಪ್ಪು ಮೆಣಸಿನ ಚೊಟ್ಟು ಬೆಳ್ಳುಳ್ಳಿ ಸಿಪ್ಪೆ ಸಾಸಿವೆ

ಕಾಳನ್ನು ಹಾಕಿ ಮಕ್ಕಳನ್ನು ಬಾಗಿಲಲ್ಲಿ ಕೂರಿಸಿಕೊಂಡು ನಿವಾಳಿಸುತ್ತಾರೆ. ಬಳಿಕ ಅದನ್ನು ಬೋಕಿಯಲ್ಲಿ ಹಾಕಿಕೊಂಡು ಮೂರುದಾರಿ ಕೂಡಿದಲ್ಲಿ ಇಟ್ಟು ಬರುತ್ತಾರೆ.

**ಪಾರಂಪರಿಕ ಪಶು ವೈದ್ಯ**

ಕುಂಬ್ರಿ ಮರಾಠಿಗರು ಪಾರಂಪರಿಕ ಪಶುಪಾಲಕರು. ಶತಮಾನಗಳ ಕಾಲ ಪಶುಗಳ ಜೊತೆ ಬದುಕನ್ನು ಹಂಚಿಕೊಂಡವರು. ಹೀಗಾಗಿ ಪಶುಗಳ ಆಗುಹೋಗುಗಳ ಕುರಿತು ಕುಂಬ್ರಿ ಮರಾಠಿಗರಿಗೆ ಅಪಾರ ಜ್ಞಾನವಿದೆ. ಕುಂಬ್ರಿ ಮರಾಠಿಗರು ದನಕರುಗಳನ್ನು ಹೆಚ್ಚಾಗಿಯೇ ಸಾಕುತ್ತಾರೆ. ಹೀಗಾಗಿ ದನಗಕರುಗಳಿಗೆ ಆರೋಗ್ಯದಲ್ಲಿ ಏರುಪೇರಾದರೂ ಅವುಗಳ ಶುಶ್ರೂಷೆ ಮಾಡುವುದು ಶತಮಾನಗಳ ಕಾಲದಿಂದ ಅನೂಚಾನವಾಗಿ ನಡೆದುಕೊಂಡು ಬಂದಿದೆ. ದನದ ಕಾಲಿನೊಳಗೆ ಹುಳವಾಗಿ ಕೀವು ಸೋರುತ್ತಿದ್ದರೆ ಅದಕ್ಕೆ ಗೊಂಡೆ ಸೊಪ್ಪನ್ನು ಅರೆದು ಕಟ್ಟುತ್ತಾರೆ. ಗುಡ್ಡದಲ್ಲಿ ಸಿಗುವ ಏಕನಾಯ್ಕನ ಬೇರು, ಬಾಯುದುಮ್ಮನ ಬೇರು, ಕುಕ್ಕುರಸನ ಬೇರು, ಅಂಬೂತಾ ಸೊಪ್ಪು, ಕಹಿಬೇವಿನ ಸೊಪ್ಪು ಮುಂತಾದವುಗಳನ್ನು ದನಕರುಗಳ ಮದ್ದಾಗಿ ಬಳಸುತ್ತಾರೆ. ದನಗಳಿಗೆ ಬಾಯಿ ಮುಳ್ಳಾಗಿ ಏನೂ ತಿನ್ನದಿದ್ದರೆ ಅದರ ನಾಲಿಗೆಯನ್ನು ಉಪ್ಪಿನಿಂದ ತಿಕ್ಕಿ ಹಿರೇಮದ್ದುಗುಣಿಕೆ ಕಾಯಿಯೊಳಗೆ ಜೀರಿಗೆ, ಮೆಣಸು, ಉಪ್ಪು ತುಂಬಿ ತಿನಿಸುತ್ತಾರೆ. ಕಾಲುಬಾಯಿ, ಬಾಯಿಬಾಯಿ ರೋಗವಾದರೆ ಅಕ್ಕಿ, ತುಳಸಿ ಸೊಪ್ಪಿನ ಹೊಗೆಯನ್ನು ಕಾಲಿಗೆ ಮತ್ತು ಮೂಗಿಗೆ ಬಿಡುತ್ತಾರೆ. ಹಸು ಹಾಲು ಕಡಿಮೆ ಕೊಟ್ಟರೆ ಹೊಳೆಯಲ್ಲಿ ಬೆಳೆಯುವ ಆಪನ್ನು ಕೊಟ್ಟರೆ ಹೆಚ್ಚು ಹಾಲು ಕೊಡುತ್ತದೆ. ದನಗಳಿಗೆ ಚಪ್ಪೆ ರೋಗಬಂದರೆ ಚಪ್ಪೆಗೆ ಕಬ್ಬಿಣದ ಸಲಾಕೆಯಿಂದ ಬರೆ ಎಳೆಯುತ್ತಾರೆ. ಈ ರೀತಿ ಬರೆಹಾಕಿದರೆ ಚಪ್ಪೆರೋಗ ನಿವಾರಣೆಯಾಗುವುದಾಗಿ ಕುಂಬ್ರಿ ಮರಾಠಿಗರು ತಿಳಿಸುತ್ತಾರೆ.

ದನಕರುಗಳಿಗಾಗಲಿ ಕೆಟ್ಟ ದೃಷ್ಟಿ ತಾಕಿದರೆ ಮೆಣಸು, ಉಪ್ಪು, ಬೆಳ್ಳುಳ್ಳಿ ಮೂರು ದಾರಿಯ ಮಣ್ಣು ಮನೆಯ ಮೇಲಿನ ಹುಲ್ಲು ಕೂಡಿಸಿ ಮೂರು ಸಲ ದನಕರುಗಳ ಮುಖದ ಮುಂದೆ ನಿವಾಳಿಸಿ ಒಣಹುಲ್ಲಿನೊಂದಿಗೆ ಸುಡುತ್ತಾರೆ. ಇದನ್ನು ದೃಷ್ಟಿ ತೆಗೆಯುವುದು ಎನ್ನುತ್ತಾರೆ. ಹೀಗೆ ತಮ್ಮ ಸುತ್ತಮುತ್ತನ ಪರಿಸರದಲ್ಲಿ ದೊರೆಯುವ ಗಿಡ ಬಳ್ಳಿಗಳಲ್ಲಿ ತಮಗೆ ಬರುವ ರೋಗ ರುಜಿನಗಳಿಗೆ ಔಷಧಿಯನ್ನು ಮಾಡಿಕೊಳ್ಳುವ ನಾಟಿಪದ್ಧತಿ ಕುಂಬ್ರಿ ಮರಾಠಿಗರಲ್ಲಿ ಬಹುಪಾಲು ಜನರಿಗೆ ತಿಳಿದಿದೆ.

**ಕುಂಬ್ರಿ ಮರಾಠಿಗರ ಪಾರಂಪರಿಕ ವಿಧಿಗಳು**

ಎಲ್ಲಾ ಆದಿಮ ಸಮುದಾಯಗಳಿಗಿರುವಂತೆ ಕುಂಬ್ರಿ ಮರಾಠಿಗರಲ್ಲೂ ಪಾರಂಪರಿಕ ವಿಧಿಗಳು ಮತ್ತು ನಿಷೇಧಗಳಿವೆ. ನಮ್ಮ ಹಿಂದಿನ ಚರಿತ್ರೆಯನ್ನಾಗಲೀ ಅಥವಾ

ಪುರಾತನಯುಗವನ್ನಾಗಲೀ ನಾವು ಅವಲೋಕಿಸಿದಾಗ ನಮ್ಮ ಗಮನಕ್ಕೆ ಬರುವುದೇನೆಂದರೆ, ಸಮಾಜದಲ್ಲಿಯ ಸದಸ್ಯರ ನಡುವಿನ ವಿವಿಧ ರೀತಿಯ ಸಂಬಂಧಗಳನ್ನಾಗಲೀ ಅಥವಾ ಜಗಳಗಳನ್ನಾಗಲೀ ನಿಯಂತ್ರಿಸುವದಕೋಸ್ಕರ ಸಮಾಜವು ತನ್ನದೇ ಆದ ವಿಧಾನಗಳನ್ನು ಮತ್ತು ಪದ್ಧತಿಗಳನ್ನು ಅನುಸರಿಸುವುದನ್ನು ಕಾಣುತ್ತೇವೆ. ಶಿಸ್ತು ಮತ್ತು ನ್ಯಾಯವನ್ನು ಕಾಪಾಡುವುದಕ್ಕೋಸ್ಕರ ವಿವಿಧ ಕಾನೂನುಗಳನ್ನು ಮತ್ತು ಶಿಕ್ಷೆಯ ವಿಧಾನಗಳನ್ನು ಜಾರಿಗೆ ತರಲಾಯಿತು. ಬುಡಕಟ್ಟು ಸಮಾಜವು ಸಹ ತನ್ನದೇ ಆದ ರಾಜಕೀಯ ಸಂಘಟನೆಯನ್ನು ಹೊಂದಿದೆ. ವಂಶಪರಂಪರೆಯ ಗುಂಪುಗಳ ಮೇಲೆ ಅವಲಂಬಿಸಿದ ರಾಜಕೀಯ ಸಂಘಗಳು, ಗ್ರಾಮಗಳ ವಿಭಾಗಗಳ ಮೇಲೆ ಅಲವಂಬಿಸಿದ ರಾಜಕೀಯ ಸಂಘಗಳು ಮತ್ತು ಒಂದು ನಿರ್ಧಿಷ್ಟ ಪ್ರದೇಶಕ್ಕೆ ಸೇರಿದ ಗ್ರಾಮಗಳ ಗುಂಪುಗಳನ್ನು ಅವಲಂಬಿಸಿರುವ ರಾಜಕೀಯ ಸಂಘಗಳು ಇಂದಿಗೂ ಆದಿವಾಸಿಗಳಲ್ಲಿ ಅಸ್ತಿತ್ವದಲ್ಲಿವೆ. ಈ ಎಲ್ಲಾ ಗುಣಗಳನ್ನು ನಾವು ಕುಂಬ್ರಿ ಮರಾಠಿಗರಲ್ಲಿವೆ. ಕುಂಬ್ರಿ ಮರಾಠಿಗರು ತಮ್ಮ ಪಂಗಡಗಳಲ್ಲಿ ತಮ್ಮದೇ ಆಡಳಿತ ಸಂಸ್ಥೆಯನ್ನು ಹೊಂದಿದ್ದಾರೆ. ಅವುಗಳನ್ನು ವಿಧ ವಿಧದ ಹೆಸರುಗಳಿಂದ ಕರೆಯುವರು. ಉದಾ: ಓಡೋ, ವಾಡಿ, ವಲ್ಯ, ವಲ್ಥುಲೆ, ಕೂಡುಕಟ್ಟು, ಇತ್ಯಾದಿ. ಇವುಗಳಲ್ಲಿ 'ಓಡೋ' ಹೆಚ್ಚು ಪ್ರಚಲಿತವಿದ್ದು ಜನಪ್ರಿಯ ಬಳಕೆಯಲ್ಲಿದೆ. ಓಡೋ ಕುಂಬ್ರಿ ಮರಾಠಿ ಸಮಾಜದ ಒಂದು ಪ್ರಮುಖ ಸಾಮಾಜಿಕ ಸಂಸ್ಥೆಯಾಗಿದ್ದು, ಇದು ಅನೇಕ ಕುಟುಂಬ ಬಾಲಿ (ಗುಂಪು) ಅವಿಭಕ್ತ ಕುಟುಂಬ ಮತ್ತು ವಿಭಕ್ತ ಕುಟುಂಬಗಳನ್ನು ಒಳಗೊಂಡಿದೆ. ಇದು ಕುಂಬ್ರಿ ಮರಾಠಿ ಸಮಾಜದ ರಾಜಕೀಯದ ಮುಖ್ಯ ವಿಭಾಗವೆಂದು ಹೇಳಬಹುದು. ಸಾಮಾನ್ಯವಾಗಿ ಗ್ರಾಮಮಟ್ಟದಲ್ಲಿ ಅಥವಾ ಗ್ರಾಮಗಳ ಒಂದು ಗುಂಪಿನ ಮಟ್ಟದಲ್ಲಿ ಕೆಲಸ ಮಾಡುತ್ತದೆ. ಪ್ರತಿ 'ಓಡೋ' ದಲ್ಲಿ 10 ರಿಂದ 250 ಕುಟುಂಬಗಳಿರುತ್ತವೆ. ಇದೀಗ ಸುಮಾರು ಜಿಲ್ಲಾದ್ಯಂತ 40 ಓಡೋಗಳು ಕುಂಬ್ರಿ ಮರಾಠಿ ಬುಡಕಟ್ಟು ಸಮುದಾಯದ ವಿವಿಧ ಹಳ್ಳಿಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಪ್ರತಿ ಕುಟುಂಬದ ಹಿರಿಯ ಪುರುಷ 'ಓಡೋ' ಘಟಕದ ಜವಾಬ್ದಾರಿಯುತ ಪ್ರತಿನಿಧಿಯಾಗಿರುತ್ತಾನೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಕುಂಬ್ರಿ ಮರಾಠಿ ಸಮುದಾಯದವರು ಅನೇಕ 'ಓಡೋ'ಗಳಲ್ಲಿ ಹಂಚಿಹೋಗಿರುವರು. ವಂಶ ಪಾರಂಪರ್ಯವಾಗಿ ಪ್ರತಿ 'ಓಡೋ'ವಿಗೆ 'ಗುರಿಕಾರ' ಎನ್ನುವ ಮುಖ್ಯಸ್ಥನಿರುವನು. ಒಂದು ವೇಳೆ 'ಗುರಿಕಾರ'ನಿಗೆ ಗಂಡು ಸಂತಾನ ಇರದಿದ್ದಲ್ಲಿ ನೂತನ ಉತ್ತರಾಧಿಕಾರಿಯನ್ನು ಅವರದೇ ಪಿತೃಸಂಬಂಧಿಗಳಲ್ಲಿ ಆಯ್ಕೆ ಮಾಡಲಾಗುವದು. ಈ ರೀತಿಯ ಘಟಕಕ್ಕೆ 'ಗುರಿಕಾರ' ಎಂಬ ಜನಪ್ರಿಯ ಹೆಸರಲ್ಲದೇ 'ಬುದ್ಯಂತಗಾರ', 'ವಡೆ ಬುದ್ಯಂತ', 'ಮಂಡಕಾರ', 'ಗಾವಗಾವಡೋ' ಅಥವಾ 'ಸಾವಚೆಗೌಡ' ಎಂದು ಹೆಸರಿಸಲಾಗುತ್ತದೆ.

'ಓಡೋ' ಸದಸ್ಯರ ಮೇಲೆ ಒಬ್ಬ ಸಾಮ್ರಾಟನಂತೆ 'ಗುರಿಕಾರನು' ಅಧಿಕಾರವನ್ನು ಹೊಂದಿರುವನು. ಆಡಳಿತ ಮಂಡಳಿಯು ಸೂಚಿಸುವ ಎಲ್ಲ ಕಾರ್ಯ ಚಟುವಟಿಕೆಗಳನ್ನು ಅವನು ಪೂರೈಸಬೇಕಾಗುತ್ತದೆ. 'ಗುರಿಕಾರ'ನ ಅಧ್ಯಕ್ಷತೆಯಲ್ಲಿ ಆಂತರಿಕ ದೂರು, ದುಃಖದುಮ್ಮಾನ ಹಾಗೂ ಸಮಸ್ಯೆಗಳನ್ನು ಚರ್ಚಿಸಲಾಗುತ್ತಿದೆ. 'ಗುರಿಕಾರ'ನಿಗೆ ಅಧೀನರಾಗಿ 'ರಾಯಭಾರಿ' ಮತ್ತು 'ಗದ್ಯ' ಎನ್ನುವ ಇಬ್ಬರು ಸಹಾಯಕರಿರುವರು. ಇವರು ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳಲ್ಲಿ 'ಗುರಿಕಾರ'ನಿಗೆ ಸಹಾಯ ಮಾಡುವರು. 'ಗುರಿಕಾರ'ನು ತನ್ನ ಪ್ರದೇಶ ವ್ಯಾಪ್ತಿಯಲ್ಲಿ ಬರುವ ಕುಂಬ್ರಿ ಮರಾಠಿಗರ ಮದುವೆಗಳಲ್ಲಿ ಉಪಸ್ಥಿತನಿರಬೇಕಾಗುತ್ತದೆ ಇಷ್ಟೇ ಅಲ್ಲದೆ ಶವಸಂಸ್ಕಾರ ಕಾರ್ಯಗಳಲ್ಲಿ ಉಪಸ್ಥಿತನಿರಬೇಕಾಗುತ್ತದೆ. ಅನಿವಾರ್ಯ ಕಾರಣಗಳಿಂದ 'ಗುರಿಕಾರ'ರು ಹಾಜರಾಗಲು ಸಾಧ್ಯವಾಗದಿದ್ದರೆ ಅವರ ಜಾಗದಲ್ಲಿ ಅವರ ಪ್ರತಿನಿಧಿಯಾಗಿ 'ರಾಯಭಾರಿ'ಯು ಹಾಜರಿರಬೇಕು. 'ಗುರಿಕಾರ'ರು ತಮ್ಮ 'ಓಡೋ' ವ್ಯಾಪ್ತಿಯಲ್ಲಿ ಸಮಾರಂಭ, ಹೋಳಿ ಹಬ್ಬದ ಸಮಯದಲ್ಲಿ, ಸಮೂಹ ನೃತ್ಯ ತಂಡದ ಪ್ರವಾಸ ಕಾರ್ಯಕ್ರಮದ ಮುಂದಾಳತ್ವವನ್ನು ವಹಿಸುವರು. ಕುಂಬ್ರಿ ಮರಾಠಿಗರ ಜನಜೀವನವು ಅವರ ಧರ್ಮ, ಧಾರ್ಮಿಕ ಪದ್ಧತಿಗಳು ಮತ್ತು ಪಾರಂಪರಿಕ ಆಚರಣೆಗಳ ಮೇಲೆ ಸಾಗುತ್ತವೆ. ಈ ಎಲ್ಲ ಧಾರ್ಮಿಕ ಆಚರಣೆಗಳು ಮತ್ತು ಧಾರ್ಮಿಕ ಪದ್ಧತಿಗಳು ಸರಿಯಾದ ರೀತಿಯಲ್ಲಿ ಆಚರಣೆಯಲ್ಲಿವೆ ಎಂದು ನೋಡಿಕೊಳ್ಳುವುದೇ 'ಓಡೋ'ದ ಕೆಲಸ. ಕಟ್ಟುಪಾಡುಗಳನ್ನು ಉಲ್ಲಂಘಿಸಿದವರನ್ನು ಶಿಕ್ಷಿಸುವ ಮೂಲಕ 'ಓಡೋ' ತನ್ನ ಅಧಿಕಾರವನ್ನು ಪ್ರತಿಪಾದಿಸುತ್ತದೆ. ಕಾನೂನುಗಳನ್ನು ಉಲ್ಲಂಘಿಸಿದವರಿಗೆ ಅವರ ತಪ್ಪುಗಳ ಸ್ವಭಾವ ಹಾಗೂ ರೀತಿಗಳಿಗನುಗುಣವಾಗಿ ದಂಡವನ್ನು ವಿಧಿಸಲಾಗುತ್ತದೆ ಅಥವಾ ಸಮಾಜದಿಂದ ಬಹಿಷ್ಕರಿಸಲಾಗುತ್ತದೆ. ನೈತಿಕ ಹಾಗೂ ಧಾರ್ಮಿಕ ತತ್ವಗಳ ಮೇಲೆ ಕುಂಬ್ರಿ ಮರಾಠಿ ಸಮುದಾಯದವರ ಕಾನೂನುಗಳು ಅವಲಂಭಿಸಿವೆ. ಮುಖ್ಯಸ್ಥನಾದ 'ಗುರಿಕಾರ'ನೇ ಎಲ್ಲ ಅಪರಾಧಗಳಿಗೆ ಸಂಬಂಧಿಸಿದ ಮೊಕದ್ದಮೆಗಳಿಗೆ ನ್ಯಾಯಾಧೀಶನಾಗಿ ಕರ್ತವ್ಯ ನಿರ್ವಹಿಸುವುದರಿಂದ ಅಪರಾಧ ಪ್ರಕರಣಗಳ ತೀರ್ಪನ್ನು ಅವನೇ ನೀಡುತ್ತಾನೆ. ಸಮಾಜ ವಿರೋಧಿ, ಧರ್ಮ ವಿರೋಧಿ ಚಟುವಟಿಕೆಗಳ ನಿಯಂತ್ರಣಕ್ಕಾಗಿ ಅನೇಕ ಕಟ್ಟುಪಾಡುಗಳನ್ನು ವಿಧಿಸಿರುತ್ತದೆ. ವ್ಯಭಿಚಾರ ಪ್ರಕರಣಗಳಲ್ಲಿ ಅಪರಾಧಿಯನ್ನು ಕುಂಬ್ರಿ ಮರಾಠಿ ಸಮಾಜದಿಂದ ಬಹಿಷ್ಕರಿಸಿ ದೂರವಿಡಲಾಗುವದು, ಅನಂತರ ಅವನ ಕುಟುಂಬದ ಸದಸ್ಯರಿಗೆ ಯಾವುದೇ ಧಾರ್ಮಿಕ ಸಮಾರಂಭಗಳಿಗೆ ಆಹ್ವಾನ ನೀಡುವದಿಲ್ಲ, ಆದರೆ ಇತ್ತೀಚೆಗೆ ಇಂತಹ ಪ್ರಕರಣಗಳನ್ನು ಗಂಭೀರವಾಗಿ ಪರಿಗಣಿಸುತ್ತಿಲ್ಲ.

ಪುರುಷನು ವ್ಯಭಿಚಾರಿವೆನಿಸಿದರೆ, ಈಗ ಬಹಿಷ್ಕಾರಗೊಳಿಸದೆ ಇತರರಂತೆಯೇ ಸಮಾನ ಗೌರವ ಪಡೆಯುವನು, ಆದರೆ ಕುಂಬ್ರಿ ಮರಾಠಿಗರಲ್ಲಿ ಮಹಿಳೆ ವ್ಯಭಿಚಾರದಲ್ಲಿ ತೊಡಗಿದರೆ

ಅದೊಂದು ಅತಿ ಹೀನಕೃತ್ಯವೆಂದು ಪರಿಗಣಿಸಿ ಅವಳನ್ನು ಮನೆಯಿಂದ ಮತ್ತು ಸಮಾಜದಿಂದಲೂ ದೂರವಿಡಲಾಗುತ್ತದೆ. 'ಕೂಡುಕಟ್ಟು'ವಿನ ಎಲ್ಲ ಸಮಾರಂಭಗಳಿಂದ ಅವಳನ್ನು ದೂರವಿಡಲಾಗುತ್ತದೆ. ಅಂತರ್ಜಾತಿಯ ಅಥವಾ ಅಂತರ್‌ಪಂಗಡ ವಿವಾಹಗಳು ನಡೆದರೆ ಸತಿಪತಿಗಳಿಬ್ಬರನ್ನು ಅಪರಾಧಿಗಳೆಂದು ಪರಿಗಣಿಸಿ ಸಾಮಾಜಿಕ ಬಹಿಷ್ಕಾರ ವಿಧಿಸುವರು. ಕುಂಬ್ರಿ ಮರಾಠಿ ಸಮುದಾಯದಲ್ಲಿ ಪ್ರತಿಬಂಧಿತ ಆಹಾರ ಸಾಮಗ್ರಿ ಎನಿಸಿದ ಕಾಡು ಹಕ್ಕಿಯ ಮಾಂಸ, ಮಾರುಕಟ್ಟೆಯ ಮಾಂಸ ಬ್ರಾಹ್ಮಣರನ್ನು ಹೊರತುಪಡಿಸಿ ಬೇರೆ ಜಾತಿಯವರ ಮನೆಗಳಲ್ಲಿ ಆಹಾರ ಮತ್ತು ಮಾಂಸವನ್ನು ಸೇವಿಸಿದವರನ್ನು ದೋಷಿಗಳೆಂದು ಪರಿಗಣಿಸಿ ಪಾರಂಪರಿಕ ಪದ್ಧತಿಗಳಿಗನುಸಾರವಾಗಿ ರಕ್ಷಿಸಲಾಗುವದು. ಕಾಡಿನಿಂದ ಬೇಟೆಯಾಡಿ ತಂದ ಮಾಂಸವನ್ನು ಮಾರಾಟ ಮಾಡುವದು ಅಪರಾಧವೆಂದು ಪರಿಗಣಿಸಲ್ಪಡುತ್ತದೆ. ಈ ಸಾಂಪ್ರದಾಯಿಕ ಕಟ್ಟಲೆಗಳನ್ನು ಮೀರಿದರೆ ತಕ್ಷಣವೇ ವಿಚಾರಣೆ ಮಾಡಿ ಸಮಾಜದ ಸಭೆಯಲ್ಲಿ ದಂಡ ಅಥವಾ ಶಿಕ್ಷೆ ವಿಧಿಸುವರು, ಕುಂಬ್ರಿ ಮರಾಠಿ ಸಮುದಾಯದಲ್ಲಿ 'ಓಡೋ' ಸಂಪ್ರದಾಯದಂತೆ, ಪ್ರತಿ ಮಹಿಳೆಯು ಕುಂಬ್ರಿ ಮರಾಠಿ ಸಮುದಾಯದ ಸಾಂಪ್ರದಾಯಿಕ 'ಗೇಟಿ' ಸೀರೆ ಉಡಬೇಕೆಂದು ನಿರೀಕ್ಷೆ ಇದೆ. ಇದಕ್ಕೆ ತಪ್ಪಿದರೆ ದಂಡ ತುಂಬಬೇಕಾಗುತ್ತದೆ, ಅಪರಾಧಿಗಳಿಂದ ತೆಗೆದುಕೊಂಡ ದಂಡವನ್ನು ದೇವರಿಗೆ ಕಾಣಿಕೆ ರೂಪದಲ್ಲಿ ಸಲ್ಲಿಸಲಾಗುವದು. ಪೂರ್ವ ಕಾಲದಲ್ಲಿ ಕುಂಬ್ರಿ ಮರಾಠಿ ಸಮುದಾಯದಲ್ಲಿ ಪುರುಷರು ಕೂದಲನ್ನು ಹಿಂದಕ್ಕೆ ಬಾಚಿ, ಚಂಡಿಕೆ ರೂಪದಲ್ಲಿ ಬಿಡಬೇಕೆಂದು ನಿಯಮವಿತ್ತು. ಕೂದಲನ್ನು ಕತ್ತಿರಿಸಿಕೊಳ್ಳುವುದನ್ನು ಅಪರಾಧವೆಂದು ಪರಿಗಣಿಸಲಾಗುತ್ತಿತ್ತು. 'ಓಡೋ' ಪಂಗಡದ ಸದಸ್ಯರೆಲ್ಲರೂ ಹೋಳಿ ಹಬ್ಬದ ಎಲ್ಲಾ ಕಾರ್ಯಕ್ರಮಗಳಲ್ಲಿ ಭಾಗವಹಿಸಬೇಕು. ಈ ಹಬ್ಬದಲ್ಲಿ ಭಾಗವಹಿಸದಿದ್ದವರನ್ನು ತಪ್ಪಿತಸ್ತರೆಂದು 'ಕೂಡುಕಟ್ಟು'ವಿನ ಸಭೆಯಲ್ಲಿ ಪ್ರಸ್ತಾಪಿಸಿ ವಿಚಾರಣೆಗೆ ಗುರಿಪಡಿಸಲಾಗುವುದು. ಹೋಳಿ ಹಬ್ಬದ ಉತ್ಸವ ಸಮಯದಲ್ಲಿ ಉಂಟಾಗುವ ವಿವಾದಗಳನ್ನು, ನೃತ್ಯದಲ್ಲಾಗುವ ತಪ್ಪುಗಳನ್ನು, ದೇವರಿಗೆ ತೆಂಗಿನಕಾಯಿಗಳನ್ನು ಅರ್ಪಿಸುವ ಮೂಲಕ ಕುಂಬ್ರಿ ಮರಾಠಿ ಸಮುದಾಯದವರು ತಮ್ಮ ತಪ್ಪಿಗೆ ಪರಿಹಾರವನ್ನು ಕಂಡುಕೊಳ್ಳುವರು. ದೇವರಿಗೆ ಅರ್ಪಿತ ಕಾಯಿಗಳನ್ನು ಹೋಳಿ ಹಬ್ಬದ ಸಮಾರಾಧನೆಯಲ್ಲಿ ಬಳಸಿ ಎಲ್ಲರಿಗೂ ಪ್ರಸಾದ ರೂಪದಲ್ಲಿ ಹಂಚುವರು. ಒಮ್ಮೊಮ್ಮೆ ತಪ್ಪಿತಸ್ಥರು 'ಓಡೋ' ಸದಸ್ಯರೆಲ್ಲರಿಗೂ ಊಟದ ಔತಣ ನೀಡಬೇಕಾಗುವದು. ಹಿಂದಿನ ಕಾಲದಲ್ಲಿ ತಪ್ಪು ಮಾಡಿದವರಿಗೆ ಅತ್ಯಂತ ಕಠಿಣ ಶಿಕ್ಷೆ ವಿಧಿಸುತ್ತಿದ್ದರು, ಉದಾ: ಅಪರಾಧಿಗಳನ್ನು ಶ್ಯಾವೆಯ ಹಗೇವಿನಲ್ಲಿ ನೂಕುತ್ತಿದ್ದರು, ಆ ಹಗೆ (ಕುಣಿ) ಅತ್ಯಂತ ಜಾರಿಕೆಯುಳ್ಳದಾಗಿದ್ದು ನೂಕಲ್ಪಟ್ಟ ವ್ಯಕ್ತಿ ಮೇಲೆ ಬರಲು ಬಹಳ ಪ್ರಯತ್ನ ಪಡಬೇಕಾಗುತ್ತಿತ್ತು. ಥರ್‍ಸ್ಟನ್ ಪ್ರಕಾರ 'ಗೋವಾ ಕುಣಬಿಗಳಲ್ಲಿ ಒಬ್ಬ ವ್ಯಭಿಚಾರಿಯು ಕಠಿಣ ಶಿಕ್ಷೆಯನ್ನು ಅನುಭವಿಸಬೇಕಾಗುವದು, ಅವನ

ತಲೆಯನ್ನು ಬೋಳಿಸಿ, ಮೀಸೆ ತೆಗೆದು, ಒಂದು ತೊಟ್ಟಿಯಲ್ಲಿ ನಿಲ್ಲಿಸಿ ತಿಂದುಳಿದ ಆಹಾರ ಪದಾರ್ಥಗಳನ್ನು ಅವನ ಮೇಲೆ ಎಸೆಯುತ್ತಿದ್ದರು. ತಿಂದ ಎಂಜಲೆಲೆಗಳನ್ನು ಅವನ ತಲೆಯ ಮೇಲೆ ಎಸೆದು ಶಿಕ್ಷಿಸುತ್ತಿದ್ದರು, ಅವರಿಗೆ ಗುರಿಕಾರನನು ದಂಡ ರೂಪದಲ್ಲಿ ಹಣವನ್ನು ಸಹ ವಿಧಿಸುತ್ತಿದ್ದನು. ಒಂದು ವೇಳೆ ವ್ಯಭಿಚಾರಿ ಸ್ತ್ರೀಯಾಗಿದ್ದು ತಪ್ಪು ಒಪ್ಪಿಕೊಳ್ಳದಿದ್ದರೆ ಅವಳನ್ನು ಸೂರ್ಯನ ಸುಡುಬಿಸಿಲಿಗೆ ನಿಲ್ಲಿಸಿ ಹೆಗಲಮೇಲೆ ಕಬ್ಬಿಣದ ಸಲಾಕೆಯನ್ನು ಹೋರಿಸುವರು'. ಕುಣಬಿ ಸಮಾಜದಲ್ಲಿ ಶಿಕ್ಷೆ ವಿಧಿಸಬೇಕಾದರೆ ಕುಣಬಿ ಸಮಾಜದವರು ವಿವಿಧ ತರಹದ ಮುಕದ್ದಮೆಗಳನ್ನು ಗಣನೆಗೆ ತೆಗೆದುಕೊಂಡು ಶಿಕ್ಷೆ ವಿಧಿಸುವರು. ಕ್ರಿಮಿನಲ್ ಮುಕದ್ದಮೆಗಳು ನಡೆಯುವಾಗ ಅಪರಾಧಿಯು ಗೋವಾ ದೇವತೆಯ ಹೆಸರಿನಲ್ಲಿ ಪ್ರಮಾಣ ಮಾಡಬೇಕಾಗುತ್ತದೆ, ಎಲ್ಲ ವಿವಾದಗಳನ್ನು ಹಾಗೂ ಸಮಸ್ಯೆಗಳನ್ನು ಗುರಿಕಾರನ ಮನೆಯಲ್ಲಿ ಸಭೆ ಸೇರಿ ನಿರ್ಣಯಿಸಲಾಗುವುದು'[8] ಥರ್ಸಟನ್ ಎನ್ನುತ್ತಾನೆ. ಇದೇ ಬಗೆಯ ವಿಧಿಯು ಕುಂಬ್ರಿ ಮರಾಠಿ ಸಮುದಾಯದಲ್ಲೂ ಇದೆ. 'ಓಡೋ' ಮಂಡಳಿಯು ಮೂರು ಜನ ಸ್ಥಳೀಯ ಮುಖಂಡರೆದುರು ಎಲ್ಲ ಅಪರಾಧದ ಪ್ರಕರಣಗಳನ್ನು ಇತ್ಯರ್ಥ ಮಾಡಿ ಅಪರಾಧಿಗೆ ದಂಡ ವಿಧಿಸಲಾಗುವದು, ದಂಡದ ಹಣ ರೂ. 10 ರಿಂದ ರೂ. 20ರ ವರೆಗೆ ಇರುತ್ತದೆ. ಯಾವುದೇ ಅಪರಾಧಿಯು ಸುಳ್ಳು ಹೇಳಿದ್ದಾದರೆ ಅವರನ್ನು ದೇವರು ಮೂರು ವರ್ಷಗಳೊಳಗಾಗಿ ಶಾಪ ನೀಡುವದಾಗಿ ಕುಂಬ್ರಿ ಮರಾಠಿ ಸಮುದಾಯದವರು ನಂಬುತ್ತಾರೆ. ಅಪರಾಧಿಗಳನ್ನು ಶಿಕ್ಷಿಸುವಂತೆಯೇ, ಒಳ್ಳೆಯ ಕಾರ್ಯಗಳನ್ನು ಮಾಡುವವರಿಗೆ, ಒಳ್ಳೆಯ ನಡತೆಯುಳ್ಳವರಿಗೆ ಕುಂಬ್ರಿ ಮರಾಠಿ ಸಮುದಾಯದವರು ಪುರಸ್ಕರಿಸುವರು. ಬಹಳ ವರ್ಷಗಳವರೆಗೆ 'ಓಡೋ' ಮಂಡಳಿಯಲ್ಲಿ ತನ್ನ ಸದಸ್ಯತ್ವವನ್ನು ನಿರಂತರವಾಗಿ ಉಳಿಸಿಕೊಂಡು ಬಂದ ಸದಸ್ಯರಿಗೆ ವಿಶೇಷ ಗೌರವವನ್ನು ಕುಂಬ್ರಿ ಮರಾಠಿ ಸಮಾಜವು ನೀಡುತ್ತದೆ.

ಅದೇ ರೀತಿ ಕುಂಬ್ರಿ ಮರಾಠಿ ಸಮುದಾಯದ ಪಾರಂಪರಿಕ, ಸಾಂಪ್ರದಾಯಿಕ ನೃತ್ಯ-ಕಲೆಗಳಾದ ಗುಮಟೆ, ಟೋಣಿ ಇತ್ಯಾದಿಗಳಲ್ಲಿ ಪರಿಣಿತ ಪಡೆದವರಿಗೂ, ಕುಂಬ್ರಿ ಮರಾಠಿ ಸಮಾಜದಲ್ಲಿ ವಿಶೇಷ ಸ್ಥಾನಮಾನವನ್ನು ಕೊಡಲಾಗುತ್ತದೆ ಹಾಗೇ ಓಡೋ ಮಂಡಳದೊಂದಿಗೆ ಸಂಬಂಧ ಹದಗೆಟ್ಟ ಜನ ಬಹಿಷ್ಕರಿಸಲ್ಪಟ್ಟವರಿಗೆ ಕುಂಬ್ರಿ ಮರಾಠಿ ಸಮಾಜದಲ್ಲಿ ಯಾವುದೇ ರೀತಿಯ ಗೌರವ, ಸ್ಥಾನಮಾನಗಳು ಇರುವದಿಲ್ಲ. ಗುರಿಕಾರರ ಮನೆ ಹಾಗೂ ಪೂರ್ವಜರ ನಿವಾಸವನ್ನು ಬಹಳ ಗೌರವದಿಂದ ಕಾಣುವರು. ಗುರಿಕಾರರ ಮನೆಯು ಸರ್ವಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಚಟುವಟಿಕೆಗಳ ಕೇಂದ್ರಬಿಂದುವಾಗಿರುತ್ತದೆ. ಎಲ್ಲ ಪಾರಂಪರಿಕ ಹಾಡು, ನೃತ್ಯ, ವಾದ್ಯ ಮೇಳಗಳು, ದೇವತಾ ಪೂಜೆ, ವಿಧಿವಿಧಾನಗಳು, ಎಲ್ಲ

ಸಾಮಾಜಿಕ ಸಮಾರಂಭಗಳು ಗುರಿಕಾರರ ಮನೆಯ ಅಂಗಳದಲ್ಲಿಯೇ ಜರಗುತ್ತವೆ. ಸಾಂಪ್ರದಾಯಿಕ ಉಪಕರಣಗಳು, ನೃತ್ಯ ಹಾಗೂ ಗಾಯನದ ಸಲಕರಣೆಗಳಾದ ಗುಮ್ಮಟ, ವೇಷಭೂಷಣ ಮುಂತಾದವುಗಳನ್ನು ಗುರಿಕಾರರ ಮನೆಯಲ್ಲಿಯೇ ಸುರಕ್ಷಿತವಾಗಿ ಇಡಲಾಗುತ್ತದೆ. ಅಲ್ಲದೇ ಬೇಟೆಗೆ ಬೇಕಾದ ವಿವಿಧ ಆಯುಧಗಳಾದ ಮೀನಿನ ಬಲೆ, ಹಗ್ಗ ಹಾಗೂ ಪರದೆ ಮುಂತಾದ ನಿತ್ಯ ಯಪಯೋಗಿ ವಸ್ತುಗಳನ್ನು ಗುರಿಕಾರರ ಮನೆಯಲ್ಲಿಯೇ ಇಡುವರು. ಕೆಲವೊಂದು ವಿಶೇಷ ಸಂದರ್ಭಗಳಲ್ಲಿ ಹೋಳಿ ಹಬ್ಬದ ನಂತರ ಗುರಿಕಾರರ ಮುಂದಾಳತ್ವದಲ್ಲಿ ಬೇಟೆಯಾಡುವುದನ್ನು ಮತ್ತು ಮೀನು ಹಿಡಿಯುವುದನ್ನು ಕುಂಬ್ರಿ ಮರಾಠಿಗರು ಸಂಪ್ರದಾಯವಾಗಿ ನಡೆಯಿಸಿಕೊಂಡು ಬಂದಿರುವರು. ಈ ಎಲ್ಲಾ ಸಾಮೂಹಿಕ ವಿಧಿವಿಧಾನ ಚಟುವಟಿಕೆಗಳು ಗುರಿಕಾರರ ಮುಂದಾಳತ್ವದಲ್ಲಿಯೇ ನಡೆಯುವವು. ಗುರಿಕಾರರ ಮನೆಯಿಂದಲೇ ಸಾಂಪ್ರದಾಯಿಕ ಮೆರವಣಿಗೆ ಸಾಗುವದು. ಕುಂಬ್ರಿ ಮರಾಠಿಗರ ಪಾರಂಪರಿಕ ಪದ್ಧತಿಯಾಗಿ ತುಳಸಿ ಗಿಡವನ್ನು ತಮ್ಮ ಮನೆಯ ಅಂಗಳದಲ್ಲಿ ಬೆಳೆಸುವುದಿಲ್ಲ, ಆದರೆ ಕುಂಬ್ರಿ ಮರಾಠಿ ಸಮಾಜದಲ್ಲಿ ಪವಿತ್ರ ತುಳಸಿಯನ್ನು ಗುರಿಕಾರರ ಮನೆಯ ಅಂಗಳದಲ್ಲಿ ಮತ್ತು ಪೂರ್ವಿಕರ ಮನೆಯ ಯಜಮಾನರ ಅಂಗಳದಲ್ಲಿ ನೆಟ್ಟು 'ತುಳಸಿ ಕಟ್ಟೆ' ಎಂದು ಕರೆಯುವರು. ಸಾಮಾಜಿಕ ಜೀವನದಲ್ಲಿ ಗುರಿಕಾರರು ಮುಖ್ಯಪಾತ್ರ ವಹಿಸುವರು. ಕುಂಬ್ರಿ ಮರಾಠಿಗರ ಎಲ್ಲ ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಮತ್ತು ನ್ಯಾಯಕ್ಕೆ ಸಂಬಂಧಿಸಿದ ವಿಚಾರಗಳನ್ನು ಗುರಿಕಾರರೇ ಆಡಳಿತಗಾರನಾಗಿ ನಡೆಸಿಕೊಂಡು ಹೋಗುವನು ಈ ಎಲ್ಲ ಚಟುವಟಿಕೆಗಳಲ್ಲಿ ಗುರಿಕಾರರು 'ರಾಯಭಾರಿ' ಮತ್ತು 'ಗದ್ಯ' ಇವರು ಸಹಾಯಕರಾಗಿರುವರು.

**ಅಡಿ ಟಿಪ್ಪಣಿಗಳು**

1. ಬೋರಲಿಂಗಯ್ಯ, ಹಿ ಚಿ, ಗಿರಿಜನ ಕಾವ್ಯ: ಹಲವು ತೊರೆಗಳ ತಪ್ತ ಪ್ರವಾಹ, ಆದಿವಾಸಿ ಆಖ್ಯಾನ, ಪು 455, 2006
2. ಮಂಜುನಾಥ ಬೇವಿನಕಟ್ಟಿ, ಬುಡಕಟ್ಟು ನಂಬಿಕೆಗಳು: ಒಂದು ನೋಟ, ಆದಿವಾಸಿ ಆಖ್ಯಾನ, ಪು 350, 2006
3. ವೆರಿಯರ್ ಎಲ್ವಿನ್, ಪ್ರೇಮ ಮತ್ತು ಬುಡಕಟ್ಟುಗಳು, ಅನು: ಸಿಪಿಕೆ, ಆದಿವಾಸಿ ಆಖ್ಯಾನ, ಪು 466, 2006
4. ಮಹೇಂದ್ರಕುಮಾರ್. ಬಿ ಪಿ. ಬುಡಕಟ್ಟುಗಳಲ್ಲಿ ಸೀಮಾ ಪದ್ಧತಿ, ಆದಿವಾಸಿ ಆಖ್ಯಾನ, ಪು 365, 2006

5. ಮೋಹನ ಚಂದ್ರಗುತ್ತಿ, ಮುತ್ತಿಯರು, ಪು 56, 2016

6. Edgar Thurston, Caste and Tribes of South India, Vol-1, p. 110, 1909

7. Iyer A K, Caste and Tribes of Mysore, Vol-1, p. 58, 1922

8. Edgar Thurston, Caste and Tribes of South India, Vol-2, p. 250, 1909

# ಅಧ್ಯಾಯ: ಆರು

# ವರ್ತಮಾನ ಮತ್ತು ಕುಂಬ್ರಿ ಮರಾಠಿಗರು

1. ಕುಂಬ್ರಿ ಮರಾಠಿಗರ ಆರ್ಥಿಕ ಸಂಕಷ್ಟಗಳು
2. ಕುಂಬ್ರಿ ಮರಾಠಿಗರ ವಸತಿ ಸಮಸ್ಯೆ
3. ಕುಂಬ್ರಿ ಮರಾಠಿಗರಲ್ಲಿ ಉದ್ಯೋಗ ಮತ್ತು ನಿರುದ್ಯೋಗ
4. ಭೂರಹಿತರು ಮತ್ತು ಅನಿಶ್ಚಿತ ಆದಾಯದ ಮೂಲ
5. ಸರಕಾರಿ ಸೌಲಭ್ಯಗಳು ಮತ್ತು ಕುಂಬ್ರಿ ಮರಾಠಿಗರು
6. ಆದಿವಾಸಿಗಳಾಗದ ಕುಂಬ್ರಿ ಮರಾಠಿಗರು

## ಅಧ್ಯಾಯ: ಆರು

# ವರ್ತಮಾನ ಮತ್ತು ಕುಂಬ್ರಿ ಮರಾಠಿಗರು

### ಪೀಠಿಕೆ

ಆದಿಮ ಸಮುದಾಗಳು ಪರಂಪರೆಯನ್ನು ಉಸಿರಾಡುತ್ತಲೇ ವರ್ತಮಾನದಲ್ಲಿ ಬದುಕುತ್ತಿರುತ್ತವೆ. ನಿನ್ನೆಗಳ ಜೊತೆಗೇ ವರ್ತಮಾನದ ಮುಖಾಮುಖಿ ಮಾಡುವ ಪರಿಪಾಠ ನಮ್ಮ ದುಡಿವ ಸಮುದಾಯಗಳಿಗೆ ಸಿದ್ದಿಸಿಕೊಂಡು ಬಂದಿದೆ. ಎಂತದ್ದೇ ಕ್ರೂರ ಭೂತಕಾಲವು ಶೋಷಿತ ಸಮುದಾಯಗಳ ಅಂತರಂಗವನ್ನು ಮತ್ತು ಅವುಗಳ ಸೃಜನಶೀಲ ಚಟುಚಟಿಕೆಗಳನ್ನು ನಾಶ ಮಾಡಲಾಗಿಲ್ಲ. ದುಡಿಯುತ್ತಲೇ ಬದುಕುವ, ಶ್ರಮಿಸುತ್ತಲೇ ಜಗತ್ತನ್ನು ಕಟ್ಟುವ ಶ್ರಮಿಕರ ನೆನಪುಗಳನ್ನು ಧ್ವಂಸ ಮಾಡುವುದು ಸಾಧ್ಯವಿಲ್ಲ. ಹಾಗಾಗಿ ಶೋಷತರ, ಶ್ರಮಿಕರ ಮತ್ತು ಅಧೀನ ಸಮುದಾಯಗಳ ವರ್ತಮಾನವನ್ನು ಅರ್ಥಮಾಡಿಕೊಳ್ಳದೆ ಅವರ ಸಾಮಾಜಿಕ ಸಂಕಥನ ಪೂರ್ಣವಾಗದು. ಈಗಾಗಲೇ ಹೇಳಿದಂತೆ ಕುಂಬ್ರಿ ಮರಾಠಿ ಸಮುದಾಯ ಒಂದು ಸಂಕೀರ್ಣ ಸಾಮಾಜಿಕ ಸಂರಚನೆಯನ್ನು ಹೊಂದಿದೆ. ಅಷೇ ಸಂಕೀರ್ಣವಾದ ದುಡಿಮೆಗಳನ್ನೂ ಅವಲಂಬಿಸಿಕೊಂಡು ಬಂದಿದೆ. ಕುಂಬ್ರಿ ಮರಾಠಿ ಸಮುದಾಯ ಶತಮಾನಗಳ ಕಾಲ ಅನೇಕ ಒಡೆಯರ ಅಧೀನದಲ್ಲಿದ್ದು ನೆಲೆಕಾಣದೆ ಒಂದೆಡೆಯಿಂದ ಇನ್ನೊಂದೆಡೆಗೆ ನಿರಂತರವಾಗಿ ಅಲೆಮಾರಿಯಾಗಿ ಬದುಕಿ ಬಂದಿದೆ. ಭಾಷೆ, ಗಡಿ, ಪಾರಂಪರಿಕ ಬದುಕುತಾಣಗಳಿಂದ ಕುಂಬ್ರಿ ಮರಾಠಿಗರು ಒಕ್ಕಲೆದ್ದು ಹೋಗಿದ್ದಾರೆ. ವಲಸೆ ಮತ್ತು ಅಲೆಮಾರಿತನವೇ ತನ್ನ ನೈಜ ಬದುಕು ಎಂದು ಭಾವಿಸಿ ಸ್ಥಳದಿಂದ ಸ್ಥಳಕ್ಕೆ ಕುಂಬ್ರಿ ಮರಾಠಿ ಸಮುದಾಯ ಸಂಚಾರ ಮಾಡಿಕೊಂಡು ಬಂದಿದೆ. ಈ ಅನಿಯಮಿತ ಅಲೆಮಾರಿತ್ವವೇ ಅವರ ಪರಂಪರೆಯನ್ನು, ಸಂಸ್ಕೃತಿಯನ್ನು ಮತ್ತು ಜೀವನ ವಿಧಾನವನ್ನು ರೂಪಿಸುತ್ತಾ ಬಂದಿದೆ. ಬಡತನವಿದ್ದರೂ ಈ ಸಮುದಾಯಗಳು ವರ್ತಮಾನದ ಬದುಕಿಗೆ ಸಾದ್ಯಂತವಾಗಿ ಮುಖಾಮುಖಿ ಮಾಡುತ್ತ ಬಂದಿವೆ. ಇಂತಹ

ಸಮುದಾಯಗಳು ಕೇವಲ ಶರಣಾಗಿ ಅಧೀನಗೊಂಡು ಬದುಕುತ್ತಿಲ್ಲ. ಶೋಷಣೆಯನ್ನು ಒಪ್ಪಿಯೂ ಅಸಹಾಯಕತೆಯಿಂದ ಕುಗ್ಗಿಹೋಗಿಲ್ಲ. ತಮ್ಮ ಹಾಡು ಕುಣಿತ ಆಚರಣೆಗಳಲ್ಲಿ ತಮ್ಮನ್ನು ಶೋಷಣೆಗೊಳಪಡಿಸಿದ ಯಜಮಾನ ಸಂಸ್ಕೃತಿಯನ್ನು ಪ್ರಶ್ನಿಸುತ್ತಲೇ ಬಂದಿದ್ದಾರೆ. 'ಹಾಲಕ್ಕಿ ಒಕ್ಕಲಿಗರು ಸುಗ್ಗಿ ಸಂದರ್ಭದಲ್ಲಿ 'ಹಗರಣ' ಎಂಬ ಆಚರಣೆ ಮಾಡುತ್ತಾರೆ. ಹಾಲಕ್ಕಿಗಳು ವಿವಿಧ ವೇಷಧಾರಿಗಳಾಗಿ ಅಂದು ಬೀದಿಗಳಲ್ಲಿ ವರ್ತಮಾನದ ರಾಜಕಾರಣ, ಸಮಾಜ ಮತ್ತು ಆರ್ಥಿಕತೆಗಳನ್ನು ಗೇಲಿ ಮಾಡುವ ಮತ್ತು ವ್ಯಂಗ್ಯವಾಗಿ ಅನುಕರಣೆ ಮಾಡುವ ಅಭಿನಯವನ್ನು ಮಾಡುತ್ತಾರೆ. ರಸ್ತೆ ಅಗಲೀಕರಣ, ರೆಸಾರ್ಟ್ ರಾಜಕಾರಣ, ಗಣಿಗಾರಿಕೆ, ರಾಜಕಾರಣಿಗಳ ಅಧಿಕಾರ ದಾಹ, ಜಾತೀಯತೆ, ಮಾರುಕಟ್ಟೆ ರಾಜಕಾರಣದ ಥಳುಕುಗಳು ಮುಂತಾದ ರಾಜಕೀಯಾರ್ಥಿಕ ಸಂಗತಿಗಳನ್ನು ಹಾಲಕ್ಕಿಗಳು ಅಂದು ನವಿರಾದ ರೀತಿಯಲ್ಲಿ ಗೇಲಿ ಮಾಡುತ್ತಾರೆ. ಇದೇ ತರಹದ ಆಚರಣೆ ಕೊಡಗಿನಲ್ಲಿ 'ಕುಂಡೆ ಹಬ್ಬದ' ರೂಪದಲ್ಲಿ ಪ್ರಚಲಿತದಲ್ಲಿದೆ. ಅಲ್ಲಿನ ಜೇನುಕುರುಬರು, ಬೆಟ್ಟ ಕುರುಬರು ಮತ್ತು ಎರವ ಸಮುದಾಯದ ಜನ ದೇವರನ್ನೂ ಒಳಗೊಂಡಂತೆ ಅಲ್ಲಿನ ಭೂಮಾಲಿಕರನ್ನು ಉಗ್ರ ಬೈಗುಳ ಬಳಸಿ ಬೈಯುತ್ತಾರೆ. ವರ್ಷಕ್ಕೊಂದಾವರ್ತಿ ಈ ಸಮುದಾಯಗಳು ಚಿಪ್ಪೊಳಗಿಂದ ಹೊರಬಂದು ತಮ್ಮ ವರ್ತಮಾನದ ಸ್ಥಿತಿಗೆ ಕಾರಣವಾದ ಸಂಗತಿಗಳನ್ನು ಮನಸಾರೆ ಶಪಿಸುತ್ತಾರೆ. ಕರ್ನಾಟಕದ ಬುಡಕಟ್ಟುಗಳಲ್ಲಿ ಇಂತಹ ಆಚರಣೆಗಳಿರುವುದು ಮತ್ತು ಅವುಗಳ ವರ್ತಮಾನದ ಸಾಮಾಜಿಕಾರ್ಥಿಕ ಸ್ಥಿತಿಗತಿಗಳಿಗೂ ನೇರ ಸಂಬಂಧವಿದೆ.'[1] ಹೀಗಾಗಿ ಕುಂಬ್ರಿ ಮರಾಠಿ ಸಮುದಾಯ ತನ್ನ ಜೀವನ ವಿಧಾನದಲ್ಲಿಯೇ ಸಂಕೀರ್ಣತೆಯನ್ನು ಮೈಗೂಡಿಸಿಕೊಂಡು ಬಂದಿದೆ. ಮತ್ತು ತನ್ನ ಸೃಜನಶೀಲ ಚಟುವಟಿಕೆಗಳಿಂದ ವರ್ತಮಾನದ ಬದುಕನ್ನು ಮುಖಾಮುಖಿ ಮಾಡುತ್ತಾ ಬಂದಿದೆ. ಇಂತಹ ಸಮುದಾಯಗಳ ವರ್ತಮಾನದ ಬದುಕು ಹೇಗಿದೆ? ಎಂಬುದೇ ಒಂದು ಪ್ರತ್ಯೇಕ ಅಧ್ಯಯನಕ್ಕೆ ವಸ್ತುವಾಗಬಲ್ಲದು. ಕುಂಬ್ರಿ ಮರಾಠಿ ಸಮುದಾಯ ಶತಮಾನಗಳ ಕಾಲದ ತನ್ನ ನಡಿಗೆಯಲ್ಲಿ ಅನೇಕ ಸಮಸ್ಯೆಗಳನ್ನು ಆತಂಕಗಳನ್ನು ಮುಖಾಮುಖಿ ಮಾಡುತ್ತಲೇ ಬಂದಿದೆ. ಇಂತಹ ಸಮುದಾಯದ ವರ್ತಮಾನದ ಸ್ಥಿತಿಗತಿ ಹೇಗಿದೆ ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

### ಕುಂಬ್ರಿ ಮರಾಠಿಗರ ಆರ್ಥಿಕ ಸಂಕಷ್ಟಗಳು

ಕುಂಬ್ರಿ ಮರಾಠಿಗರು ಮೂಲತಃ ಪಶುಪಾಲಕರು ಮತ್ತು ಕುಮ್ರಿ ಬೇಸಾಯಗಾರರು. ಅರಣ್ಯದಲ್ಲಿಯೇ ಬದುಕು ಕಟ್ಟಿಕೊಂಡು ಬಂದ ಕುಂಬ್ರಿ ಮರಾಠಿಗರು ನಿಸರ್ಗದ ಶಿಶುಗಳಾಗಿ ಬದುಕಿಬಂದವರು. ಅರಣ್ಯವನ್ನೇ ತಮ್ಮ ಸರ್ವಸ್ವ ಎಂದು ತಿಳಿದುಕೊಂಡು ಬಂದವರು. ಅರಣ್ಯ ಅವರಿಗೆ ಬದುಕೂ ಹೌದು, ಅವರ ಗಮ್ಯವೂ ಹೌದು. ಅರಣ್ಯವನ್ನೇ ನಂಬಿಕೊಂಡು

ಬಂದ ಕುಂಬ್ರಿ ಮರಾಠಿಗರಿಗೆ ಅವರ ಅರಣ್ಯ ಅವರ ಕೈತಪ್ಪಿ ಹೋಗಿದೆ. ಅರಣ್ಯ ಈ ಸಮುದಾಯಗಳಿಗೆ ಕೇವಲ ಆರ್ಥಿಕ ಅವಲಂಬನೆ ಮಾತ್ರವಲ್ಲ. ಅರಣ್ಯ ಅವರ ಬದುಕೂ ಹೌದು. ಆದರೆ ಅರಣ್ಯಕ್ಕೆ ಸಂಬಂಧಿಸಿದ ಕಾನೂನುಗಳು ಅವರನ್ನು ಅರಣ್ಯದಿಂದ ದೂರ ತಂದು ನಿಲ್ಲಿಸಿವೆ. 'ಕರ್ನಾಟಕದ ಕರಾವಳಿ, ಮಲೆನಾಡಿನ ಬೆಟ್ಟ ಮತ್ತು ಕಣಿವೆ ಪ್ರದೇಶ, ಅರೆಮಲೆನಾಡು ಮತ್ತು ಬಯಲು ಸೀಮೆಗಳಲ್ಲಿ ಈ ಬುಡಕಟ್ಟುಗಳು ವಿವಿಧ ವೃತ್ತಿಗಳನ್ನು ಅವಲಂಬಿಸಿ ಬದುಕುತ್ತಿವೆ. ಮೇಲ್ಕಾಣಿಸಿದ ಯಾವ ಸಮುದಾಯಗಳಿಗೂ ನಿಶ್ಚಿತ ಆರ್ಥಿಕ ಮೂಲಗಳಿಲ್ಲ. ಮಲೆನಾಡು, ಕರಾವಳಿ ಮತ್ತು ಅರೆಮಲೆನಾಡು ಪ್ರದೇಶಗಳಲ್ಲಿನ ಬುಡಕಟ್ಟುಗಳಿಗೆ ಇರುವ ಕೃಷಿ ಭೂಮಿ ತುಂಬಾ ಕಡಿಮೆ. ಶತಮಾನಗಳಿಂದ ಬುಡಕಟ್ಟುಗಳು ಸಾಗುವಳಿ ಮಾಡಿ ಕೃಷಿ ಮಾಡುತ್ತಿರುವ ಭೂಮಿ ಸರ್ಕಾರದ ಪ್ರಕಾರ ಒತ್ತುವರಿ (Encroachment). ಅದಕ್ಕೆ ಪಾಣಿ ಪಟ್ಟಗಳಿಲ್ಲ. 'ಒತ್ತುವರಿ' ಎಂದು ಹೇಳಲಾಗುವ ಜಮೀನಾದರೂ ಕೇವಲ ಒಂದೆರಡು ಎಕರೆ ಮಾತ್ರ. ಯಾವ ಬುಡಕಟ್ಟುಗಳಿಗೂ ಹತ್ತಾರು ಎಕರೆ ಕಾಫಿ, ಟೀ ತೋಟಗಳಿಲ್ಲ. ಕೃಷಿ ಕೂಲಿಯೇ ಈ ಬೇಸಾಯಗಾರ ಸಮುದಾಯಗಳ ಮುಖ್ಯ ಆರ್ಥಿಕ ಅವಲಂಬನೆ. ಜೇನುಕುರುಬರಂತಹ ಆಹಾರ ಸಂಗ್ರಹಣೆಯ ಹಂತದ ಬುಡಕಟ್ಟುಗಳ ಸ್ಥಿತಿ ಇನ್ನೂ ಚಿಂತಾಜನಕ. ಗೌಳಿಗರಂತಹ ಪಶುಪಾಲಕರು, ಕಾಡಿನ ಉಪಉತ್ಪನ್ನಗಳನ್ನೇ ಆಧರಿಸಿ ಬದುಕುತ್ತಿರುವ ಮೇದ, ಸಿದ್ದಿ, ಬೆಟ್ಟಕುರುಬ, ಕೊರಗ ಮುಂತಾದ ಕರಕುಶಲ ವೃತ್ತಿಗಳನ್ನು ಅವಲಂಬಿಸಿರುವ ಸಮುದಾಯಗಳಿಗೆ ಅರಣ್ಯ ಕಾಯ್ದೆಯ ಕಠೋರ ನಿಯಮಗಳು ತಮ್ಮ ವೃತ್ತಿಗಳನ್ನು ಮುಂದುವರಿಸಲು ಅನುವು ಮಾಡಿಕೊಡುತ್ತಿಲ್ಲ. ಅರಣ್ಯವನ್ನೇ ನಂಬಿಕೊಂಡು ಈ ಸಮುದಾಯಗಳು ಶತಮಾನಗಳಿಂದ ಬದುಕಿ ಬಂದಿವೆ.'[3] ಈಗಾಗಲೇ ಕುಂಬ್ರಿ ಮರಾಠಿಗರಂತಹ ಅನೇಕ ಸಮುದಾಯಗಳು ಕಾಡಿನಿಂದ ಒಕ್ಕಲೆದ್ದು ಹೋಗಿವೆ. ಅರಣ್ಯ ಮತ್ತು ಅರಣ್ಯವಾಸಿಗಳ ನಡುವಿನ ಪಾರಂಪರಿಕ ಸಂಬಂಧವೂ ಕಡಿದು ಹೋಗಿದೆ. ಅರಣ್ಯವು ಈ ಸಮುದಾಯಗಳಿಗೆ ಆಸ್ತಿಯಲ್ಲ, ಅದರಲ್ಲೂ ಖಾಸಗಿ ಆಸ್ತಿಯಂತೂ ಅಲ್ಲವೇ ಅಲ್ಲ. ಅರಣ್ಯ ಆದಿವಾಸಿಗಳ ಸಹಜೀವಿ. ಆದಿವಾಸಿಗಳಿಗೆ ಅರಣ್ಯ ಎಂದರೆ ಬದುಕು, ಬವಣೆ, ಆನಂದ, ಒಟ್ಟಾರೆ ಅವರ ಬದುಕನ್ನು ಆವರಿಸಿರುವ ಲೋಕೋತ್ತರ ಸಂಗತಿ. 'ಭಾರತದ ಸಾಮಾಜಿಕ ಸಂದರ್ಭದಲ್ಲಿ ಅರಣ್ಯ ಮತ್ತು ಸಮುದಾಯಗಳ ಸಂಬಂಧ ಅವಿಚ್ಛಿನ್ನವಾದದ್ದು. ಅರಣ್ಯಗಳು ಸ್ಥಳೀಯ ಸಮುದಾಯಗಳ ಬದುಕಿನ ಭಾಗವಾಗಿಯೇ ಪರಿಭಾವಿಸಲ್ಪಟ್ಟಿವೆ. ಈ ಸಮುದಾಯಗಳು, ಅರಣ್ಯಗಳನ್ನು ಕೇವಲ ಮಳೆ ಸುರಿಸುವ ಮತ್ತು ಹಸಿರಿನಿಂದ ಕಂಗೊಳಿಸಿ ಮನಸ್ಸಿಗೆ ಮುದ ನೀಡುವ ಭೂಭಾಗಗಳನ್ನಾಗಿ ಮಾತ್ರ ಪರಿಗಣಿಸಿರಲಿಲ್ಲ. ಸಮುದಾಯಗಳ ಸಂಸ್ಕೃತಿ ಮತ್ತು

ಆಧ್ಯಾತ್ಮಿಕ ಜಗತ್ತನ್ನು ಅರಣ್ಯಗಳು ರೂಪಿಸುತ್ತಲೇ ಬಂದಿವೆ. ಈ ಕಾರಣದಿಂದಾಗಿ ಸಮುದಾಯಗಳು ಯಾವತ್ತೂ ಅರಣ್ಯವನ್ನು ಉಪಯೋಗವಾದಿ ದೃಷ್ಟಿಕೋನದಿಂದ ನೋಡುವ ಪರಿಪಾಠವನ್ನು ಬೆಳೆಸಿಕೊಂಡಿರಲಿಲ್ಲ. ಅರಣ್ಯಗಳು ಸಮುದಾಯಗಳ ಬದುಕಿನ ಅವಿಭಾಜ್ಯ ಅಂಗಗಳಾಗಿದ್ದವು. ಜೊತೆಗೆ ಅರಣ್ಯವು ಒಂದು 'ಆಸ್ತಿ'ಯಾಗಿ ಪರಿಗಣಿಸಲ್ಪಟ್ಟಿರಲಿಲ್ಲ. ಅರಣ್ಯವು ಆಧ್ಯಾತ್ಮವಾಗಿ, ತಿಳಿವಿನ ಮೂಲವಾಗಿ, ಮನುಷ್ಯನ ಯಾವತ್ತೂ ಸಂಗಾತಿಯಾಗಿ ಸಮುದಾಯಗಳ ಬದುಕಲ್ಲಿ ಹಾಸುಹೊಕ್ಕಾಗಿತ್ತು. ಈ ಹಂತದಲ್ಲಿ ಅರಣ್ಯ ಉಪಭೋಗಕ್ಕೆ ಒಳಗಾಗಿರಲಿಲ್ಲ. ಹಾಗಿದ್ದೂ ಸಹ ಸಮುದಾಯದ ಆರ್ಥಿಕತೆಯನ್ನು ರೂಪಿಸುವಲ್ಲಿ ಅರಣ್ಯ ಉಪಯುಕ್ತ ಪಾತ್ರ ವಹಿಸುತ್ತಲೇ ಇತ್ತು. ಮನುಷ್ಯನ ಸಾಮಾಜಿಕ ಸಂಸ್ಥೆಗಳಾದ ಬೇಟೆ, ಪಶುಪಾಲನೆ ಮತ್ತು ಆದಿಮ ಕೃಷಿ ಹಂತಗಳಲ್ಲಿ ಅರಣ್ಯ ಬಳಕೆಯಾಗುತ್ತಿತ್ತು. ಆದರೆ ಇಂದಿನಂತೆ ಖಿಲಗೊಳ್ಳುವ ಸ್ವರೂಪದಲ್ಲಿ ಬಳಕೆಯಾಗುತ್ತಿರಲಿಲ್ಲ. ಆದಿಮಾನವ ಅಥವಾ ಇಂದಿನ ಆದಿವಾಸಿಗಳು ರೂಢಿಸಿಕೊಂಡಿದ್ದ ಕುಮ್ರಿ ಬೇಸಾಯ ಪದ್ಧತಿಯು ಅರಣ್ಯದ ಸಾವಯವತೆಯನ್ನು ನಾಶ ಮಾಡುವಂತದ್ದಲ್ಲ. ಬದಲಿಗೆ ಅರಣ್ಯವನ್ನು ಮತ್ತು ಅದರ ಸಾವಯವತೆಯನ್ನು ಈ ಕುಮ್ರಿ ಕೃಷಿ ಪದ್ಧತಿಯು ಪೋಷಿಸುತ್ತಿತ್ತು. ಈ ಕಾರಣದಿಂದ ಭಾರತದ ಸ್ಥಳೀಯ ಸಮುದಾಯಗಳಿಗೆ ಅರಣ್ಯವು ಭೋಗಿಸಲ್ಪಡುವ ಆಸ್ತಿಯಲ್ಲ. ಅರಣ್ಯದ ಮೇಲೆ ಖಾಸಗಿ ಒಡೆತನವೂ ಈ ಸಮುದಾಯಗಳಿಗೆ ಸಾಧ್ಯವಾಗಲಿಲ್ಲ. ಕರ್ನಾಟಕದಲ್ಲಿ ಸೋಲಿಗ, ಬೆಟ್ಟಕುರುಬ, ನಾಯಕ, ಎರವ, ಕುಣಬಿ, ಕುಮ್ರಿ ಮರಾಟಿ, ಮರಾಟಿ ನಾಯಕ, ಕೊರಗ, ಕುಡಿಯ, ಗೌಡಲು, ಹಸಲ ಮತ್ತು ಹಾಲಕ್ಕಿ ಒಕ್ಕಲಿಗರು ಈ ಕುಮ್ರಿ ಬೇಸಾಯ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿವೆ. ಆಧುನಿಕಪೂರ್ವ ಕಾಲಘಟ್ಟದವರೆಗೆ ಭಾರತದಲ್ಲಿ ಈ ಸ್ಥಿತಿ ಮುಂದುವರಿದುಕೊಂಡು ಬಂದಿತು. ಆದರೆ ವಸಾಹತು ಆಡಳಿತ ಯಾವತ್ತು ಭಾರತವನ್ನು ಸಂಪೂರ್ಣವಾಗಿ ಆಕ್ರಮಿಸಿಕೊಂಡಿತೋ ಅಂದಿನಿಂದ ಅರಣ್ಯವು ಆಸ್ತಿಯಾಗಿ ರೂಪಾಂತರಗೊಂಡಿತು. ಬುಡಕಟ್ಟುಗಳ ಕುಮ್ರಿ ಬೇಸಾಯ ಪದ್ಧತಿಯನ್ನು ನಿಷೇಧಿಸಲಾಯಿತು. ಬುಡಕಟ್ಟುಗಳು ಕುಮ್ರಿ ಬೇಸಾಯ ಮಾಡುತ್ತಿದ್ದ ಕಣಿವೆಗಳನ್ನು ವಸಾಹತು ಆಡಳಿತ ವಶಪಡಿಸಿಕೊಂಡಿತು. ಮಾರುಕಟ್ಟೆಯಲ್ಲಿ ಬಿಕರಿಯಾಗುವ 'ವಸ್ತು'ವಾಗಿ ಅರಣ್ಯ ಪರಿಭಾವಿಸಲ್ಪಟ್ಟಿತು. ವಸಾಹತುಶಾಹಿ ಆಳ್ವಿಕೆಯಲ್ಲಿ ಸಮುದಾಯಗಳ ಬದುಕಿನ ಭಾಗವಾಗಿದ್ದ ಅರಣ್ಯವು ಸರಕಾರದ, ಬಂಡವಾಳಶಾಹಿಗಳ ಖಾಸಗಿ ಆಸ್ತಿಯಾಗಿ ಬದಲಾಯಿತು. ಇದರ ಜೊತೆಗೆ ಸಮುದಾಯ ಮತ್ತು ಅರಣ್ಯಗಳ ನಡುವೆ ಇದ್ದ ಪಾರಂಪರಿಕ ಸಂಬಂಧಗಳಿಗೂ ಈ ಹಂತದಲ್ಲಿ ಸಂಚಕಾರ ಬಂದೊದಗಿತು. ಅರಣ್ಯವು ಕಂಪನಿ ಆಡಳಿತದ ಸಂದರ್ಭದಲ್ಲಿ ಉಪಭೋಗಕ್ಕೆ ಒಳಗಾಗತೊಡಗಿತು. ಅರಣ್ಯವು ವಸಾಹತು ಆಡಳಿತದ ವಿಸ್ತರಣೆಗೆ ಬಳಕೆಯಾಗ ತೊಡಗಿದ ಮೇಲೆ ಸಮುದಾಯ ಮತ್ತು ಅರಣ್ಯಗಳ ನಡುವಿನ ಪಾರಂಪರಿಕ ಸಂಬಂಧವು

ಕ್ರಮೇಣ ನಶಿಸತೊಡಗಿತು. ಅದರಲ್ಲೂ ಅರಣ್ಯಗಳಲ್ಲಿ ಬದುಕುತ್ತಿದ್ದ ಆದಿವಾಸಿಗಳು ವಸಾಹತು ಆಡಳಿತದ ಅರಣ್ಯ ನೀತಿಗಳಿಂದ ಅತಂತ್ರ ಸ್ಥಿತಿಗೆ ತಳ್ಳಲ್ಪಟ್ಟರು. ಅರಣ್ಯವನ್ನು ಸರ್ವಸ್ವವೆಂದು ಬದುಕುತ್ತಿದ್ದ ಆದಿವಾಸಿಗಳು ವಸಾಹತು ಆಡಳಿತದ ಅರಣ್ಯನೀತಿಯಿಂದಾಗಿ ತಮ್ಮ ವಾಸದ ನೆಲೆಗಳಲ್ಲಿಯೇ ಅನ್ಯರಾಗುವ ಬಿಕ್ಕಟ್ಟನ್ನು ಎದುರಿಸಿತ್ತಿದ್ದಾರೆ.[3] ಕುಂಬ್ರಿ ಮರಾಠಿಗರೂ ಸಹ ಕಾಡಿಂದ ಒಕ್ಕಲೆದ್ದು ಹೋಗಿದ್ದಾರೆ. ಅರಣ್ಯವನ್ನು ಅವಲಂಬಿಸಿಕೊಂಡು ಬಂದಿದ್ದ ಅವರ ಬದುಕು ಕಷ್ಟದಲ್ಲಿದೆ. ಮುಖ್ಯವಾಗಿ ಕುಂಬ್ರಿ ಮರಾಠಿಗರು ಪ್ರಸ್ತುತ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

1. ಕಾಡಿನಿಂದ ಒಕ್ಕಲೇಳುವ ಮತ್ತು ಕಾಡಿನ ಉತ್ಪನ್ನಗಳ ಸಂಗ್ರಹದ ಸಮಸ್ಯೆ
2. ಕೃಷಿ ಮತ್ತು ಕೃಷಿ ಭೂಮಿಯ ಸಮಸ್ಯೆ

ಪಾರಂಪರಿಕವಾಗಿ ಕುಂಬ್ರಿ ಮರಾಠಿಗರು ಕಾಡುತ್ಪನ್ನಗಳ ಮೇಲೆ ಅವಲಂಬಿತರಾದವರು. ಈ ಅಧ್ಯಯನಕ್ಕಾಗಿ ನಡೆದ ಸಮೀಕ್ಷೆಯಲ್ಲಿ ಕುಂಬ್ರಿ ಮರಾಠಿಗರು ಹೇಗೆ ಕಾಡುತ್ಪನ್ನಗಳ ಅವಲಂಬಿತರಾಗಿದ್ದರು ಎಬುದನ್ನು ಗಮನಿಸಬಹುದಾಗಿದೆ.

**ಕೋಷ್ಟಕ 1**

**ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ಲಿಂಗವಾರು ತಾತ್ಕಾಲಿಕ ಕಸುಬುಗಳ ಪ್ರಮಾಣ**

| ತಾತ್ಕಾಲಿಕ ಕಸುಬುಗಳು | ಗಂಡು | ಹೆಣ್ಣು | ಒಟ್ಟು | % |
|---|---|---|---|---|
| ಅರಣ್ಯ ಕಿರು ಉತ್ಪನ್ನಗಳ ಸಂಗ್ರಹ | 5023 | 4281 | 9304 | 99.34 |
| ಬಿದಿರಿನ ಕೆಲಸ | 35 | 0 | 35 | 0.374 |
| ಕಂಟ್ರ್ಯಾಕ್ಟರ್ | 10 | 0 | 10 | 0.107 |
| ಸರಕಾರಿ | 9 | 0 | 9 | 0.096 |
| ತಾತ್ಕಾಲಿಕ | 8 | 0 | 8 | 0.085 |
| ಇತರೆ | 0 | 0 | 0 | 0 |
| | 5085 | 4281 | 9366 | |

ಕುಂಬ್ರಿ ಮರಾಠಿ ಸಮುದಾಯದ ಜನ ಕಾಡುತ್ಪನ್ನಗಳ ಮೇಲೆ ಪಾರಂಪರಿಕವಾಗಿ ಅವಲಂಬಿತರಾದವರು ಶೇ 99.34% ಜನ, ಬಿದಿರಿನ ಕೆಲಸದಲ್ಲಿ ತೊಡಗಿಕೊಂಡವರು

ಶೇ0.374%. ಸರಕಾರಿ ನೌಕರಿಯಲ್ಲಿರುವವರು ಶೇ 0.096% ಜನ ಮಾತ್ರ ಈ ಸಮೀಕ್ಷೆಯ ಕುಂಬ್ರಿ ಮರಾಠಿಗರಿಗೆ ಅರಣ್ಯದ ಉಪಉತ್ಪನ್ನಗಳ ಮೇಲೆ ಅವಲಂಬಿತರಾಗಿರುವುದನ್ನು ಸಾಬೀತಾದಂತಾಗಿದೆ.

ಇಂದು ನಮ್ಮಲ್ಲಿರುವುದು ಸಂಪೂರ್ಣವಾಗಿ ಕೃಷಿ ಪ್ರಧಾನ ವ್ಯವಸ್ಥೆ. ಕುಂಬ್ರಿ ಮರಾಠಿಗರು ಇಂದಿನ ವ್ಯವಸ್ಥೆಯಲ್ಲಿ ಅಲೆಮಾರಿಗಳಾಗಿ ಉಳಿದಿಲ್ಲ. ಕಾಡಿನ ಕಾಯ್ದೆಗಳು ರೂಪಿತಗೊಂಡ ಮೇಲೆ ಸ್ಥಳಾಂತರ ಕೃಷಿ ಸಾಧ್ಯವಿಲ್ಲದ ಕಾರಣ ಅವರ ಅಲೆಮಾರಿತನವೂ ನಿಂತು ಹೋಗಿದೆ. ಏಕೆಂದರೆ ಇವರು ಇತರೆ ಅಲೆಮಾರಿಗಳಂತೆ ತಮ್ಮ ವೃತ್ತಿಗಳನ್ನು ಬದಲಾಯಿಸುವವರೂ ಅಲ್ಲ. ಕೃಷಿ ಮತ್ತು ಆಹಾರ ಸಂಗ್ರಹಣೆಗೆ ಹಾಗೂ ಕರಕುಶಲತೆ ಬಿಟ್ಟು ಬೇರಾವ ವೃತ್ತಿಗಳು ಗೊತ್ತಿರುವವರೂ ಅಲ್ಲ. ಆದ್ದರಿಂದ ಭೂಮಿ ಎಂಬುದು ಇವರಿಗೆ ಅತ್ಯಾವಶ್ಯಕ. ಆದರೆ ಸ್ವಚ್ಛಂದವಾಗಿ ಓಡಾಡಿಕೊಂಡು ಇದ್ದ ಇವರ ಬದುಕು ಅಸ್ಥಿರತೆಗೆ ಬರಲು ಕೆಲವು ಕಾರಣಗಳಿವೆ. ಈಗಾಗಲೇ ಹೇಳಿದಂತೆ ಬುಡಕಟ್ಟುಗಳಿಗೆ ಸ್ವಂತ ಆಸ್ತಿಯ ಕಲ್ಪನೆ ಇರಲಿಲ್ಲ. ತೀರಾ ಮೊದಲಿಗೆ ಆಹಾರ ಸಂಗ್ರಹಣೆ ಮತ್ತು ಬೇಟೆಯಿಂದ ಹೊಟ್ಟೆ ಹೊರೆದುಕೊಳ್ಳುತ್ತಿದ್ದ ಇವರು ಕೃಷಿಯ ಅನ್ವೇಷಣೆಯ ನಂತರ ಕೂಡಾ ಒಂದೆಡೆ ನಿಂತು ಒಂದೇ ಭೂಮಿಯನ್ನು ನಂಬಿ ಬದುಕಿದವರಲ್ಲ. ಇವರ 'ಕುಮ್ರಿ ಬೇಸಾಯ' ಮಾಡುತ್ತಾ ಜಾಗದಿಂದ ಜಾಗಕ್ಕೆ ಸ್ಥಳಾಂತರವಾಗುತ್ತಿದ್ದರು ಅಂದರೆ ಕಾಡೊಳಗಿನ ಒಂದೆರಡು ಎಕರೆಯಷ್ಟು ಭೂಮಿಯನ್ನು ಹಸನು ಮಾಡಿ ಬಿತ್ತನೆ ಮಾಡುವ ಪದ್ಧತಿ. ಈ ಕುಮ್ರಿ ಬೇಸಾಯದ ಎರಡು ಮುಖ್ಯ ಲಕ್ಷಣಗಳೆಂದರೆ ನೇಗಿಲನ್ನು ಬಳಸದೆ ಯಾವುದೇ ತರಹದ ನೇಗಿಲಿನಂತಹ ಸಲಕರಣೆಯನ್ನು ಭೂಮಿಯ ಎದೆಗೆ ಚುಚ್ಚದೆ ಗುದ್ದಲಿಯಿಂದ ಮಾತ್ರ ಅಗೆದು ಮಾಡುವುದು ಹಾಗೂ ನಿರ್ದಿಷ್ಟ ಪ್ರದೇಶದಲ್ಲಿದ್ದ ಮೂರು ಸಲಕ್ಕಿಂತ ಹೆಚ್ಚಿನ ಬಾರಿಗೆ ಬೆಳೆ ತಗೆಯದೆ ಮುಂದಿನ ಪ್ರದೇಶಕ್ಕೆ ಹೋಗುತ್ತಿದ್ದರು. ನೇಗಿಲಿನ ಉಪಯೋಗ ಇರಲಿಲ್ಲ ಎಂದರೆ ಕೃಷಿ ಭೂಮಿಯ ವಿಸ್ತರಣೆ ಕೂಡ ಇರಲಿಲ್ಲ ಎಂದೇ ಅರ್ಥ. ಬ್ರಿಟಿಷರ ಆಗಮನದ ನಂತರ ಬಂದ ಕಬ್ಬಿಣದ ನೇಗಿಲ ಎಷ್ಟರಮಟ್ಟಿಗೆ ಕೃಷಿ ಭೂಮಿಯ ವಿಸ್ತರಣೆ ಮಾಡಿತು ಎಂಬುದು ನಮಗೆಲ್ಲಾ ಗೊತ್ತೇ ಇದೆ. ಯಾವುದೇ ಕಾಡು ಭೂಮಿಯಲ್ಲಿ ಕಾಡು ಕಡಿದರೂ ಅನಂತರ ಅದರ ಪಾಡಿಗೆ ಅದನ್ನು ಏಳು ವರ್ಷ ಬಿಟ್ಟರೆ ಮತ್ತದೇ ಕಾಡು ಆವರಿಸಿಕೊಳ್ಳುತ್ತದೆ, ಇದನ್ನು ತಿಳಿದಿದ್ದ ಈ ಜನರು ಖಾಯಂ ಕೃಷಿ ಭೂಮಿಯ ಬದಲಾಗಿ ಕುಮ್ರಿ ಕೃಷಿಯನ್ನು ಅವಲಂಬಿಸಿ ಆ ಮೂಲಕ ಕಾಡಿಗೆ ಯಾವುದೇ ಅಪಾಯವನ್ನು ಬರದಂತೆ ಸಮತೋಲನವನ್ನು ಕಾಪಾಡಿಕೊಂಡು ಬರುತ್ತಿದ್ದರು. ಹೀಗೆ ಇಡೀ ಕಾಡು ತಮ್ಮದು ಎಂಬ ಮನೋವೈಶಾಲ್ಯದಿಂದ ಬಾಳುವ ಮೂಲಕ ಅದರ ಅಸ್ತಿತ್ವಕ್ಕೆ ಧಕ್ಕೆ ಬಾರದಂತೆ ಬದುಕಿದ

ಇವರನ್ನು ಅತಿಕ್ರಮಿಸಿ ಕಾಡು ಮತ್ತು ಭೂಮಿ 'ನನ್ನದು' ಎಂಬ ಅಹಂಕಾರದಿಂದ ಗುತ್ತಿಗೆ ಹಿಡಿದ ನಾಗರಿಕ ಮನುಷ್ಯನಿಂದಾಗಿ ಅವರು ಅತಂತ್ರದ ಸ್ಥಿತಿ ತಲುಪಿದ್ದಾರೆ. ಜೊತೆಗೆ ಅರಣ್ಯದ ಉತ್ಪನ್ನಗಳ ಮೇಲೂ ಇವರಿಗೆ ಯಾವ ಹಕ್ಕುಗಳೂ ಇಲ್ಲದಂತಾಗಿದೆ. ಇದಕ್ಕೆ ಕಾರಣ ರಾಷ್ಟ್ರೀಯ ಉದ್ಯಾನ ಕಾಯ್ದೆ ಮತ್ತು ರಾಷ್ಟ್ರೀಯ ಉದ್ಯಾನಗಳು.

ರಾಷ್ಟ್ರೀಯ ಉದ್ಯಾನಗಳು ಭಾರತದಲ್ಲಿ ವಸಾಹತು ಕಾಲಘಟ್ಟದಲ್ಲಿಯೇ ಹೆಸರಿಸಲ್ಪಟ್ಟವು. ಆದರೆ 1972 Wild life Profection Act ರಾಷ್ಟ್ರೀಯ ಉದ್ಯಾನಗಳಿಗೆ ಆಧುನಿಕವೆನ್ನಿಸುವ ಸ್ವರೂಪವನ್ನು ಕಲ್ಪಿಸಿತು. ಈ ಕಾಯ್ದೆಯು ಅರಣ್ಯವನ್ನು ಒಂದು ಸ್ವಯಂಪೂರ್ಣ ಮತ್ತು ಸಾಪೇಕ್ಷ ಸಂಗತಿಯನ್ನಾಗಿ ಪರಿಗಣಿಸಿತು. ಅಲ್ಲದೆ ಭಾರತದ ಬಹುಮುಖ್ಯ ಅರಣ್ಯಗಳ ಉಸ್ತುವಾರಿಯನ್ನು ವಿಶ್ವಬ್ಯಾಂಕ್‌ನಂತಹ ಜಾಗತಿಕ ಸಂಸ್ಥೆಗಳು ವಹಿಸಿಕೊಂಡವು. ಜೊತೆಗೆ ಅರಣ್ಯ ಕಾಯ್ದೆಗಳೂ ಸಹ ಹೆಚ್ಚು ಬಿಗಿಯಾದವು. ಅದರಲ್ಲೂ ರಾಷ್ಟ್ರೀಯ ಉದ್ಯಾನಗಳ ಕುರಿತ ಕಾಯ್ದೆಯು ಅರಣ್ಯವನ್ನು ಅದರೊಳಗೆ ಜೀವಿಸುವ ಆದಿವಾಸಿಗಳಿಂದ ರಕ್ಷಿಸಬೇಕು, ರಾಷ್ಟ್ರೀಯ ಉದ್ಯಾನದೊಳಗೆ ಜನವಸತಿಗಳಿರಕೂಡದು ಎಂಬ ನಿಲುವನ್ನು ಉಗ್ರವಾಗಿ ಪ್ರತಿಪಾದಿಸಿತು. ಇದರಿಂದಾಗಿ ಆದಿವಾಸಿಗಳ ಬದುಕೇ ಅತಂತ್ರ ಸ್ಥಿತಿಗೆ ದೂಡಲ್ಪಟ್ಟಿತು. ಶತಮಾನಗಳ ಕಾಲ ತಾವು ಬದುಕಿ ಬಂದಿದ್ದ ಪರಿಸರವನ್ನು ಆದಿವಾಸಿಗಳು ಕಳೆದುಕೊಳ್ಳ ತೊಡಗಿದರು. ರಾಷ್ಟ್ರೀಯ ಉದ್ಯಾನಗಳ ಸೃಷ್ಟಿಯ ತತ್‌ಕ್ಷಣದ ಪರಿಣಾಮವೆಂದರೆ, 'ರಕ್ಷಿತ ಅರಣ್ಯಗಳಿಂದ' ಆದಿವಾಸಿಗಳ ಎತ್ತಂಗಡಿ.

ಒಂದೆಡೆ ಸರಕಾರದ ಉದ್ದೇಶಿತ ಅರಣ್ಯ ಸಂರಕ್ಷಣೆ, ಇನ್ನೊಂದೆಡೆ ಅರಣ್ಯದಲ್ಲಿನ ಆದಿವಾಸಿಗಳ ಅಸ್ತಿತ್ವದ ಪ್ರಶ್ನೆ. ಅರಣ್ಯವನ್ನು ರಕ್ಷಿಸುವ ಮತ್ತು ಅಭಿವೃದ್ಧಿಪಡಿಸುವ ಸರಕಾರದ ಉದ್ದೇಶಗಳಿಗೆ ಮತ್ತು ಆದಿವಾಸಿಗಳ ಸಾಮಾಜಿಕಾರ್ಥಿಕ ಬದುಕಿನ ಅಸ್ತಿತ್ವದ ಕುರಿತ ಬಿಕ್ಕಟ್ಟುಗಳಿಗೆ ಯಾವತ್ತೂ ಸಂಘರ್ಷಾತ್ಮಕ ಮುಖಾಮುಖಿ ನಡೆಯುತ್ತಲೇ ಬಂದಿದೆ. ಅರಣ್ಯವನ್ನು ತಮ್ಮ ಜೀವನ ನಿರ್ವಹಣೆಗಾಗಿ ಯಾವತ್ತೂ ಅವಲಂಬಿಸಿಕೊಂಡು ಬಂದ ಆದಿವಾಸಿಗಳು ರಾಷ್ಟ್ರೀಯ ಉದ್ಯಾನ ಕಾಯ್ದೆಯ ಪ್ರಕಾರ ಅರಣ್ಯವನ್ನು ಯಾವ ಕಾರಣಗಳಿಗೂ ಬಳಸುವಂತಿಲ್ಲ. ಅರಣ್ಯದ ಉತ್ಪನ್ನಗಳನ್ನು ಸಂಗ್ರಹಿಸುವ, ಅದನ್ನು ಮಾರಾಟ ಮಾಡುವ ಆದಿವಾಸಿಗಳ ಪಾರಂಪರಿಕ ಹಕ್ಕುಗಳನ್ನು ರಾಷ್ಟ್ರೀಯ ಉದ್ಯಾನ ನೀತಿ ಕಿತ್ತುಕೊಂಡಿತು. ಅಷ್ಟೇ ಅಲ್ಲದೆ ಅರಣ್ಯದಲ್ಲಿ ಜನವಸತಿಗಳಿರಕೂಡದು ಎಂದು ಆದಿವಾಸಿಗಳನ್ನು ರಾಷ್ಟ್ರೀಯ ಉದ್ಯಾನಗಳಿಂದ ಒಕ್ಕಲೆಬ್ಬಿಸುವುದು ಸರ್ವೇಸಾಮಾನ್ಯ ಸಂಗತಿಯಾಯಿತು. 'ನಾಗರಿಕ ಜಗತ್ತಿನಿಂದ' ದೂರವಿದ್ದ, ಕಾಡನ್ನೇ ಆಶ್ರಯಿಸಿದ್ದ ಆದಿವಾಸಿಗಳು ಈ ಒಕ್ಕಲೆಬ್ಬಿಸುವಿಕೆಯಿಂದ ದಿಕ್ಕೆಟ್ಟು ಹೋದರು. ದೇಶದ ಕೆಲವೆಡೆ ಆದಿವಾಸಿಗಳು ಈ ಅರಣ್ಯ ನೀತಿಯ ವಿರುದ್ಧ ಹೋರಾಟಗಳನ್ನೂ ಕೈಗೊಂಡರು. ಸರಕಾರಗಳು ಒಕ್ಕಲೆದ್ದ

ಆದಿವಾಸಿಗಳಿಗೆ ಸರಿಯಾಗಿ ಪುನರ್ವಸತಿ ಕಲ್ಪಿಸಲಿಲ್ಲ. ಹೀಗೆ ಸ್ವಾತಂತ್ರ್ಯಾನಂತರ ವಿವಿಧ ಅಭಿವೃದ್ಧಿ ಯೋಜನೆಗಳಿಂದ ಒಕ್ಕಲೆದ್ದ ಸುಮಾರು 21.3 ಮಿಲಿಯನ್ ಜನರಲ್ಲಿ 8.54 ಮಿಲಿಯನ್ ಜನ ಆದಿವಾಸಿಗಳಿದ್ದಾರೆ. ಇವರು ತಮ್ಮ ಪಾರಂಪರಿಕ ವಾಸದ ನೆಲೆಗಳನ್ನು ಮಾತ್ರವಲ್ಲದೆ ಜೀವಿಸುವ ಹಕ್ಕನ್ನೂ ಕಳೆದುಕೊಂಡು ನಿರ್ಗತಿಕರಾಗಿದ್ದಾರೆ. ಏಕೆಂದರೆ ಆದಿವಾಸಿಗಳ ಬಳಿ ನಾಗರಿಕ ಆಡಳಿತ ವ್ಯವಸ್ಥೆ ಕೇಳುವ ಹಕ್ಕು ಪತ್ರಗಳಾಗಲಿ, ಕಾನೂನು ಬದ್ಧ ಒಡೆತನದ ಸಾಕ್ಷಿಗಳಾಗಲಿ ಇರುವುದಿಲ್ಲ. ಈ ಕಾರಣಕ್ಕಾಗಿ ಆದಿವಾಸಿಗಳು 'ಮುಖ್ಯವಾಹಿನಿ'ಯ ಜನರಿಂದ ಅನೇಕ ಬಗೆಯ ಶೋಷಣೆಗಳಿಗೆ ಒಳಗಾಗುವ ಸಂದರ್ಭಗಳು ತಲೆದೋರುತ್ತಾ ಬಂದಿವೆ. ಇದನ್ನು ಮನಗಂಡು ಸ್ವಾತಂತ್ರ್ಯನಂತರ, ಅರಣ್ಯ ಮತ್ತು ಆದಿವಾಸಿಗಳನ್ನು ಜೊತೆಯಲ್ಲೇ ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಯೋಜನೆಗಳನ್ನು ರೂಪಿಸಲು ಅನೇಕ ಆಯೋಗಗಳನ್ನು ಭಾರತ ಸರ್ಕಾರ ನೇಮಿಸಿದೆ. ಸ್ವತಃ ನೆಹರು ಆದಿವಾಸಿಗಳನ್ನು ಅಪಾರವಾಗಿ ಪ್ರೀತಿಸುತ್ತಿದ್ದರು. ಬುಡಕಟ್ಟುಗಳ ಜೊತೆಗೇ ಬದುಕಿದ ವೆರಿಯರ್ ಎಲ್ವಿನ್ ಆದಿವಾಸಿಗಳ ಸಹಜ ಬದುಕನ್ನು ಅವರ ಪರಿಸರದಲ್ಲಿಯೇ ಉಳಿಸಿ ಬೆಳೆಸುವ ಮೂಲಕ ಅವರ ಅಭಿವೃದ್ಧಿಯನ್ನು ಹೇಗೆ ಸಾಧಿಸಬಹುದು ಎಂಬುದನ್ನು ನೆಹರುರವರಿಗೆ ಮನವರಿಕೆ ಮಾಡಿಕೊಟ್ಟರು. ಈ ಹಿನ್ನೆಲೆಯಲ್ಲಿ ಆದಿವಾಸಿಗಳ ಅಭಿವೃದ್ಧಿಗಾಗಿ ಪಂಚಶೀಲ ತತ್ವಗಳನ್ನ ನೆಹರು ರೂಪಿಸಿದರು. ಅಲ್ಲದೆ ಆದಿವಾಸಿಗಳ ಕಾಡಿನ ಮುಗ್ಧ ಪರಿಸರವನ್ನು ಹೊರಗಿನ ಜನ ಯಾವ ಕಾರಣಕ್ಕೂ ಕದಡಬಾರದೆಂದು ನೆಹರು ಪದೇ ಪದೇ ತಮ್ಮ ಭಾಷಣಗಳ ಮೂಲಕ ಕರೆ ನೀಡುತ್ತಿದ್ದರು. ಆದಿವಾಸಿಗಳು ಕಾಡಲ್ಲಿಯೇ ಇದ್ದು, ಅವರಷ್ಟಕ್ಕೆ ಅವರು ಅಭಿವೃದ್ಧಿಯ ಕಡೆಗೆ ನಡೆದು ಹೋಗಬೇಕೆಂದು ನೆಹರು ಬಯಸುತ್ತಿದ್ದರು. ಅವರ ಕಾಲದಲ್ಲಿಯೇ ಮೊದಲ ಬಾರಿಗೆ ಅರಣ್ಯ ಮತ್ತು ಆದಿವಾಸಿಗಳ ಪಾರಂಪರಿಕ ಸಂಬಂಧದ ಕುರಿತು ವೈಜ್ಞಾನಿಕ ವರದಿಯನ್ನು ಸಿದ್ಧಪಡಿಸಲು ಧೇಬರ್ ಆಯೋಗವನ್ನು ನೇಮಿಸಲಾಯಿತು. ಆನಂತರ ಅನೇಕ ಆಯೋಗಗಳು ಸ್ವಾತಂತ್ರ್ಯಾನಂತರ ನೇಮಿಸಲ್ಪಟ್ಟಿವೆ. ಆದಿವಾಸಿಗಳು ಅರಣ್ಯದ ಜೊತೆ ಹೊಂದಬಹುದಾದ ಸಂಬಂಧ ಮತ್ತು ಈ ಸಂಬಂಧದ ಕುರಿತು ಸರ್ಕಾರ ಈಗಾಗಲೇ ಅಂಗೀಕರಿಸಿರುವ ಅರಣ್ಯ ನೀತಿಯಲ್ಲಿ ಇರಬಹುದಾದ ಅಡೆತಡೆಗಳನ್ನು ಸರಿಪಡಿಸುವ ಕುರಿತು ಅನೇಕ ಸಲಹೆ ಸೂಚನೆಗಳನ್ನು ಸರಕಾರ ರಚಿಸಿದ ಎಲ್ಲ ಆಯೋಗಗಳು ನೀಡಿವೆ. ಅರಣ್ಯ ಮತ್ತು ಆದಿವಾಸಿಗಳ ನಿತ್ಯದ ಸಂಬಂಧಗಳನ್ನು ಸುಧಾರಿಸುವ ನಿಟ್ಟಿನಲ್ಲಿ ಸರಕಾರ ರಚಿಸಿದ ಎಲ್ಲ ಆಯೋಗಗಳು ಮಹತ್ವದ ಶಿಫಾರಸ್ಸುಗಳನ್ನು ಮಾಡಿವೆ.

ಆದರೆ ಈ ಆಯೋಗಗಳ ಯಾವ ಶಿಫಾರಸುಗಳೂ ಜಾರಿಗೆ ಬಂದಿಲ್ಲ. ಕುಂಬ್ರಿ ಮರಾಠಿಗರ ಕಾಡಿನ ಜೊತೆಗಿನ ಸಂಬಂಧವನ್ನು ಕಡಿದು ಹಾಕಲಾಗಿದೆ. ಜೊತೆಗೆ ಅವರಿಗೆ ಅಲ್ಲಿನ ಕಾಡುತ್ಪನ್ನಗಳ ಮೇಲಿನ ಸಹಜ ಹಕ್ಕುಗಳನ್ನೂ ನಿರಾಕರಿಸಲಾಗುತ್ತದೆ. ಆದರೆ ಕುಂಬ್ರಿ

ಮರಾಠಿಗರಿಗೆ ಕಾಡಿನ ಮೇಲೆ ಮತ್ತು ಕಾಡುತ್ಪನ್ನಗಳ ಮೇಲೆ ಪಾರಂಪರಿಕ ಹಕ್ಕುಗಳಿವೆ. ಆದರೆ ಕಾಡುತ್ಪನ್ನಗಳ ಮೇಲೆ ಅವರ ಹಕ್ಕನ್ನು ನಿರಾಕರಿಸಿದ ಮೇಲೆ ಅವರೆಲ್ಲ ಭೂಮಾಲಿಕರ ತೋಟಗಳಲ್ಲಿ ಕೃಷಿಕೂಲಿಗಳಾಗಿ ದುಡಿಯುತ್ತಿದ್ದಾರೆ. ಅದಕ್ಕೆ ಈ ಕೆಳಕಂಡ ಕೋಷ್ಟಕವನ್ನು ನೋಡಬಹುದು.

**ಕೋಷ್ಟಕ 2**

**ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ಲಿಂಗವಾರು ಕಸುಬುಗಳ ಪ್ರಮಾಣ**

| ಕಸುಬುಗಳು | ಗಂಡು | ಹೆಣ್ಣು | ಒಟ್ಟು | % |
|---|---|---|---|---|
| ಕೃಷಿ/ಕೃಷಿಕೂಲಿ | 4760 | 4736 | 9496 | 82.65 |
| ದಿನಗೂಲಿ | 680 | 630 | 1310 | 11.4 |
| ಮನೆಕೆಲಸ | 68 | 279 | 347 | 3.02 |
| ತರಕಾರಿ ವ್ಯಾಪಾರ | 51 | 149 | 200 | 1.741 |
| ಹೂವಿನ ವ್ಯಾಪಾರ | 12 | 40 | 52 | 0.453 |
| ಕಾಡುಜನ್ಯ ಮಾರಾಟ | 85 | 0 | 85 | 0.74 |
| ಕಟ್ಟಿಗೆ ಮಾರಾಟ | 0 | 0 | 0 | 0 |
| **ಒಟ್ಟು** | **5656** | **5834** | **11490** | |

ಕುಂಬ್ರಿ ಮರಾಠಿ ಸಮುದಾಯದ ಜನ ಕಾಡುತ್ಪನ್ನಗಳ ಮೇಲೆ ತಮ್ಮ ಹಕ್ಕುಗಳನ್ನು ಕಳೆದಕೊಂಡ ನಂತರ ಶೇ 82.65% ಜನ ಕೃಷಿಕೂಲಿಗಳಾಗಿಯೂ, ಶೇ 11.4% ಜನ ದಿನಗೂಲಿಗಳಾಗಿಯೂ ಕೆಲಸ ಮಾಡುತ್ತಿದ್ದಾರೆ. ಅಂದರೆ 83.69% ಜನ ಇಂದು ಆರ್ಥಿಕವಾಗಿ ಅತಂತ್ರ ಸ್ಥಿತಿಯನ್ನು ತಲುಪಿದ್ದಾರೆ. ಜೊತೆಗೆ ಉದ್ಯೋಗದ ಯಾವ ಖಾತ್ರಿ ಇಲ್ಲದ ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಈ ಕಾರಣಕ್ಕಾಗಿ ಕುಂಬ್ರಿ ಮರಾಠಿಗರಿಗೆ ಅರಣ್ಯದ ಉಪಉತ್ಪನ್ನಗಳ ಮೇಲಿನ ಹಕ್ಕುಗಳು ಸಿಗುವಂತಾಗಬೇಕು. 2006ರ ಆದಿವಾಸಿ ಮತ್ತು ಪಾರಂಪರಿಕ ಅರಣ್ಯವಾಸಿ ಕಾಯ್ದೆಯ ಪ್ರಕಾರ ಅವರ ಹಕ್ಕುಗಳು ಲಭ್ಯವಾಗಬೇಕು.

## ಕುಂಬ್ರಿ ಮರಾಠಿಗರ ವಸತಿ ಸಮಸ್ಯೆ

ಪಶ್ಚಿಮ ಘಟ್ಟ ಪ್ರದೇಶದ ಹಳ್ಳಿಗಳ ಜಾಗಗಳಲ್ಲಿ ನೆಲೆ ನಿಂತ ಕುಂಬ್ರಿ ಮರಾಠಿಗರು ಮಣ್ಣಿನ ನೆಲಹಾಸು, ಗುರುಗೆ ಎಂಬ ಕಾಡು ಗಿಡದ ತಟ್ಟಿಯನ್ನು ಹೊಂದಿದ ತಾಳೆಗರಿ

ಹೊದಿಕೆ, ಹುಲ್ಲಿನ ಹೊದಿಕೆಯ ಮನೆಗಳನ್ನು ನಿರ್ಮಿಸುತ್ತಿದ್ದು, ಈಗಲೂ ಹಲವಾರು ಕಡೆಗಳಲ್ಲಿ ಇಂತಹ ಮನೆಗಳನ್ನು ಕಾಣಬಹುದಾಗಿದೆ. ಸುಮಾರು 30 ವರ್ಷಗಳಿಂದೀಚೆಗೆ ಮಣ್ಣಿನ ಗೋಡೆ, ಹಂಚು ಹಾಗೂ ಅಡಿಕೆ ಸೋಗೆಯ ಮುಚ್ಚಿಗೆ ಮನೆಯನ್ನು ನಿರ್ಮಿಸಿಕೊಂಡಿರುವುದು ಕಂಡು ಬರುತ್ತದೆ. ಕೆಲವರು ಸಿಮೆಂಟಿನ ನೆಲಹಾಸು, ಕಲ್ಲಿನ ಗೋಡೆ, ಹಂಚಿನ ಮುಚ್ಚಿಗೆ ಮಾಡಿಕೊಂಡಿದ್ದಾರೆ. ಹೆಚ್ಚಿನವರು ಮಣ್ಣಿನ ನೆಲಹಾಸು, ಮಣ್ಣಿನ, ಅರೆಬರೆ ಕಲ್ಲಿನ ಗೋಡೆ, ಹಂಚು ಮತ್ತು ಅಡಿಕೆ ಸೋಗೆಯಿಂದ ನಿರ್ಮಿಸಿದ ಮನೆಗಳಲ್ಲಿ ವಾಸಿಸುತ್ತಿದ್ದಾರೆ. ವಿಶೇಷವೆಂದರೆ ಇವರು ಮನೆಯೊಳಗೆ ಸದಾ ಬೆಚ್ಚಗಿರಲು ಹೊಡಚಲು ಬೆಂಕಿಯನ್ನು ಹಾಕಿಯೇ ಇರುವುದು ಕಾಣುತ್ತವೆ. ಕುಂಬ್ರಿ ಮರಾಠಿಗರ ವಸತಿ ವ್ಯವಸ್ಥೆಯನ್ನು ಈ ಕೋಷ್ಟಕದ ಮೂಲಕ ನೋಡಬಹುದು.

**ಕೋಷ್ಟಕ 3**

**ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ತಾಲೂಕುವಾರು ಹಾಗೂ ಕುಟುಂಬವಾರು ಮನೆಗಳ ಪ್ರಮಾಣ**

| ಕ್ರಸಂ. | ತಾಲೂಕುಗಳು | ಕುಟುಂಬಗಳು | ಮನೆಗಳ ಮಾದರಿಮನೆಯ ನೆಲದ ಮಾದರಿ | | | | | | | |
|---|---|---|---|---|---|---|---|---|---|---|
| | | | ಗುಡಿಸಲು | ಟಿನ್ | ಮಾಳಿಗೆ | ಆರ್‌ಸಿಸಿ | ಹೆಂಚಿನ | ಆಶ್ರಯಮನೆ | ಮಣ್ಣು | ಸಿಮೆಂಟು |
| 1 | ಅಂಕೋಲಾ | 247 | 97 | | | | 114 | 36 | 73 | 174 |
| 2 | ಕುಮಟಾ | 399 | 98 | | | | 261 | 40 | 32 | 367 |
| 3 | ಹೊನ್ನಾವರ | 328 | 16 | | | | 266 | 46 | 16 | 312 |
| 4 | ಭಟ್ಕಳ | 401 | 15 | | | | 356 | 30 | 15 | 386 |
| 5 | ಶಿರಸಿ | 1282 | 22 | | | | 1185 | 75 | 22 | 1260 |
| 6 | ಸಿದ್ದಾಪುರ | 429 | 8 | | | | 386 | 35 | 8 | 421 |
| 7 | ಯಲ್ಲಾಪುರ | 188 | 5 | | | | 170 | 13 | 5 | 183 |
| 8 | ಮುಂಡಗೊಡ | 113 | 6 | | | | 98 | 9 | 6 | 107 |
| | **ಒಟ್ಟು** | **3387** | **267** | 0 | 0 | 0 | **2836** | **284** | **177** | **3210** |

ಕುಂಬ್ರಿ ಮರಾಠಿಗರ ಬಹುತೇಕ ಮನೆಗಳು ಗುಡಿಸಲು ಇಲ್ಲವೆ ಮಣ್ಣಿನ ಮಾದರಿಯವು. ಹೀಗೆ ಕಟ್ಟಿಕೊಂಡ ಮನೆಗಳೆಲ್ಲವೂ ಅರಣ್ಯದೊಳಗೇ ಇರುವುದರಿಂದ ಈವರೆಗೂ ಸುಮಾರು ಶೇಕಡಾ 90 ರಷ್ಟು ಮನೆಗಳಿಗೆ, ಇವರ ಜಮೀನುಗಳಿಗೆ ಹಕ್ಕು ಪತ್ರಗಳಿಲ್ಲ. ಇಂದಿಗೂ ಹಕ್ಕು ಪತ್ರಕ್ಕಾಗಿ ಹೋರಾಟಗಳು, ವ್ಯಾಜ್ಯ ವ್ಯವಹಾರಗಳು ನಡೆಯುತ್ತಲೆ ಇವೆ.




ಈ ಕೋಷ್ಟಕದ ಪ್ರಕಾರ ಕುಂಬ್ರಿ ಮರಾಠಿ ಸಮುದಾಯವು ಅರಣ್ಯ ಪ್ರದೇಶದಲ್ಲಿ ವಾಸಿಸುವುದರಿಂದ ಹಾಗೂ ಮಳೆ ಪ್ರಮಾಣವು ಹೆಚ್ಚಿರುವುದರಿಂದ ಪ್ರತಿಶತ 84% ರಷ್ಟು ಕುಟುಂಬಗಳು ಹಂಚಿನ ಮನೆಗಳನ್ನು ಹೊಂದಿರುತ್ತವೆ. ಅವುಗಳಲ್ಲಿ ಸ್ಥಳೀಯ ಕರಿಹೆಂಚಿನ ಮನೆಗಳು ಹೆಚ್ಚು. ಹುಲ್ಲು ಗುಡಿಸಲು ಹೊಂದಿರುವ ಕುಟುಂಬಗಳು ಪ್ರತಿಶತ 8% ಇದ್ದು, ಈ ಸಮುದಾಯ ಆರ್ಥಿಕವಾಗಿ ದುಸ್ಥಿತಿಯಲ್ಲಿರುವುದರಿಂದ ಅವರು ವಾಸಿಸುವ ಮನೆಗಳೂ ಉತ್ತಮ ಸ್ಥಿತಿಯಲ್ಲಿಲ್ಲ. ಸರಕಾರಿ ಮಹತ್ತರ ವಸತಿ ಯೋಜನೆಗಳಾದ ಇಂದಿರಾ ಆವಾಸ, ಅಂಬೇಸ್ಕರ ವಸತಿ ಯೋಜನೆ ಮತ್ತು ಜನರ ವಸತಿ ಯೋಜನೆಗಳು ಇವರಿಗೆ ತಲುಪಿಲ್ಲ. ಈಗ ವಿದ್ಯುತ್ ಸಂಪರ್ಕದ ಭಾಗ್ಯಜ್ಯೋತಿ ಯೋಜನೆಯಡಿಯಲ್ಲಿ ವಿದ್ಯುಚ್ಛಕ್ತಿ ಸಂಪರ್ಕ ಹೊಂದಿರುವವರು ಅತ್ಯಂತ ಕಡಿಮೆ. ಅತಿ ಕಡುಬಡವರಾದ ಬಹುಸಂಖ್ಯಾತರು ಇನ್ನೂ ವಿದ್ಯುತ್ ಸಂಪರ್ಕವನ್ನೇ ಪಡೆದಿಲ್ಲ. ಇನ್ನೂ ಕೆಲವೆಡೆಗೆ ವಿದ್ಯುತ್ ಸೌಲಭ್ಯವು ದೊರಕಿಲ್ಲ. ಇನ್ನೊಂದು ದುರದೃಷ್ಟಕರ ವಿಷಯವೆಂದರೆ ಹುಲ್ಲು ಹೊದಿಕೆಯ ಮನೆಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿಲ್ಲ.

## ಕುಂಬ್ರಿ ಮರಾಠಿಗರಲ್ಲಿ ಉದ್ಯೋಗ ಮತ್ತು ನಿರುದ್ಯೋಗ

ಕುಂಬ್ರಿ ಮರಾಠಿಗರಲ್ಲಿ ಶೈಕ್ಷಣಿಕ ಜಾಗೃತಿ ಮೂಡಿದೆಯಾದರೂ ಅಕ್ಷರಸ್ಥರನ್ನಾಗಿಸುವಲ್ಲಿ ಮಾತ್ರ ಸಾಧ್ಯವಾಗಿದೆ. ಈಗಾಗಲೇ ಹೇಳಲಾದ ಕಾರಣಗಳಿಂದ ಕೇವಲ ವ್ಯವಹಾರಿಕ ಶಿಕ್ಷಣವನ್ನು ಮಾತ್ರ ಪಡೆದಿದ್ದಾರೆ. ಬೆರಳೆಣಿಕೆಯಷ್ಟು ಜನ ಉನ್ನತ ಶಿಕ್ಷಣ ಹೊಂದಿ ನೌಕರಿ ಮಾಡುತ್ತಿದ್ದರೂ ಸಹ ಕುಂಬ್ರಿ ಮರಾಠಿಗರ ಮುಖ್ಯ ಕಸುಬು ಕೃಷಿ, ಕೃಷಿ ಕೂಲಿ, ಅರಣ್ಯ ಕಿರು ಉತ್ಪನ್ನಗಳ ಸಂಗ್ರಹವೇ ಆಗಿದೆ. ಆರಂಭದಲ್ಲಿ ಸ್ಥಳಾಂತರ ಬೇಸಾಯ ಮಾಡಿಕೊಂಡಿದ್ದ ಕುಂಬ್ರಿ ಮರಾಠಿಗರು ಪಶ್ಚಿಮ ಘಟ್ಟದ ಕಾಡುಗಳ ಕೊಳ್ಳ ಪ್ರದೇಶಗಳಲ್ಲಿ ನೆಲೆ ನಿಂತರು. ಆರಂಭದಲ್ಲಿ ರಾಗಿ

ಬೆಳೆಯುತ್ತಿದ್ದು ಈಗ ಕೆಲವರು ಸಣ್ಣ ಪ್ರಮಾಣದಲ್ಲಿ ಅಡಿಕೆ, ಕಬ್ಬು, ಯಾಲಕ್ಕಿ, ಕಾಳು ಮೆಣಸು, ಬಾಳೆ, ತೆಂಗು ಬೆಳೆಯುತ್ತಿದ್ದಾರೆ. ಹೀಗೆ ಬೆಳೆದರೂ ಸಹ ಮುಖ್ಯ ಕಸುಬು ಕಿರು ಅರಣ್ಯ ಉತ್ಪನ್ನಗಳ ಸಂಗ್ರಹವೆ ಆಗಿರುತ್ತದೆ. ಕೆಲವರು ಹತ್ತಿರದ ಗ್ರಾಮಗಳಿಗೆ ಕೃಷಿ ಕೂಲಿಗಾಗಿ ಹೋಗುತ್ತಿದ್ದಾರೆ. ಅರಣ್ಯ ಉತ್ಪನ್ನಗಳ ಲಭ್ಯತೆಯ ಪ್ರಮಾಣ ಇಳಿಕೆಯಿಂದ ಕೆಲವು ಕಡೆಗಳಲ್ಲಿ ಹತ್ತಿರದ ಊರುಗಳಿಗೆ ಕೃಷಿ ಕೂಲಿಗಾಗಿ ಹಾಗೂ ಇತರ ಕೂಲಿ ಕೆಲಸಗಳಿಗಾಗಿ ಹೋಗುತ್ತಿರುವುದು ಕ್ಷೇತ್ರ ಕಾರ್ಯದ ಸಮಯದಲ್ಲಿ ಕಂಡು ಬರುತ್ತದೆ. ಸಾಮಾನ್ಯವಾಗಿ ಈ ಸಮುದಾಯಗಳು ಸಂಗ್ರಹಿಸಿದ ಅರಣ್ಯ ಉತ್ಪನ್ನಗಳನ್ನು ದಲ್ಲಾಳಿಗಳು ಇವರ ಹಳ್ಳಿಗಳಿಗೆ ಬಂದು ಖರೀದಿಸಿ ಅವರೇ ನಿಗದಿಪಡಿಸಿದ ದರಕೊಟ್ಟು ಹೋಗುತ್ತಿದ್ದರು. ಇದರಿಂದ ತಮಗೆ ಆಗುತ್ತಿರುವ ಮೋಸ ಅಥವಾ ತಾವು ಸಂಗ್ರಹಿಸಿದ ಉತ್ಪನ್ನಗಳಿಗೆ ಇರುವ ಬೆಲೆ ತಿಳಿದಿರಲಿಲ್ಲ. ಈಗ ಕೆಲವು ಕಡೆಗಳಲ್ಲಿ ಈ ಸಮುದಾಯದ ಯುವಕರೇ ಉತ್ಪನ್ನಗಳನ್ನು ಸಂಗ್ರಹಿಸಿ ನ್ಯಾಯಯುತ ಬೆಲೆಗೆ ಮಾರುವ ಕಾರ್ಯದಲ್ಲಿ ತೊಡಗಿರುವುದು ಕಂಡು ಬರುತ್ತದೆ. ಇದರಿಂದ ದಲ್ಲಾಳಿಗಳ ಹಾವಳಿ ಕಡಿಮೆ ಆಗಿದೆ ಎಂದು ಸಮುದಾಯದ ಹಿರಿಯರು ಹೇಳುತ್ತಾರೆ.

ಆರಂಭದಲ್ಲಿ ಸ್ಥಳಾಂತರ ಬೇಸಾಯ ಪದ್ಧತಿ ಹೊಂದಿರುವ ಕುಂಬ್ರಿ ಮರಾಠಿಗರ ಕುಟುಂಬಗಳು ನೆಲಸಮತಟ್ಟು ಮಾಡಿ ಭತ್ತ, ಕಬ್ಬು, ಅಡಿಕೆ, ಬಾಳೆ ಬೆಳೆಯುತ್ತಿದ್ದರೂ ಸಹ ಅದರ ಪ್ರಮಾಣ ಅತಿ ಚಿಕ್ಕ ಮಟ್ಟದ್ದಾಗಿರುತ್ತದೆ. ಕಾಡು ಪ್ರದೇಶದಿಂದಾವೃತ ಹಿಡುವಳಿಗಳು 10 ಗುಂಟೆ, 20 ಗುಂಟೆ ಜಾಗವನ್ನು ಹೊಂದಿದ್ದು, ಇವರಲ್ಲಿ 1–2 ಎಕರೆ ಹೊಂದಿದವರು ಎಂದರೆ ದೊಡ್ಡ ಜಮೀನ್ದಾರರಿದ್ದಂತೆ.

**ಕೋಷ್ಟಕ 4**

**ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ತಾಲೂಕುವಾರು, ಲಿಂಗವಾರು ಕಾಯಕಸ್ಥರ ಹಾಗೂ ನಿರುದ್ಯೋಗಿಗಳ ಪ್ರಮಾಣ**

| ಕ್ರಸಂ. | ತಾಲೂಕುಗಳು | ಕುಟುಂಬಗಳು | ಕಾಯಕರ್ಹರುಕಾಯಕಸ್ಥರುನಿರುದ್ಯೋಗಿಗಳು | | | | | | | | |
|---|---|---|---|---|---|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| 1 | ಅಂಕೋಲಾ | 247 | 353 | 325 | 678 | 435 | 486 | 921 | –82 | –161 | –243 |
| 2 | ಕುಮಟಾ | 399 | 758 | 841 | 1599 | 868 | 846 | 1714 | –110 | –5 | –115 |
| 3 | ಹೊನ್ನಾವರ | 328 | 455 | 631 | 1086 | 517 | 785 | 1302 | –62 | –154 | –216 |
| 4 | ಭಟ್ಕಳ | 401 | 855 | 860 | 1715 | 704 | 638 | 1342 | 151 | 222 | 373 |
| 5 | ಶಿರಸಿ | 1282 | 1900 | 2087 | 3987 | 2136 | 2256 | 4392 | –236 | –169 | –405 |

| | | | | | | | | | | | |
|---|---|---|---|---|---|---|---|---|---|---|---|
| 6 | ಸಿದ್ದಾಪುರ | 429 | 705 | 810 | 1515 | 687 | 551 | 1238 | 18 | 259 | 277 |
| 7 | ಯಲ್ಲಾಪುರ | 188 | 319 | 269 | 588 | 209 | 179 | 388 | 110 | 90 | 200 |
| 8 | ಮುಂಡಗೊಡ | 113 | 159 | 174 | 333 | 100 | 93 | 193 | 59 | 81 | 140 |
| | **ಒಟ್ಟು** | **3387** | **5504** | **5997** | **11501** | **5656** | **5834** | **11490** | **338** | **652** | **990** |

ಮೇಲಿನ ಕೋಷ್ಟಕದ ಪ್ರಕಾರ ಕುಂಬ್ರಿ ಮರಾಠಿಗರಲಿ ನಿರುದ್ಯೋಗಿಗಳ ಪ್ರಮಾಣ ಕಡಿಮೆ ಇದೆ. ಆದರೆ, ಉದ್ಯೋಗ ಮಾಡುವವರೆಲ್ಲ ಕೃಷಿಕಾರ್ಮಿಕರೇ ಆಗಿದ್ದಾರೆ.




ಸಾಮಾನ್ಯವಾಗಿ ಸಣ್ಣ ಪುಟ್ಟ ಜಮೀನು ಹೊಂದಿದವರೂ ಸಹ ಆಕಳು, ಎಮ್ಮೆ, ಕುರಿ, ಎತ್ತುಗಳನ್ನೂ ಸಾಕುವುದು ಸಾಮಾನ್ಯವಾಗಿದೆ. ದನಕರುಗಳನ್ನು ತುಂಬಾ ಪ್ರೀತಿಯಿಂದ ಸಾಕುವ ಇವರು ದೀಪಾವಳಿ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸಿ ದನಕರುಗಳನ್ನು ಪೂಜಿಸುತ್ತಾರೆ. ವಿಶೇಷವಾಗಿ ಹಾಲು ಮತ್ತು ಗೊಬ್ಬರಕ್ಕಾಗಿ ದನಗಳನ್ನು ಸಾಕುವುದೇ ಹೆಚ್ಚು. ಕುಂಬ್ರಿ ಮರಾಠಿಗರು ಮಾಡುವ ಎಲ್ಲಾ ಕೃಷಿ ಚಟುವಟಿಕೆಗಳು ನೈಸರ್ಗಿಕ ಕೃಷಿ, ಸಾವಯವ ಕೃಷಿ ಪದ್ಧತಿ ಎಂಬುವುದು ವಿಶೇಷ. ಇವರಲ್ಲಿ ಶೇಕಡಾ 5 ರಿಂದ 10 ಜನ ರಾಸಾಯನಿಕ ಬಳಸುವುದು ಕಂಡು ಬಂದರೂ ಸಹ ಅದು ತುಂಬಾ ಕಡಿಮೆ ಪ್ರಮಾಣದಲ್ಲಿ. ಈ ಸಮೂದಾಯದಲ್ಲಿ ಈವರೆಗೆ 09 ಜನ ಶಿಕ್ಷಕರು, ಪೋಸ್ಟ್ ಮಾಸ್ಟರ್, ಕ್ಲರ್ಕ, ಅರಣ್ಯ ಇಲಾಖೆಯಲ್ಲಿ ಗಾರ್ಡ್ ಇತ್ಯಾದಿ ಆಗಿ ನೇಮಕಗೊಂಡಿದ್ದಾರೆ. ಕೆಲವರು ಕೋಳಿ ಫಾರಂ ಮಾಡಿದ್ದಾರೆ. ಉಳಿದವರಲ್ಲಿ

ಕೆಲವರು ಗುತ್ತಿಗೆ ಇತ್ಯಾದಿ ವ್ಯಾಪಾರ ವ್ಯವಹಾರಗಳನ್ನು ಮಾಡಿಕೊಂಡು ಶ್ರಮಿಸುತ್ತಿರುವುದು ಸಾಮಾನ್ಯ ಸಂಗತಿಯಾಗಿದೆ.

## ಭೂರಹಿತರು ಮತ್ತು ಅನಿಶ್ಚಿತ ಆದಾಯದ ಮೂಲ

ಮೂಲತ ಕೃಷಿಕರಾದ ಕುಂಬ್ರಿ ಮರಾಠಿಗರಲ್ಲಿ ಇಂದು ಭೂರಹಿತರ ಸಂಖ್ಯೆಯೇ ಅಧಿಕ. ಕುಂಬ್ರಿ ಮರಾಠಿಗರಲ್ಲಿ ಕೃಷಿಕೂಲಿಗಳೇ ಅಧಿಕವಾಗಿದ್ದಾರೆ. ಆರ್ಥಿಕ ಚಟುವಟಿಕೆಗಳು ವ್ಯಕ್ತಿಯ ಅಥವಾ ಸಮುದಾಯದ ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುತ್ತವೆ. ಕೂಲಿ ಎಂದರೆ ಬೇರೆಯವರ ಜಮೀನಿನಲ್ಲಿ ಗೊತ್ತುಪಡಿಸಿದ ಕೆಲಸಕ್ಕಾಗಿ ಸಂಬಳದ ರೂಪದಲ್ಲಿ ಹಣ ಇಲ್ಲವೆ ಧಾನ್ಯಗಳನ್ನು ಪರ್ಯಾಯವಾಗಿ ಪಡೆಯುವುದು. ಕೊಪ್ಪಗಳಲ್ಲಿ ಹೆಚ್ಚಾಗಿ ಪುರುಷರಷ್ಟೇ ಮಹಿಳೆಯರು ಕೃಷಿ ಕೂಲಿ ಮಾಡಲು ಹೋಗುವುದು ಕಂಡುಬಂದಿತು. ಕುಂಬ್ರಿ ಮರಾಠಿಗರಲ್ಲಿ ಮಹಿಳೆಗೆ ಕೃಷಿ ಕೂಲಿ ಮಹತ್ವವಾದ ಆರ್ಥಿಕ ಚಟುವಟಿಕೆಯಾಗಿದೆ, ಶ್ರಮಕ್ಕೆ ಪ್ರತಿಫಲವಾಗಿ ಇವರು ಪಡೆಯುವ ಕೂಲಿಯು ಅವರ ಆರ್ಥಿಕ ಸ್ಥಿತಿಗತಿಯ ಜೊತೆಗೆ ಇವರ ಸಾಮಾಜಿಕ ಜೀವನ ವಿಧಾನವನ್ನು ಸಹ ತೋರಿಸುತ್ತದೆ. ಕೂಲಿ ಮಾಡಲು ಮೇಲ್ಜಾತಿಯ ಹಾಗೂ ತಮ್ಮ ಸುತ್ತಮುತ್ತಲಿನ ಕೃಷಿಕರ ಜಮೀನುಗಳಿಗೆ, ತೋಟಗಳಿಗೆ ಹೋಗುತ್ತಾರೆ. ಕೃಷಿ ಕೂಲಿಯನ್ನು ಸಾಮಾನ್ಯವಾಗಿ ಮಳೆಗಾಲ ಕಳೆದು ಚಳಿಗಾಲ ಪ್ರಾರಂಭವಾಗುತ್ತಿದ್ದಂತೆಯೇ ಹಾಗೂ ನಾಟಿ ಮಾಡುವಾಗ ಮಾಡುತ್ತಾರೆ.

## ಕೋಷ್ಟಕ 5

### ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ತಾಲೂಕುವಾರು ಕುಟುಂಬ ಭೂಹಿಡುವಳಿ ಹಾಗೂ ಭೂಶ್ರೇಣಿಗಳ ಪ್ರಮಾಣ

| ಕ್ರ.ಸಂ. | ತಾಲೂಕುಗಳು | ಕುಟುಂಬ | ಭೂ ಹಿಡುವಳಿ (ಎಕರೆಗಳಲ್ಲಿ) | | | | ಭೂ ಹಿಡುವಳಿ ಶ್ರೇಣಿಗಳು (ಎಕರೆಗಳಲ್ಲಿ) | | | | |
|---|---|---|---|---|---|---|---|---|---|---|---|
| | | | ಒಣ ಭೂಮಿ | ನೀರಾವರಿ | ಒಟ್ಟು | 2 ಎಕರೆ ಮೇಲ್ಪಟ್ಟು ಎ | 1–2 ಎಕರೆ ಬಿ | 20 ಗುಂಟೆ 1 ಎಕರೆ ಸಿ | 10–20 ಗುಂಟೆ ಡಿ | 10 ಗುಂಟೆ ಇ | ಭೂ ರಹಿತ ಎಫ್ |
| 1 | ಅಂಕೋಲಾ | 247 | 18 | 46 | 64 | 4 | 9 | 25 | 32 | 18 | 159 |
| 2 | ಕುಮಟಾ | 399 | 15 | 63 | 78 | 6 | 11 | 28 | 34 | 12 | 308 |
| 3 | ಹೊನ್ನಾವರ | 328 | 19 | 56 | 75 | 5 | 13 | 19 | 42 | 15 | 234 |
| 4 | ಭಟ್ಕಳ | 401 | 12 | 86 | 98 | 8 | 19 | 26 | 36 | 8 | 304 |
| 5 | ಶಿರಸಿ | 1282 | 10 | 115 | 125 | 12 | 22 | 30 | 26 | 6 | 1186 |
| 6 | ಸಿದ್ದಾಪುರ | 429 | 6 | 56 | 62 | 3 | 18 | 42 | 18 | 13 | 335 |
| 7 | ಯಲ್ಲಾಪುರ | 188 | 8 | 63 | 71 | 6 | 12 | 24 | 38 | 8 | 100 |
| 8 | ಮುಂಡಗೊಡ | 113 | 12 | 80 | 92 | 16 | 29 | 31 | 18 | 4 | 15 |
| | **ಒಟ್ಟು** | **3387** | **100** | **565** | **665** | **60** | **133** | **225** | **244** | **84** | **2641** |

ಸಮೀಕ್ಷೆಗೊಳಪಟ್ಟ 3387 ಕುಟುಂಬಗಳಲ್ಲಿ ಭೂರಹಿತ ಕುಟುಂಬಗಳು 2641. ಅದರಲ್ಲೂ ಮಹಿಳೆಯರು ಹೆಚ್ಚು ನಿರುದ್ಯೋಗಿಗಳು. ಬಹಳಷ್ಟು ಕುಂಬ್ರಿ ಮರಾಠಿ ಮಹಿಳೆಯರಿಗೆ ಉತ್ಪಾದನಾ ಮಾರ್ಗವಾಗಿ ಕುಟುಂಬದ ನಿರ್ವಹಣೆಗೆ ಕಂಡುಕೊಂಡ ಪರ್ಯಾಯ ಮಾರ್ಗಗಳಲ್ಲಿ ಕೃಷಿ ಕೂಲಿ ಮುಖ್ಯವಾಗಿದೆ. ಕೂಲಿಯನ್ನು ಬೆಳಿಗ್ಗೆಯಿಂದ ಸಂಜೆಯವರೆಗೆ ನಿಗದಿಪಡಿಸಲಾಗಿದ್ದರು, ದಿನದ ಕೂಲಿ ಮಾಡುವವರಿಗೆ ಸಾಮಾನ್ಯವಾಗಿ ದಿನವಿಡೀ ದುಡಿದರು 50–60 ರೂಪಾಯಿ ಕೂಲಿ ಹಣ ಅಥವಾ ನಾಲ್ಕು ಕೊಳಗ ಭತ್ತ ನೀಡಲಾಗುತ್ತದೆ. ಯಲ್ಲಾಪುರ, ಕ್ಷೇತ್ರಕಾರ್ಯ ಮಾಡುವ ಸಮಯದಲ್ಲಿ ನೀವು ಯಾಕೆ ಇಷ್ಟು ಕಡಿಮೆ ಕೂಲಿ ಹಣ ಪಡೆಯುತ್ತೀರಿ? ಹೆಚ್ಚಿಗೆ ಹಣ ಕೇಳುವುದಿಲ್ಲ ಏಕೆ? ಇಷ್ಟೇ ಭತ್ತ ಹೇಗೆ ತಾನೇ ಸಾಕಾಗುತ್ತದೆ? ಎಂದು ಪ್ರಶ್ನೆಯನ್ನು ಕೇಳಿದರೆ, ನಾವೇನಾದರೂ ಹೆಚ್ಚಿಗೆ ಕೂಲಿ ಹಣ, ಒಳ್ಳೆಯ ಅಕ್ಕಿ, ಹೆಚ್ಚಿಗೆ ಭತ್ತ ಕೊಡಿ ಎಂಬುದಾಗಿ ಕೇಳಿದರೆ ನಾಳೆಯಿಂದ ಕೆಲಸಕ್ಕೆ ಬರಬೇಡಿ ಅಂತ ಕೆಲಸದಿಂದ ತೆಗೆಯುತ್ತಾರೆ. ಈ ಕೂಲಿ ಕೆಲಸ ಮಾಡಿದರೆ ನಮಗೆ ಸಂಜೆ ಊಟ ಸಿಗುವುದು, ಕಾರಣ ಕೊಟ್ಟಷ್ಟನ್ನು ಪಡೆದು ಎದುರು ಮಾತನಾಡದೆ ದುಡಿಯುತ್ತೇವೆ ಎಂದುತ್ತರಿಸಿದರು. ಕುಂಬ್ರಿ ಮರಾಠಿ ಸಮುದಾಯದವರು ಹವ್ಯಕ ಬ್ರಾಹ್ಮಣ, ಕೊಂಕಣಿ, ನಾಡವ, ಶೆಟ್ಟಿ, ಜಾತಿಯ ಗದ್ದೆ, ತೋಟಗಳಲ್ಲಿ ಕೂಲಿ ಮಾಡಲು ಹೋಗುತ್ತಾರೆ. ಸರಕಾರದ ಉದ್ಯೋಗ ಖಾತ್ರಿ ಯೋಜನೆಯ ಮಾಹಿತಿ ಇವರಿಗಿಲ್ಲ. ಜೊತೆಗೆ ಕುಂಬ್ರಿ ಮರಾಠಿಗರಿಗೆ ತುರ್ತಾಗಿ ಕೃಷಿ ಭೂಮಿಯನ್ನು ನೀಡುವ ಅಗತ್ಯವಿದೆ.

## ಸರಕಾರಿ ಸೌಲಭ್ಯಗಳು ಮತ್ತು ಕುಂಬ್ರಿ ಮರಾಠಿಗರು

ಸರಕಾರಿ ಸೌಲಭ್ಯಗಳನ್ನು ಪಡೆಯುವಲ್ಲಿ ಕುಂಬ್ರಿ ಮರಾಠಿಗರು ವಿಫಲರಾಗಿದ್ದಾರೆ. ಅಂದರೆ, ಸರಕಾರಿ ಸೌಲಭ್ಯಗಳನ್ನು ಪಡೆಯುವಲ್ಲಿ ಕುಂಬ್ರಿ ಮರಾಠಿಗರು ವಿಫಲಗೊಳಿಸಲಾಗಿದೆ. ಹಿಂದುಳಿದ ವರ್ಗಗಳಿಗೆ ಇರುವ ಮೂಲಭೂತ ಸೌಕರ್ಯಗಳನ್ನೂ ಸರಕಾರ ಕುಂಬ್ರಿ ಮರಾಠಿಗರಿಗೆ ತಲುಪಿಸಲು ವಿಫಲವಾಗಿದೆ. ಇದಕ್ಕೆ ಉದಾಹರಣೆಯಾಗಿ ಈ ಕೆಳಗಿನ ಕೋಷ್ಟಕವನ್ನು ಗಮನಿಸಬಹುದಾಗಿದೆ.

## ಕೋಷ್ಟಕ 6

### ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ತಾಲೂಕುವಾರು, ಲಿಂಗವಾರು ಸರ್ಕಾರಿ ಸೌಲಭ್ಯಗಳ ಇತರೆ ಪ್ರಮಾಣ

| ಕ್ರಸಂ. | ತಾಲೂಕುಗಳು | ಕುಟುಂಬ | ಸರ್ಕಾರಿ ಸೌಲಭ್ಯಗಳು | | | | | |
|---|---|---|---|---|---|---|---|---|
| | | | ಅಂಗವಿಕಲ | | | ವೃದ್ಧಾಪ್ಯವೇತನ | | |
| | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| 1 | ಅಂಕೋಲಾ | 247 | 1 | 3 | 4 | 118 | 127 | 245 |
| 2 | ಕುಮಟಾ | 399 | 3 | 2 | 5 | 69 | 122 | 191 |
| 3 | ಹೊನ್ನಾವರ | 328 | 4 | 3 | 7 | 163 | 213 | 376 |
| 4 | ಭಟ್ಕಳ | 401 | 4 | 3 | 7 | 478 | 562 | 1040 |
| 5 | ಶಿರಸಿ | 1282 | 2 | 3 | 5 | 618 | 713 | 1331 |
| 6 | ಸಿದ್ದಾಪುರ | 429 | 0 | 0 | 0 | 476 | 512 | 988 |
| 7 | ಯಲ್ಲಾಪುರ | 188 | 0 | 0 | 0 | 142 | 180 | 322 |
| 8 | ಮುಂಡಗೊಡ | 113 | 1 | 0 | 1 | 31 | 54 | 85 |
| | ಒಟ್ಟು | **3387** | **15** | **14** | **29** | **2095** | **2483** | **4578** |

ಈ ಕೋಷ್ಟಕದ ಪ್ರಕಾರ ಕುಂಬ್ರಿ ಮರಾಠಿಗರಲ್ಲಿ ಸರಕಾರದ ಯೋಜನೆಗಳಲ್ಲಿ ಹೆಚ್ಚಾಗಿ ಪಡೆದಿರುವುದು ವೃದ್ಯಾಪ್ಯವೇತನವನ್ನು ಮಾತ್ರ.

## ಕೋಷ್ಟಕ 7

### ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ತಾಲೂಕುವಾರು, ವಿಧವಾ ಮಾಶಾಸನ ಪ್ರಮಾಣ

| ಕ್ರಸಂ. | ತಾಲೂಕುಗಳು | ಕುಟುಂಬ | ವಿಧವೆಯರು | | ವಿಧವಾ ವೇತನ | | ವಿ.ವೇ. ಹೊಂದಿರದವರು | |
|---|---|---|---|---|---|---|---|---|
| | | | ಹೆಣ್ಣು | ಒಟ್ಟು | ಹೆಣ್ಣು | ಒಟ್ಟು | ಹೆಣ್ಣು | ಒಟ್ಟು |
| 1 | ಅಂಕೋಲಾ | 247 | 19 | 19 | 14 | 14 | 5 | 5 |
| 2 | ಕುಮಟಾ | 399 | 18 | 18 | 13 | 13 | 5 | 5 |
| 3 | ಹೊನ್ನಾವರ | 328 | 14 | 14 | 8 | 8 | 6 | 6 |
| 4 | ಭಟ್ಕಳ | 401 | 26 | 26 | 12 | 12 | 14 | 14 |

| | | | | | | | | |
|---|---|---|---|---|---|---|---|---|
| 5 | ಶಿರಸಿ | 1282 | 49 | 49 | 35 | 35 | 14 | 14 |
| 6 | ಸಿದ್ದಾಪುರ | 429 | 21 | 21 | 18 | 18 | 3 | 3 |
| 7 | ಯಲ್ಲಾಪುರ | 188 | 9 | 9 | 8 | 8 | 1 | 1 |
| 8 | ಮುಂಡಗೊಡ | 113 | 12 | 12 | 8 | 8 | 4 | 4 |
| | ಒಟ್ಟು | 3387 | 168 | 168 | 116 | 116 | 52 | 52 |

ಸರಕಾರದ ಸಾಮಾಜಿಕ ಭದ್ರತಾ ಯೋಜನೆಗಳಾದ, ವಿಧವಾ ವೇತನ, ಅಂಗವಿಕಲ ವೇತನ ಪಡೆದಿರುವವರ ಸಂಖ್ಯೆ ಕಡಿಮೆ ಇದೆ. ವಿಧವೆಯರಿಗೆರಿಗೆ ಪೂರ್ತಿಯಾಗಿ ಸಾಮಾಜಿಕ ಭದ್ರತೆ ಸಿಕ್ಕಿರುವುದಿಲ್ಲ.

**ಕೋಷ್ಟಕ 8**

**ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಮುದಾಯದ ತಾಲೂಕುವಾರು, ಕುಟುಂಬವಾರು ಪಡಿತರಚೀಟಿ ಹೊಂದಿದವರ ಮತ್ತು ಹೊಂದಿರದವರ ಪ್ರಮಾಣ**

| ಕ್ರ.ಸಂ. | ತಾಲೂಕುಗಳು | ಕುಟುಂಬ | ಪಡಿತರ ಚೀಟಿ ಹೊಂದಿರುವ ಕುಟುಂಬಗಳು | | ಪಡಿತರ ಚೀಟಿ ಹೊಂದಿರದ ಕುಟುಂಬಗಳು |
|---|---|---|---|---|---|
| | | | ಎಪಿಲ್ | ಬಿಪಿಎಲ್ | |
| 1 | ಅಂಕೋಲಾ | 247 | 0 | 247 | 0 |
| 2 | ಕುಮಟಾ | 399 | 2 | 397 | 0 |
| 3 | ಹೊನ್ನಾವರ | 328 | 0 | 328 | 0 |
| 4 | ಭಟ್ಕಳ | 401 | 3 | 398 | 0 |
| 5 | ಶಿರಸಿ | 1282 | 4 | 1278 | 0 |
| 6 | ಸಿದ್ದಾಪುರ | 429 | 0 | 429 | 0 |
| 7 | ಯಲ್ಲಾಪುರ | 188 | 0 | 188 | 0 |
| 8 | ಮುಂಡಗೊಡ | 113 | 0 | 113 | 0 |
| | ಒಟ್ಟು | 3387 | 9 | 3378 | |

ಸಮೀಕ್ಷೆಗೊಳಪಟ್ಟ ಒಟ್ಟು 3387 ಕುಟುಂಬಗಳಲ್ಲಿ 9 ಕುಟುಂಬಗಳು ಮಾತ್ರ ಎಪಿಲ್ ಕಾರ್ಡ್ ಹೊಂದಿದ್ದರೆ, 3378 ಕುಟುಂಬಗಳು ಬಿಪಿಎಲ್ ಕಾರ್ಡಗಳನ್ನು ಹೊಂದಿವೆ. ಅಂದರೆ ಬಡತನ ರೇಖೆಯಿಂದ ಕೆಳಗಿರುವ ಕುಟುಂಬಳೇ ಈ ಸಮುದಾಯದಲ್ಲಿ ಹೆಚ್ಚಿವೆ. ಮನುಷ್ಯನಿಗೆ ಬದುಕಲು ಆತನ ಮೂಲಭೂತ ಬೇಡಿಕೆಗಳಾದ ಆಹಾರ, ಬಟ್ಟೆ ಹಾಗೂ ವಸತಿಗಳು ಅತಿ ಅವಶ್ಯಕವಾಗಿವೆ. ಅಲ್ಲದೆ ಶಿಕ್ಷಣ, ಉದ್ಯೋಗಗಳ ಜೊತೆಗೆ ಆ ಕುಟುಂಬವು ಸರಳ ಹಾಗೂ ಸಂತೋಷದ ಜೀವನ ಸಾಗಿಸಬೇಕಾದರೆ, ಆ ಕುಟುಂಬದ ಆದಾಯವು ಅತಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಒಂದು ಕುಟುಂಬದ ಆದಾಯ ಅತ್ಯಂತ ಕಡಿಮೆ ಇದ್ದರೆ, ಆ ಕುಟುಂಬವು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ, ಆದರೆ ಒಂದು ಕುಟುಂಬದ ಆದಾಯ ಉತ್ತಮವಾಗಿದ್ದರೆ ಮುಂದೆ ಬರುವ ಸಮಸ್ಯೆಗಳನ್ನು ನೆಮ್ಮದಿಯ ಜೀವನ ನಡೆಸಲು ಅನುಕೂಲವಾಗುತ್ತದೆ. ಇಲ್ಲಿ ಕುಂಬ್ರಿ ಮರಾಠಿಗರ ಕೃಷಿ ಚಟುವಟಿಕೆಗಳ ಆದಾಯ, ಕಾರ್ಮಿಕ ವೃತ್ತಿಯ ಆದಾಯ, ಕರಕುಶಲ ಚಟುವಟಿಕೆಗಳ ಆದಾಯ, ಕಾಡಿನ ವಿವಿಧ ಸಂಪನ್ಮೂಲಗಳಿಂದ ಗಳಿಸಿದ ಆದಾಯಗಳೆಲ್ಲವುಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಮನುಷ್ಯನಿಗೆ ಬದುಕಲು ಆತನ ಮೂಲಭೂತ ಬೇಡಿಕೆಗಳಾದ ಆಹಾರ, ಬಟ್ಟೆ ಹಾಗೂ ವಸತಿಗಳು ಅತಿ ಅವಶ್ಯಕವಾಗಿವೆ. ಅಲ್ಲದೆ ಶಿಕ್ಷಣ, ಉದ್ಯೋಗಗಳ ಜೊತೆಗೆ ಆ ಕುಟುಂಬವು ಸರಳ ಹಾಗೂ ಸಂತೋಷದ ಜೀವನ ಸಾಗಿಸಬೇಕಾದರೆ, ಆ ಕುಟುಂಬದ ಆದಾಯವು ಅತಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಒಂದು ಕುಟುಂಬದ ಆದಾಯ ಅತ್ಯಂತ ಕಡಿಮೆ ಇದ್ದರೆ, ಆ ಕುಟುಂಬವು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ, ಆದರೆ ಒಂದು ಕುಟುಂಬದ ಆದಾಯ ಉತ್ತಮವಾಗಿದ್ದರೆ ಮುಂದೆ ಬರುವ ಸಮಸ್ಯೆಗಳನ್ನು ನೆಮ್ಮದಿಯ ಜೀವನ ನಡೆಸಲು ಅನುಕೂಲವಾಗುತ್ತದೆ.

## ಆದಿವಾಸಿಗಳಾಗದ ಕುಂಬ್ರಿ ಮರಾಠಿಗರು

ಕುಂಬ್ರಿ ಮರಾಠಿಗರನ್ನು ನೋಡುತ್ತಲೇ ಅವರು ಅರಣ್ಯವಾಸಿ ಆದಿವಾಸಿಗಳು ಎಂದು ಪರಿಗಣಿಸಬಹುದು. ಅಷ್ಟು ಮಾನವಶಾಸ್ತ್ರೀಯ ಲಕ್ಷಣಗಳನ್ನು ಅವರು ಹೊಂದಿದ್ದಾರೆ. ಇಂದು ಕರ್ನಾಟಕ ಸರಕಾರ 50 ಸಮುದಾಯವನ್ನು ಬುಡಕಟ್ಟುಗಳನ್ನು ಆದಿವಾಸಿಗಳೆಂದು ಪರಿಗಣಿಸಿ ಅವರಿಗೆ ಸರಕಾರದ ಸೌಲಭ್ಯಗಳು ದೊರೆಯುವಂತೆ ಮಾಡುತ್ತಿದೆ. ಆದರೆ ಕರ್ನಾಟಕದಲ್ಲಿ ಇನ್ನೂ ಸಾಕಷ್ಟು ಸಮುದಾಯಗಳು ಶತಮಾನಗಳಿಂದ ಇಂದಿನವರೆಗೂ ತಮ್ಮ ಚಹರೆಯನ್ನು, ಕುಲಕಸಬನ್ನು, ಆಚಾರ ವಿಚಾರ, ಭಾಷೆ, ರೂಢಿ ಸಂಪ್ರದಾಯವನ್ನು, ಪ್ರತ್ಯೇಕತೆಯನ್ನು ಉಳಿಸಿಕೊಂಡು ಆದಿವಾಸಿಗಳ ಎಲ್ಲಾ ಲಕ್ಷಣಗಳನ್ನು ಹೊಂದಿದ್ದರು. ಸರಕಾರ ಇವರನ್ನು

ಇಂದಿನವರೆಗೂ ಪರಿಶಿಷ್ಟ ಪಂಗಡಕ್ಕೆ ಸೇರಿಸದೆ ಪ್ರವರ್ಗ 1ಕ್ಕೆ ಸೇರಿಸಿದೆ. ಆದರೆ ಆದಿವಾಸಿಗಳ ಎಲ್ಲಾ ಲಕ್ಷಣವನ್ನು ಹೊಂದಿ ಇಂದಿಗೂ ಕಾಡಿನಲ್ಲಿ ನಾಗರಿಕ ಸಮಾಜದಿಂದ ಪ್ರತ್ಯೇಕ ವಾಸಸ್ಥಾನದೊಂದಿಗೆ ಈ ಸಮುದಾಯ ಬಾಳುತ್ತಿದೆ. ಸರಕಾರದ ಯಾವುದೇ ಸೌಲಭ್ಯಗಳು ದೊರೆಯದೆ ಅತಂತ್ರ ಸ್ಥಿತಿಯಲ್ಲಿದೆ. ಅಂತಹ ಆದಿವಾಸಿಗಳಲ್ಲಿ ಕುಂಬ್ರಿ ಮರಾಠಿ ಬುಡಕಟ್ಟು ಪಟ್ಟಿಗೆ ಸೇರದ ಸಮುದಾಯವಾಗಿದೆ. ಇಲ್ಲಿ ಇವರ ಕುರಿತು ಕೆಲವೊಂದು ಅಂಶಗಳನ್ನು ಇವರ ನೆಲೆ, ವೃತ್ತಿಯನ್ನು ಪರಿಚಯಿಸಲು ಪ್ರಯತ್ನಿಸಲಾಗಿದೆ. ಇವರು ಬೇರೆ ರಾಜ್ಯಗಳಿಂದ ವಲಸೆ ಬಂದಿದ್ದರು ಕಾಡಿನಲ್ಲಿ ಹಲವು ವರ್ಷಗಳಿಂದ ವಾಸಿಸುತ್ತಿದೆ. ಇವರ ಜನಸಂಖ್ಯೆ ಕೂಡ ಹೆಚ್ಚಾಗಿದೆ. ಆದ್ದರಿಂದ ಈ ಆದಿವಾಸಿಗಳಾಗದ ಆದಿವಾಸಿ ಕುಂಬ್ರಿ ಮರಾಠಿ ಸಮುದಾಯವನ್ನು ಬುಡಕಟ್ಟು ಪಟ್ಟಿಗೆ ಸೇರಿಸಿ ಸೂಕ್ತ ಪ್ರಾತಿನಿಧ್ಯವನ್ನು ದೊರಕಿಸಿಕೊಡಬೇಕು ಎಂಬುದು ಇಲ್ಲಿನ ಆಶಯವಾಗಿದೆ.

ಗೋವಾ ಮೂಲಕ ಕುಂಬ್ರಿ ಮರಾಠಿಗರು ಪೋರ್ಚುಗೀಸರ ದಬ್ಬಾಳಿಕೆಯಿಂದಾಗಿ ಕರ್ನಾಟಕ್ಕೆ ಬಂದು ನೆಲೆಸಿರುವವರು. ಇವರು ಉತ್ತರ ಕನ್ನಡ ಜಿಲ್ಲೆ ಜೋಯಿಡಾ, ಯಲ್ಲಾಪುರ, ಅಂಕೋಲಾ, ಹಳಿಯಾಳ, ಕಾರವಾರ ಮತ್ತು ಬೆಳಗಾವಿ ಜಿಲ್ಲೆಯ ಖಾನಾಪೂರ ತಾಲೂಕುಗಳಲ್ಲಿ ಸುಮಾರು 25 ರಿಂದ 30 ಸಾವಿರದಷ್ಟು ಕುಂಬ್ರಿ ಮರಾಠಿಗರು ವಾಸವಾಗಿದ್ದಾರೆ. ವಿಶೇಷವಾಗಿ ಜಿಲ್ಲೆಯ ಗಡಿಭಾಗದಲ್ಲೇ ವಾಸ ಮಾಡಿರುವ ಕುಂಬ್ರಿ ಮರಾಠಿಗರು ಅರಣ್ಯ ಉತ್ಪನ್ನಗಳನ್ನು ಮಾರಿ ಬದುಕು ಸಾಗಿಸುತ್ತಿದ್ದು, ಈಗ ಕೃಷಿಯಲ್ಲೂ ತೊಡಗಿದ್ದಾರೆ. ಇವರ ಪಾರಂಪರಿಕ ಹಾಗೂ ಮೂಲ ವೃತ್ತಿ ಕುಮ್ರಿ ಬೇಸಾಯ, ಬೇಟೆ ಆದರೆ ಇಂದು ಕೃಷಿ, ಪಶುಸಂಗೋಪನೆ, ಕೂಲಿ ಮಾಡಿಕೊಂಡು ಇದ್ದಾರೆ. ಕುಂಬ್ರಿ ಮರಾಠಿಗರ ಮೇಲೆ ಆಧುನಿಕ ಪ್ರಭಾವ ಅಷ್ಟಾಗಿ ಆಗಿಲ್ಲ. ಇಂದಿಗೂ ತಮ್ಮ ವೇಷಭೂಷಣ, ಆಚಾರ–ವಿಚಾರ, ಭಾಷೆ, ಕುಲ ಪಂಚಾಯ್ತಿಗಳು ಹಿಂದಿನಂತೆಯೇ ಇದೆ. ಆಧುನಿಕ ಸಾಮಾಜಿಕ ವ್ಯವಸ್ಥೆ ಇವರ ಮೇಲೆ ಅಷ್ಟಾಗಿ ಪ್ರಭಾವ ಬೀರಿಲ್ಲ. ಆದಿವಾಸಿಗಳ ಎಲ್ಲಾ ಲಕ್ಷಣಗಳನ್ನು ಹೊಂದಿದ್ದರು ಸರಕಾರ ಇವರನ್ನು ಇಂದಿಗೂ ಬುಡಕಟ್ಟು ಪಟ್ಟಿಗೆ ಸೇರಿಸದೆ ಇವರನ್ನು ಅತಂತ್ರ ಸ್ಥಿತಿಯೊಡೆಗೆ ತಂದು ನಿಲ್ಲಿಸಿದೆ.

ಕುಂಬ್ರಿ ಮರಾಠಿಗರು ಘಟ್ಟ ಪ್ರದೇಶದ ಮೇಲೆ ಮಲೆನಾಡು ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಉತ್ತರ ಕನ್ನಡದ ಎಂಟು ತಾಲೂಕುಗಳಲ್ಲಿ ದಟ್ಟಾರಣ್ಯದ ಕುಂಬ್ರಿ ಮರಾಠಿಯರು ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದು ರಸ್ತೆ, ಸೇತುವೆ, ಕಾಲು ಸಂಕಗಳಿಲ್ಲದೆ ಇರುವುದರಿಂದ ಇವರು ನಗರ ಪ್ರದೇಶಗಳಿಗೆ ಬರಲು ಸಾಧ್ಯವಾಗುತ್ತಿಲ್ಲ. ಕುಂಬ್ರಿ ಮರಾಠಿ ಸಮುದಾಯ ವಾಸಿಸುತ್ತಿರುವ ಗ್ರಾಮಗಳಲ್ಲಿ ವಸತಿ ಸೌಕರ್ಯ, ಕುಡಿಯುವ ನೀರು, ವಿದ್ಯುತ್ ಸೌಲಭ್ಯ, ರಸ್ತೆ

ಸಂಪರ್ಕಗಳಿಲ್ಲ. ಸರಕಾರಿ ಆದೇಶದ ಪ್ರಕಾರ ಕುಣಬಿ ಸಮುದಾಯ ಪ್ರವರ್ಗ-1 ರಲ್ಲಿ ಸೇರಿದೆ. ಪ್ರಭಲ ಜಾತಿ, ಉಪಜಾತಿಯವರೊಡನೆ ಪೈಪೋಟಿ ನಡೆಸಿ, ಶೈಕ್ಷಣಿಕ, ಔದ್ಯೋಗಿಕ ಮತ್ತು ಇತರ ಸೌಕರ್ಯಗಳನ್ನು ಪಡೆಯಲು ಇವರಿಗೆ ಸಾಧ್ಯವಾಗುತ್ತಿಲ್ಲ.

ಕುಂಬ್ರಿ ಮರಾಠಿಗರು ಪಾರಂಪರಿಕವಾಗಿ ಕಾಡಿನ ಉತ್ಪನ್ನವನ್ನೇ ನಂಬಿ ಜೀವಿಸುತ್ತಾ ಕುಮ್ರಿ ಬೇಸಾಯ ಮಾಡುತ್ತಾ ಇದ್ದರು. ಆದರೆ ಇಂದು ಜಮೀನಿಲ್ಲದಿರುವವರೆ ಹೆಚ್ಚಿನ ಸಂಖ್ಯೆಯಲ್ಲಿ ಇರುವುದರಿಂದ ಕೂಲಿಯೇ ಇವರ ಪ್ರಮುಖ ವೃತ್ತಿ. ಕೃಷಿ ಕೂಲಿ, ಪಶುಪಾಲನೆಯಲ್ಲಿ ತೊಡಗಿದ್ದಾರೆ. ಎಲ್ಲೋ ಒಂದಿಬ್ಬರು ಸರಕಾರಿ ನೌಕರಿಯಲ್ಲಿದ್ದಾರೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ತುಂಬಾ ಹಿಂದುಳಿದ ಸಮುದಾಯ ಇದಾಗಿದೆ. ಇವರನ್ನು ಸಹ ಆದಿವಾಸಿ ಪಟ್ಟಿಗೆ ಸೇರಿಸದ ಹೊರತು ಇವರ ಅಭಿವೃದ್ಧಿ ಅಸಾಧ್ಯ. ಸರಕಾರ ಇವರ ಅಭಿವೃದ್ಧಿಗೆ ಪ್ರಯತ್ನ ಪಡುವುದರ ಜೊತೆಗೆ ಇವರನ್ನು ಆದಷ್ಟು ಬೇಗ ಪರಿಶಿಷ್ಟ ಪಂಗಡ ಪಟ್ಟಿಗೆ ಸೇರಿಸಬೇಕು.

**ಕುಂಬ್ರಿ ಮರಾಠಿಗರ ಮೀಸಲಾತಿ ಕುರಿತ ಹೋರಾಟಗಳು**

ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಇಳಿಜಾರಿಕೆ ಪ್ರದೇಶಗಳ ಕಾಡಿನ ಮಧ್ಯದಲ್ಲಿ ವಾಸಿಸುವವರು ಇವರಾಗಿದ್ದಾರೆ. ಈ ಸಮುದಾಯವು ಪೋರ್ಚುಗೀಸರ ದಾಳಿಯಿಂದ ಬೇಸತ್ತಿರುವುದರಿಂದ ಗೋವೆಯಿಂದ ವಲಸೆ ಬಂದು ಜೀವನವನ್ನು ಇಲ್ಲಿ ಮುಂದುವರಿಸಿವೆ. ಕುಂಬ್ರಿ ಮರಾಠಿ ಸಮುದಾಐ ಬುಡಕಟ್ಟು ಲಕ್ಷಣಗಳನ್ನು ಹೊಂದಿದೆ. ಕುಂಬ್ರಿ ಮರಾಠಿ ಸಮುದಾಯವು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಶೈಕ್ಷಣಿಕವಾಗಿ ತೀರಾ ಹಿಂದುಳಿದ ಸಮುದಾಯವಾಗಿದೆ. ಕುಂಬ್ರಿ ಮರಾಠಿಗರ ಸಂಸ್ಕೃತಿಯು ನಡೆ-ನುಡಿ, ಆಚರಣೆ, ಜಾನಪದ, ಸಂಪ್ರದಾಯ ಎಲ್ಲಾ ದೃಷ್ಟಿಕೋನದಲ್ಲಿ ನೋಡಿದರೂ ಕೂಡ ನೂರಕ್ಕೆ ನೂರರಷ್ಟು ಬುಡಕಟ್ಟು ಸಂಸ್ಕೃತಿ ಹೊಂದಿದೆ. ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ, ಕಾರವಾರ, ಯಲ್ಲಾಪುರ, ಹಳಿಯಾಳ, ಅಂಕೋಲಾ ತಾಲೂಕುಗಳಲ್ಲಿ ವಾಸಿಸುವ ಕುಂಬ್ರಿ ಮರಾಠಿಗರ ಸಮಗ್ರ ಅಭಿವೃದ್ಧಿಗಾಗಿ ಮತ್ತು ಕುಂಬ್ರಿ ಮರಾಠಿಗರನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸುವ ಬಗ್ಗೆ ಕಳೆದ 12 ವರ್ಷಗಳಿಂದ 'ಉತ್ತರ ಕನ್ನಡ ಜಿಲ್ಲಾ ಕುಂಬ್ರಿ ಮರಾಠಿ ಸಂಘ', ಸರಕಾರವನ್ನು ಒತ್ತಾಯಿಸಿ ಹೋರಾಟ ಮಾಡುತ್ತಾ ಬಂದಿದೆ. ಆದರೆ ಬುಡಕಟ್ಟು (ಗಿರಿಜನ) ಸಮುದಾಯರ ಎಲ್ಲಾ ಗುಣಲಕ್ಷಣಗಳನ್ನು ಹೊಂದಿರುವ ಕುಂಬ್ರಿ ಮರಾಠಿಗರನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸದೆ ಸರಕಾರವು ತುಂಬಾ ಅನ್ಯಾಯಮಾಡಿದೆ. ಇದಕ್ಕೆ ಮುಖ್ಯ ಕಾರಣ ಸರಿಯಾದ ಮಾರ್ಗದಲ್ಲಿ ಪ್ರಯತ್ನ ಇಲ್ಲದಿರುವುದು, ನಾಯಕತ್ವದ ಕೊರತೆ, ಜನಪ್ರತಿನಿಧಿಗಳ

ತಾತ್ಸಾರ ಎಂದು ಕಾಣುತ್ತದೆ ಎಂದು ಕುಂಬ್ರಿ ಮರಾಠಿ ಜನ ಹೇಳುವದು ಅವರ ಮನದಾಳದ ನೋವನ್ನು ಪ್ರತಿನಿಧಿಸುತ್ತದೆ. ಪ್ರಾಚೀನ ಬುಡಕಟ್ಟುಗಳ ಅನೇಕ ಲಕ್ಷಣಗಳಲ್ಲಿ ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರತಿನಿಧಿಸುತ್ತಿರುವ ತಮ್ಮ ಸಮುದಾಯವನ್ನು ಪರಿಶಿಷ್ಟ ಪಂಗಡವೆಂದು ಗುರುತಿಸಬೇಕೆಂಬುದು ಕುಂಬ್ರಿ ಮರಾಠಿಗರ ಒತ್ತಾಸೆಯಾಗಿದೆ.

ವಾಸ್ತವವಾಗಿ ಕುಂಬ್ರಿ ಮರಾಠಿ ಸಮುದಾಯ ಪರಿಶಿಷ್ಟ ವರ್ಗಕ್ಕೆ ಸೇರಬೇಕಾದ ಸಮಸ್ತ ಅರ್ಹತೆಗಳನ್ನು ಹೊಂದಿದೆ, ಆದರೆ ಸೇರಿಲ್ಲ. ಇದೀಗ ಗ್ರುಪ್ 'ಎ'ನಲ್ಲಿರುವ ಕುಂಬ್ರಿ ಮರಾಠಿ ಸಮುದಾಯಕ್ಕೆ ನಿರ್ದಿಷ್ಟ ಪಡಿಸಿದ ಸರಕಾರಿ ಸವಲತ್ತುಗಳು ಸಿಗಬೇಕು. ಗ್ರುಪ್ 'ಎ' ಗೆ ಮೀಸಲಾದ ಸರಕಾರಿ ಹುದ್ದೆಗಳನ್ನು ಕುಂಬ್ರಿ ಮರಾಠಿಗರು ಪಡೆಯುವ ಸ್ಥಿತಿಯಲ್ಲಿಯೇ ಇಲ್ಲ. ಯಾಕೆಂದರೆ ಅಂತಹ ಶೈಕ್ಷಣಿಕ ಮಟ್ಟ ಅವರಲ್ಲಿಲ್ಲ. ಇನ್ನೂ ಸರಕಾರಿ ಸೌಲಭ್ಯಗಳೆಂದರೆ ಕೆಲವು ತರಬೇತಿ ಕಾರ್ಯಕ್ರಮಗಳಿಗಷ್ಟೆ ಅವು ಮೀಸಲಾಗಿವೆ. ಕರ್ನಾಟಕ ಸರಕಾರದ ಹಿಂದುಳಿದ ವರ್ಗಗಳ ಇಲಾಖೆ ನಿರ್ದಿಷ್ಟಪಡಿಸಿ ಅನುಷ್ಠಾನಗೊಳಿಸುತ್ತಿರುವ ಎಷ್ಟೋ ಯೋಜನೆಗಳು ಈ ನಿಬಿಡಾರಣ್ಯದ ಪ್ರದೇಶದಲ್ಲಿ ಇನ್ನೂ ಜಾರಿಯಾಗಿಲ್ಲ. ಕಾರ್ಪೆಂಟರಿ, ಟೇಲರಿಂಗ್, ಡ್ರೈವಿಂಗ್ ಹಾಗೂ ಕಂಪ್ಯೂಟರ್ ತರಬೇತಿಗಳಿಗೆ ಅವಕಾಶಗಳಿದ್ದರೂ ಅವುಗಳನ್ನು ಸರಿಯಾದ ರೀತಿಯಲ್ಲಿ ಅನುಷ್ಠಾನಗೊಳಿಸಿಲ್ಲ. ಒಟ್ಟಾರೆಯಾಗಿ ಪ್ರವರ್ಗ–1ರಲ್ಲಿ ಸಿಗಬೇಕಾದ ಯಾವ ಸೌಲಭ್ಯಗಳೂ ಈ ಸಮುದಾಯಕ್ಕೆ ಇನ್ನೂ ಸಿಕ್ಕಿಲ್ಲ. ಇದಕ್ಕೆ ಅಧಿಕಾರಶಾಹಿಗಳೆಷ್ಟು ಕಾರಣವೋ ಜನಪ್ರತಿನಿಧಿಗಳೂ ಅಷ್ಟೇ ಕಾರಣರಾಗಿದ್ದಾರೆ ಎಂದು ಹೇಳದೆ ವಿಧಿ ಇಲ್ಲ.

ದುರಂತವೆಂದರೆ ಅಲ್ಲಿನ ಜನಪ್ರತಿನಿಧಿಗಳಿಗೆ ಕುಂಬ್ರಿ ಮರಾಠಿಗರ ಬಗೆಗೆ ನಿರ್ಲಕ್ಷ್ಯಧೋರಣೆ ಇದೆ, ಇವರ ಸಮಸ್ಯೆಗಳನ್ನು ಗಂಭೀರವಾಗಿ ಪರಿಗಣಿಸಿಲ್ಲ. ಪ್ರಜಾಪ್ರಭುತ್ವದ ಈ ಓಟಿನ ವ್ಯವಸ್ಥೆಯಲ್ಲಿ ಅಲ್ಪಸಂಖ್ಯಾತ ಸಮುದಾಯಗಳ ಹಣೆಬರಹವೇ ಇದ್ದು, ಈ ಹಿನ್ನಲೆಯಲ್ಲಿ ಸಂವಿಧಾನಾತ್ಮಕವಾದ ಅರ್ಹ ಸೌಲಭ್ಯಗಳನ್ನು ಕಲ್ಪಿಸಬೇಕಾದದ್ದು ಆಡಳಿತದ ಕರ್ತವ್ಯ. ಅದರಲ್ಲಿಯೂ ಪರಿಶಿಷ್ಟ ವರ್ಗಕ್ಕೆ ಸೇರಬೇಕಾದ ಎಲ್ಲ ಅರ್ಹತೆಗಳು ಪಡೆದಿರುವ ಈ ಸಮುದಾಯವನ್ನು ಆ ಪಟ್ಟಿಗೆ ಸೇರಿಸುವ ಮೂಲಕ ಕೇಂದ್ರ ಸರಕಾರದ ಅಗಾಧ ಪ್ರಮಾಣದ ವಿಶೇಷ ಸೌಲಭ್ಯಗಳು ಇವರಿಗೆ ಸಿಗುವಂತೆ ಮಾಡಬೇಕಾಗಿದೆ. ಇಡೀ ಉತ್ತರ ಕನ್ನಡದಲ್ಲಿ ರೂಪುಗೊಂಡಿರುವ ರಾಷ್ಟ್ರೀಯ ಅಭಿವೃದ್ಧಿ ನೀತಿಗಳು ಹಾಗೂ ಅವುಗಳ ಅನುಷ್ಠಾನದ ಕಾರ್ಯವೈಖರಿ ಎಲ್ಲಾ ಸಮುದಾಯಗಳ ಸಂಘಟನೆಗೆ ದಾರಿಮಾಡಿಕೊಟ್ಟಿವೆ. ಅದೇ ದಾರಿಯನ್ನು ಕುಂಬ್ರಿ ಮರಾಠಿಗರು ತುಳಿದಿದ್ದಾರೆ.

**ಅಡಿ ಟಿಪ್ಪಣಿಗಳು**

1. ಪ್ರಭಾಕರ, ಎ ಎಸ್, ಬುಡಕಟ್ಟು ಮೀಮಾಂಸೆ, ಕರ್ನಾಟಕ ಬುಡಕಟ್ಟು ಸಚಿತ್ರ ಕೋಶ, ಪು 18, 2014
2. ಅದೇ 21, 2014
3. ಅದೇ 23, 2014

# ಸಮಾರೋಪ

**ಪೀಠಿಕೆ:**

ಕರ್ನಾಟಕದಲ್ಲಿ ಉತ್ತರಕನ್ನಡ ಜಿಲ್ಲೆ ಅತ್ಯಂತ ಅಪರೂಪದ ಭೂಭಾಗ. ಉತ್ತರಕನ್ನಡ ಜಿಲ್ಲೆ ಕರ್ನಾಟಕದ ಪಶ್ಚಿಮ ಘಟ್ಟದ ಮೊದಲ ತುದಿ. ಅದರಿಂದಲೇ ಈ ಜಿಲ್ಲೆಯು ಹಲವು ನೈಸರ್ಗಿಕ ಕೌತುಕಗಳ ತವರೂ ಹೌದು. ಅಪಾರ ಪ್ರಮಾಣದ ನಿಸರ್ಗ ಸಂಪತ್ತು, ಕರ್ನಾಟಕಕ್ಕೇ ವಿಶಿಷ್ಟವೆನ್ನಿಸುವ ಮಾನವ ವೈವಿಧ್ಯತೆಯನ್ನು ಉತ್ತರಕನ್ನಡ ಜಿಲ್ಲೆಯಲ್ಲಿ ಕಾಣಬಹುದು. ಕರ್ನಾಟಕ ರಾಜ್ಯದಲ್ಲಿಯೇ ಅತ್ಯಂತ ವೈವಿಧ್ಯಮಯ ಜನಸಮುದಾಯಗಳು ಮತ್ತು ಆದಿವಾಸಿ ಸಮುದಾಯಗಳು ಉತ್ತರಕನ್ನಡ ಜಿಲ್ಲೆಯಲ್ಲಿ ವಾಸಿಸುತ್ತಿವೆ. ಕರ್ನಾಟಕದ ವಾಯುವ್ಯ ಭಾಗದಲ್ಲಿ ಬರುವ ಈ ಜಿಲ್ಲೆಯಲ್ಲಿ ನೆರೆಯ ಗೋವ, ಮಹಾರಾಷ್ಟ್ರ, ಗುಜರಾತ್, ರಾಜಸ್ಥಾನ, ಮಧ್ಯಪ್ರದೇಶ ಮತ್ತು ಆಫ್ರಿಕಾದ ಜಾಂಜಿಬಾರ್ ದ್ವೀಪ ಪ್ರದೇಶದಿಂದ ವಲಸೆ ಬಂದ ಸಮುದಾಯಗಳು ಇಲ್ಲಿ ಬದುಕು ಕಟ್ಟಿಕೊಂಡಿವೆ. ಅತ್ಯಂತ ಆದಿಮ ಕುಂಮ್ರಿ ಕೃಷಿ ಪದ್ದತಿ ಜೀವಂತವಿರುವ ಮತ್ತು ಅತ್ಯಾಧುನಿಕ ತಂತ್ರಜ್ಞಾನದಿಂದ ಉಸಿರಾಡುತ್ತಿರುವ ಅಪರೂಪದ ಜಿಲ್ಲೆ ಉತ್ತರ ಕನ್ನಡವಾಗಿದೆ. ಉತ್ತರಕನ್ನಡ ಜಿಲ್ಲೆ ಇಲ್ಲಿನ ಮೂಲ ನಿವಾಸಿಗಳ ಜೊತೆ, ಚರಿತ್ರೆಯ ಅನೇಕ ಸಂದರ್ಭಗಳಲ್ಲಿ ಇಲ್ಲಿಗೆ ವಲಸೆ ಬಂದಿರಬಹುದಾದ ಅಪರೂಪದ ಸಮುದಾಯಗಳ ತವರಾಗಿದೆ. ಆದಿವಾಸಿಗಳು, ಅಲೆಮಾರಿಗಳು, ಕುಶಲಕರ್ಮಿಗಳು, ಮೀನುಗಾರರು, ಪಶುಪಾಲಕರು, ಆಹಾರ ಸಂಗ್ರಾಹಕರು, ಬೇಟೆಗಾರರು, ಕೃಷಿಕರು ಮುಂತಾದ ಸಮುದಾಯಗಳು ಉತ್ತರಕನ್ನಡ ಜಿಲ್ಲೆಯ ಜನವೈವಿಧ್ಯವನ್ನು ಹೆಚ್ಚಿಸಿವೆ. ಉತ್ತರಕನ್ನಡದ ಪ್ರಾಕೃತಿಕ ಹಾಗೂ ಭೌಗೋಳಿಕ ಸನ್ನಿವೇಶಗಳು ಬುಡಕಟ್ಟು ಸಮುದಾಯಗಳ ಬದುಕಿಗೆ ಪೂರಕ ವಾತಾವರಣವಿರುವ ಕಾರಣ ಈ ಜಿಲ್ಲೆಯಲ್ಲಿ ರಾಜ್ಯದಲ್ಲಿಯೇ ಅತಿ ಹೆಚ್ಚು ಹಾಗೂ ವೈವಿಧ್ಯಮಯ ಬುಡಕಟ್ಟು ಸಮುದಾಯಗಳು ವಲಸೆ ಬಂದು ನೆಲೆ ನಿಂತಿವೆ. ಹಸಲರು, ಅಗೇರ, ಗೊಂಡ, ಕರೇಒಕ್ಕಲು, ಮೇದ, ದೀವರು, ಕೋಮರಪಂತ, ಸಿದ್ದಿಯರು, ಮುಕ್ರಿಯರು, ಹಾಲಕ್ಕಿ ಒಕ್ಕಲಿಗರು, ಕುರುಬರು, ಲಂಬಾಣಿಗಳು, ಬೇಡ ವಾಲ್ಮೀಕಿ, ಕುಣಬಿಯರು ಮುಂತಾದ ಸಮುದಾಯಗಳು ಇಲ್ಲಿ ವಾಸಿಸುತ್ತಿವೆ. ಈ ಸಮುದಾಯಗಳ

ಕುರಿತು ವಿವಿಧ ಶೈಕ್ಷಣಿಕ ಸಂಸ್ಥೆಗಳು, ಅಧ್ಯಯನಕಾರರು ಅಧ್ಯಯನ ನಡೆಸಿರುವುದು ಕಂಡು ಬರುತ್ತದೆ. ಹೀಗಿದ್ದರೂ ಸಹ ಅನಾದಿಕಾಲದಿಂದ ಈ ಎಲ್ಲ ಸಮುದಾಯಗಳ ನಡುವೆ ಇದ್ದೂ ಇಲ್ಲದಂತೆ ಬದುಕುತ್ತಾ ತನ್ನದೇ ಆದ ಪ್ರತ್ಯೇಕ ವಿಶಿಷ್ಟ ಜೀವನ ಶೈಲಿಯನ್ನು ಹೊಂದಿರುವ ಕುಂಬ್ರಿ ಮರಾಠಿ ಸಮುದಾಯವನ್ನು ಇಲ್ಲಿಯವರೆಗೂ ಯಾರೂ ಅಧ್ಯಯನಕ್ಕೊಳಪಡಿಸಿಲ್ಲ. ಪ್ರಸ್ತುತ ಮಹಾಪ್ರಬಂಧದಲ್ಲಿ ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಕುಂಬ್ರಿ ಮರಾಠಿಗರು ಚರಿತ್ರೆಯ ಯಾವುದೋ ಕಾಲಘಟ್ಟದಲ್ಲಿ ಕರ್ನಾಟಕಕ್ಕೆ ವಲಸೆ ಬಂದಿರಬಹುದಾದ ಒಂದು ಕೃಷಿಕ ಸಮುದಾಯ. ಆದರೆ ಪಶುಪಾಲನೆ ಮತ್ತು ಆಹಾರ ಸಂಗ್ರಹಣೆಗಳೂ ಸಹ ಈ ಸಮುದಾಯದ ಪ್ರಧಾನ ಆರ್ಥಿಕ ಅವಲಂಬನೆಗಳಾಗಿವೆ. ಆದರೆ ಕುಂಬ್ರಿ ಮರಾಠಿಗರು ಕಾಡಿನ ಕಣಿವೆಗಳಲ್ಲಿ ಆದಿಮ ಕೃಷಿ ಪದ್ಧತಿಯನ್ನು ಪ್ರಧಾನವಾಗಿ ಅವಲಂಬಿಸಿದ್ದ ಸಮುದಾಯವಾಗಿದೆ. ಕೆತ್ಲು ಬೇಸಾಯ, ಕುಮೇರು ಕೃಷಿ, ಸ್ಥಳಾಂತರಿತ ವ್ಯವಸಾಯಗಳಂತಹ ಲಘು ವ್ಯವಸಾಯ ಪದ್ಧತಿಗಳನ್ನು ಅವಲಂಬಿಸಿಕೊಂಡು ಬದುಕಿ ಬಂದ ಸಮುದಾಯಗಳಲ್ಲಿ ಕುಂಬ್ರಿ ಮರಾಠಿ ಸಮುದಾಯವೂ ಒಂದು. 'ಕುಂಬ್ರಿ ಮರಾಠಿ' ಎಂಬ ಜೋಡಿ ಪದವೇ ಈ ಸಮುದಾಯದ ಆದಿಮತನವನ್ನು ಹೇಳುತ್ತದೆ. 'ಕುಂಬ್ರಿ' ಎಂದರೆ ಆದಿಮ 'ಕುಮ್ರಿ' ಬೇಸಾಯ ಕ್ರಮವನ್ನು ಸೂಚಿಸಿದರೆ, 'ಮರಾಠಿ'ಯು ಈ ಸಮುದಾಯದ ಭಾಷಿಕ ಅನನ್ಯತೆಯನ್ನು ಸೂಚಿಸುತ್ತದೆ. ಅಂದರೆ ಕುಂಬ್ರಿ ಮರಾಠಿಗರು, ಮರಾಠಿ ಭಾಷಿಕ ಪ್ರದೇಶದ ಆದಿಮ ಕೃಷಿಕರಾಗಿದ್ದಿರಬಹುದು ಎಂಬುದಕ್ಕೆ ಹಲವು ಸಾಕ್ಷ್ಯಾಧಾರಗಳು ಸಿಗುತ್ತವೆ.

ಪಶ್ಚಿಮ ಘಟ್ಟಗಳ ಸಾಲಿನ ಉತ್ತರ ಕನ್ನಡ ಜಿಲ್ಲೆಯ ದಟ್ಟ ಕಾಡುಗಳ ನಡುವೆ ಹಲವಾರು ವರ್ಷಗಳಿಂದ ಇತರ ಸಮುದಾಯಗಳ ನಡುವೆ ಇದ್ದೂ ಇಲ್ಲದಂತೆ ಬದುಕುತ್ತಿರುವ, ತಮ್ಮ ಅಸ್ತಿತ್ವವನ್ನು ಪ್ರತಿಪಾದಿಸಲು ಸಾಧ್ಯವಾಗದೇ ಧ್ವನಿ ಕಳೆದುಕೊಂಡ ಕುಂಬ್ರಿ ಮರಾಠಿಗರು ತಮ್ಮದೇ ಆದಂತಹ ರೂಡಿ ಸಂಪ್ರದಾಯಗಳು, ಆಚಾರ-ವಿಚಾರ, ನಿರ್ದಿಷ್ಟ ವಾಸಸ್ಥಾನ, ಕುಲ-ಕಸುಬು, ನ್ಯಾಯಪದ್ಧತಿ, ಭಾಷೆ ವೇಷಭೂಷಣಗಳಲ್ಲದೇ ಎಲ್ಲಾ ಬುಡಕಟ್ಟು ಲಕ್ಷಣಗಳನ್ನು ಹೊಂದುವ ಮೂಲಕ ಕಾಡಿನೊಂದಿಗೆ ಬದುಕು ಕಟ್ಟಿಕೊಂಡು ಬಾಳುತ್ತಿರುವ ಸಮುದಾಯವಾಗಿರುತ್ತದೆ. ನೈಸರ್ಗಿಕವಾಗಿ ಶ್ರೀಮಂತವಾಗಿರುವ ಉತ್ತರ ಕನ್ನಡಜಿಲ್ಲೆಯು ತನ್ನ ಮಡಿಲಲ್ಲಿ ಇತರ ಸಮುದಾಯಗಳಾದ ಸಿದ್ಧಿ, ಗೌಳಿ, ಕುಣಬಿ, ಲಂಬಾಣಿ, ಗೊಂಡ, ಬೇಡವಾಲ್ಮೀಕಿ, ಮೇದಾರರು, ಅಗೇರರು, ಹಾಲಕ್ಕಿ-ಒಕ್ಕಲು, ಹಕ್ಕಿ-ಪಿಕ್ಕಿ, ಹಸಲರು, ಕುರುಬರು, ಮುಂತಾದ ಸಮುದಾಯಗಳಂತೆ ಕುಂಬ್ರಿ ಮರಾಠಿಗರಿಗೂ ಆಸರೆ ಹಾಗೂ ರಕ್ಷಣೆ ನೀಡುತ್ತ ಬಂದಿದೆ.

ಬುಡಕಟ್ಟುಗಳ ಸ್ವತಂತ್ರ ಬದುಕಿಗೆ ಪೂರಕವಾದ ವಾತಾವರಣ ಇಲ್ಲಿರುವುದರಿಂದ ಉತ್ತರ ಕನ್ನಡ ಜಿಲ್ಲೆಯಲ್ಲಿ ವೈವಿಧ್ಯಮಯ ಬುಡಕಟ್ಟು ಸಮುದಾಯಗಳನ್ನು ನೋಡಬಹುದಾಗಿದೆ. ದುರಂತವೆಂದರೆ ಬುಡಕಟ್ಟುಗಳ ಎಲ್ಲ ರೀತಿಯ ಲಕ್ಷಣವನ್ನು ಹೊಂದಿದ್ದರೂ ಸಹ ಕುಂಬ್ರಿ ಮರಾಠಿಗರನ್ನು ಬುಡಕಟ್ಟು ಸಮುದಾಯಕ್ಕೆ ಸೇರಿಸಲಾಗಿಲ್ಲ.

ಪಶ್ಚಿಮ ಘಟ್ಟಗಳ ದಟ್ಟಾರಣ್ಯದ ಕಡಿದಾದ ಕೊಳ್ಳಗಳು ಹಾಗೂ ಇಳಿಜಾರು ಪ್ರದೇಶಗಳಲ್ಲಿ ನೆಲೆ ನಿಂತು ಬೇಸಾಯ, ಪಶು ಸಂಗೋಪನೆ, ಅರಣ್ಯ ಉತ್ಪನ್ನಗಳ ಸಂಗ್ರಹದೊಡನೆ ಬದುಕು ಕಟ್ಟಿಕೊಂಡ ಕುಂಬ್ರಿ ಮರಾಠಿ ಸಮುದಾಯ ನಾಗರಿಕ ಸಮಾಜದಿಂದ ದೂರವೇ ಇರಲು ಕಾರಣಗಳೇನು? ದಟ್ಟ ಕಾಡುಗಳ ಮಧ್ಯೆ ಯಾಕೆ ನೆಲೆ ನಿಂತರು? ಪಶ್ಚಿಮ ಘಟ್ಟ ಕಾಡುಗಳಲ್ಲಿ ಮಾತ್ರ ಈ ಸಮುದಾಯ ನೆಲೆ ನಿಲ್ಲಲು ಕಾರಣಗಳೇನು? ಹಲವಾರು ಸಮುದಾಯಗಳು ಆಧುನಿಕತೆಯ ಪ್ರಭಾವಕ್ಕೊಳಗಾಗಿ ತಮ್ಮ ಮೂಲ ಚರ್ಯೆಯನ್ನು ಬದಲಿಸಿಕೊಳ್ಳುತ್ತಿರುವ ಈ ಸಂದರ್ಭದಲ್ಲಿ ಕುಂಬ್ರಿ ಮರಾಠಿಗರು ಏಕೆ ಇನ್ನೂ ಕಾಡು ವಾಸವನ್ನೇ ಅವಲಂಬಿಸಿದ್ದಾರೆ? ಈ ಸಮುದಾಯಕ್ಕೆ ಏನಾದರೂ ಅಪಾಯವಿತ್ತೇ? ಹೆದರಿ ಬಂದವರೇ? ಅಲೆಮಾರಿಗಳೇ? ಅಥವಾ ಇಲ್ಲಿಯ ಮೂಲ ನಿವಾಸಿಗಳೇ? ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರ ಹುಡುಕುತ್ತಾ ಉತ್ತರಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ ಕಾಣ ಸಿಗುವ ಈ ಸಮುದಾಯದ ಸ್ಥಿತಿಗತಿಗಳನ್ನು ಅರ್ಥೈಸುವ ಅವರ ಸಾಮಾಜಿಕ ಸಂಕಥನವನ್ನು ಅರ್ಥಮಾಡಿಕೊಳ್ಳುವ ಅಗತ್ಯವಿದೆ. ಈ ಸಮುದಾಯವು ತನ್ನದೇ ಆದ ಪ್ರತ್ಯೇಕ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ವ್ಯವಸ್ಥೆಯನ್ನು ಹೊಂದಿದ್ದು ವಿವಿಧ ಬುಡಕಟ್ಟು ಸಮುದಾಯಗಳಲ್ಲಿರುವಂತೆ ಒಳಾಡಳಿತ ವ್ಯವಸ್ಥೆಯನ್ನು ಹೊಂದಿರುವ, ಕಾಡುಗಳ ಮಧ್ಯೆ ಉಳಿದು ಬದುಕನ್ನು ನಡೆಸುತ್ತಿರುವ ಸಮುದಾಯವಾಗಿರುತ್ತದೆ.

ಈ ಅಂಶವನ್ನೇ ಗಮನದಲ್ಲಿಟ್ಟುಕೊಂಡು ಇಡೀ ಸಮುದಾಯವನ್ನು ನೋಡುವ ಪ್ರಯತ್ನ ಮಾಡಲಾಗಿದೆ. ಉತ್ತರಕನ್ನಡ ಜಿಲ್ಲೆಯಲ್ಲಿ ಅತೀ ಕಡಿಮೆ ಸಂಖ್ಯೆಯಲ್ಲಿರುವ ಕುಂಬ್ರಿ ಮರಾಠಿಗರು ಪಶ್ಚಿಮ ಘಟ್ಟಗಳ ಕಾಡಿನ ಕಡಿದಾದ ಕಣಿವೆ ಪ್ರದೇಶಗಳಲ್ಲಿ ಚದುರಿದಂತೆ ವಾಸವಾಗಿದ್ದು ಆರಂಭದಲ್ಲಿ ಸ್ಥಳಾಂತರ ಕೃಷಿ ಪದ್ಧತಿಯನ್ನು ಅನುಸರಿಸುತ್ತಾ ಇತ್ತಿತ್ತಲಾಗಿ ಒಂದೊಂದು ಕಡೆ ನೆಲೆ ನಿಂತಿರುವಂತೆ ಕಂಡುಬರುತ್ತಾರೆ. ಕಡಿದಾದ ಕಾಡುಗಳ ನಡುವೆ ಹರಿದು ಹಂಚಿಹೋದಂತೆ ಸುಲಭವಾಗಿ ಒಬ್ಬರನ್ನೊಬ್ಬರು ಸಂಪರ್ಕಿಸಲು ಅಸಾಧ್ಯವಾದ ರೀತಿಯಲ್ಲಿ ವಾಸವಾಗಿರುವ ಸಮುದಾಯದ ಬಗ್ಗೆ ಯಾರೂ ಸಹ ಗಮನಿಸಲು ಸಾಧ್ಯವಾಗಿಲ್ಲ. ಆ ಕಾರಣಕ್ಕಾಗಿಯೇ ಈ ಸಮುದಾಯವನ್ನು ಇಲ್ಲಿಯವರೆಗೆ ಯಾರೂ ಸಮಗ್ರ ಅಧ್ಯಯನಕ್ಕೆ ಒಳಪಡಿಸಲಾಗಿಲ್ಲ. ಹೀಗಾಗಿ ಕುಂಬ್ರಿ ಮರಾಠಿಗರ ಬುಡಕಟ್ಟು ಸಂಸ್ಕೃತಿಯ ಅಸ್ತಿತ್ವವನ್ನು ಉಳಿಸಲು ಹಾಗೂ ಕೇವಲ

ಜಾತಿಗಳಾಗಿ ಜಿಡಬಹುದಾದ ಅಪಾಯದಿಂದ ಹೊರತರಲು ಅವರ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಪಾರಂಪರಿಕ ಜೀವನ ಶೈಲಿಗಳನ್ನಾಧರಿಸಿದ ಅಧ್ಯಯನ ನಡೆಸುವ ಉದ್ದೇಶದಿಂದ 'ಕುಂಬ್ರಿ ಮರಾಠಿಗರ ಸಾಮಾಜಿಕ ಸಂಕಥನ' ಎಂಬ ಶೀರ್ಷಿಕೆಯಡಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಇದು ಆದಿವಾಸಿ ಸಮುದಾಯವೊಂದರ ಸಾಮಾಜಿಕ ಚರಿತ್ರೆ ಮತ್ತು ವರ್ತಮಾನದ ಸಾಮಾಜಿಕ ಸ್ಥಿತಿಗತಿಗಳ ಕುರಿತ ಅಧ್ಯಯನವಾಗಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಷ್ಟೇ ಅಲ್ಲ, ಇಡೀ ದಕ್ಷಿಣ ಭಾರತದಲ್ಲಿಯೇ ಅತ್ಯಂತ ವಿಶಿಷ್ಟವೆನಿಸುವ ಕುಂಬ್ರಿ ಮರಾಠಿ ಸಮುದಾಯವನ್ನು ಈ ಮಹಾಪ್ರಬಂಧದಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ. ಕುಂಬ್ರಿ ಮರಾಠಿಗರು ಕೇವಲ ತಮ್ಮ ಉಡಿಗೆ, ತೊಡುಗೆ, ಭಾಷೆ, ಸಂಸ್ಕೃತಿ ಮತ್ತು ಸಾಮಾಜಿಕ ಪದ್ಧತಿಗಳಿಂದ ಭಿನ್ನವಾಗಿಲ್ಲ. ಕುಂಬ್ರಿ ಮರಾಠಿಗರ ನಿತ್ಯದ ಬದುಕು ಮತ್ತು ಪ್ರಾಚೀನ ಸಾಂಸ್ಕೃತಿಕ ಕುರುಹುಗಳಿಂದಲೂ ಇವರು ಇತರೆ ಸಮುದಾಯಗಳಿಗಿಂತ ಭಿನ್ನರಾಗಿದ್ದಾರೆ. ಕುಂಬ್ರಿ ಮರಾಠಿ ಸಮುದಾಯವು ಪರಿಶಿಷ್ಟ ವರ್ಗಕ್ಕೆ ಸೇರದ ಬುಡಕಟ್ಟು ಸಮುದಾಯವಾಗಿದ್ದು ಹೆಚ್ಚಾಗಿ ಉತ್ತರಕನ್ನಡ ಜಿಲ್ಲೆಯ ಯಲ್ಲಾಪುರ, ಶಿರಸಿ, ಕುಮಟಾ, ಅಂಕೋಲಾ, ಸಿದ್ದಾಪುರ, ಹೊನ್ನಾವರ ಹಾಗೂ ಭಟ್ಕಳ ತಾಲೂಕುಗಳಲ್ಲಿ ನೆಲೆಸಿದೆ. ಕುಂಬ್ರಿ ಮರಾಠಿ ಸಮುದಾಯವು ಸಹ ದಕ್ಷಿಣ ಭಾರತದ ಪ್ರಮುಖ ಬುಡಕಟ್ಟು ಸಮುದಾಯಗಳಲ್ಲಿ ಒಂದು. ಆದರೆ, ಸಾಮಾಜಿಕವಾಗಿ ಹಿಂದುಳಿದವರಾಗಿ. ಶಿಕ್ಷಣ ಮತ್ತು ಆರ್ಥಿಕವಾಗಿ ಬಡವರಾಗಿ ಮತ್ತು ರಾಜಕೀಯದಲ್ಲಿ ಅಸಂಘಟಿತರಾಗಿ ತೋರುತ್ತಾರೆ.

ಇನ್ನೊಂದು ಮಹತ್ವದ ಸಂಗತಿಯೆಂದರೆ ಇದುವರೆಗೆ ಕುಂಬ್ರಿ ಮರಾಠಿ ಸಮುದಾಯದ ಕುರಿತು ಪೂರ್ಣಪ್ರಮಾಣದ ಅಧ್ಯಯನ ನಡೆದಿಲ್ಲ. ಅಲ್ಲದೇ ಕುಂಬ್ರಿ ಮರಾಠಿ ಸಮುದಾಯದ ಜೀವನ ಮತ್ತು ಅವರ ಸಮಸ್ಯೆಗಳ ಬಗೆಗೆ ಸಮಗ್ರ ಪ್ರೌಢ ಅಧ್ಯಯನ ಕೂಡ ಆಗಿಲ್ಲ. ಆದರೂ ಅಲ್ಲಲ್ಲಿ ಕೆಲವು ಲೇಖನಗಳು, ವರದಿಗಳು ಪ್ರಾದೇಶಿಕ ದಿನಪತ್ರಿಕೆಯಲ್ಲಿ ಸಚಿತ್ರ ಲೇಖನಗಳು, ಜಿಲ್ಲಾ ಗೆಜೆಟೀಯರ್‌ನಲ್ಲಿ ಅಂಕಿಅಂಶ ಸಹಿತ ವರದಿ, ರಾಜ್ಯ ಪರಿಪತ್ರ ಸಮೀಕ್ಷೆಗಳು ಕುಂಬಿ ಮರಾಠಿ ಸಮುದಾಯದ ಬಗ್ಗೆ ತಜ್ಞರ, ಸಂಶೋಧಕರ ಗಮನ ಸೆಳೆಯುವಲ್ಲಿ ಸಫಲವಾಗಿವೆ. ಈ ದಿಸೆಯಲ್ಲಿ ಕೆಲವೊಂದು ನಿಚ್ಚಳ ಸಂಗತಿ ಹಾಗೂ ಸಮಸ್ಯೆಗಳು ಕುಂಬ್ರಿ ಮರಾಠಿ ಸಮುದಾಯದ ಅಧ್ಯಯನಕ್ಕೆ ಪ್ರೇರಕವಾಗಿವೆ. ಮುಖ್ಯವಾಗಿ ಕುಂಬ್ರಿ ಮರಾಠಿ ಸಮುದಾಯದ ಮೂಲ, ವಲಸೆಯ ಕಾರಣಗಳು ಮತ್ತು ಪ್ರಾದೇಶಿಕ ಚದುರುವಿಕೆಗೆ ಇರುವ ಕಾರಣಗಳನ್ನು ಹುಡುಕುವುದು. ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸ್ಥಾನಮಾನಗಳನ್ನು ವಿವರಿಸುವುದು. ಈ ಸಮುದಾಯದ ಸಾಮಾಜಿಕ ಸಂರಚನೆ, ಲಿಂಗಸಂಬಂಧಗಳು ಮತ್ತು

ಅನ್ಯ ಸಮುದಾಯಗಳ ಜೊತೆ ಈ ಸಮುದಾಯಕ್ಕಿರುವ ಸಾಮಾಜಿಕ ಕೊಡುಕೊಳುವಿಕೆಗಳನ್ನು ವಿಶ್ಲೇಷಿಸುವುದು. ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸ್ಥಾನಮಾನಗಳನ್ನು ವಿವರಿಸುವುದು. ಪಾರಂಪರಿಕ ಆರ್ಥಿಕ ಮೂಲಗಳು, ಅವಲಂಬಿಸಿದ್ದ ಕಸಬುಗಳು, ವಲಸೆ ಮತ್ತು ವರ್ತಮಾನದ ಆರ್ಥಿಕ ಅವಲಂಬನೆಗಳನ್ನು ವಿಶ್ಲೇಷಿಸುವುದು. ಕುಂಬ್ರಿ ಮರಾಠಿ ಸಮುದಾಯದ ಸಾಂಸ್ಕೃತಿಕ ನೆಲೆಗಳನ್ನು ವಿವರಿಸುವುದು. ವರ್ತಮಾನದಲ್ಲಿ ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸಂಕಥನವನ್ನು ವಿಶ್ಲೇಷಿಸುವುದು. ಈ ಅಧ್ಯಯನದ ಮುಖ್ಯ ಆಶಯಗಳಾಗಿವೆ. ಹೀಗೆ ವಿವಿಧ ಕಾಲ, ಪ್ರದೇಶ, ಹಂತಗಳಲ್ಲಿ ವಿಷಯ ವಿಶ್ಲೇಷಣೆ ಹಾಗೂ ಮಾಹಿತಿ ಸಂಗ್ರಹಿಸುವುದರೊಡನೆ ಕುಂಬ್ರಿ ಮರಾಠಿ ಸಮುದಾಯ ಸಂಘ ಸಂಸ್ಥೆಗಳು, ಸರಕಾರ ಹಾಗೂ ವಿವಿಧ ಮುಖಂಡರು, ಹೊರಾಟಗಾರರ ಮೂಲಕ ಈವರೆಗಾದ ಪ್ರಯತ್ನಗಳು, ಇದರಿಂದಾದ ಸ್ಥಿತಿಗತಿಗಳ ಕುರಿತು ಸಮಗ್ರ ಅಧ್ಯಯನ ನಡೆಸಲಾಗಿದೆ.

ಇದು ಉತ್ತರಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿ ಸಮುದಾಯದ ಅಧ್ಯಯನವಾಗಿದೆ. ಈ ಅಧ್ಯಯನಕ್ಕೆ ಉತ್ತರಕನ್ನಡ ಜಿಲ್ಲೆಯನ್ನು ಕೇಂದ್ರವಾಗಿರಿಸಿಕೊಂಡು ಯಲ್ಲಾಪುರ, ಶಿರಸಿ, ಕುಮಟಾ, ಅಂಕೋಲಾ, ಸಿದ್ದಾಪುರ, ಹೊನ್ನಾವರ ಹಾಗೂ ಭಟ್ಕಳ ತಾಲೂಕುಗಳಲ್ಲಿ ಅಧ್ಯಯನ ನಡೆಸಲಾಗಿದೆ. ಹಾಗೂ ಈ ಸಮುದಾಯದ ನೆಲೆಗಳನ್ನು ಗುರುತಿಸಿ ಕ್ಷೇತ್ರಕಾರ್ಯದ ಮೂಲಕ ಸಮಗ್ರ ವಿವರ ಸಂಗ್ರಹಣೆ ಹಾಗೂ ವಿಶ್ಲೇಷಣೆ ನಡೆಸಲಾಗಿದೆ. ಮುಖ್ಯವಾಗಿ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ, ಶಿರಸಿ, ಕುಮಟಾ, ಅಂಕೋಲಾ, ಸಿದ್ದಾಪುರ, ಹೊನ್ನಾವರ ಹಾಗೂ ಭಟ್ಕಳ ತಾಲೂಕುಗಳಲ್ಲಿ ಪ್ರಸ್ತುತ ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯ ಮಾಡಲಾಗಿದೆ. ಜಿಲ್ಲೆಯ ಉಳಿದ ಭಾಗಗಳಿಗೆ ಭೇಟಿ ನೀಡಿದ್ದೇನಾದರೂ ಅಂಕಿಅಂಶ ಇತ್ಯಾದಿ ಮಾಹಿತಿಗಳಿಗೆ ಈ ಆರೂ ತಾಲೂಕಿನ ಕುಂಬ್ರಿ ಮರಾಠಿ ಸಮುದಾಯದ ವಾಸ ಸ್ಥಳಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಶಿರಸಿ, ಕುಮುಟಾ, ಅಂಕೋಲ, ಹೊನ್ನಾವರ, ಭಟ್ಕಳ ಮತ್ತು ಸಿದ್ದಾಪುರ ತಾಲೂಕುಗಳಲ್ಲಿ ಕುಂಬ್ರಿ ಮರಾಠಿ ಸಮುದಾಯದ ಜನಸಂಖ್ಯೆ ಹೆಚ್ಚಿದೆ. ಈ ತಾಲೂಕುಗಳಿಗೆ ಹೊರತಾಗಿ ಕುಂಬ್ರಿ ಮರಾಠಿಗರು ವಾಸಿಸುತ್ತಿಲ್ಲ. ಉತ್ತರಕನ್ನಡ ಜಿಲ್ಲೆಯ ಈ ತಾಲೂಕುಗಳಲ್ಲಿ ಕುಮ್ರಿ ಬೇಸಾಯದ ವ್ಯಾಪಕತೆ ಹೆಚ್ಚು. ಇದಲ್ಲದೆ, ಕುಣಬಿ ಮತ್ತು ಕುಂಬ್ರಿ ಮರಾಠಿ ಸಮುದಾಯಗಳು ಈ ತಾಲೂಕುಗಳಿಗೆ ಪದೇ ಪದೇ ವಲಸೆ ಬಂದಿರುವ ಕುರುಹುಗಳು ಲಭ್ಯವಾಗಿವೆ.

ಈ ಎಲ್ಲಾ ಅಂಶಗಳು ಒಂದು ಸಮುದಾಯದ ಜೀವನ ವಿಧಾನವನ್ನು ರೂಪಿಸುವ ಹಾಗೂ ಸ್ಥಿತ್ಯಂತರಗಳಿಗೆ ಒಳಪಡಿಸುವ ಅಂಶಗಳಾಗಿದ್ದು ಅಧ್ಯಯನಕ್ಕೆ ಸೂಕ್ತವಾದ ಪ್ರದೇಶ ಇವುಗಳಾಗಿವೆ. ಆದ್ದರಿಂದ ಕುಂಬ್ರಿ ಮರಾಠಿಗರನ್ನು ಅಧ್ಯಯನ ಮಾಡಲು ಮೇಲ್ಕಂಡ

ತಾಲೂಕುಗಳಿಗೆ ನನ್ನ ವ್ಯಾಪ್ತಿಯನ್ನು ಸೀಮಿತಗೊಳಿಸಿದ್ದೇನೆ. ಹಿಂದೆ ಕಾನಡಾ, ಕೆನರಾ ಎಂಬ ಹೆಸರಿನಿಂದ ಗುರುತಿಸಿಕೊಂಡ ಜಿಲ್ಲೆಯನ್ನು ಈಗ ಉತ್ತರ ಕನ್ನಡ ಎಂಬ ಹೆಸರಿನಿಂದ ಗುರುತಿಸಲಾಗುತ್ತಿದೆ. 12 ತಾಲೂಕುಗಳನ್ನು ಹೊಂದಿರುವ ಈ ಜಿಲ್ಲೆ ಒಟ್ಟೂ 10,291 ಚದರ್ ಕಿ.ಮೀ ಕ್ಷೇತ್ರವನ್ನು ಹೊಂದಿದ್ದು ಕರಾವಳಿ, ಪಶ್ಚಿಮ ಘಟ್ಟಗಳು, ಬಯಲುಸೀಮೆ ಹೀಗೆ ಮೂರು ವಿಧದ ಭೌಗೋಳಿಕ ಪರಿಸರವನ್ನು ಹೊಂದಿದೆ. 2011ರ ಜನಗಣತಿಯಂತೆ ಒಟ್ಟೂ 1,436,847 ಜನಸಂಖ್ಯೆಯನ್ನು ಹೊಂದಿರುವ ಉತ್ತರಕನ್ನಡ ಜಿಲ್ಲೆ ಕರಾವಳಿಯ ಬಹುದೊಡ್ಡ ಜಿಲ್ಲೆಯಾಗಿರುತ್ತದೆ. ಶೇ.70ರಷ್ಟು ಅರಣ್ಯ ಪ್ರದೇಶ ಶೇ.30 ರಷ್ಟು ಜನವಸತಿ ಪ್ರದೇಶವು ಹೆಚ್ಚಾಗಿ ಅರಣ್ಯಾವೃತವಾಗಿಯೇ ಇರುವುದನ್ನು ಇಲ್ಲಿ ಗಮನಿಸಬಹುದು. ಈ ರೀತಿಯ ಭೌಗೋಳಿಕ ಪರಿಸರ ಹೊಂದಿರುವ ಹಾಗೂ ಕಡಿದಾದ ದುರ್ಗಮ ಕಾಡುಗಳಲ್ಲಿ ನೆಲೆನಿಂತ ಕುಂಬ್ರಿ ಮರಾಠಿ ಸಮುದಾಯಗಳನ್ನು ಭೇಟಿ ಮಾಡುವುದು ಒಂದು ರೀತಿಯ ಸವಾಲೇ ಆಗಿತ್ತು. ಅಧ್ಯಯನದ ಉದ್ದೇಶಗಳಿಗೆ ಅನುಗುಣವಾಗಿ ಕುಂಬ್ರಿ ಮರಾಠಿ ಸಮುದಾಯ ವಾಸವಾಗಿರುವ ಉತ್ತರಕನ್ನಡ ಜಿಲ್ಲೆಯ ಎಂಟು ತಾಲೂಕುಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಕುಂಬ್ರಿ ಮರಾಠಿಗರು ವಾಸವಾಗಿರುವ ಈ ಎಂಟು ತಾಲೂಕುಗಳ 210 ಗ್ರಾಮಗಳಲ್ಲಿ ವ್ಯಾಪಕ ಕ್ಷೇತ್ರಕಾರ್ಯ ಕೈಗೊಳ್ಳಲಾಗಿದೆ. ಅಲ್ಲದೆ 3387 ಕುಟುಂಬಗಳ Household Survey ಯನ್ನು ಅಂಕಿ ಅಂಶಗಳನ್ನು ನಿಶ್ಚಿತ ಪ್ರಶ್ನಾವಳಿಯ ಮೂಲಕ ಸಂಗ್ರಹಿಸಲಾಗಿದೆ. ಜೊತೆಗೆ 100 ಜನ ಕುಂಬ್ರಿ ಮರಾಠಿ ಸಮುದಾಯದ ಪ್ರಮುಖರನ್ನು 'ವ್ಯಕ್ತಿ ಅಧ್ಯಯನ' (Case Study) ಕ್ಕೆ ಸಂದರ್ಶಿಸಲಾಗಿದೆ.

ಕುಂಬ್ರಿ ಮರಾಠಿ ಸಮುದಾಯಧ ಕುರಿತು ನಡೆದಿರುವ ಅಧ್ಯಯನಗಳು ಕಡಿಮೆ. ಆದರೆ ಉತ್ತರ ಕನ್ನಡ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಕುಂಬ್ರಿ ಮರಾಠಿ ಸಮುದಾಯ ಕುರಿತಾಗಿ ಇಲ್ಲಿಯವರೆಗೂ ಅಂತಹ ಮಹತ್ವದ ಅಧ್ಯಯನಗಳು ನಡೆದಿಲ್ಲವೆಂದೆ ಹೇಳಬಹುದು. ಅಂತಹ ಕೊರತೆಯನ್ನು ಈ ಅಧ್ಯಯನವು ಅಲ್ಪಮಟ್ಟಿಗಾದರೂ ಪೂರೈಸಲಿದೆ ಎಂದು ಹೇಳಬಹುದು.

ಕುಂಬ್ರಿ ಮರಾಠಿಗರೆಂದರೆ ಯಾರು? ಕುಂಬ್ರಿ ಮರಾಠಿ ಪದದ ನಿಷ್ಪತ್ತಿ, ವಲಸೆ ಮತ್ತು ಈ ಸಮುದಾಯದ ಮೂಲದ ಕುರಿತು ವಿವರಿಸಲು ಪ್ರಯತ್ನಿಸಲಾಗಿದೆ. ಪ್ರಸ್ತುತ ಅಧ್ಯಾಯವು ಈ ಮಹಾಪ್ರಬಂಧಕ್ಕೆ ಒಂದು ಪ್ರವೇಶಿಕೆಯನ್ನು ಒದಗಿಸುತ್ತದೆ. ಇದರಲ್ಲಿ ಉತ್ತರ ಕನ್ನಡ ಜಿಲ್ಲೆಯ ಪ್ರದೇಶಗಳ ಭೌಗೋಳಿಕ ಮತ್ತು ಅದರ ಚಾರಿತ್ರಿಕತೆಯನ್ನು ಸ್ಥೂಲವಾಗಿ ವಿವರಿಸಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟುಗಳ ಸ್ಥೂಲ ಪರಿಚಯ ಹಾಗೂ ಉತ್ತರ ಕನ್ನಡ ಜಿಲ್ಲೆಯ ಪರಿಶಿಷ್ಟ ಜಾತಿ, ಸಮುದಾಯದ ಅಂಕಿ-ಅಂಶಗಳ ವಿವರಗಳನ್ನು ನೀಡಲಾಗಿದೆ. ಕುಂಬ್ರಿ ಮರಾಠಿ ಸಮುದಾಯದ ಚಾರಿತ್ರಿಕ ರೂಪಾಂತರಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಕುಂಬ್ರಿ ಮರಾಠಿ ಮೂಲ, ಭಾರತದ ವಿವಿಧ ರಾಜ್ಯಗಳ ಕುಂಬ್ರಿ ಮರಾಠಿಗರ ಅವಲೋಕನ, ಕರ್ನಾಟಕದ ಕುಂಬ್ರಿ ಮರಾಠಿಗರ ತೌಲನಿಕ ಚರ್ಚೆಯನ್ನು ಮಾಡಲಾಗಿದೆ. ಹಾಗೆಯೇ ಕುಂಬ್ರಿ ಮರಾಠಿ ಸಮುದಾಯದ ಸಾಂಸ್ಕೃತಿಕ ಜಗತ್ತನ್ನು ಸ್ಥೂಲವಾಗಿ ವಿವರಿಸಲು ಪ್ರಯತ್ನಿಸಲಾಗಿದೆ.

ಇಲ್ಲಿ ಕುಂಬ್ರಿ ಮರಾಠಿಗರ ಸಾಮಾಜಿಕ ಸ್ಥಿತಿಗತಿಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಕುಂಬ್ರಿ ಮರಾಠಿಗರ ಕುಟುಂಬ ವ್ಯವಸ್ಥೆ ಕುಂಬ್ರಿ ಮರಾಠಿಗರಲ್ಲಿ ಲಿಂಗಸಂಬಂಧಗಳು, ಬಳಿ ಕುಲ ಮತ್ತು ಒಳಾಡಳಿತ ಅನ್ಯ ಸಮುದಾಯಗಳ ಜೊತೆಗಿನ ಕೊಡುಕೊಳ್ಳುವಿಕೆ ಸಾಮಾಜಿಕ ಶ್ರೇಣೀಕರಣ, ವಸತಿ, ಉಪಭಾಷೆ, ಆಹಾರ ಪ್ರವೃತ್ತಿಗಳು, ಆರೋಗ್ಯ, ಸಾಮಾಜಿಕ, ಉಡುಗೆ-ತೊಡುಗೆ, ಬಂಧುತ್ವ, ಮದುವೆ, ಮುಂತಾದವುಗಳಿಗೆ ಸಂಬಂಧಿಸಿದಂತೆ ಕುಂಬ್ರಿ ಮರಾಠಿಗರ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನವನ್ನು ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕುಂಬ್ರಿ ಮರಾಠಿ ಸಮುದಾಯದ 'ಮನೆವಾರು (Household Survey) ಸಮೀಕ್ಷೆ' ಮತ್ತು 'ವ್ಯಕ್ತಿಗಳ (Case Study) ಸಂದರ್ಶನ'ಗಳನ್ನು ಆಧರಿಸಿದ ವಾಸ್ತವದ ತಿಳುವಳಿಕೆಯನ್ನು ಮುಖ್ಯವಾಗಿಟ್ಟುಕೊಂಡು ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸ್ಥಿತಿಗತಿಯನ್ನು ವಿವರಿಸಲಾಗಿದೆ. ಕುಂಬ್ರಿ ಮರಾಠಿ ಸಮುದಾಯದ ಕೆಲವು ನಿರ್ದಿಷ್ಟ ಸಾಮಾಜಿಕ ಸ್ಥಿತಿಗತಿಗಳಲ್ಲಿ ಉಂಟಾಗಿರುವ ಬದಲಾವಣೆಗಳನ್ನು ಸಹ ಚರ್ಚಿಸಲಾಗಿದೆ.

ಕುಂಬ್ರಿ ಮರಾಠಿ ಸಮುದಾಯದ ಸಾಮಾಜಿಕ ಸ್ಥಿತಿಗತಿಗಳನ್ನು ವಿವರಿಸುವುದರ ಜೊತೆಗೆ ಕುಂಬ್ರಿ ಮರಾಠಿ ಸಮುದಾಯದ ಆರ್ಥಿಕ ಸ್ಥಿತಿಗತಿಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಇಲ್ಲಿಯು ಸಹ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕುಂಬ್ರಿ ಮರಾಠಿಗರ ವಿಭಿನ್ನ ಪ್ರದೇಶಗಳಲ್ಲಿನ 'ಮನೆವಾರು (Household Survey) ಸಮೀಕ್ಷೆ' ಮತ್ತು 'ವ್ಯಕ್ತಿಗಳ (Case Study) ಸಂದರ್ಶನ' ಅಂಕಿ-ಅಂಶಗಳನ್ನು ಮತ್ತು ವಿವರಗಳನ್ನು ಮುಖ್ಯವಾಗಿಟ್ಟುಕೊಂಡು ಈ ಅಧ್ಯಯನ ಮಾಡಲಾಗಿದೆ. ಕುಂಬ್ರಿ ಮರಾಠಿಗರ ಮೂಲ ವೃತ್ತಿಗಳು ಯಾವುವು? ಮೂಲ ವೃತ್ತಿಗಳಿಂದ ಆ ಸಮುದಾಯ ದೂರ ಉಳಿಯಲು ಕಾರಣಗಳೇನು? ಇಂದಿಗೂ ಮೂಲ ವೃತ್ತಿಗಳನ್ನು ಅನುಸರಿಸುತ್ತಿರುವ ಕುಟುಂಬಗಳು ಎಷ್ಟಿವೆ? ಪ್ರಸ್ತುತ ದಿನಗಳಲ್ಲಿ ಜೀವನಾಧಾರಕ್ಕಾಗಿ ಆಯ್ಕೆ ಮಾಡಿಕೊಂಡ ವೃತ್ತಿಗಳು ಯಾವುವು? ಹಾಗೂ ಒಟ್ಟು ಸಮುದಾಯಗಳಲ್ಲಿ ಆರ್ಥಿಕವಾಗಿ ಮುಂದುವರೆದ ಮತ್ತು ಹಿಂದುಳಿದ ಕುಟುಂಬಗಳೆಷ್ಟು? ಎಂಬುದನ್ನು ಈ ಪ್ರಬಂಧದಲ್ಲಿ ವಿಶ್ಲೇಷಿಸಲಾಗಿದೆ. ಜೊತೆಗೆ ಅವರ ಮನೆಗಳ ಸ್ವರೂಪ, ಶೈಕ್ಷಣಿಕ ಸ್ಥಾನಮಾನ, ವರ್ತಮಾನ ಸ್ಥಿತಿಗತಿ ಕುರಿತು ಚರ್ಚಿಸಲಾಗಿದೆ.

ಕುಂಬ್ರಿ ಮರಾಠಿಗರ ಸಾಂಸ್ಕೃತಿಕ ಬದುಕನ್ನು ವಿವೇಚಿಸಲು ಪ್ರಯತ್ನಿಸಲಾಗಿದೆ. ಕುಂಬ್ರಿ ಮರಾಠಿಗರ ಜೀವನಾವರ್ತನ ಆಚರಣೆಗಳು, ಕುಂಬ್ರಿ ಮರಾಠಿಗರ ವಾರ್ಷಿಕಾವರ್ತನ ಆಚರಣೆಗಳ ವಿವರಗಳನ್ನು ನೀಡಲಾಗಿದೆ. ಜೊತೆಗೆ, ಸಮುದಾಯಗಳ ಜೊತೆಗಿನ ಕೊಡುಕೊಳ್ಳುವಿಕೆ ಸಾಮಾಜಿಕ ಶ್ರೇಣೀಕರಣ, ವಸತಿ, ಉಪಭಾಷೆ, ಆಹಾರ ಪ್ರವೃತ್ತಿಗಳು, ಆರೋಗ್ಯ, ಸಾಮಾಜಿಕ, ಉಡುಗೆ-ತೊಡುಗೆ, ಬಂಧುತ್ವ, ಮದುವೆ, ಮುಂತಾದವುಗಳಿಗೆ ಸಂಬಂಧಿಸಿದಂತೆ ಕುಂಬ್ರಿ ಮರಾಠಿಗರ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನವನ್ನು ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ಈ ಅಧ್ಯಾಯದ ಎರಡನೇ ಭಾಗದಲ್ಲಿ ಕುಂಬ್ರಿ ಮರಾಠಿಗರ ವರ್ತಮಾನದ ಸ್ಥಿತಿಗತಿಗಳನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಕುಂಬ್ರಿ ಮರಾಠಿ ಸಮುದಾಯದ ರಾಜಕೀಯ ಸ್ಥಿತಿಗತಿಗಳನ್ನು ಚರ್ಚಿಸಲಾಗಿದೆ. ಕುಂಬ್ರಿ ಮರಾಠಿ ಸಮುದಾಯದ ರಾಜಕೀಯ ತಿಳುವಳಿಕೆ ಮತ್ತು ಪಾಲ್ಗೊಳ್ಳುವಿಕೆ, ಭೂಹೋರಾಟಗಳು, ಅರಣ್ಯ ಹಕ್ಕುಗಳ ಕುರಿತ ಹೋರಾಟಗಳು, ಮೀಸಲಾತಿ ಕುರಿತ ಚಳುವಳಿ, ಕುಂಬ್ರಿ ಮರಾಠಿ ಸಮುದಾಯದ ಸಂಘಟನೆಗಳು, ಮುಂತಾದವುಗಳನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಅರಣ್ಯದ ಉಪ ಉತ್ಪನ್ನ ಮತ್ತು ಕುಂಬ್ರಿ ಮರಾಠಿಗರ ಪಾರಂಪರಿಕ ಹಕ್ಕುಗಳು ಹಾಗೂ ಅರಣ್ಯ ಇಲಾಖೆಯ ಸರಕಾರಿ ಕಾನೂನುಗಳ ನಡುವಿನ ಸಂಘರ್ಷಾತ್ಮಕ ನಿಲುವುಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

## ಅಧ್ಯಯನದ ಫಲಿತಗಳು ಮತ್ತು ಪರಿಹಾರದ ಆಶಯಗಳು

1. ಕುಂಬ್ರಿ ಮರಾಠಿಗರು ಮೂಲತಃ ಕೊಂಕಣಿ, ಮರಾಠಿ ಮತ್ತು ಕನ್ನಡದ ಮಿಶ್ರಭಾಷಿಕ ಪ್ರದೇಶದಲ್ಲಿ ನಿರಂತರ ವಲಸೆ ಮಾಡುತ್ತ ಬಂದವರು. ಕಾಲಾನಂತರ ಗೋವಾ ಮತ್ತು ಮಹಾರಾಷ್ಟ್ರದ ಗಡಿಭಾಗದ ಜೋಯಿಡ ಮೂಲಕ ಕರ್ನಾಟಕವನ್ನು ಪ್ರವೇಶಿಸಿದ ಈ ಸಮುದಾಯ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ, ಶಿರಸಿ, ಕುಮಟಾ, ಅಂಕೋಲಾ, ಸಿದ್ದಾಪುರ, ಹೊನ್ನಾವರ ಹಾಗೂ ಭಟ್ಕಳ ತಾಲೂಕುಗಳಲ್ಲಿ ನೆಲೆಸಿದೆ. ಕುಂಬ್ರಿ ಮರಾಠಿ ಸಮುದಾಯವು ಸಹ ದಕ್ಷಿಣ ಭಾರತದ ಪ್ರಮುಖ ಬುಡಕಟ್ಟು ಸಮುದಾಯಗಳಲ್ಲಿ ಒಂದು. ಮೂಲತಃ ಪಶುಪಾಲಕರು, ಮತ್ತು ಪಾರಂಪರಿಕ ಕೃಷಿಕರೂ ಆದ ಕುಂಬ್ರಿ ಮರಾಠಿಗರು ದಕ್ಷಿಣ ಭಾರತದ ವಿಶಿಷ್ಟ ಜನವರ್ಗಕ್ಕೆ ಸೇರಿದವರು. ಇವರ ಪಶುಪಾಲನೆ ಮತ್ತು ಕುಮ್ರಿ ಬೇಸಾಯದ ಕುರಿತ ಅನೇಕ ವಿವರಗಳು ನಮ್ಮ ದೇಶದ ಆದಿಮ ಜನಸಮುದಾಯಗಳ ವಿಶಿಷ್ಟ ದುಡಿಮೆಯ ಕ್ರಮವನ್ನು ಚಾರಿತ್ರಿಕವಾಗಿ ಕಟ್ಟಿಕೊಡುತ್ತವೆ. ಇದರ ಜೊತೆಗೆ ದಕ್ಷಿಣ ಪ್ರಸ್ಥಭೂಮಿಯ ವಿಶಿಷ್ಟ ಮತ್ತು ಆದಿಮ ಕೃಷಿಯ ಚಹರೆಗಳು ಇನ್ನೂ ಈ ಸಮುದಾಯದಲ್ಲಿ ಆಚರಣೆಯಲ್ಲಿವೆ.

2. ಕುಂಬ್ರಿ ಮರಾಠಿಗರು ಚರಿತ್ರೆಯ ಯಾವುದೋ ಕಾಲಘಟ್ಟದಲ್ಲಿ ಕರ್ನಾಟಕಕ್ಕೆ ವಲಸೆ ಬಂದಿರಬಹುದಾದ ಒಂದು ಕೃಷಿಕ ಸಮುದಾಯ. ಆದರೆ ಪಶುಪಾಲನೆ ಮತ್ತು ಆಹಾರ ಸಂಗ್ರಹಣೆಗಳೂ ಸಹ ಈ ಸಮುದಾಯದ ಪ್ರಧಾನ ಆರ್ಥಿಕ ಅವಲಂಬನೆಗಳಾಗಿವೆ. ಆದರೆ ಕುಂಬ್ರಿ ಮರಾಠಿಗರು ಕಾಡಿನ ಕಣಿವೆಗಳಲ್ಲಿ ಆದಿಮ ಕೃಷಿ ಪದ್ಧತಿಯನ್ನು ಪ್ರಧಾನವಾಗಿ ಅವಲಂಬಿಸಿದ್ದ ಸಮುದಾಯವಾಗಿದೆ. ಕೆತ್ಲು ಬೇಸಾಯ, ಕುಮೇರು ಕೃಷಿ, ಸ್ಥಳಾಂತರಿತ ವ್ಯವಸಾಯಗಳಂತಹ ಲಘು ವ್ಯವಸಾಯ ಪದ್ಧತಿಗಳನ್ನು ಅವಲಂಬಿಸಿಕೊಂಡು ಬದುಕಿ ಬಂದ ಸಮುದಾಯಗಳಲ್ಲಿ ಕುಂಬ್ರಿ ಮರಾಠಿ ಸಮುದಾಯವೂ ಒಂದು. 'ಕುಂಬ್ರಿ ಮರಾಠಿ' ಎಂಬ ಜೋಡಿ ಪದವೇ ಈ ಸಮುದಾಯದ ಆದಿಮತನವನ್ನು ಹೇಳುತ್ತದೆ. 'ಕುಂಬ್ರಿ' ಎಂದರೆ ಆದಿಮ 'ಕುಮ್ರಿ' ಬೇಸಾಯ ಕ್ರಮವನ್ನು ಸೂಚಿಸಿದರೆ, 'ಮರಾಠಿ'ಯು ಈ ಸಮುದಾಯದ ಭಾಷಿಕ ಅನನ್ಯತೆಯನ್ನು ಸೂಚಿಸುತ್ತದೆ. ಅಂದರೆ ಕುಂಬ್ರಿ ಮರಾಠಿಗರು, ಮರಾಠಿ ಭಾಷಿಕ ಪ್ರದೇಶದ ಆದಿಮ ಕೃಷಿಕರಾಗಿದ್ದಿರಬಹುದು ಎಂಬುದಕ್ಕೆ ಹಲವು ಸಾಕ್ಷ್ಯಾಧಾರಗಳು ಸಿಗುತ್ತವೆ.

3. ಕುಂಬ್ರಿ ಮರಾಠಿಗರು ಕೇವಲ ತಮ್ಮ ಉಡಿಗೆ, ತೊಡುಗೆ, ಭಾಷೆ, ಸಂಸ್ಕೃತಿ ಮತ್ತು ಸಾಮಾಜಿಕ ಪದ್ಧತಿಗಳಿಂದ ಭಿನ್ನವಾಗಿಲ್ಲ. ಕುಂಬ್ರಿ ಮರಾಠಿಗರ ನಿತ್ಯದ ಬದುಕು ಮತ್ತು ಪ್ರಾಚೀನ ಸಾಂಸ್ಕೃತಿಕ ಕುರುಹುಗಳಿಂದಲೂ ಇವರು ಇತರೆ ಸಮುದಾಯಗಳಿಗಿಂತ ಭಿನ್ನರಾಗಿದ್ದಾರೆ. ಕುಂಬ್ರಿ ಮರಾಠಿ ಸಮುದಾಯವು ಪರಿಶಿಷ್ಟ ವರ್ಗಕ್ಕೆ ಸೇರದ ಬುಡಕಟ್ಟು ಸಮುದಾಯವಾಗಿದ್ದು ಹೆಚ್ಚಾಗಿ ಉತ್ತರಕನ್ನಡ ಜಿಲ್ಲೆಯ ಯಲ್ಲಾಪುರ, ಶಿರಸಿ, ಕುಮಟಾ, ಅಂಕೋಲಾ, ಸಿದ್ದಾಪುರ, ಹೊನ್ನಾವರ ಹಾಗೂ ಭಟ್ಕಳ ತಾಲೂಕುಗಳಲ್ಲಿ ನೆಲೆಸಿದೆ. ಕುಂಬ್ರಿ ಮರಾಠಿ ಸಮುದಾಯವು ಸಹ ದಕ್ಷಿಣ ಭಾರತದ ಪ್ರಮುಖ ಬುಡಕಟ್ಟು ಸಮುದಾಯಗಳಲ್ಲಿ ಒಂದು.

4. ಕುಂಬ್ರಿ ಮರಾಠಿಗರ ಆಚಾರ–ವಿಚಾರಗಳು, ರೂಢಿ–ಸಂಪ್ರದಾಯಗಳು, ಆಚರಣೆಗಳು ಒಂದೇ ಇದ್ದರೂ ಸಹ ಜಿಲ್ಲೆಯ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರಿನಿಂದ ಗುರುತಿಸುತಿಸಲಾಗಿತ್ತದೆ. ಯಲ್ಲಾಪುರ ಭಾಗದಲ್ಲಿರುವ ಮರಾಠಿಗರನ್ನು ಶಿವಾಜಿ ಮರಾಠಿಗರೆಂದು, ಸಿದ್ಧಾಪುರ ಭಾಗದಲ್ಲಿರುವ ಮರಾಠಿಗರನ್ನು ಜೋಗಿ ಮರಾಠಿಗರೆಂದು, ಅಂಕೋಲಾ ಭಾಗದಲ್ಲಿರುವ ಮರಾಠಿಗರನ್ನು ಕುಣಬಿ ಮರಾಠಿಗರೆಂದು, ಶಿರಸಿ, ಕುಮಟಾ, ಹೊನ್ನಾವರ ಭಾಗದ ಮರಾಠಿಗರಿಗೆ ಕುಂಬ್ರಿ ಮರಾಠಿಗರೆಂದು, ಭಟ್ಕಳದ ಗಡಿಭಾಗದಲ್ಲಿರುವ ಮರಾಠಿಗರಿಗೆ ಕುಡುಬಿ ಮರಾಠಿಗರೆಂದು ಕರೆಯಲಾಗುತ್ತದೆ. ಇದಲ್ಲದೆ ಕುಂಬ್ರಿ ಮರಾಠಿಗರು

ಗೋವಾ ರಾಜ್ಯದ ಕಾಣಕೋಣ ಹಾಗೂ ಮಹಾರಾಷ್ಟ್ರದ ರತ್ನಾಗಿರಿ ಎಂಬ ಪ್ರದೇಶದಲ್ಲೂ ಇವರು ನೆಲೆಸಿರುವುದು ಕಂಡುಬರುತ್ತದೆ.

5. ಕುಂಬ್ರಿ ಮರಾಠಿಗರು ಉತ್ತರ ಕನ್ನಡ ಜಿಲ್ಲೆಗೆ ಕನ್ನಡ, ಮರಾಠಿ ಮತ್ತು ಕೊಂಕಣಿ ಭಾಷಿಕ ಪ್ರದೇಶದಿಂದ ವಲಸೆ ಬಂದವರೆಂಬುದು ಸ್ಪಷ್ಟ. ಕುಂಬ್ರಿ ಮರಾಠಿಯರಲ್ಲಿದ್ದಂತೆ ದಕ್ಷಿಣ ಕನ್ನಡದಲ್ಲಿರುವ ಕುಡಬಿ ಸಮುದಾಯ ಹಾಗೂ ಕಾರವಾರ, ಜೋಯಿಡಾ, ಯಲ್ಲಾಪುರ ಪ್ರದೇಶದಲ್ಲಿರುವ ಕುಣಬಿಯರಲ್ಲೂ ಕೆಲವು ಬಳಿಗಳು ಒಂದೇ ರೀತಿಯಲ್ಲಿರುವುದು ಈ ಮೂರೂ ಸಮುದಾಯಗಳು ಮೂಲದಲ್ಲಿ ಒಂದೇ ಜನಾಂಗಿಕ (Ethnological) ಲಕ್ಷಣಗಳನ್ನು ಹೊಂದಿವೆ. ಗಾವಡೆ, ಗಾವುಡಾ, ಗೌಡ ಎಂಬ ಶಬ್ದಗಳೂ ಸಹ ಮೂರೂ ಸಮುದಾಯದಲ್ಲೂ ಆಯಾ ಸಮುದಾಯದ ಹಿರಿಯನನ್ನು, ಮುಖಂಡನನ್ನು ಸಂಬೋಧಿಸಲು ಬಳಸಲಾಗುತ್ತದೆ. ಕುಂಬ್ರಿ ಮರಾಠಿಗರಿಗೆ ಜೋಗಿ ಮರಾಠಿ, ಶಿವಾಜಿ ಮರಾಠಿ, ಕುಂಬ್ರಿ ಮರಾಠಿ, ಕುಣಬಿ ಮರಾಠಿ ಎಂಬಂತೆ, ಕುಣಬಿ ಮತ್ತು ಕುಡಬಿ ಸಮುದಾಯದಲ್ಲೂ ಈ ರೀತಿಯ ಸೂಚಕ ಹೆಸರುಗಳಿವೆ. ದಕ್ಷಿಣ ಕನ್ನಡದ ಕುಡುಬಿಯರನ್ನು ಕುಂಬ್ರಿ ಕುಡುಬಿ ಎಂದೂ ಗುರುತಿಸಲಾಗುತ್ತದೆ. ಕುಂಬ್ರಿ ಮರಾಠಿ, ಕುಣಬಿ, ಕುಡಬಿಯರಲ್ಲಿ ಒಂದೇ ರೀತಿಯ ಕೌಟುಂಬಿಕ ಪದ್ಧತಿ ಇದೆ. ಕುಂಬ್ರಿ ಮರಾಠಿಯರು ಗೋವಾ, ಮಹಾರಾಷ್ಟ್ರ ರಾಜ್ಯದಲ್ಲೂ ಇದೆ. ಕುಂಬ್ರಿ ಬೇಸಾಯದೊಡನೆ ಬದುಕು ಕಟ್ಟಿಕೊಂಡು ಬಂದ ಸಮುದಾಯವು ಮರಾಠಿ ಮಾತನಾಡುತ್ತಿದ್ದುದ್ದರಿಂದ 'ಕುಂಬ್ರಿ ಮರಾಠಿ'ಗರೆಂದು ಗುರುತಿಸಲಾಗುತ್ತಿದೆ ಉತ್ತರ ಕನ್ನಡ ಜಿಲ್ಲೆಯಲ್ಲಿ ನೆಲೆ ನಂತ ಕುಂಬ್ರಿ ಮರಾಠಿಗರ ಭಾಷೆಯಲ್ಲಿ ಬಳಸುವ ಶಬ್ದಗಳಲ್ಲಿ ಹಾಗೂ ದಕ್ಷಿಣ ಕನ್ನಡದ ಕುಡಬಿಯರು ಹಾಗೂ ಕಾರವಾರ, ಜೋಯಿಡಾ, ಯಲ್ಲಾಪುರ ಪ್ರದೇಶದಲ್ಲಿರುವ ಕುಣಬಿ ಸಮುದಾಯದವರು ಬಳಸುವ ಶಬ್ದಗಳಲ್ಲಿ ಸಾಮ್ಯತೆ ಇರುವುದರಿಂದ ಈ ಸಮುದಾಯಗಳ ನಡುವೆ ಪರಸ್ಪರ ಜನಾಂಗಿಕ (Ethnological) ಸಂಬಂಧಗಳಿವೆ. ಈ ಕುರಿತು ಪ್ರತ್ಯೇಕ ತೌಲನಕ ಅಧ್ಯಯನ ಮಾಡುವ ಅಗತ್ಯವಿದೆ. ಕರ್ನಾಟಕ ಸರ್ಕಾರ ಘೋಷಿಸಿದ ಹಿಂದುಳಿದ ವರ್ಗಗಳಲ್ಲಿ ಗುರುತಿಸಲಾದ, ಕುಡುಬಿಯರು, ಕುಂಬ್ರಿ ಮರಾಠಿ, ಕುಣಬಿ, ಕುಳವಾಡಿ ಕಣಬಿ, ಕುರ್ಮ, ಕುರ್ಮಿ ಸಮುದಾಯಗಳನ್ನು ಸಹ ತುಲನೆ ಮಾಡಿ ನೋಡಬೇಕಾದ ಅವಶ್ಯಕತೆ ಇದೆ.

6. ಆದಿವಾಸಿ ಮತ್ತು ಕೆಳಜಾತಿ ಸಮುದಾಯಗಳಲ್ಲಿ ಹೆಣ್ಣು ಗಂಡಿನ ಸಾಮಾಜಿಕ ಮತ್ತು ಕೌಟುಂಬಿಕ ಸಂಬಂಧಗಳು ಸರಳವಾಗಿರುವುದಿಲ್ಲ. ಅವು ಅತ್ಯಂತ ಸಂಕೀರ್ಣವೂ ಮತ್ತು ಜಟಿಲವೂ ಆಗಿರುತ್ತವೆ. ಈ ಸಮುದಾಯಗಳಲ್ಲಿ ಶೋಷಕ ಮತ್ತು ಶೋಷಿತರ ನಡುವೆ

ನಿತ್ಯ ಮುಖಾಮುಖಿ ಇದ್ದೇ ಇರುತ್ತದೆ. ಅದು ಜೀತಕ್ಕಿಟ್ಟುಕೊಂಡಿರುವ ಜಮೀನ್ದಾರ, ಕೂಲಿ ಕೊಡುವ ಧಣಿ ಮತ್ತು ಬೆದರಿಸುತ್ತಲೇ ಹೆಣ್ಣುಗಳಿಗೆ ಹಪಹಪಿಸುವ ಸೆರೇಗಾರರಿಬಹುದು. ಕೆಳಜಾತಿ ಮತ್ತು ಆದಿವಾಸಿ ಮಹಿಳೆಯರು ದಿನನಿತ್ಯ ಈ ಜಟಿಲ ಸಂದಿಗ್ಧತೆಗಳನ್ನು ಮುಖಾಮುಖಿ ಮಾಡಲೇ ಬೇಕು. ಇದರ ಜೊತೆಗೆ ಮನೆಯಲ್ಲಿ ಸಾಮಾನ್ಯವಾಗಿ ಕುಡಿದು ಬರುವ ಮತ್ತು ದಿನದ ಕೂಲಿಯನ್ನು ಮತ್ತೆ ಮತ್ತೆ ತನ್ನ ಚಟಕ್ಕೆ ವಿನಿಯೋಗಿಸಲು ಹಾತೊರೆಯುವ ಗಂಡ ಈ ಎಲ್ಲರನ್ನು ಕೆಳಜಾತಿ ಮತ್ತು ಆದಿವಾಸಿ ಮಹಿಳೆಯರು ದಿನನಿತ್ಯ ಅನುಸಂಧಾನ ಮಾಡಬೇಕಾಗುತ್ತದೆ. ಹಸಿದುಕೊಂಡೇ ತನ್ನೊಡನೆ ಬಿಸಿಲು ಮಳೆಗಳಲ್ಲೂ ದುಡಿವ ತನ್ನ ಮಕ್ಕಳೊಂದಿಗೆ ಅವರ ಭವಿಷ್ಯವನ್ನು ಕುರಿತು ಆತಂಕಮಯ ಸಂದಿಗ್ಧತೆಗಳನ್ನು ಎದುರಿಸುತ್ತಾ ಈ ಸಮುದಾಯಗಳ ಮಹಿಳೆಯರು ನಿತ್ಯ ವರ್ತಮಾನವನ್ನು ಎದುರಿಸುತ್ತಾರೆ. ಅಲ್ಲಿ ಮದುವೆಯಾದ ಗಂಡ, ಜೀತಕ್ಕಿಟ್ಟುಕೊಂಡ ಒಡೆಯ, ಕೂಲಿ ಕೊಡುವ ಧಣಿ ಮತ್ತು ರಣಹದ್ದಿನಂತೆ ಕಾಯುತ್ತಾ ಕುಳಿತುಕೊಳ್ಳುವ ಸೆರೇಗಾರ ಎಲ್ಲರೂ ಸಮಾನ ಶೋಷಕರೇ ಆಗಿರುತ್ತಾರೆ. ಈ ಸಮುದಾಯಗಳ ಮಹಿಳೆಗೆ ಶೋಷಣೆಗೊಳಪಡುವುದು ನಿತ್ಯದ ಬದುಕಿನ ಒಂದು ಭಾಗವಾಗಿದೆ.

7. ಕುಂಬ್ರಿ ಮರಾಠಿಗರು, ಸಹ್ಯಾದ್ರಿಯ ಕಣಿವೆ ಮತ್ತು ಕರಾವಳಿಯ ಅಗಮ್ಯ ಕಾಡುಗಳಲ್ಲಿ ವಾಸಿಸುತ್ತಿದ್ದರು ಸಹ 'ಮುಖ್ಯವಾಹಿನಿ' ಎಂದು ಕರೆಯಲ್ಪಡುವ ಸಮಾಜದಿಂದ ದೂರ ಉಳಿದಿಲ್ಲ. ತಮ್ಮ ಪಾರಂಪರಿಕ ಉಡುಗೆ-ತೊಡುಗೆ, ಜೀವನ ವಿಧಾನಗಳಲ್ಲಿ ಕಾಣಿಸಿಕೊಂಡರೂ ಸಹ ಕುಂಬ್ರಿ ಮರಾಠಿಗರಲ್ಲಿ 'ಮುಖ್ಯವಾಹಿನಿ'ಯ ಸಾಮಾಜಿಕ ಮೌಲ್ಯಗಳ ಅಂತರ್ಗತವಾಗಿವೆ. ಈ ಕಾರಣದಿಂದಾಗಿ ಮರಾಠಿಗರ ಸಾಮಾಜಿಕ ಸಂರಚನೆ, ಆರ್ಥಿಕ ಮತ್ತು ರಾಜಕೀಯ ಚಟುವಟಿಕೆಗಳನ್ನು ಪ್ರತ್ಯೇಕವಾಗಿ ನೋಡಲು ಸಾಧ್ಯವಿಲ್ಲ. ಜೊತೆಗೆ ಮರಾಠಿಗರ ಸಮಾಜದ ಲಿಂಗಸಂಬಂಧಿ ವ್ಯವಸ್ಥೆಯನ್ನು 'ಪ್ರತ್ಯೇಕಿತ ಬುಡಕಟ್ಟಿನ' ಸಾಮಾಜಿಕ ವ್ಯವಸ್ಥೆಯಾಗಿ ನೋಡಲು ಬರುವುದಿಲ್ಲ. ಏಕೆಂದರೆ ಸಾಮಾಜಿಕ ಬಾಹ್ಯ ಶ್ರೇಣೀಕರಣವಾಗಲಿ ಮತ್ತು ಆಂತರಿಕ ಶ್ರೇಣೀಕರಣವಾಗಲಿ 'ಮುಖ್ಯವಾಹಿನಿ' ಸಮಾಜದಲ್ಲಿದ್ದಂತೆ ಕುಂಬ್ರಿ ಮರಾಠಿಗರಲ್ಲೂ ಆಚರಣೆಯಲ್ಲಿದೆ. ಜೊತೆಗೆ ಹೊರಜಗತ್ತಿನ ಸಮಾಜಗಳಲ್ಲಿದ್ದಂತೆ ಲಿಂಗತಾರತಮ್ಯತೆ ಮತ್ತು ಮಹಿಳೆಯರ ಮೇಲಿನ ದಬ್ಬಾಳಿಕೆಗಳು ಮರಾಠಿಗರಲ್ಲೂ ಇವೆ. ಕುಂಬ್ರಿ ಮರಾಠಿಗರಲ್ಲಿ ಅಸಮಾನತೆಯ ಸ್ವರೂಪ ಮತ್ತು ತಾರತಮ್ಯ ವ್ಯವಸ್ಥೆಯು ಸೈದ್ಧಾಂತಿಕವಾಗಿ 'ಮುಖ್ಯವಾಹಿನಿಗಿಂತ' ಭಿನ್ನವಾಗೇನು ಇಲ್ಲ. ಈ ಕಾರಣದಿಂದಾಗಿ ಕುಂಬ್ರಿ ಮರಾಠಿಗರಲ್ಲಿ ಸಾಮಾಜಿಕ ಸಂರಚನೆಯನ್ನು ಪ್ರತ್ಯೇಕವಾಗಿ ನೋಡುವ ಅಗತ್ಯವಿಲ್ಲ. ಉತ್ತರ ಕನ್ನಡ

ಜಿಲ್ಲೆಯ 8 ತಾಲೂಕುಗಳಲ್ಲಿ ನೆಲೆಸಿರುವ ಕುಂಬ್ರಿ ಮರಾಠಿಯರ ಸಂಖ್ಯೆ ಕಡಿಮೆ ಇರುವುದರಿಂದ ನಿರಂತರ ಕ್ಷೇತ್ರಕಾರ್ಯವನ್ನು ಕೈಗೊಂಡು ಎಲ್ಲಾ ಗ್ರಾಮಗಳಿಗೂ ಭೇಟಿ ನೀಡಿ ಕೌಟುಂಬಿಕ ಸಮೀಕ್ಷೆ ಮಾಡಲಾಯಿತು. ಈ ಸಮೀಕ್ಷೆಯ ಪ್ರಕಾರ 11,469 ಗಂಡು 12,347 ಮಹಿಳೆಯರೂ ಸೇರಿದಂತೆ ಒಟ್ಟೂ ಸುಮಾರು 23,816 ಜನಸಂಖ್ಯೆಯನ್ನು ಹೊಂದಿದವರಾಗಿರುತ್ತಾರೆ ಎಂಬ ಮಾಹಿತಿ ಸಮೀಕ್ಷೆಯಿಂದ ತಿಳಿಯಿತು.ಈ ಅಂಕಿ ಅಂಶಗಳನ್ನು ಗಮನಿಸಿದಾಗ ಜಿಲ್ಲೆಯ ಒಟ್ಟು ಜನಸಂಖ್ಯೆಯ ಶೇ 1.66 ಮಾತ್ರ ಈ ಸಮುದಾಯದ ಜನಸಂಖ್ಯೆಯಿದ್ದು ಇದರಲ್ಲಿ ಗಂಡಸರಿಗಿಂತ ಹೆಂಗಸರ ಸಂಖ್ಯೆಯೆ ಹೆಚ್ಚಾಗಿರುವುದನ್ನು ಗಮನಿಸಲಾಯಿತು. ಸಮೀಕ್ಷೆಗೊಳಪಟ್ಟ ಉತ್ತರ ಕನ್ನಡ ಜಿಲ್ಲೆಯ ಕುಂಬ್ರಿ ಮರಾಠಿಗರ ಸಂಖ್ಯೆ 23816, ಇದರಲ್ಲಿ ಗಂಡಸರ ಸಂಖ್ಯೆ 11469 ಇದ್ದರೆ, ಮಹಿಳೆಯರ ಸಂಖ್ಯೆ 12347 ಜನರಿದ್ದಾರೆ. ಸಮುದಾಯದ ಲಿಂಗವಾರು ವಯೋಗುಂಪು ಪ್ರಮಾಣದಲ್ಲಿ ಸ್ತ್ರೀಯರೆ ಅಧಿಕವಾಗಿದ್ದಾರೆ. ಇದರ ಪರಿಣಾಮವಾಗಿ ಆರು ವರ್ಷದೊಳಗಿನ ವಯೋಮಾನದಲ್ಲಿ ಲಿಂಗ ಪರಿಣಾಮವು 2001 ರಲ್ಲಿ 1010 ಇದ್ದುದು 2011 ರಲ್ಲಿ 1077 ಕ್ಕೆ ಏರಿದೆ. ಅಂದರೆ ಆರು ವರ್ಷದೊಳಗಿನ ವಯೋಮಾನದಲ್ಲಿ ಪ್ರತಿ 1000 ಗಂಡು ಮಕ್ಕಳಿಗೆ ಇದಿರಾಗಿ 2001 ರಲ್ಲಿ 1010 ಹೆಣ್ಣು ಮಕ್ಕಳು ಇರುತ್ತಿದ್ದರು. ಆದರೆ 2011 ರಲ್ಲಿ ಇದರ ಪ್ರಮಾಣ 1077 ಆಗಿದೆ.

8. ಕುಂಬ್ರಿ ಮರಾಠಿಗರಲ್ಲಿ ಪುರುಷರಿಗಿಂತ ಮಹಿಳೆಯರ ಸಂಖ್ಯೆ ಹೆಚ್ಚಾಗಿದ್ದರೂ ಸಹ ಪುರುಷ ಪ್ರಧಾನ ಅಥವಾ ಪಿತೃಪ್ರಧಾನ ವ್ಯವಸ್ಥೆಯೇ ಈ ಸಮುದಾಯದಲ್ಲಿದೆ. ಅಲ್ಲದೇ ಮಹಿಳೆಯರ ಸಂಖ್ಯೆ ಹೆಚ್ಚಾಗಿರಲು ಮಹಿಳೆಯರ ಜೀವಿತ ಅವಧಿ, ಜನನ ಹೆಚ್ಚಾಗಿರುವುದೇ ಕಾರಣ ಎಂದು ಸಮುದಾಯದ ಹಿರಿಯರು ಹೇಳುತ್ತಾರೆ, ಅಲ್ಲದೇ ಗಂಡಸರು ಯಾವಾಗಲೂ ಅರಣ್ಯಗಳಲ್ಲಿ ಸುತ್ತುತ್ತಾ, ಶ್ರಮದಾಯಕ ಕೆಲಸಗಳಲ್ಲಿ ತೊಡಗಿರುವುದರಿಂದಲೂ, ಮಹಿಳೆಯರಿಗಿಂತ ಬೇಗ ಹಾಗೂ ಆಕಸ್ಮಿಕ ಸಾವು ಕಾಣುವುದರಿಂದಲೂ ಸಂಖ್ಯೆ ಕಡಿಮೆ ಆಗಲು ಕಾರಣವೆಂದು ಹೇಳುತ್ತಾರೆ. ಅಷ್ಟೇ ಅಲ್ಲದೇ ವಿಧುರ ಮತ್ತು ವಿಧವೆಯರ ಸಂಖ್ಯೆಯನ್ನು ಗಮನಿಸಲಾಗಿ ವಿಧವೆಯರ ಸಂಖ್ಯೆಯೇ ಹೆಚ್ಚಾಗಿರುವುದನ್ನು ಕಾಣಬಹುದು.

9. ಕುಂಬ್ರಿ ಮರಾಠಿಗರ ಕುಟುಂಬಗಳು ಸಾಮಾನ್ಯವಾಗಿ ಪುರುಷ ಪ್ರಧಾನ ಕುಟುಂಬಗಳೇ ಆಗಿವೆ. ನನ್ನ ಅಧ್ಯಯನಕ್ಕಾಗಿ ನಡೆಸಿದ 100 ಜನರ ವ್ಯಕ್ತಿ ಅಧ್ಯಯನ (Case Studies) ಸಮೀಕ್ಷೆಯಲ್ಲಿ 70 ಬಿಡಿ ಕುಟುಂಬ (ವಿಭಕ್ತ)ಗಳಿದ್ದರೆ ಕೇವಲ 30 ಮಾತ್ರ ಅವಿಭಕ್ತ ಕೂಡು ಕುಟುಂಬಗಳು ಕಂಡುಬಂದವು. ಈಗಾಗಲೇ ಕುಂಬ್ರಿ ಮರಾಠಿಗರಲ್ಲಿ

ಪ್ರತಿಶತ 70 ರಷ್ಟು ಕುಟುಂಬಗಳು ವಿಭಕ್ತ ಕುಟುಂಬಗಳೇ ಆಗಿವೆ. ಈ ಎಲ್ಲಾ ಕುಟುಂಬಗಳಲ್ಲಿ ಪುರುಷನೆ ಮನೆಯ ಯಜಮಾನ. ಕುಟುಂಬದ ಮುಖ್ಯ ತೀರ್ಮಾನಗಳನ್ನು ತೆಗೆದುಕೊಳ್ಳುವವನು ಪುರುಷನೆ. ನಾನು ಸಂದರ್ಶಿಸಿದ ಕುಟುಂಬಗಳನ್ನು, ಈ ಹಿಂದೆ ಕುಟುಂಬದ ಮುಖ್ಯ ತೀರ್ಮಾನಗಳನ್ನು ಯಾರು ತೆಗೆದುಕೊಳ್ಳುತ್ತಿದ್ದರು? ಎಂದು ಪ್ರಶ್ನಿಸಲಾಗಿತ್ತು. ಬಹುಪಾಲು ಸಂದರ್ಶಿತ ಕುಟುಂಬಗಳು, ಈ ಹಿಂದೆ ಮನೆಯ ಹಿರಿಯರು, ತಂದೆ-ತಾಯಿ ಎಲ್ಲರೂ ಸೇರಿ ಚರ್ಚಿಸುತ್ತಿದ್ದೆವು. ನಿರ್ಣಯಗಳನ್ನು ತೆಗೆದುಕೊಳ್ಳುವ ತೀರ್ಮಾನ ಅಂತಿಮವಾಗಿ ಮನೆಯ ಯಜಮಾನಿಕೆ ಪುರುಷನದೇ ಆಗಿರುತ್ತಿತ್ತು ಎಂದು ಉತ್ತರಿಸಿದರು.

10. ಕುಂಬ್ರಿ ಮರಾಠಿ ಸಮುದಾಯದಲ್ಲಿ ಗಂಡಸರಿಗಿಂತ ಹೆಣ್ಣಿನ ದುಡಿಮೆಯ ಸಮಯವೆ ಹೆಚ್ಚು. ಬೆಳಗಿನ ಒಂದ್ಹೊತ್ತಿನ ಜಾವದಿಂದ ಹಿಡಿದು ಮಲಗುವ ಮಧ್ಯರಾತ್ರಿಯ ವರೆಗೆ ಈ ಸಮುದಾಯದ ಮಹಿಳೆ ನಿರಂತರವಾಗಿ ದುಡಿಯುತ್ತಾಳೆ. ಬೆಳಗಿನ ಹೊತ್ತು ಮನೆಗೆಲಸ, ಅದು ದೈನಂದಿನ ಗೃಹಕೃತ್ಯದ ಭಾಗ. ಇದರ ನಂತರ ಕುಟುಂಬದ ನಿರ್ವಹಣೆಗಾಗಿ ಮಾಡುವ ಕೂಲಿ ಕೆಲಸ. ಅದು ಕೂಲಿ ಸಂಪಾದನೆಗಾಗಿ ಅಥವಾ ವಸ್ತು ರೂಪದ ಸಂಬಳದ ಕಾರಣಕ್ಕಾಗಿ ಮಾಡುವ ದಿನಗೂಲಿ, ಆನಂತರ ಮತ್ತೆ ಸಂಜೆಯ ವೇಳೆ ಗೃಹಕೃತ್ಯದ ದಿನವಿಡಿ ಕೆಲಸಕಾರ್ಯಗಳು. ದೈಹಿಕವಾಗಿ ಮತ್ತು ಮಾನಸಿಕವಾಗಿ ಮಹಿಳೆ ಪುರುಷರಿಗಿಂತ ಹೆಚ್ಚಾಗಿ ದಿನನಿತ್ಯ ತನ್ನನ್ನು ತೊಡಗಿಸಿಕೊಳ್ಳುತ್ತಾಳೆ. ದುಡಿದ ಇವಳ ಎಲ್ಲಾ ಪ್ರತಿಫಲವು ಕುಟುಂಬ ನಿರ್ವಹಣೆಗೆ ಮತ್ತು ಮನೆಯ ಯಜಮಾನನ ಹೆಚ್ಚುವರಿ ಖರ್ಚುಗಳಿಗೆ ವ್ಯಯವಾಗುತ್ತದೆ. ಇಷ್ಟಿದ್ದರೂ ಸಹ ಕುಣಬಿ ಕುಟುಂಬಗಳಲ್ಲಿ ಹೆಣ್ಣಿಗೆ ಯಾವ ಬಗೆಯ ನಿರ್ಣಯಾಧಿಕಾರಗಳಿಲ್ಲ. ಆರ್ಥಿಕ ಸಬಲೀಕರಣವು ಮಹಿಳೆಗೆ ಸಾಮಾಜಿಕ ಮತ್ತು ರಾಜಕೀಯ ಅಧಿಕಾರಿಗಳನ್ನು ನೀಡುತ್ತದೆ ಎಂಬ ಸಂಪ್ರದಾಯಿಕ ಸಮೀಕರಣವು ಇಲ್ಲಿ ತಲೆಕೆಳಗಾಗುತ್ತದೆ.

11. ಕುಂಬ್ರಿ ಮರಾಠಿ ಸಮುದಾಯದಲ್ಲಿ ಒಳಾಡಳಿತ ವ್ಯವಸ್ಥೆ ಅತ್ಯಂತ ಆದಿಮ ಸ್ವರೂಪದಲ್ಲಿದೆ. ಒಂದು ಸಮುದಾಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ಐಕ್ಯತೆಗಳು ಉಳಿಯಬೇಕೆಂದರೆ ಆ ಸಮುದಾಯದ ಒಳಾಡಳಿತ ಪದ್ಧತಿಯು ಕಟ್ಟುನಿಟ್ಟಿನಿಂದ ಕೂಡಿರಬೇಕು. ಈ ನಿಟ್ಟಿನಲ್ಲಿ ಕುಂಬ್ರಿ ಮರಾಠಿ ಸಮುದಾಯದಲ್ಲಿ ಅವರ ಒಳಾಡಳಿತ ವ್ಯವಸ್ಥೆ ಬಿಗಿಯಾಗಿದೆ. ಕುಂಬ್ರಿ ಮರಾಠಿ ಸಮುದಾಯದ ಆಂತರಿಕ ಆಡಳಿತ ಪದ್ಧತಿಗೂ ಕುಣಬಿಯರ ಸಾಮಾಜಿಕ ವ್ಯವಸ್ಥೆಯಲ್ಲಿ ಒಳಾಡಳಿತಕ್ಕೂ ಅನೇಕ ಸಾಮ್ಯತೆಗಳಿವೆ. ಕಾರಣ ಈ ಎರಡೂ ಸಮುದಾಯಗಳು

ಒಂದೇ ಜನಾಂಗಿಕ ಮತ್ತು ಸಾಮಾಜಿಕ ಹಿನ್ನೆಲೆಯಿಂದ ಬಂದ ಕಾರಣ ಈ ಎರಡೂ ಸಮುದಾಯಗಳ ಆಂತರಿಕ ರಚನೆ ಮತ್ತು ಕಟ್ಟು ಪಾಡಗಳು ಒಂದೇ ಸ್ವರೂಪದಲ್ಲಿವೆ. ಕುಂಬ್ರಿ ಮರಾಠಿ ಸಮುದಾಯದ ಆಂತರಿಕ ರಚನೆಯಲ್ಲಿ ಈ ಕೆಳಕಂಡ ಸ್ತರಗಳಿವೆ.

12. ಕುಂಬ್ರಿ ಮರಾಠಿ ಸಮುದಾಯದಲ್ಲಿ 'ಏನು ಮಾಡಬೇಕು' ಮತ್ತು 'ಏನು ಮಾಡಬಾರದು' ಎಂಬ ಎಚ್ಚರ ಸದಾ ಜಾಗೃತವಾಗಿರುತ್ತದೆ. 'ಏನು ಮಾಡಬೇಕು' ಮತ್ತು 'ಏನು ಮಾಡಬಾರದು' ಎಂಬ ಎಚ್ಚರವೇ ಕೆಲವು ಕಟ್ಟುನಿಟ್ಟಿನ ಕರ್ತವ್ಯಗಳನ್ನು 'ವಿಧಿಗಳ' ರೂಪದಲ್ಲಿ ಮತ್ತಿ ಏನನ್ನು ಮಾಡಬಾರದು ಎಂಬ ನಿಲುವನ್ನು ನಿಷೇಧಗಳ ರೂಪದಲ್ಲಿ ರೂಢಿಸಿಕೊಂಡು ಬಂದಿವೆ. ಇವುಗಳನ್ನು ವಿಧಿ ನಿಷೇಧಗಳೆಂದು ಕರೆಯಲಾಗುತ್ತದೆ. ಪ್ರತಿಯೊಂದು ಬುಡಕಟ್ಟುಗಳಲ್ಲಿ ಆಯಾ ಸಮುದಾಯದವರು ವಿಧಿನಿಷೇಧಗಳನ್ನು ಪಾಲಿಸಿಕೊಂಡು ಬಂದಿದ್ದಾರೆ. ಈ ನಿಷೇಧಗಳು ಆ ಸಮುದಾಯದ ನಂಬಿಕೆಗಳು, ಆರಾಧನೆಗಳು, ಭೌಗೋಳಿಕ, ಪರಿಸರ, ಇವುಗಳ ಹಿನ್ನಲೆಯಲ್ಲಿ ರೂಪುಗೊಂಡಿದ್ದು, ಈ ನಿಷೇಧಗಳಿಗೆ ಆಯಾ ಸಂಸ್ಕೃತಿಯು ನಿರ್ದಿಷ್ಟವಾದ ಕಾರಣಗಳನ್ನು ಮುನ್ನೆಲೆಗೆ ತರಲಾಗಿದೆ.

13. ಕುಂಬ್ರಿ ಮರಾಠಿ ಸಮುದಾಯದಲ್ಲಿ ಜಮ್ಮಾ ಪದ್ಧತಿ ಅಥವಾ ಸೀಮಾ ಪದ್ಧತಿ ಅಸ್ತಿತ್ವದಲ್ಲಿದೆ. ಕುಣಬಿಯರಲ್ಲೂ ಜಮ್ಮಾ ಪದ್ಧತಿ ರೂಢಿಯಲ್ಲಿದೆ. ಕುಣಬಿ ಸಮುದಾಯದ ವಾಸಸ್ಥಳಗಳಾದ ಅನೇಕ ಕುಳಾವಿಗಳು (ಗ್ರಾಮಗಳು) ಸೇರಿದ ಒಂದು ಘಟಕವನ್ನು ಸೀಮೆ ಎಂದು ಕರೆಯಲಾಗುತ್ತದೆ. ಈ ಜಮ್ಮಾ ಮತ್ತು ಸೀಮೆ ಒಂದು ವಿಶಿಷ್ಟವಾದ ಸಾಂಸ್ಕೃತಿಕ ಪರಿಪ್ರೇಕ್ಷ್ಯವಾಘಿದ್ದು, ಒಂದು ಅನೂಹ್ಯ ಎಲ್ಲೆಯಾಗಿ ಪರಿಭಾವಿಸಲ್ಪಡುತ್ತದೆ. ಅವರ ಬೇಟೆ, ಕುಮರಿ ಬೇಸಾಯ, ಅವರನ್ನು ಕಾಯುವ ವಿವಿಧ ದೈವಗಳ ವ್ಯಾಪ್ತಿಗಳನ್ನು ಈ ಸೀಮೆ ನಿರ್ದಿಷ್ಟಪಡಿಸುತ್ತದೆ.

14. ಗಣ ವ್ಯವಸ್ಥೆ, ಬುಡಕಟ್ಟು ಸಮಾಜವು ನಂತರ ವರ್ಣ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದ ಭಾರತೀಯ ಸಂಸ್ಕೃತಿ ಕಾಲಾನಂತರ ಶಿಥಿಲಗೊಂಡು ಕ್ರಮೇಣ ಜಾತಿ ಸಮಾಜವಾಗಿ ರೂಪುಗೊಂಡಿತು. ತಮ್ಮ ತಮ್ಮ ವ್ಯವಸ್ಥೆಗನುಗುಣವಾಗಿ ಸಾವಿರಾರು ಜಾತಿಗಳು ಸೃಷ್ಟಿಯಾಗುತ್ತಾ ಬಂದವು. ಹೀಗೆ ಹುಟ್ಟಿಕೊಂಡ ಜಾತಿ ವ್ಯವಸ್ಥೆಗೆ ಆಯಾ ಸಮುದಾಯದ ಬಳಿಗಳು ಭದ್ರ ಅಡಿಪಾಯಗಳಾದವು ಅಥವಾ ಗೋತ್ರಗಳಾದವು. ನಾಗರಿಕತೆಯ ಆದಿಯಲ್ಲಿ ಮಾನವ ಗುಂಪು ಗುಂಪಾಗಿ ವಾಸಿಸುತ್ತಾ ಭೌಗೋಳಿಕವಾಗಿ ಅಲೆಯುತ್ತಾ ಚದುರುತ್ತಾ ವಿಭಿನ್ನ ರೂಢಿ ಸಂಪ್ರದಾಯಗಳನ್ನು ಆಚರಿಸಿಕೊಳ್ಳುತ್ತಾ ವಿಭಿನ್ನ ವೃತ್ತಿಗಳನ್ನು ಕೈಗೊಂಡಾಗ ತಮ್ಮ ತಮ್ಮ ಗುಂಪುಗಳನ್ನು ಒಂದೊಂದು ಸಂಕೇತದ ಮೂಲಕ ಗುರುತಿಸಿಕೊಂಡು ಬಂದಿರುವುದು

ಕಂಡು ಬರುತ್ತದೆ. ಪ್ರಕೃತಿಯಲ್ಲಿ ಕಂಡ ಪ್ರಾಣಿ, ಪಕ್ಷಿ, ಗಿಡ, ಮರ, ಬಳ್ಳಿಗಳನ್ನು ಗುರುತಿಸಿ ಅವುಗಳಿಂದಲೇ ತಮ್ಮ ಗುಂಪಿನ ಸಂಕೇತವನ್ನು ನಿರ್ಧರಿಸಿಕೊಂಡು ಕುಟುಂಬದ ರಕ್ಷಣೆ ಮಾಡುತ್ತಾ ಬಂದ ಇಂತಹ ಸಂಕೇತಗಳೇ ಆಯಾ ಸಮುದಾಯದ ಕುಲದ ಸಂಕೇತವಾಗಿರುವುದು ಕಂಡು ಬರುತ್ತದೆ.

15. ಇವರ ಬಳಿಗಳು ಅವರು ವಾಸಿಸುತ್ತಿದ್ದ ಮತ್ತು ವಾಸಿಸುತ್ತಿರುವ ಮೂಲ ನೆಲೆಗಳನ್ನು ಸಂಕೇತಿಸುತ್ತವೆ. ಜೊತೆಗೆ ಕುಂಬ್ರಿ ಮರಾಠಿಗರ ಆದಿಮ ಕುಲವೃತ್ತಿಗಳನ್ನು ಈ ಬಳಿಗಳು ಪ್ರತಿನಿಧಿಸುತ್ತವೆ. ತಮ್ಮ ಬುಡಕಟ್ಟಿನ ಸಾಮಾಜಿಕ ವ್ಯವಸ್ಥೆಯಲ್ಲಿ ಆಯಾ ಉಪಪಂಗಡದ ಜನ ವಹಿಸಿಕೊಂಡ ಕುಲಸಂಬಂಧಿ ವೃತ್ತಿಗಳನ್ನು ಈ ಬಳಿಗಳು ಸಂಕೇತಿಸುತ್ತಿವೆ. ಈ ಬಳಿಗಳು ಕುಂಬ್ರಿ ಮರಾಠಿಗರ ಮನೋಭಾವವನ್ನು ಸೂತ್ರೀಕರಿಸುತ್ತವೆ. ಕುಂಬ್ರಿ ಮರಾಠಿಗರ ಕುಲದ ಸ್ವರೂಪ, ಆರಾಧನಾ ಮನೋಭಾವವನ್ನು ಈ ಬಳಿಗಳು ಪ್ರತಿನಿಧಿಸುತ್ತವೆ. ಕುಂಬ್ರಿ ಮರಾಠಿಗರ ಬಳಿಗಳು ಈ ಸಮುದಾಯ ವಾಸಿಸುವ ಪರಿಸರದಲ್ಲಿನ ಸಸ್ಯ ಮತ್ತು ಪ್ರಾಣಿಗಳನ್ನು ಸಂಕೇತಿಸುತ್ತವೆ.

16. ಕುಂಬ್ರಿ ಮರಾಠಿಗರು ವಾಸಿಸುವುದು ದಟ್ಟಾರಣ್ಯಗಳಲ್ಲಾದುದರಿಂದ ಶಾಲೆಗಳು ಕೂಡ ತುಂಬಾ ಅಂತರದಲ್ಲಿರುತ್ತವೆ. ಕೆಲವೆಡೆ ಶಾಲೆಗಳೇ ಇಲ್ಲ. ಶಾಲೆಗಳಿದ್ದರೂ ಅಲ್ಲಿ ಶಿಕ್ಷಕರಿವುದಿಲ್ಲ. ಮಳೆಗಾಲದಲ್ಲಿ ಕೇಳುವವರೂ ಇಲ್ಲ, ಶಾಲೆಗಳೂ ನಡೆಯುವುದಿಲ್ಲ. ಬಹುತೇಕ ಶಿಕ್ಷಕರು ಬಯಲು ಸೀಮೆ ಕಡೆಯಿಂದ ಬಂದವರು. ಮಾತೃಭಾಷೆ ಕೊಂಕಣಿ, ಶಿಕ್ಷಕರಿಗೆ ಈ ಭಾಷೆ ಗೊತ್ತಿಲ್ಲದಿರುವುದರಿಂದ ಮಕ್ಕಳಿಗೆ ಮನವರಿಗೆ ಮಾಡುವುದು ಕಷ್ಟವಾಗುತ್ತದೆ. ಆದ್ದರಿಂದ ಕೊಂಕಣಿ ಗೊತ್ತಿರುವ ಶಿಕ್ಷಕರನ್ನು ನೇಮಿಸಬೇಕೆಂಬುದು ಕುಂಬ್ರಿ ಮರಾಠಿಗರು ಒತ್ತಾಯ. ದೂರದೂರದ ಶಾಲೆಗಳು, ಶಿಕ್ಷಕರ ಗೈರುಹಾಜರಿ, ಕೆಲವು ಶಾಲೆಗಳು ಸಂಪೂರ್ಣವಾಗಿ ಮುಚ್ಚಿ ಹೋಗಿರುವುದು ಇವೆಲ್ಲ ಶಿಕ್ಷಣದ ಪ್ರಗತಿಗೆ ಅಡ್ಡಿಯಾಗಿವೆ. ಇವೆಲ್ಲದರ ಪರಿಣಾಮವಾಗಿ ಅರ್ಧದಲ್ಲಿಯೇ ಶಾಲೆ ಬಿಡುವ ಮಕ್ಕಳ ಸಂಖ್ಯೆ ಹೆಚ್ಚು. ಇದರ ಪರಿಣಾಮ ಉನ್ನತ ಶಿಕ್ಷಣ ಎಂಬುದು ಈ ಸಮುದಾಯಕ್ಕೆ ಮರೀಚಿಕೆ. ಪದವಿ ಪಡೆದವರು ಕೇವಲ ಬೆರಳೆಣಿಕೆಯಷ್ಟು. ಇಡೀ ಸಮುದಾಯದಲ್ಲಿ ಬೆರಳೆಣಿಕೆ ಜನ ಮಾತ್ರ ಶಿಕ್ಷಕರಾಗಿ ನೇಮಕ ಹೊಂದಿದ್ದಾರೆ. ಕೆಲವರು ವಿವಿಧ ಇಲಾಖೆಗಳಲ್ಲಿ ನಾಲ್ಕನೇ ದರ್ಜೆ ನೌಕರರಾಗಿ ಸೇರಿದ್ದಾರೆ. ಸ್ನಾತಕೋತ್ತರ ಮಟ್ಟದ ಉನ್ನತ ಶಿಕ್ಷಣ ಯಾರಿಗೂ ಇಲ್ಲ.

17. ಕುಂಬ್ರಿ ಮರಾಠಿ ಸಮುದಾಯದ ಬದುಕು ಮತ್ತು ಅವರ ವೃತ್ತಿ ಪರಸ್ಪರ ಸಂಬಂಧವನ್ನು ಹೊಂದಿವೆ. ಆದ್ದರಿಂದ ಈ ಸಮುದಾಯದವರು ಕೃಷಿಯನ್ನೇ ಜೀವನದ ವೃತ್ತಿಯನ್ನಾಗಿ

ಮಾಡಿಕೊಂಡು ಕೃಷಿಗೆ ಹೊಂದಾಣಿಕೆಯಾಗುವಂತೆ ಅನೇಕ ಉಪಕಸಬುಗಳಾದ ಬೇಟೆ, ಮೀನುಗಾರಿಕೆ, ಪಶುಪಾಲನೆ, ಕುಮರಿ ಬೇಸಾಯ, ಕೈತೋಟ, ಕೃಷಿ ಕೂಲಿ ಮತ್ತು ಗೃಹ ಕೈಗಾರಿಕೆಗಳನ್ನು ದಿನನಿತ್ಯದ ಬದುಕಿನಲ್ಲಿ ಮಾಡುತ್ತಾ ಬಂದಿದ್ದಾರೆ.

18. ಕುಣಬಿ, ಕುಂಬ್ರಿ ಮರಾಠಿ, ಕುಡುಬಿ, ಮಾರಾಠಿ ನಾಯ್ಕ ಈ ಸಮುದಾಯಗಳು ಮೂಲತಃ ಪಶುಪಾಲಕರು. ಈ ಸಮುದಾಯಗಳು ಪಶುಪಾಲನೆ ಮಾಡುತ್ತಲೇ ಕುಮ್ರಿ ಬೇಸಾಯದಂತಹ ಕೃಷಿಯನ್ನು ಕಂಡುಕೊಳ್ಳುತ್ತಾ ಬಂದಿವೆ. ಹಾಗಾಗಿ ಪಾರಂಪರಿಕ ಕೃಷಿ ಸಮುದಾಯಗಳು ಒಂದು ಕಾಲಕ್ಕೆ ಪಶುಪಾಲಕ ಸಮುದಾಯಗಳೇ ಆಗಿದ್ದವು. ಇದು ಸಹಜ ಕೂಡ ಹೌದು. ಪಶುಪಾಲನೆ ಇಂದಿಗೂ ಪ್ರಮುಖ ಆಹಾರ ಉತ್ಪಾದನಾ ಚಟುವಟಿಕೆಯೂ ಹೌದು. ಆದರೆ ಪಾರಂಪರಿಕ ಪಶುಪಾಲಕ ಚಟುವಟಿಕೆಯು ಇಂದು ಒಂದು ಆಚರಣೆಯಾಗಿಯೂ ಈ ಸಮುದಾಯಗಳಲ್ಲಿ ಉಳಿದು ಬಂದಿದೆ. ಕುಂಬ್ರಿ ಮರಾಠಿಗರು ಕೃಷಿಯನ್ನು ಅವಲಂಬಿಸಿಕೊಂಡು ಜೀವನ ಮಾಡುವವರಾಗಿದ್ದರಿಂದ ಒಂದೊಂದು ಮನೆಯಲ್ಲಿ ಎಮ್ಮೆಗಳನ್ನು ಸಾಕಿರುವುದನ್ನು ನೋಡಬಹುದು. ಅಲ್ಲದೆ ಕೆಲವೊಂದು ಮನೆಯಲ್ಲಿ ಹಸುಗಳಿವೆ, ಆದರೆ ಕೃಷಿಯನ್ನು ಮಾಡುವಂತಹ ಎಲ್ಲಾ ಮನೆಯಲ್ಲಿಯೂ ಎರಡು ಕೋಣಗಳಿರುವುದನ್ನು ಇಲ್ಲಿ ವಿಶೇಷವಾಗಿ ನೋಡಬಹುದು.

19. 'ಕುಮರಿ ಬೇಸಾಯ' ಅಥವಾ 'ಸ್ಥಳಾಂತರ ಕೃಷಿ'. ಈ ಕುಮ್ರಿ ಬೇಸಾಯ ಭಾರತದ ಅನೇಕ ಅರಣ್ಯವಾಸಿ ಸಮುದಾಯಗಳ ಪಾರಂಪರಿಕ ಕೃಷಿ ಪದ್ಧತಿಯಾಗಿದೆ. ಆದರೆ, ವಸಾಹತು ಆಡಳಿತದ ಕೃಷಿ ಪದ್ಧತಿ ಮತ್ತು ಅವರು ತಂದ ಭೂಸಂಬಂಧಿ ಕಾಯ್ದೆಗಳು ಸ್ಥಳಾಂತರ ಬೇಸಾಯ ಪದ್ಧತಿಯನ್ನು ನಿಷೇಧಿಸಿದವು. ಆದರೆ ಕೆಲವು ಸಮುದಾಯಗಳು ದಟ್ಟ ಅಡವಿ ಮತ್ತು ಕಣಿವೆಗಲ್ಲಿ ಕುಮ್ರಿ ಬೇಸಾಯ ಕ್ರಮವನ್ನು ಅನುಸರಿಸಿಕೊಂಡು ಬಂದ ಉದಾಹರಣೆಗಳಿವೆ. ಕುಂಬ್ರಿ ಮರಾಠಿಗರು ಇತ್ತೀಚಿನವರೆಗೂ ಈ ಪಾರಂಪರಿಕ ಕೃಷಿ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿದ್ದರು ಎಂಬುದಕ್ಕೆ ಅನೇಕ ಪುರಾವೆಗಳು ಸಿಗುತ್ತವೆ. ಮತ್ತೊಂದು ಸಂಗತಿಯೆಂದರೆ ಸರಕಾರವೇ ಈ ಕೃಷಿ ಪದ್ಧತಿಯನ್ನು ನಿಲ್ಲಿಸುವಂತೆ ಪ್ರತಿಬಂಧ ಒಡ್ಡಿದೆ. ಈ ಸರದಿ ಕೃಷಿ ಪದ್ಧತಿಗೆ ಸ್ಥಳೀಯವಾಗಿ 'ಕುಮರಿ ಬೇಸಾಯ' ಎನ್ನುತ್ತಾರೆ. ಈ 'ಕುಮರಿ' ಎಂಬ ಶಬ್ದದಿಂದ ಇವರಿಗೆ ಕುಮ್ರಿ ಮರಾಠಿ, ಕುಂಬ್ರಿ ಮರಾಠಿ ಎಂಬ ಹೆಸರು ಬಂದಿದೆ. ಈ ಪಾರಂಪರಿಕ ಕೃಷಿ ಪದ್ಧತಿಯಲ್ಲಿ ಕುಂಬ್ರಿ ಮರಾಠಿಗರು ಮಳೆಗಾಲಕ್ಕಿಂತ ಮುಂಚೆಯೇ ಗಿಡಗಂಟೆಗಳನ್ನು ಕಡಿದು ಸುಡುವುದರ ಮೂಲಕ ಅರಣ್ಯ

ಭೂಮಿಯನ್ನು ಕೃಷಿಗೆ ಅಣಿಗೊಳಿಸಿ ಬೀಜ ಬಿತ್ತುವರು. ಸಾಮಾನ್ಯವಾಗಿ ಬೆಟ್ಟಗುಡ್ಡಗಳ ಇಳಿಜಾರು ಪ್ರದೇಶಗಳಾದ ಕಣಿವೆಗಳಲ್ಲಿ ಕುಮ್ರಿ ಬೇಸಾಯ ಸುಲಭ. ಈ ಪ್ರದೇಶದ ಸುತ್ತಲೂ ಕಡಿಯದಿರುವ ಗಿಡಮರಗಳ ರಕ್ಷಣಾವ್ಯೂಹ ನಿರ್ಮಾಣಗೊಳ್ಳುವುದು. ಈ ಸರದಿ ಕೃಷಿ ಪ್ರದೇಶವನ್ನು ಪ್ರತಿ ಎರಡು–ಮೂರು ವರ್ಷಗಳಿಗೊಮ್ಮೆ ಬದಲಾಯಿಸುತ್ತಾರೆ. ಕುಂಬ್ರಿ ಮರಾಠಿ ಸಮುದಾಯದವರು ಕುಮರಿ–ಕೃಷಿಗಾಗಿ ತಮ್ಮ ವಾಸಸ್ಥಳವನ್ನು ಆಗಾಗ ಬದಲಾಯಿಸುತ್ತ ಹೊಸ ಸ್ಥಳ ಹುಡುಕಿಕೊಂಡು ಹೋಗುತ್ತಾರೆ.

20. ಪ್ರಸ್ತುತ ಕುಂಬ್ರಿ ಮರಾಠಿಗರಲ್ಲಿ ಅತಿಹೆಚ್ಚಿಮ ಜನ ಅವಲಂಬಿಸಿರುವುದು ಕೃಷಿಕೂಲಿಯನ್ನು. ಕುಂಬ್ರಿ ಮರಾಠಿಗರಲ್ಲಿ ಭೂರಹಿತರೇ ಬಹುಸಂಖ್ಯಾತರು. ತಲೆಮಾರುಗಳಿಂದ ಇವರು ಅವಲಂಬಿಸಿದ್ದ ತುಂಡು ಭೂಮಿ ಇಂದು ಯಾರದೋ ವಶದಲ್ಲಿದೆ. ಹೀಗಾಗಿ ಕುಂಬ್ರಿ ಮರಾಠಿಗರಲ್ಲಿ ಹಲವರು ಕೃಷಿಕೂಲಿಯನ್ನು ಅವಲಂಬಿಸಿದ್ದಾರೆ. ಕುಂಬ್ರಿ ಮರಾಠಿಗರಲ್ಲಿ ಈಗ ಬೇರೆಯವರ ಗದ್ದೆಯಲ್ಲಿ ಕೃಷಿ ಕೂಲಿಗಳಾಗಿ ದುಡಿಯುತ್ತಿದದಾರೆ. ಇದರ ಪರಿಣಾಮವಾಗಿ ಬೇರೆಯವರ ಹೊಲದಲ್ಲಿ ಅಥವಾ ಗದ್ದೆಗಳಲ್ಲಿ ಅದರಲ್ಲೂ ಬಂಡವಾಳವನ್ನು ಕ್ರೋಢೀಕರಿಸಿಕೊಂಡಿರುವವರ ಗದ್ದೆಗಳಲ್ಲಿ ಕೃಷಿ ಕೂಲಿಗಳಾಗಿ ದುಡಿಯುತ್ತಿರುವುದನ್ನು ನೋಡಬಹುದು. ಈ ರೀತಿಯಾಗಿ ಕೆಲವರು ಕೂಲಿಯನ್ನು ತಮ್ಮ ಕಸುಬು ಮಾಡಿಕೊಂಡು ಜೀವನವನ್ನು ನಡೆಸುತ್ತಿದ್ದಾರೆ.

21. ಉತ್ತರ ಕನ್ನಡದ ಎಂಟು ತಾಲೂಕುಗಳ 3387 ಕುಟುಂಬಗಳಲ್ಲಿ 60 ಕುಟುಂಬಗಳು ಮಾತ್ರ 2 ಎಕರೆ ಮೇಲ್ಪಟ್ಟು ಕೃಷಿ ಭೂಮಿಯನ್ನು ಹೊಂದಿವೆ. 1 ರಿಂದ 2 ಎಕರೆ ಕೃಷಿ ಜಮೀನು ಹೊಂದಿರುವ ಕುಟುಂಬಗಳು 133ರಷ್ಟು ಕುಟುಂಬಗಳು 20 ಗುಂಟೆಯಿಂದ 1 ಎಕರೆವರೆಗೆ ಜಮೀನು ಹೊಂದಿದೆ, ಅಂದರೆ ಈ ಜಮೀನು 219 ಕುಟುಂಬಗಳಲ್ಲಿ ಹಂಚಿಕೆಯಾಗಿದೆ. 1 ರಿಂದ 20 ಗುಂಟೆವರೆಗೆ ಜಮೀನು ಹೊಂದಿರುವ ಕುಟುಂಬಗಳು 225 ಕುಟುಂಬಗಳು. ಇನ್ನೂ 10 ಗುಂಟೆ ಕೃಷಿ ಜಮೀನು ಹೊಂದಿರುವುದು 84 ಕುಟುಂಬಗಳು ಮಾತ್ರ. ಭೂರಹಿತ ಕುಟುಂಬಗಳು 2641. ಕುಂಬ್ರಿ ಮರಾಠಿ ಸಮುದಾಯದ ಶೇ 85 ಕುಟುಂಬಗಳು ಭೂರಹಿತವಾಗಿವೆ. ಈ ಬೃಹತ್ ಸಂಖ್ಯೆಯ ಕುಟುಂಬಗಳು ಅವಲಂಬಿಸಿರುವುದು ಕೃಷಿಕೂಲಿಯನ್ನು. ಮಲೆನಾಡಿನ ಆದಿವಾಸಿಗಳಲ್ಲಿ ಅತ್ಯಧಿಕ ಸಂಖ್ಯೆಯ ಕೃಷಿಕೂಲಿಗಳಾಗಿ ಬದುಕುತ್ತಿರುವವರು ಮುಂಬ್ರಿ ಮರಾಠಿಗರೇ ಆಗಿದ್ದಾರೆ.

22. ಕುಂಬ್ರಿ ಮರಾಠಿ ಸಮುದಾಯದಲ್ಲಿ ಶೇ 82.65 ಜನ ಕೃಷಿಕೂಲಿಗಳಾಗಿ ಬದುಕುತ್ತಿದ್ದಾರೆ. ಶೇ 11.4 ಜನ ದಿನಗೂಲಿ, ಶೇ 3.02 ಜನ ಮನೆಕೆಲಸ, ಉಳಿದಂತೆ ಸಣ್ಣಪುಟ್ಟ

ವ್ಯಾಪಾರಗಳನ್ನು ನಡೆಸುತ್ತಿದ್ದಾರೆ. ಪಾರಂಪರಿಕ ಕೃಷಿಕರಾದ ಕುಂಬ್ರಿ ಮರಾಠಿಗರಲ್ಲಿ ಹೆಚ್ಚಿನವರು ವರ್ತಮಾನದಲ್ಲಿ ಕೃಷಿ ಕೂಲಿಗಳಾಗಿ ಬದುಕುತ್ತಿದ್ದಾರೆ. ಕೂಲಿ ಎಂದರೆ ಬೇರೆಯವರ ಜಮೀನಿನಲ್ಲಿ ಗೊತ್ತುಪಡಿಸಿದ ಕೆಲಸಕ್ಕಾಗಿ ಸಂಬಳದ ರೂಪದಲ್ಲಿ ಹಣ ಇಲ್ಲವೆ ಧಾನ್ಯಗಳನ್ನು ಪರ್ಯಾಯವಾಗಿ ಪಡೆಯುವುದು. ಕೊಪ್ಪಗಳಲ್ಲಿ ಹೆಚ್ಚಾಗಿ ಪುರುಷರಷ್ಟೇ ಮಹಿಳೆಯರು ಕೃಷಿ ಕೂಲಿ ಮಾಡಲು ಹೋಗುವುದು ಕಂಡುಬಂದಿತು. ಕುಂಬ್ರಿ ಮರಾಠಿ ಮಹಿಳೆಗೆ ಕೃಷಿ ಕೂಲಿ ಮಹತ್ವವಾದ ಆರ್ಥಿಕ ಚಟುವಟಿಕೆಯಾಗಿದೆ, ಶ್ರಮಕ್ಕೆ ಪ್ರತಿಫಲವಾಗಿ ಇವರು ಪಡೆಯುವ ಕೂಲಿಯು ಅವರ ಆರ್ಥಿಕ ಸ್ಥಿತಿಗತಿಯ ಜೊತೆಗೆ ಇವರ ಸಾಮಾಜಿಕ ಜೀವನ ವಿಧಾನವನ್ನು ಸಹ ತೋರಿಸುತ್ತದೆ. ಕೂಲಿ ಮಾಡಲು ಮೇಲ್ಜಾತಿಯ ಹಾಗೂ ತಮ್ಮ ಸುತ್ತಮುತ್ತಲಿನ ಕೃಷಿಕರ ಜಮೀನುಗಳಿಗೆ, ತೋಟಗಳಿಗೆ ಹೋಗುತ್ತಾರೆ.

23. ಆದಿವಾಸಿಗಳ ಸಂಸ್ಕೃತಿ ಎಂಬುದು ಸರಳವಾಗಿ ರೂಪುಗೊಂಡದ್ದಲ್ಲ. ಅದು ಅನೇಕ ಶತಮಾನಗಳ ಜಟಿಲ ಬದುಕಿನ ಭಾಗವಾಗಿ ಅಸ್ತಿತ್ವದಲ್ಲಿದೆ. ಅದರಲ್ಲೂ ಶತಮಾನಗಳಿಂದ ಅರಣ್ಯದಲ್ಲಿಯೇ ವಾಸಿಸುತ್ತ ಬಂದ ಅನೇಕ ಆದಿವಾಸಿಗಳ ಸಂಸ್ಕೃತಿ ಮತ್ತು ಬೌದ್ಧಿಕ ಸಂಕಥನಗಳು ಸರಳವಾಗಿರದೆ, ಸಂಕೇತದ ಮಟ್ಟದಲ್ಲಿರುತ್ತವೆ. ಜೊತೆಗೆ, ಭಾಷೆ ಮತ್ತು ತಮ್ಮ ಪಾರಂಪರಿಕ ಗಡಿಗಳನ್ನು ಬದಲಿಸಿ ವಲಸೆ ಹೋಗುವ ಮತ್ತು ಅಲೆಮಾರಿಗಳಾಗಿರುವ ಸಮುದಾಯಗಳ ಸಂಸ್ಕೃತಿ ಇನ್ನೂ ಜಟಿಲವಾಗಿರುತ್ತದೆ. ಅಂತಹ ಸಮುದಾಯಗಳಲ್ಲಿ ಕುಂಬ್ರಿ ಮರಾಠಿ ಸಮುದಾಯವೂ ಒಂದು.

24. ಕುಂಬ್ರಿ ಮರಾಠಿಗರದು ಒಂದು ಸಂಕೀರ್ಣ ಸಮಾಜ. ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ ಮತ್ತು ಆದಿಮ ಕುಮ್ರಿ ಬೇಸಾಯದಂತಹ ಪಾರಂಪರಿಕ ದುಡಿಮೆಗಳಲ್ಲಿ ತೊಡಗಿಕೊಂಡಿರುವ ಕಾರಣ, ಅವರ ದೈನಂದಿನ ಮತ್ತು ವಾರ್ಷಿಕ ಆಚರಣೆಗಳೂ ಅತ್ಯಂತ ವೈವಿಧ್ಯಮಯವಾಗಿವೆ. ಭಾರತವು ಒಂದು ಜಾತ್ಯಾತೀತ ರಾಷ್ಟ್ರವಾಗಿದೆ, ಅಲ್ಲದೆ ಹಲವಾರು ಭಾಷೆ, ಸಮುದಾಯ, ಧರ್ಮ ಮುಂತಾದವುಗಳನ್ನು ಒಳಗೊಂಡಂತಹ ದೇಶವಾಗಿದೆ. ಅಲ್ಲದೆ ತನ್ನ ಒಡಲಾಲದಲ್ಲಿ ನೂರಾರು ಸಂಸ್ಕೃತಿಗಳನ್ನು ಪೋಷಿಸಿಕೊಂಡು ಬಂದಿದೆ. ಭಾರತದಲ್ಲಿನ ಜನಸಮುದಾಯಗಳ ವಿಶಿಷ್ಟ ಸಾಂಸ್ಕೃತಿಕ ಪರಂಪರೆಗಳು ಆಯಾ ಜನ ಸಮುದಾಯದ ಅಪ್ರಜ್ಞಾಪೂರ್ವಕ ಸ್ಥಿತಿಯಲ್ಲಿ ಸಂರಕ್ಷಿಸಲ್ಪಟ್ಟು ಉಳಿದುಕೊಂಡು ಬಂದಿವೆ. ಈ ಪರಂಪರೆಯ ಯಾವುದೇ ಒಂದು ಅಂಗ ಊನವಾದರೂ ಆಂತರಿಕ ವ್ಯವಸ್ಥೆಯನ್ನು ಕಾಯ್ದುಕೊಳ್ಳಲು ಉತ್ಸುಕ ಜನಸಮುದಾಯ ಅದನ್ನು ಅತ್ಯಂತ ಮುತುವರ್ಜಿಯಿಂದ ಸರಿಪಡಿಸಲು ಪ್ರಯತ್ನಿಸುತ್ತದೆ. ಒಂದು ಜನಸಮುದಾಯವು ಆಚರಿಸುವ ಹಬ್ಬಗಳು

ಸಾಮಾಜಿಕವೂ, ಸಾರ್ವತ್ರಿಕವೂ ಆದವುಗಳಾಗಿರುತ್ತವೆ. ಜಗತ್ತಿನ ಎಲ್ಲ ಕಡೆಗಳಲ್ಲಿ ಕಂಡುಬರುವ ಹಬ್ಬ ಹರಿದಿನಗಳು, ಜಾತ್ರೆಗಳು ವಿಶಿಷ್ಟವಾದಂತಹ ಸ್ಥಾನಮಾನಗಳನ್ನು ಹೊಂದಿರುವುದು ಕಂಡುಬರುತ್ತದೆ. ಅವುಗಳು ಆಯಾ ಸಮುದಾಯಕ್ಕನುಗುಣವಾಗಿ ಆಚರಣೆಗಳನ್ನು ಒಳಗೊಂಡಿರುತ್ತವೆ ಅಂತೆಯೇ ಕುಂಬ್ರಿ ಮರಾಠಿ ಸಮುದಾಯದಲ್ಲಿಯೂ ಸಹ ಹಬ್ಬ ಹರಿದಿನಗಳು, ಜಾತ್ರೆಗಳು ಉಳಿದುಕೊಂಡು ಬಂದಿವೆ.

25. ಕುಂಬ್ರಿ ಮರಾಠಿಗರು ಮೂಲತಃ ವಲಸಿಗರು ಮತ್ತು ಅಲೆಮಾರಿಗಳು. ಜೊತೆಗೆ ಪಶುಪಾಲಕರು, ಕೃಷಿಕರೂ ಹೌದು. ಈ ಕಾರಣದಿಂದ ಕುಂಬ್ರಿ ಮರಾಠಿಗರು ಪೆಟ್ಟಿಗೆ ದೇವರನ್ನು ಪೂಜಿಸುತ್ತಾರೆ. ಆದಿಮ ಸಮುದಾಯಗಳ ಆರಾಧನೆಗಳಲ್ಲಿ ಇದೂ ಒಂದು. ಮನುಷ್ಯನ ಮತ್ತು ಅಲೌಕಿಕ ಶಕ್ತಿಗಳ ಸಂಬಂಧವನ್ನು ಧರ್ಮವು ಪ್ರತಿನಿಧಿಸುತ್ತದೆ. ಮನುಷ್ಯನ ಪುರಾತನ ಕರ್ತವ್ಯಗಳಲ್ಲಿ ಆಧ್ಯಾತ್ಮವೂ ಒಂದು. ಬುಡಕಟ್ಟು ಧರ್ಮವು ಬಹಳ ಪುರಾತನ ಧರ್ಮವೆಂದು ಪರಿಗಣಿಸಲಾಗಿದೆ. ಇಲ್ಲಿ ಪ್ರಾಣಿ ಪೂಜೆ, ಮರಗಳ ಪೂಜೆ, ಸೂರ್ಯ, ಚಂದ್ರ ಮತ್ತು ನದಿ ಪೂಜೆ, ದುಷ್ಟ ಶಕ್ತಿಗಳ ಪೂಜೆ ಮುಂತಾದವುಗಳನ್ನು ಕಾಣಬಹುದು. ಜೀವನದ ಎಲ್ಲಾ ಹಂತಗಳಲ್ಲೂ ಬುಡಕಟ್ಟು ಧರ್ಮವು ಹಾಸುಹೊಕ್ಕಾಗಿದೆ. ಭಾರತದಲ್ಲಿ ಹಲವಾರು ಜನಸಮುದಾಯಗಳು ತಮ್ಮದೇ ಆದ ವಿಶಿಷ್ಟ ಆಧ್ಯಾತ್ಮವನ್ನು ಬೆಳೆಸಿಕೊಂಡು ಬಂದಿವೆ.

26. ಪ್ರತಿಯೊಂದು ಆದಿಮ ಸಮಾಜಗಳು ತಮ್ಮದೇ ಆದ ಪಾರಂಪರಿಕ ವೈದ್ಯ ಪದ್ಧತಿಗಳನ್ನು ರೂಢಿಸಿಕೊಂಡು ಬಂದಿರುತ್ತವೆ. ಇದನ್ನು ನಾಟಿ ಔಷಧ ಪದ್ಧತಿ ಎಂತಲೂ ಕರೆಯಲಾಗುತ್ತದೆ. ನಾಟೀ ಚಿಕಿತ್ಸೆಯನ್ನು ಮಾಡುವ ಕ್ರಮವು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತದೆ. ಆಯಾ ಸಮುದಾಯದ ನಂಬಿಕೆ, ವಿಶ್ವಾಸ, ಅನುಭವದ ಆಧಾರದ ಮೇಲೆ ನಾಟಿವೈದ್ಯವು ನಿಂತಿರುತ್ತದೆ. ಅರಣ್ಯವಾಸಿಗಳಾದ ಕುಂಬ್ರಿ ಮರಾಠಿಗರು ತಮ್ಮ ಪರಿಸರದಲ್ಲಿ ದೊರೆಯುವ ಸ್ಥಳೀಯವಾದ ಗಿಡಮೂಲಿಕೆಗಳನ್ನೇ ಔಷಧಿಯಾಗಿ ಬಳಕೆ ಮಾಡುತ್ತಾರೆ. ಇಂದಿಗೂ ಸಣ್ಣಪುಟ್ಟ ಖಾಯಿಲೆಗಳಿಗೆಲ್ಲ ಆಸ್ಪತ್ರೆಗೆ ತೆರಳದೆ ತಮ್ಮಲ್ಲಿಯೇ ದೊರೆಯುವ ಗಿಡಮೂಲಿಕೆಗಳನ್ನು ರೋಗ ಚಿಕಿತ್ಸೆಗೆ ಕುಂಬ್ರಿ ಮರಾಠಿಗರು ಬಳಸುತ್ತಾರೆ. ಈ ಔಷಧಿ ಬಲ್ಲವನು ಸಾಮಾನ್ಯವಾಗಿ ಕೊಪ್ಪದ ಹಿರಿಯನಾಗಿದ್ದು, ಆತ ಶಮನ್ ರೀತಿಯಲ್ಲಿ ಕಾಯಿಲೆಗಳಿಗೆ ತಾಂತ್ರಿಕ ವಿಧಾನ ಬಳಸಿ ಔಷಧೋಪಚಾರ ಮಾಡುತ್ತಾನೆ.

27. ಸಮುದಾಗಳು ಪರಂಪರೆಯನ್ನು ಉಸಿರಾಡುತ್ತಲೇ ವರ್ತಮಾನದಲ್ಲಿ ಬದುಕುತ್ತಿರುತ್ತವೆ. ನಿನ್ನೆಗಳ ಜೊತೆಗೇ ವರ್ತಮಾನದ ಮುಖಾಮುಖಿ ಮಾಡುವ ಪರಿಪಾಠ ನಮ್ಮ ದುಡಿವ ಸಮುದಾಯಗಳಿಗೆ ಸಿದ್ದಿಸಿಕೊಂಡು ಬಂದಿವೆ. ಎಂತದ್ದೇ ಕ್ರೂರ ಭೂತಕಾಲವು ಶೋಷಿತ

ಸಮುದಾಯಗಳ ಅಂತರಂಗವನ್ನು ಮತ್ತು ಅವುಗಳ ಸೃಜನಶೀಲ ಚಟುಚಟಿಕೆಗಳನ್ನು ನಾಶ ಮಾಡಲಾಗಿಲ್ಲ. ದುಡಿಯುತ್ತಲೇ ಬದುಕುವ, ಶ್ರಮಿಸುತ್ತಲೇ ಜಗತ್ತನ್ನು ಕಟ್ಟುವ ಶ್ರಮಿಕರ ನೆನಪುಗಳನ್ನು ಧ್ವಂಸ ಮಾಡುವುದು ಸಾಧ್ಯವಿಲ್ಲ. ಹಾಗಾಗಿ ಶೋಷತರ, ಶ್ರಮಿಕರ ಮತ್ತು ಅಧೀನ ಸಮುದಾಯಗಳ ವರ್ತಮಾನವನ್ನು ಅರ್ಥಮಾಡಿಕೊಳ್ಳದೆ ಅವರ ಸಾಮಾಜಿಕ ಸಂಕಥನ ಪೂರ್ಣವಾಗದು. ಈಗಾಗಲೇ ಹೇಳಿದಂತೆ ಕುಂಬ್ರಿ ಮರಾಠಿ ಸಮುದಾಯ ಒಂದು ಸಂಕೀರ್ಣ ಸಾಮಾಜಿಕ ಸಂರಚನೆಯನ್ನು ಹೊಂದಿದೆ. ಅಷೇ ಸಂಕೀರ್ಣವಾದ ದುಡಿಮೆಗಳನ್ನೂ ಅವಲಂಬಿಸಿಕೊಂಡು ಬಂದಿದೆ. ಶತಮಾನಗಳ ಕಾಲ ಅನೇಕ ಒಡೆಯರ ಅಧೀನದಲ್ಲಿದ್ದು ನೆಲೆಕಾಣದೆ ಒಂದೆಡೆಯಿಂದ ಇನ್ನೊಂದೆಡೆಗೆ ನಿರಂತರವಾಗಿ ಅಲೆಮಾರಿಯಾಗಿ ಬದುಕಿಬಂದಿದೆ. ಭಾಷೆ, ಗಡಿ, ಪಾರಂಪರಿಕ ಬದುಕುತಾಣಗಳಿಂದ ಕುಂಬ್ರಿ ಮರಾಠಿಗರು ಒಕ್ಕಲೆದ್ದು ಹೋಗಿದ್ದಾರೆ. ವಲಸೆ ಮತ್ತು ಅಲೆಮಾರಿತನವೇ ತನ್ನ ನೈಜ ಬದುಕು ಎಂದು ಭಾವಿಸಿ ಸ್ಥಳದಿಂದ ಸ್ಥಳಕ್ಕೆ ಕುಂಬ್ರಿ ಮರಾಠಿ ಸಮುದಾಯ ಸಂಚಾರ ಮಾಡಿಕೊಂಡು ಬಂದಿದೆ.

28. ಕುಂಬ್ರಿ ಮರಾಠಿಗರು ಮೂಲತಃ ಪಶುಪಾಲಕರು ಮತ್ತು ಕುಮ್ರಿ ಬೇಸಾಯಗಾರರು. ಅರಣ್ಯದಲ್ಲಿಯೇ ಬದುಕು ಕಟ್ಟಿಕೊಂಡು ಬಂದ ಕುಂಬ್ರಿ ಮರಾಠಿಗರು ನಿಸರ್ಗದ ಶಿಶುಗಳಾಗಿ ಬದುಕಿಬಂದವರು. ಅರಣ್ಯವನ್ನೇ ತಮ್ಮ ಸರ್ವಸ್ವ ಎಂದು ತಿಳಿದುಕೊಂಡು ಬಂದವರು. ಅರಣ್ಯ ಅವರಿಗೆ ಬದುಕೂ ಹೌದು, ಅವರ ಗಮ್ಯವೂ ಹೌದು. ಅರಣ್ಯವನ್ನೇ ನಂಬಿಕೊಂಡು ಬಂದ ಕುಂಬ್ರಿ ಮರಾಠಿಗರಿಗೆ ಅವರ ಅರಣ್ಯ ಅವರ ಕೈತಪ್ಪಿ ಹೋಗಿದೆ. ಅರಣ್ಯ ಈ ಸಮುದಾಯಗಳಿಗೆ ಕೇವಲ ಆರ್ಥಿಕ ಅವಲಂಬನೆ ಮಾತ್ರವಲ್ಲ. ಅರಣ್ಯ ಅವರ ಬದುಕೂ ಹೌದು. ಆದರೆ ಅರಣ್ಯಕ್ಕೆ ಸಂಬಂಧಿಸಿದ ಕಾನೂನುಗಳು ಅವರನ್ನು ಅರಣ್ಯದಿಂದ ದೂರ ತಂದು ನಿಲ್ಲಿಸಿವೆ.

29. ಕುಂಬ್ರಿ ಮರಾಠಿ ಸಮುದಾಯದ ಜನ ಕಾಡುತ್ಪನ್ನಗಳ ಮೇಲೆ ಪಾರಂಪರಿಕವಾಗಿ ಅವಲಂಬಿತರಾದವರು ಶೇ 99.34% ಜನ, ಬಿದಿರಿನ ಕೆಲಸದಲ್ಲಿ ತೊಡಗಿಕೊಂಡವರು ಶೇ0.374%. ಸರಕಾರಿ ನೌಕರಿಯಲ್ಲಿರುವವರು ಶೇ 0.096% ಜನ ಮಾತ್ರ. ಈ ಸಮೀಕ್ಷೆಯ ಕುಂಬ್ರಿ ಮರಾಠಿಗರಿಗೆ ಅರಣ್ಯದ ಉಪಉತ್ಪನ್ನಗಳ ಮೇಲೆ ಅವಲಂಬಿತರಾಗಿದ್ದಾರೆ.

30. ಕುಂಬ್ರಿ ಮರಾಠಿಗರು ಇಂದಿನ ವ್ಯವಸ್ಥೆಯಲ್ಲಿ ಅಲೆಮಾರಿಗಳಾಗಿ ಉಳಿದಿಲ್ಲ. ಕಾಡಿನ ಕಾಯ್ದೆಗಳು ರೂಪಿತಗೊಂಡ ಮೇಲೆ ಸ್ಥಳಾಂತರ ಕೃಷಿ ಸಾಧ್ಯವಿಲ್ಲದ ಕಾರಣ ಅವರ

ಅಲೆಮಾರಿತನವೂ ನಿಂತು ಹೋಗಿದೆ. ಏಕೆಂದರೆ ಇವರು ಇತರೆ ಅಲೆಮಾರಿಗಳಂತೆ ತಮ್ಮ ವೃತ್ತಿಗಳನ್ನು ಬದಲಾಯಿಸುವವರೂ ಅಲ್ಲ. ಕೃಷಿ ಮತ್ತು ಆಹಾರ ಸಂಗ್ರಹಣೆಗೆ ಹಾಗೂ ಕರಕುಶಲತೆ ಬಿಟ್ಟು ಬೇರಾವ ವೃತ್ತಿಗಳು ಗೊತ್ತಿರುವವರೂ ಅಲ್ಲ. ಆದ್ದರಿಂದ ಭೂಮಿ ಎಂಬುದು ಇವರಿಗೆ ಅತ್ಯಾವಶ್ಯಕ. ಆದರೆ ಸ್ವಚ್ಛಂದವಾಗಿ ಓಡಾಡಿಕೊಂಡು ಇದ್ದ ಇವರ ಬದುಕು ಅಸ್ಥಿರತೆಗೆ ಬರಲು ಕೆಲವು ಕಾರಣಗಳಿವೆ. ಈಗಾಗಲೇ ಹೇಳಿದಂತೆ ಬುಡಕಟ್ಟುಗಳಿಗೆ ಸ್ವಂತ ಆಸ್ತಿಯ ಕಲ್ಪನೆ ಇರಲಿಲ್ಲ. ತೀರಾ ಮೊದಲಿಗೆ ಆಹಾರ ಸಂಗ್ರಹಣೆ ಮತ್ತು ಬೇಟೆಯಿಂದ ಹೊಟ್ಟೆ ಹೊರೆದುಕೊಳ್ಳುತ್ತಿದ್ದ ಇವರು ಕೃಷಿಯ ಅನ್ವೇಷಣೆಯ ನಂತರ ಕೂಡಾ ಒಂದೆಡೆ ನಿಂತು ಒಂದೇ ಭೂಮಿಯನ್ನು ನಂಬಿ ಬದುಕಿದವರಲ್ಲ. ಇವರ 'ಕುಮ್ರಿ ಬೇಸಾಯ' ಮಾಡುತ್ತಾ ಜಾಗದಿಂದ ಜಾಗಕ್ಕೆ ಸ್ಥಳಾಂತರವಾಗುತ್ತಿದ್ದರು ಅಂದರೆ ಕಾಡೊಳಗಿನ ಒಂದೆರಡು ಎಕರೆಯಷ್ಟು ಭೂಮಿಯನ್ನು ಹಸನು ಮಾಡಿ ಬಿತ್ತನೆ ಮಾಡುವ ಪದ್ಧತಿ. ಈ ಕುಮ್ರಿ ಬೇಸಾಯದ ಎರಡು ಮುಖ್ಯ ಲಕ್ಷಣಗಳೆಂದರೆ ನೇಗಿಲನ್ನು ಬಳಸದೆ ಯಾವುದೇ ತರಹದ ನೇಗಿಲಿನಂತಹ ಸಲಕರಣೆಯನ್ನು ಭೂಮಿಯ ಎದೆಗೆ ಚುಚ್ಚದೆ ಗುದ್ದಲಿಯಿಂದ ಮಾತ್ರ ಅಗೆದು ಮಾಡುವುದು ಹಾಗೂ ನಿರ್ದಿಷ್ಟ ಪ್ರದೇಶದಲ್ಲಿದ್ದ ಮೂರು ಸಲಕ್ಕಿಂತ ಹೆಚ್ಚಿನ ಬಾರಿಗೆ ಬೆಳೆ ತಗೆಯದೆ ಮುಂದಿನ ಪ್ರದೇಶಕ್ಕೆ ಹೋಗುತ್ತಿದ್ದರು. ನೇಗಿಲಿನ ಉಪಯೋಗ ಇರಲಿಲ್ಲ ಎಂದರೆ ಕೃಷಿ ಭೂಮಿಯ ವಿಸ್ತರಣೆ ಕೂಡ ಇರಲಿಲ್ಲ ಎಂದೇ ಅರ್ಥ. ಬ್ರಿಟಿಷರ ಆಗಮನದ ನಂತರ ಬಂದ ಕಬ್ಬಿಣದ ನೇಗಿಲ ಎಷ್ಟರಮಟ್ಟಿಗೆ ಕೃಷಿ ಭೂಮಿಯ ವಿಸ್ತರಣೆ ಮಾಡಿತು ಎಂಬುದು ನಮಗೆಲ್ಲಾ ಗೊತ್ತೇ ಇದೆ. ಯಾವುದೇ ಕಾಡು ಭೂಮಿಯಲ್ಲಿ ಕಾಡು ಕಡಿದರೂ ಅನಂತರ ಅದರ ಪಾಡಿಗೆ ಅದನ್ನು ಏಳು ವರ್ಷ ಬಿಟ್ಟರೆ ಮತ್ತದೇ ಕಾಡು ಆವರಿಸಿಕೊಳ್ಳುತ್ತದೆ, ಇದನ್ನು ತಿಳಿದಿದ್ದ ಈ ಜನರು ಖಾಯಂ ಕೃಷಿ ಭೂಮಿಯ ಬದಲಾಗಿ ಕುಮ್ರಿ ಕೃಷಿಯನ್ನು ಅವಲಂಬಿಸಿ ಆ ಮೂಲಕ ಕಾಡಿಗೆ ಯಾವುದೇ ಅಪಾಯವನ್ನು ಬರದಂತೆ ಸಮತೋಲನವನ್ನು ಕಾಪಾಡಿಕೊಂಡು ಬರುತ್ತಿದ್ದರು. ಹೀಗೆ ಇಡೀ ಕಾಡು ತಮ್ಮದು ಎಂಬ ಮನೋವೈಶಾಲ್ಯದಿಂದ ಬಾಳುವ ಮೂಲಕ ಅದರ ಅಸ್ತಿತ್ವಕ್ಕೆ ಧಕ್ಕೆ ಬಾರದಂತೆ ಬದುಕಿದ ಇವರನ್ನು ಅತಿಕ್ರಮಿಸಿ ಕಾಡು ಮತ್ತು ಭೂಮಿ 'ನನ್ನದು' ಎಂಬ ಅಹಂಕಾರದಿಂದ ಗುತ್ತಿಗೆ ಹಿಡಿದ ನಾಗರಿಕ ಮನುಷ್ಯನಿಂದಾಗಿ ಅವರು ಅತಂತ್ರದ ಸ್ಥಿತಿ ತಲುಪಿದ್ದಾರೆ. ಜೊತೆಗೆ ಅರಣ್ಯದ ಉತ್ಪನ್ನಗಳ ಮೇಲೂ ಇವರಿಗೆ ಯಾವ ಹಕ್ಕುಗಳೂ ಇಲ್ಲದಂತಾಗಿದೆ. ಇದಕ್ಕೆ ಕಾರಣ ರಾಷ್ಟ್ರೀಯ ಉದ್ಯಾನ ಕಾಯ್ದೆ ಮತ್ತು ರಾಷ್ಟ್ರೀಯ ಉದ್ಯಾನಗಳು.

31. ಕುಂಬ್ರಿ ಮರಾಠಿ ಸಮುದಾಯದ ಜನ ಕಾಡುತ್ಪನ್ನಗಳ ಮೇಲೆ ತಮ್ಮ ಹಕ್ಕುಗಳನ್ನು ಕಳೆದಕೊಂಡ ನಂತರ ಶೇ 82.65% ಜನ ಕೃಷಿಕೂಲಿಗಳಾಗಿಯೂ, ಶೇ 11.4% ಜನ ದಿನಗೂಲಿಗಳಾಗಿಯೂ ಕೆಲಸ ಮಾಡುತ್ತಿದ್ದಾರೆ. ಅಂದರೆ 83.69% ಜನ ಇಂದು ಆರ್ಥಿಕವಾಗಿ ಅತಂತ್ರ ಸ್ಥಿತಿಯನ್ನು ತಲುಪಿದ್ದಾರೆ. ಜೊತೆಗೆ ಉದ್ಯೋಗದ ಯಾವ ಖಾತ್ರಿ ಇಲ್ಲದ ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಈ ಕಾರಣಕ್ಕಾಗಿ ಕುಂಬ್ರಿ ಮರಾಠಿಗರಿಗೆ ಅರಣ್ಯದ ಉಪಉತ್ಪನ್ನಗಳ ಮೇಲಿನ ಹಕ್ಕುಗಳು ಸಿಗುವಂತಾಗಬೇಕು. 2006ರ ಆದಿವಾಸಿ ಮತ್ತು ಪಾರಂಪರಿಕ ಅರಣ್ಯವಾಸಿ ಕಾಯ್ದೆಯ ಪ್ರಕಾರ ಅವರ ಹಕ್ಕುಗಳು ಲಭ್ಯವಾಗಬೇಕು.

32. ಕುಂಬ್ರಿ ಮರಾಠಿಗರ ಬಹುತೇಕ ಮನೆಗಳು ಗುಡಿಸಲು ಇಲ್ಲವೆ ಮಣ್ಣಿನ ಮಾದರಿಯವು. ಹೀಗೆ ಕಟ್ಟಿಕೊಂಡ ಮನೆಗಳೆಲ್ಲವೂ ಅರಣ್ಯದೊಳಗೇ ಇರುವುದರಿಂದ ಈವರೆಗೂ ಸುಮಾರು ಶೇಕಡಾ 90 ರಷ್ಟು ಮನೆಗಳಿಗೆ, ಇವರ ಜಮೀನುಗಳಿಗೆ ಹಕ್ಕು ಪತ್ರಗಳಿಲ್ಲ. ಇಂದಿಗೂ ಹಕ್ಕು ಪತ್ರಕ್ಕಾಗಿ ಹೋರಾಟಗಳು, ವ್ಯಾಜ್ಯ ವ್ಯವಹಾರಗಳು ನಡೆಯುತ್ತಲೆ ಇವೆ.

33. ಕುಂಬ್ರಿ ಮರಾಠಿ ಸಮುದಾಯವು ಅರಣ್ಯ ಪ್ರದೇಶದಲ್ಲಿ ವಾಸಿಸುವುದರಿಂದ ಹಾಗೂ ಮಳೆ ಪ್ರಮಾಣವು ಹೆಚ್ಚಿರುವುದರಿಂದ ಪ್ರತಿಶತ 84% ರಷ್ಟು ಕುಟುಂಬಗಳು ಹಂಚಿನ ಮನೆಗಳನ್ನು ಹೊಂದಿರುತ್ತವೆ. ಅವುಗಳಲ್ಲಿ ಸ್ಥಳೀಯ ಕರಿಹೆಂಚಿನ ಮನೆಗಳು ಹೆಚ್ಚು. ಹುಲ್ಲು ಗುಡಿಸಲು ಹೊಂದಿರುವ ಕುಟುಂಬಗಳು ಪ್ರತಿಶತ 8% ಇದ್ದು, ಈ ಸಮುದಾಯ ಆರ್ಥಿಕವಾಗಿ ದುಸ್ಥಿತಿಯಲ್ಲಿರುವುದರಿಂದ ಅವರು ವಾಸಿಸುವ ಮನೆಗಳೂ ಉತ್ತಮ ಸ್ಥಿತಿಯಲ್ಲಿಲ್ಲ. ಸರಕಾರಿ ಮಹತ್ತರ ವಸತಿ ಯೋಜನೆಗಳಾದ ಇಂದಿರಾ ಆವಾಸ, ಅಂಬೇಸ್ಕರ ವಸತಿ ಯೋಜನೆ ಮತ್ತು ಜನರ ವಸತಿ ಯೋಜನೆಗಳು ಇವರಿಗೆ ತಲುಪಿಲ್ಲ. ಈಗ ವಿದ್ಯುತ್ ಸಂಪರ್ಕದ ಭಾಗ್ಯಜ್ಯೋತಿ ಯೋಜನೆಯಡಿಯಲ್ಲಿ ವಿದ್ಯುಚ್ಛಕ್ತಿ ಸಂಪರ್ಕ ಹೊಂದಿರುವರು ಅತ್ಯಂತ ಕಡಿಮೆ. ಅತಿ ಕಡುಬಡವರಾದ ಬಹುಸಂಖ್ಯಾತರು ಇನ್ನೂ ವಿದ್ಯುತ್ ಸಂಪರ್ಕವನ್ನೇ ಪಡೆದಿಲ್ಲ. ಇನ್ನೂ ಕೆಲವೆಡೆಗೆ ವಿದ್ಯುತ್ ಸೌಲಭ್ಯವು ದೊರಕಿಲ್ಲ. ಇನ್ನೊಂದು ದುರದೃಷ್ಟಕರ ವಿಷಯವೆಂದರೆ ಹುಲ್ಲು ಹೊದಿಕೆಯ ಮನೆಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿಲ್ಲ.

34. ಸಮೀಕ್ಷೆಗೊಳಪಟ್ಟ ಕುಂಬ್ರಿ ಮರಾಠಿ 3387 ಕುಟುಂಬಗಳಲ್ಲಿ ಭೂರಹಿತ ಕುಟುಂಬಗಳು 2641. ಅದರಲ್ಲೂ ಮಹಿಳೆಯರು ಹೆಚ್ಚು ನಿರುದ್ಯೋಗಿಗಳು. ಬಹಳಷ್ಟು ಕುಂಬ್ರಿ ಮರಾಠಿ ಮಹಿಳೆಯರಿಗೆ ಉತ್ಪಾದನಾ ಮಾರ್ಗವಾಗಿ ಕುಟುಂಬದ ನಿರ್ವಹಣೆಗೆ ಕಂಡುಕೊಂಡ ಪರ್ಯಾಯ ಮಾರ್ಗಗಳಲ್ಲಿ ಕೃಷಿ ಕೂಲಿ ಮುಖ್ಯವಾಗಿದೆ. ಕೂಲಿಯನ್ನು ಬೆಳಿಗ್ಗೆಯಿಂದ ಸಂಜೆಯವರೆಗೆ ನಿಗದಿಪಡಿಸಲಾಗಿದ್ದರು, ದಿನದ ಕೂಲಿ ಮಾಡುವವರಿಗೆ ಸಾಮಾನ್ಯವಾಗಿ ದಿನವಿಡೀ ದುಡಿದರು 50–60 ರೂಪಾಯಿ ಕೂಲಿ ಹಣ ಅಥವಾ ನಾಲ್ಕು ಕೊಳಗ ಭತ್ತ

ನೀಡಲಾಗುತ್ತದೆ. ಯಲ್ಲಾಪುರ, ಕ್ಷೇತ್ರಕಾರ್ಯ ಮಾಡುವ ಸಮಯದಲ್ಲಿ ನೀವು ಯಾಕೆ ಇಷ್ಟು ಕಡಿಮೆ ಕೂಲಿ ಹಣ ಪಡೆಯುತ್ತೀರಿ? ಹೆಚ್ಚಿಗೆ ಹಣ ಕೇಳುವುದಿಲ್ಲ ಏಕೆ? ಇಷ್ಟೇ ಭತ್ತ ಹೇಗೆ ತಾನೇ ಸಾಕಾಗುತ್ತದೆ? ಎಂದು ಪ್ರಶ್ನೆಯನ್ನು ಕೇಳಿದರೆ, ನಾವೇನಾದರೂ ಹೆಚ್ಚಿಗೆ ಕೂಲಿ ಹಣ, ಒಳ್ಳೆಯ ಅಕ್ಕಿ, ಹೆಚ್ಚಿಗೆ ಭತ್ತ ಕೊಡಿ ಎಂಬುದಾಗಿ ಕೇಳಿದರೆ ನಾಳೆಯಿಂದ ಕೆಲಸಕ್ಕೆ ಬರಬೇಡಿ ಅಂತ ಕೆಲಸದಿಂದ ತೆಗೆಯುತ್ತಾರೆ. ಈ ಕೂಲಿ ಕೆಲಸ ಮಾಡಿದರೆ ನಮಗೆ ಸಂಜೆ ಊಟ ಸಿಗುವುದು, ಕಾರಣ ಕೊಟ್ಟಷ್ಟನ್ನು ಪಡೆದು ಎದುರು ಮಾತನಾಡದೆ ದುಡಿಯುತ್ತೇವೆ ಎಂದುತ್ತರಿಸಿದರು. ಕುಂಬ್ರಿ ಮರಾಠಿ ಸಮುದಾಯದವರು ಹವ್ಯಕ ಬ್ರಾಹ್ಮಣ, ಕೊಂಕಣಿ, ನಾಡವ, ಶೆಟ್ಟಿ, ಜಾತಿಯ ಗದ್ದೆ, ತೋಟಗಳಲ್ಲಿ ಕೂಲಿ ಮಾಡಲು ಹೋಗುತ್ತಾರೆ. ಸರಕಾರದ ಉದ್ಯೋಗ ಖಾತ್ರಿ ಯೋಚನೆಯ ಮಾಹಿತಿ ಇವರಿಗಿಲ್ಲ. ಜೊತೆಗೆ ಕುಂಬ್ರಿ ಮರಾಠಿಗರಿಗೆ ತುರ್ತಾಗಿ ಕೃಷಿ ಭೂಮಿಯನ್ನು ನೀಡುವ ಅಗತ್ಯವಿದೆ.

35. ಕರ್ನಾಟಕ ಸರಕಾರ 50 ಸಮುದಾಯವನ್ನು ಬುಡಕಟ್ಟುಗಳನ್ನು ಆದಿವಾಸಿಗಳೆಂದು ಪರಿಗಣಿಸಿ ಅವರಿಗೆ ಸರಕಾರದ ಸೌಲಭ್ಯಗಳು ದೊರೆಯುವಂತೆ ಮಾಡುತ್ತಿದೆ. ಆದರೆ ಕರ್ನಾಟಕದಲ್ಲಿ ಇನ್ನೂ ಸಾಕಷ್ಟು ಸಮುದಾಯಗಳು ಶತಮಾನಗಳಿಂದ ಇಂದಿನವರೆಗೂ ತಮ್ಮ ಚಹರೆಯನ್ನು, ಕುಲಕಸಬನ್ನು, ಆಚಾರ ವಿಚಾರ, ಭಾಷೆ, ರೂಢಿ ಸಂಪ್ರದಾಯವನ್ನು, ಪ್ರತ್ಯೇಕತೆಯನ್ನು ಉಳಿಸಿಕೊಂಡು ಆದಿವಾಸಿಗಳ ಎಲ್ಲಾ ಲಕ್ಷಣಗಳನ್ನು ಹೊಂದಿದ್ದರು. ಸರಕಾರ ಇವರನ್ನು ಇಂದಿನವರೆಗೂ ಪರಿಶಿಷ್ಟ ಪಂಗಡಕ್ಕೆ ಸೇರಿಸದೆ ಪ್ರವರ್ಗ 1ಕ್ಕೆ ಸೇರಿಸಿದೆ. ಆದರೆ ಆದಿವಾಸಿಗಳ ಎಲ್ಲಾ ಲಕ್ಷಣವನ್ನು ಹೊಂದಿ ಇಂದಿಗೂ ಕಾಡಿನಲ್ಲಿ ನಾಗರಿಕ ಸಮಾಜದಿಂದ ಪ್ರತ್ಯೇಕ ವಾಸಸ್ಥಾನದೊಂದಿಗೆ ಈ ಸಮುದಾಯ ಬಾಳುತ್ತಿದೆ. ಸರಕಾರದ ಯಾವುದೇ ಸೌಲಭ್ಯಗಳು ದೊರೆಯದೆ ಅತಂತ್ರ ಸ್ಥಿತಿಯಲ್ಲಿದೆ. ಅಂತಹ ಆದಿವಾಸಿಗಳಲ್ಲಿ ಕುಂಬ್ರಿ ಮರಾಠಿ ಬುಡಕಟ್ಟು ಪಟ್ಟಿಗೆ ಸೇರದ ಸಮುದಾಯವಾಗಿದೆ. ಇಲ್ಲಿ ಇವರ ಕುರಿತು ಕೆಲವೊಂದು ಅಂಶಗಳನ್ನು ಇವರ ನೆಲೆ, ವೃತ್ತಿಯನ್ನು ಪರಿಚಯಿಸಲು ಪ್ರಯತ್ನಿಸಲಾಗಿದೆ. ಇವರು ಬೇರೆ ರಾಜ್ಯಗಳಿಂದ ವಲಸೆ ಬಂದಿದ್ದರು ಕಾಡಿನಲ್ಲಿ ಹಲವು ವರ್ಷಗಳಿಂದ ವಾಸಿಸುತ್ತಿದೆ. ಇವರ ಜನಸಂಖ್ಯೆ ಕೂಡ ಹೆಚ್ಚಾಗಿದೆ. ಆದ್ದರಿಂದ ಈ ಆದಿವಾಸಿಗಳಾಗದ ಆದಿವಾಸಿ ಕುಂಬ್ರಿ ಮರಾಠಿ ಸಮುದಾಯವನ್ನು ಪರಿಶಿಷ್ಟ ಪಂಗಡಗ ಪಟ್ಟಿಗೆ ಸೇರಿಸಿಬೇಕಿದೆ.

# ಪರಾಮರ್ಶನ ಗ್ರಂಥಗಳು


1. ಅಂಬೇಡ್ಕರ್, ಬಿ ಆರ್, ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂ.1, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, 1990.
2. ಕಾಳೆಗೌಡ ನಾಗವಾರ, ಎನ್. ಹುಚ್ಚಪ್ಪ ಮಾಸ್ತರ, ಗಿರಿಜನ ಸಂಸ್ಕೃತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, 2003.
3. ಕೋಸಾಂಬಿ, ಡಿ ಡಿ ಅನು ಎಚ್ ಎಸ್ ಶ್ರೀಮತಿ, ಪ್ರಾಚೀನ ಭಾರತದ ಚರಿತ್ರೆ, ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್, 1998.
4. ಕೊಸಾಂಬಿ ಡಿ.ಡಿ. (ಅನು), ಟಿ.ಎಸ್. ವೇಣುಗೋಪಾಲ್ ಶೈಲಜಾ, ಪುರಾಣ ಮತ್ತು ವಾಸ್ತವ, ಚಿಂತನ ಪ್ರಕಾಶನ, ಉತ್ತರ ಕನ್ನಡ, 2003.
5. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000.
6. ಗೋಪಾಲಕೃಷ್ಣ ಪಿ. ನಾಯಕ್., ಉತ್ತರ ಕನ್ನಡ ದರ್ಶನ, ವಿಜಯಭಾರತಿ ಪ್ರಕಾಶನ, ಗೋಕರ್ಣ, ಉತ್ತರಕನ್ನಡ, 1997.
7. ಚನ್ನಬಸಪ್ಪ ಗೊ.ರು., ಕರ್ನಾಟಕ ಜನಪದ ಕಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1977.
8. ಚಂದ್ರಶೇಖರ ಟಿ.ಆರ್., ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, 2003.
9. ಚಂದ್ರಶೇಖರ ಟಿ.ಆರ್., ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000.

10. ಪ್ರಭಾಕರ ಎ.ಎಸ್. ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2004.

11. ಪ್ರಭಾಕರ ಎ.ಎಸ್. ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು; ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, 2002.

12. ಪ್ರಭಾಕರ ಎ.ಎಸ್., ಆದಿವಾಸಿ ಆಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, 2006.

13. ಪಾರ್ವತಮ್ಮ ಸಿ., ಆದಿವಾಸಿ ಬದುಕು ಬವಣೆ ಗ್ರಾಮೀಣ ಮತ್ತು ಆದಿವಾಸಿ ಅಭಿವೃದ್ಧಿ ಸಂಶೋದನಾ ಕೇಂದ್ರ ಮೈಸೂರು, 2007.

14. ಪಾರ್ವತಮ್ಮ ಸಿ. ಆದಿವಾಸಿ ಸಮುದಾಯಗಳ ಅಭಿವೃದ್ಧಿ, ನಿರ್ದೇಶಕರು ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು, 2007.

15. ಪ್ರೇಮಾಲತ, ಬಸವರಾಜ, ಹಿರೇಮಠ. ಉತ್ತರ ಕನ್ನಡ ಜಿಲ್ಲೆ ಗೌಳಿ ಸಮುದಾಯ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ಪರಿವರ್ತನೆ. ಪ್ರತಿಭಾ ಪ್ರಕಾಶನ ಗದಗ. 2014.

16. ಭಗವತ್ ಶರಣ ಉಪಾಧ್ಯಾಯ, ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ನವಕರ್ನಾಟಕ ಪಬ್ಲಿಕೇಷೇನ್ಸ್, 1950.

17. ಭಟ್ ಎಲ್.ಜಿ., ಹಾಲಕ್ಕಿ ಪಾಯಸ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, 1974.

18. ಭಟ್ ಎಲ್.ಜಿ., ಹಾಲಕ್ಕಿ ಸುಗ್ಗಿ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, 1984.

19. ಭಟ್ ಎಲ್.ಜಿ., ಹಾಲಕ್ಕಿ ಒಕ್ಕಲಿಗರು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, 1988.

20. ಬೋರಲಿಂಗಯ್ಯ ಹಿ ಚಿ, ಕುಣಬಿಯರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2004

21. ಬೋರಲಿಂಗಯ್ಯ ಹಿ.ಚಿ., ಬುಡಕಟ್ಟು ದೈವಾರಾಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2000.

22. ಬೋರಲಿಂಗಯ್ಯ ಹಿ.ಚಿ., ಹಾಲಕ್ಕಿ ಒಕ್ಕಲಿಗರ ಜ್ಞಾನ ಪರಂಪರೆ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, 2002.

23. ಬೋರಲಿಂಗಯ್ಯ ಹಿ.ಚಿ., ವಿಸ್ಮೃತಿ ಮತ್ತು ಸಂಸ್ಕೃತಿ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, 2001.

24. ಬೋರಲಿಂಗಯ್ಯ ಹಿ.ಚಿ., ಗಿರಿಜನ ನಾಡಿಗೆ ಪಯಣ, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, 1991.

25. ಬೋರಲಿಂಗಯ್ಯ ಹಿ ಚಿ, ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2016.

26. ಬೋರಲಿಂಗಯ್ಯ ಹಿ ಚಿ, ಪ್ರಭಾಕರ ಎ ಎಸ್, ಬುಡಕಟ್ಟು ಸಚಿತ್ರಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2015.

27. ಮಹಮೂದ್ ಟಿ.ಕೆ.(ಸಂ), ಉತ್ತರ ಕನ್ನಡ ದರ್ಶನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1986.

28. ಮೊಗಳ್ಳಿ ಗಣೇಶ್., ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1999.

29. ಮೋಹನ ಚಂದ್ರಗುತ್ತಿ, ಮುಕ್ರಿಯರು, ಡಾ, ಅಂಬೇಡ್ಕರ್ ಸಂಶೋಧನಾ ಕೇಂದ್ರ, ಬೆಂಗಳೂರು, 2016.

30. ಮೋಹನ್, ಎಸ್. ಮರಾಟಿ ನಾಯ್ಕರು, ಅಂಶು ಪ್ರಕಾಶನ, ಹೊಸಪೇಟೆ, 2008.

31. ಮೊಹನ್‌ಕೃಷ್ಣ ರೈ, ಕೆನರಾದ ವಿಭಜನೆ, ಹತ್ತಿ ರಾಜಕೀಯದ ವಿಶ್ಲೇಷಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2010.

32. ಮೈತ್ರಿ ಎಂ. ಕೆ. ಬುಡಕಟ್ಟು ಕುಲ ಕಸುಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2002.

33. ನಾವಡ ಎ.ವಿ., ಒಂದು ಸೊಲ್ಲು ನೂರು ಸ್ವರ, ಕರ್ನಾಟಕ ಸಂಘ ಪುತ್ತೂರು, 1999.

34. ನಾವಡ ಎ,ವಿ, ಕರಾವಳಿ ಜಾನಪದ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಂಗಳೂರು 2007.

35. ನಾಯಕ್ ಎನ್.ಆರ್., ಹಳ್ಳೇರ ಜಾನಪದ ಸಾಹಿತ್ಯ. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, 2000.

36. ನಾಯಕ್ ಎನ್.ಆರ್., ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ನೃಪತುಂಗ ರಸ್ತೆ, ಬೆಂಗಳೂರು, 1993.

37. ನಾಯಕ್ ಎನ್.ಆರ್., ಹಾಲಕ್ಕಿ ಒಕ್ಕಲಿಗರ ಜಾನಪದ ಗೀತಗಳು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1982.

38. ನಾಯಕ್ ಎನ್.ಆರ್. (ಸಂ), ಸುಗ್ಗಿಯ ಪದಗಳು, ಜಾನಪದ ಪ್ರಕಾಶನ, ಹೊನ್ನಾವರ, ಉತ್ತರ ಕನ್ನಡ, 1986.

39. ನಾಯಕ್ ಎನ್.ಆರ್., ಹೇಳ್ತೇವೋ ಗುಮ್ಟೆ ಪದನಾಮ, ಜಾನಪದ ಪ್ರಕಾಶನ, ಹೊನ್ನಾವರ, ಉತ್ತರ ಕನ್ನಡ, 1983.

40. ನಾಯಕ್ ಎನ್.ಆರ್., ತಿಮ್ಮಕ್ಕನ ಪದಗಳು, ಜಾನಪದ ಪ್ರಕಾಶನ, ಉತ್ತರ ಕನ್ನಡ, 1983.

41. ನಾಯಕ್ ಎನ್.ಆರ್., ಜಾನಪದ ಕವಳ ಪೇಳಿ, ಜಾನಪದ ಪ್ರಕಾಶನ, ಹೊನ್ನಾವರ, ಉತ್ತರ ಕನ್ನಡ, 1997,

42. ನಾಯಕ್ ಎನ್.ಆರ್., ಬಂದಾನೆ ಬಲಿಯಂದ್ರರಾಯ, ಜಾನಪದ ಪ್ರಕಾಶನ, ಹೊನ್ನಾವರ, ಉತ್ತರ ಕನ್ನಡ, 1989.

43. ನಾಯಕ್ ಎನ್ ಆರ್, ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

44. ರಾಮಯ್ಯ ಕೋಟಗಾನಹಳ್ಳಿ, ಸಿಂದ್‌ಮಾದಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು, 1993.

45. ರಂಗನಾಥ ದಿವಾಕರ, ಕರನಿರಾಕರಣೆಯ ವೀರಕಥೆ, ಲೋಕಶಿಕ್ಷಣ ಟ್ರಸ್ಟ್ ಗ್ರಂಥಾಮಾಲೆ, ಬೆಂಗಳೂರು, 2001.

46. ರಾಮಕೃಷ್ಣ ಆರ್, ಕರ್ನಾಟಕದ ಬುಡಕಟ್ಟುಗಳು–ಪ್ರಸಾರಾಂಗ, ಮೈಸೂರು, ವಿಶ್ವವಿದ್ಯಾಲಯ, 2007.

47. ಲಕ್ಕಪ್ಪಗೌಡ ಎಚ್.ಜೆ., (ಸಂ), ಕರ್ನಾಟಕ ಬುಡುಕಟ್ಟು ಸಂಪುಟ 1, 2, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, 1993.

48. ವಿಠಲ್ ಭಂಡಾರಿ, ಯಮುನಾ ಗಾಂವ್ಕರ್, ಜೋಯ್ಡಾ ಕಾಡೊಳಗಿನ ಒಡಲು, ಬಂಡಾಯ ಪ್ರಕಾಶನ, ಹೊನ್ನಾವರ, 2017.

49. ವಿಠಲರಾವ್ ಟಿ. ಗಾಯಕವಾಡ ಸಂ: ಕನ್ನಡ ಮರಾಠಿ ಸಾಂಸ್ಕೃತಿಕ ಬಾಂಧವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2012.

50. ಹರೀಶ್. ಪಿ.ಎನ್. ಎರವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

51. ವಿಷ್ಣುನಾಯಕ್., ಅರೆ ಖಾಸಗಿ, ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲಾ, ಉತ್ತರ ಕನ್ನಡ ಜಿಲ್ಲೆ, 2005.

52. ವಿಷ್ಣುನಾಯಕ್., ಹದ್ದು ಪಾರಿನ ಹಿಂದೆ ಮುಂದೆ, ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲಾ, ಉತ್ತರ ಕನ್ನಡ ಜಿಲ್ಲೆ, 1982.

53. ವಿಷ್ಣುನಾಯಕ್., ದುಡಿಯುವ ಕೈಗಳ ಹೋರಾಟದ ಕತೆ, ದಿನಕರ ದೇಸಾಯಿ ಸ್ಮಾರಕ ಪ್ರತಿಷಾವಿನ, ಅಂಕೋಲಾ, ಉತ್ತರ ಕನ್ನಡ, 2004.

54. ವೆಂಕಟರಂಗೋ ಕಟ್ಟಿ., ಗ್ಯಾಝೆಟೀಯರ್ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ಏಶಿಯನ್ ಎಜುಕೇಶನಲ್ ಸರ್ವೀಸಸ್, ಹೊಸದೇಹಲಿ, 1984.

55. ಶ್ರೀಪಾದ ಶೆಟ್ಟಿ., ದಿನಕರ ದೇಸಾಯಿ ಬದುಕು ಬರಹ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1995.

56. ಸ್ವರ್ಣದರ್ಪಣ, ಪ್ರಕಾಶಕರು ಸ್ವಾತಂತ್ರ್ಯ ಸುವರ್ಣ ಮಹೋತ್ಸವ ಸಮಿತಿ ಹಾಗೂ ಜಿಲ್ಲಾಡಳಿತ, ಉತ್ತರ ಕನ್ನಡ ಜಿಲ್ಲೆ, 1998.

57 ಹಿರಿಯಣ್ಣ ಅಂಬಳಿಕೆ, ಕಚ್ಚೆಗೌಳಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, 1993.

58. ಹೆಗಡೆ ಎಲ್.ಆರ್., ಹಾಲಕ್ಕಿ ಒಕ್ಕಲಿಗರ ಮದುವೆಯ ಹಾಡುಗಳು, ಕದಂಬ ಸಾಂಸ್ಕೃತಿ ಅಧ್ಯಯನ ಸಂಸ್ಥೆ, ಶಿರಸಿ, 1988.

59. ಹೆಗಡೆ ಎಲ್.ಆರ್., ಹಾಲಿನ ತೆನೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1977.

60. ಹೆಗಡೆ ಎಲ್.ಆರ್., ಹಾಲಕ್ಕಿ ಹೆಂಗಸರ ಮದುವೆಯ ಹಾಡುಗಳು, ಕದಂಬ ಸಾಂಸ್ಕೃತಿ ಅಧ್ಯಯನ ಸಂಸ್ಥೆ ರಿ., ಶಿರಸಿ, 1988.

**ಅಂಕಿ-ಅಂಶಗಳು**

61. ಉತ್ತರ ಕನ್ನಡ ಜಿಲ್ಲೆ ಅಂಕಿಅಂಶಗಳ ನೋಟ, 2009-10, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಉತ್ತರ ಕನ್ನಡ, ಕಾರವಾರ.

62. ಕರ್ನಾಟಕ ಅಂಕಿಅಂಶಗಳ ನೋಟ, 2009-10, ಅಂಖಿಕ ಮತ್ತು ಸಾಂಖಿಕ ನಿರ್ದೇಶನಾಲಯ, ಬೆಂಗಳೂರು.

**ಗ್ಯಾಜೆಟೀಯರ್‌ಗಳು**

63. ವರದರಾಜ ಹುಯಿಲಗೋಳ, (ಅನು) 'ಭಾರತದ ದೇಶ-ಕೋಶ', ಸಂಖ್ಯೆ-3, ಭಾಗ-2, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರಕಾರ, ಬೆಂಗಳೂರು, 1987.

64. ವೆಂಕಟರಂಗೋ ಕಟ್ಟೀ, 'ಗ್ಯಾಜೆಟೀಯರ್ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು ಅಥವಾ ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳು ಸಹಿತ (ಧಾರವಾಡ, ಬೆಳಗಾವಿ, ವಿಜಾಪುರ, ಕಾನಡಾ, ನಾಲ್ಕು ಜಿಲ್ಲೆಗಳದ್ದು)', ಏಶಿಯನ್ ಎಜ್ಯುಕೇಶನ್ ಸರ್ವಿಸಸ್, ಹೊಸ್ ದೆಹಲಿ, 1984.

65. ಸೂರ್ಯನಾಥ ಯು. ಕಾಮತ್, (ಸಂ.), 'ಕರ್ನಾಟಕ ರಾಜ್ಯ ಗ್ಯಾಜೆಟೀಯರ್', ಭಾಗ-1, ಕರ್ನಾಟಕ ರಾಜ್ಯ ಸರಕಾರ, ಬೆಂಗಳೂರು, 1984.

**ಪಿಎಚ್.ಡಿ.ಮಹಾಪ್ರಬಂಧಗಳು**

66. ಅರವಿಂದ್ ಎಸ್. ನಾಯಕ್ ಆಗೇರ-ಮುಕ್ತಿ-ಹಳ್ಳೇರ ಜನಾಂಗಗಳ ಸಾಂಸ್ಕೃತಿಕ ಅಧ್ಯಯನ. ಕರ್ನಾಟಕ ವಿಶ್ವವಿದ್ಯಾನಿಲ. ಧಾರವಾಡಕ್ಕೆ ಸಲ್ಲಿಸಿದ ಮಹಾಪ್ರಬಂಧ (ಅಪ್ರಕಟಿತ)

67. ಮಲ್ಲಿಕಾರ್ಜುನ ಪ. ಸೊಬರದ, ಕುಣಬಿ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನ, (ಅಪ್ರಕಟಿತ ಸಂಶೋಧನಾ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, 2010

68. ವಿಜಯಲಕ್ಷ್ಮಿ ಆರ್, ಹಾಲಕ್ಕಿ ಒಕ್ಕಲಿಗರ ಮಹಿಳೆ, ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನ, (ಅಪ್ರಕಟಿತ ಸಂಶೋಧನಾ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, 2007

## English Books

69. Abbe J.A. Dubois 2002, Hindu manners, Customs and Ceremoies, Rupa. Co.7/16, Ansari Road, Daryaganj, NewDelhi

70. Enthoven R.E., The Tribes and Caste & of Bombay, Vol. I-II, Cosmo Publications, New Delhi,

71. Ghurye, G S, Scheduled Tribes of India, South Asia Books, 1980

72. Hugh E Seebohm, On the Structure of Greek Tribal Society, Macmilan and Co, and New York, 1895

73. Iyar L.K, The Mysore Tribes and Castes, Vol-1,2,3,4. Mittal Publication, Delhi, 1998

74. Karve Irawati, Anthropometric Measurement in Karnataka and Orissa and a Comparison of these two Regions with Maharashtra. Journal of the Anthropological Society of Bombay, 8: 45-76. 1954.

75. Kincaid C A, Rao Bahadue D B Parasnis, The History of Maratha People, Vol 1, Humpherey Milford, Oxford University Press, London, 1918

76. Luiz A.A.D Tribes of Mysore, S.Viswa & co, Bangalore.1963

77. Mascarenhas Antonia, 'The Kudubies', Goa from Pre-historic Times, Post Box No. 7, Vasco, 1987.

78. Normal Kumar Bose, Tribal Life in india, Natational book trust, New delhi, 1971

79. Prabhu S.S., 'The Konkani People', Amche Daaiz (our Heritage), Mangalore, 1965.

80. Pratapsinh Velip Kankar, 'The Kurmis-Kunbies of India', Pritam Prakashan, Paji Fard, Margao, Goa, 2006.

81. Roy Willis, Ed: Signifying Animals, Human meaning in the natural world, Rutledge London and New York, 2005

82. Russell, R. V, Rai Bahadur Hira Lal, The Tribes And Castes Of The Central Provinces Of India, Vol. Ill, Macmillan And Co, Limited, St. Martin's Street, London, 1916

83. Ravindranath Rao Y., 'Tribal Tradition and Change – A Study of Kudubis of South India', Managlore Publication, Managlore 2003.

84. Romila Thapar, Ancient Indian Social History: Some interpretations, Orient Blackswan, 1978

85. Singh K.S. & others, People of India – Karnataka, (3-Volums) Vol-XXVIII, G Anthrpological Survey of India - N. Delhi 2002.

86. Singh K S, Peopleof Maharashtra, (3 Volume) Antropological Survey Of India, 1992

87. Singh K.S., 'Indian's Communities', National Series, Vol. V, p. 1887, Oxford University Press, Delhi, 1998.

88. Singh K.S., 'Economics of the Tribes and their Transformation', Vol. XIX, New Delhi, 1982.

89. Shyam Bhat N., 'South Kanara', Mittal Publications, New Delhi, 1995.

90. Sheering Rev M.A, Hindu Tribes and Castes, Trubner & Co London, 1872

91. Stephen Fuchs, At the Bottom of Indian Society, Munshiram Manoharlal publishers pvt Ltd, 1981

92. Suryanath U. Kamath., Gazetter of India, Karnataka State Gazeeteer Uttara Kannada Dist., V.B. Subbaiah and son's, O.T.C. Road, Bangalore, 1985

93. Thurston and Rangachar.K (Ed), Caste and Tribes of Southern India (Seven volume) Asian Education Services, New Delhi, 1909

94. Verrior Elvin, Preface: Jawaharlal Nehru The Philosophy of NEFA, Shillong, (Seceond Revised Edition) 1959

95. Vidyarthi, Anthropological Research In India, Vol 1 and Vol 2, Concept Publishing Company, New Delhi, 1978

96. Vijay M.Gawas, Mahesh Velip, TRIBES OF GOA: THEIR INSTITUTION AND MOVEMENT, Scholarly Research journal for Interdisciplinary Studies, Centre for the Study of Social Exclusion and Inclusive Policy,Goa University. 2014

97. William Wilson Hunter, The Imperial Gazetteer of India the Indian Empire, vol. I, Descriptive, Published Under the Authority of his Majesty's, Secretary of State for India in council, Oxford, at the Clarendon Press, 1909

98. William Wilson Hunter, The Imperial Gazetteer of India the Indian Empire, vol. VII, Trubner & co., London, 1886.

**Reports**

99. Chinnappa Reddy, Report of the Karnataka Third Backward Classes Commission, Vol. I, Publication Government of Karnataka, 1990.

100. Government of India, Report of Scheduled Area and Scheduled Tribes Commission in 1960-61, Mange Publication, Government of India.

101. Havanur. L G, Karnataka Backward Classes Commission (Constituted under the Commissions of Inquiry Act, 1952) (Central Act 60 of 1952) Report, (In Four Volumes) Volume I, Part I, Main Report, Government. Of Karnataka, 1975

102. Gazetteer of the Bombay Presidency, 1991. Kanara District. Sagardeep Publications, Karwar, 15(1) : 14-220.

103. Havanur L.G. (Chairman), Karnatak Backward Classes Commission Report (5 Vols.), Vol. II, Publication Government of Karnataka, 1975.

104. Government of Goa : Notified as Scheduled Tribes for the State of Goa, Directorate of Social Welfare, 22nd April, 2003. No. 13/14/90-SWD (Vol. 2).

107. Census of India-2001, District Population Booklet, Uttara Kannada, Directorate of Census Operations, Karnataka.

**Unpublished Ph,d Thesises**

108. Shambhu Shrikant Ghadi, 'Historical and Comparative Study of Kunbis of Coastal Karnataka and Aborigine Tribes of Goa', Ph.D. Thesis, Kannada University, Hampi, 2008.

109. Pavate, P. P. 1985. Morpho-genetic study of the Siddhis of Karnataka, Ph.D. Thesis submitted to the Karnatak University, Dharwad. (Unpublished)

# 1. ತಿಳುವಳಿಕೆದಾರರ ವಿವರಗಳು

| ಕ್ರ ಸಂ | ಮಾಹಿತಿದಾರರ ಹೆಸರು | ವಯಸ್ಸು | ವಿಳಾಸ |
|---|---|---|---|
| 1 | ಶೇಖರ ವಿಘ್ನೇಶ್ವರ ಮರಾಠಿ | 35 | ಬ್ರಹ್ಮೂರು, ತಾ: ಅಂಕೋಲ ಜಿ: ಉತ್ತರ ಕನ್ನಡ |
| 2 | ಬಾಬು ರಾಮಾ ಮರಾಠಿ | 37 | ಬ್ರಹ್ಮೂರು, ತಾ: ಅಂಕೋಲ ಜಿ: ಉತ್ತರ ಕನ್ನಡ |
| 3 | ಶಂಕರ ವಾಸು ಮರಾಠಿ | 45 | ಬ್ರಹ್ಮೂರು, ತಾ: ಅಂಕೋಲ ಜಿ: ಉತ್ತರ ಕನ್ನಡ |
| 4 | ಕೇಶವ್ ತಿಮ್ಮಾ ಮರಾಠಿ | 51 | ವಾಡಗಾರು, ಪೊ–ಅಂಗಡಿಬೈಲು, ತಾ: ಅಂಕೋಲ ಜಿ: ಉತ್ತರ ಕನ್ನಡ |
| 5 | ನಾರಾಯಣ ನಾರು ಮರಾಠಿ | 48 | ವಾಡಗಾರು, ಪೊ–ಅಂಗಡಿಬೈಲು, ತಾ: ಅಂಕೋಲ ಜಿ:ಉತ್ತರ ಕನ್ನಡ |
| 6 | ಮಾಬ್ಲೇಶ್ವರ ಗೋಮ ಮರಾಠಿ | 36 | ವಾಡಗಾರು, ಪೊ–ಅಂಗಡಿಬೈಲು, ತಾ: ಅಂಕೋಲ ಜಿ: ಉತ್ತರ ಕನ್ನಡ |
| 7 | ಹೇಮು ಜಾಯು ಮರಾಠಿ | 52 | ಹಿಲ್ಲೂರು, ಪೊ–ಅಂಗಡಿಬೈಲು, ತಾ: ಅಂಕೋಲ ಜಿ: ಉತ್ತರ ಕನ್ನಡ |
| 8 | ಪಾರ್ವತಿ ಭೀಮ್ಯಾ ಮರಾಠಿ | 45 | ಹಿಲ್ಲೂರು, ಪೊ–ಅಂಗಡಿಬೈಲು, ತಾ: ಅಂಕೋಲ ಜಿ:ಉತ್ತರ ಕನ್ನಡ |
| 9 | ಹುವಾ ಧಾಕಪ್ಪ ಮರಾಠಿ | 75 | ಅಚವೆ, ಪೋ: ಚನ್ನಗಾರ, ತಾ:ಅಂಕೋಲ ಜಿ:ಉತ್ತರ ಕನ್ನಡ |
| 10 | ರುಕ್ಮಾ ಶೀವು ಮರಾಠಿ | 67 | ಅಚವೆ, ಪೋ: ಚನ್ನಗಾರ, ತಾ:ಅಂಕೋಲ ಜಿ: ಉತ್ತರ ಕನ್ನಡ |

| | | | |
|---|---|---|---|
| 11 | ಇಟ್ಟು ಕೇಸು ಮರಾಠಿ | 85 | ಅಚವೆ, ಪೋ: ಚನ್ನಗಾರ, ತಾ:ಅಂಕೋಲ ಜಿ: ಉತ್ತರ ಕನ್ನಡ |
| 12 | ನಾರಾಯಣ ವಾಸು ಮರಾಠಿ | 50 | ಪೊ-ಹಿಲ್ಲೂರು, ತಾ:ಅಂಕೋಲ ಜಿ:ಉತ್ತರ ಕನ್ನಡ |
| 13 | ಚಂದ್ರಕಾಂತ ನಾಗರಾಜ ಮರಾಠಿ | 35 | ಪೊ-ಹಿಲ್ಲೂರು, ತಾ:ಅಂಕೋಲ ಜಿ:ಉತ್ತರ ಕನ್ನಡ |
| 14 | ನಾಗು ದುಗ್ಗು ಮರಾಠಿ | 56 | ಚನ್ನಗಾರ, ತಾ:ಅಂಕೋಲ ಜಿ:ಉತ್ತರ ಕನ್ನಡ |
| 15 | ಚಿದಂಬರ ಬೂದು ಮರಾಠಿ | 45 | ಚನ್ನಗಾರ, ತಾ:ಅಂಕೋಲ ಜಿ:ಉತ್ತರ ಕನ್ನಡ |
| 16 | ಆನಂದ ವೆಂಕಟಾಚಲ ಮರಾಠಿ | 39 | ಚನ್ನಗಾರ, ತಾ:ಅಂಕೋಲ ಜಿ:ಉತ್ತರ ಕನ್ನಡ |
| 17 | ವಾಮನ ಥಾಕು ಮರಾಠಿ | 35 | ಅಂಗಡಿಬೈಲ್, ತಾ:ಅಂಕೋಲ ಜಿ:ಉತ್ತರ ಕನ್ನಡ |
| 18 | ಬಲೀಂದ್ರ ಸುಬ್ಬು ಮರಾಠಿ | 70 | ಅಂಗಡಿಬೈಲ್, ತಾ:ಅಂಕೋಲ ಜಿ:ಉತ್ತರ ಕನ್ನಡ |
| 19 | ದಯಾಕ್ಷಿ ಮಂಜು ಮರಾಠಿ | 35 | ಕತ್ಗಾಲ, ತಾ: ಕುಮಟಾ, ಜಿ-ಉತ್ತರ ಕನ್ನಡ |
| 20 | ಬಾಲು ಶಿವಾನಂದ ಮರಾಠಿ | 55 | ಕತ್ಗಾಲ, ತಾ: ಕುಮಟಾ, ಜಿ-ಉತ್ತರ ಕನ್ನಡ |
| 21 | ಸೀತಾರಾಮ ವಾಮನ ಮರಾಠಿ | 45 | ಕತ್ಗಾಲ, ತಾ: ಕುಮಟಾ, ಜಿ-ಉತ್ತರ ಕನ್ನಡ |
| 22 | ಬಲೀಂದ್ರ ಕಾನು ಮರಾಠಿ | 38 | ಬಗಣೆ, ಪೊ: ಸೊಪ್ಪಿನಹೊಸಳ್ಳಿ , ಜಿ-ಉತ್ತರ ಕನ್ನಡ |
| 23 | ರಾಮ ಗೋವಿಂದ ಮರಾಠಿ | 70 | ಬಗಣೆ, ಪೊ: ಸೊಪ್ಪಿನಹೊಸಳ್ಳಿ , ಜಿ-ಉತ್ತರ ಕನ್ನಡ |
| 24 | ಮಂಜುನಾಥ ರಾಮ ಮರಾಠಿ. | 30 | ಬಗಣೆ, ಪೊ: ಸೊಪ್ಪಿನಹೊಸಳ್ಳಿ , ಜಿ-ಉತ್ತರ ಕನ್ನಡ |

| | | | |
|---|---|---|---|
| 25 | ಲತಾ ಸುಬ್ರಾಯ ಮರಾಠಿ | 32 | ಶಿರಗುಂಜಿ, ತಾಲೂಕು ಕುಮಟಾ, ಉತ್ತರ ಕನ್ನಡ ಜಿಲ್ಲೆ |
| 26 | ರಾಜೇಶ ದುಗ್ಗು ಮರಾಠಿ | 40 | ಶಿರಗುಂಜಿ, ತಾಲೂಕು ಕುಮಟಾ, ಉತ್ತರ ಕನ್ನಡ ಜಿಲ್ಲೆ |
| 27 | ವಿಠ್ಠಲ ವಾಸು ಮರಾಠಿ | 28 | ಕವಲೋಡಿ, ತಾಲೂಕು ಕುಮಟಾ, ಉತ್ತರ ಕನ್ನಡ ಜಿಲ್ಲೆ |
| 28 | ನಾರಾಯಣ ಲುಮ್ಮಾ ಮರಾಠಿ | 50 | ಕವಲೋಡಿ, ತಾಲೂಕು ಕುಮಟಾ, ಉತ್ತರ ಕನ್ನಡ ಜಿಲ್ಲೆ |
| 29 | ನಂದಾ ಸದಾಶಿವ ಮರಾಠಿ | 41 | ಯಾಣ, ಪೋ: ಕೊಡಂಬಳ್ಳಿ, ತಾಲೂಕು ಕುಮಟಾ, ಉತ್ತರ ಕನ್ನಡ ಜಿಲ್ಲೆ |
| 30 | ರಾಮಾ ಯಂಕು ಮರಾಠಿ | 45 | ಯಾಣ, ಪೋ: ಕೊಡಂಬಳ್ಳಿ, ತಾಲೂಕು ಕುಮಟಾ, ಉತ್ತರ ಕನ್ನಡ ಜಿಲ್ಲೆ |
| 31 | ಭೀಮಾ ಬೆಳ್ಳಿ ಮರಾಠಿ | 70 | ಕಲವೆ, ಪೊ: ಸಂತೆಗುಳಿ , ಜಿ–ಉತ್ತರ ಕನ್ನಡ |
| 32 | ಯಂಕಾ ದುಗ್ಗು ಮರಾಠಿ | 45 | ಕಲವೆ, ಪೊ: ಸಂತೆಗುಳಿ , ಜಿ–ಉತ್ತರ ಕನ್ನಡ |
| 33 | ರೋಹಿಣಿ ಗಣೇಶ ಮರಾಠಿ | 42 | ಮೊರ್ಸೆ, ಪೊ: ಸೊಪ್ಪಿನಹೊಸಳ್ಳಿ , ಜಿ–ಉತ್ತರ ಕನ್ನಡ |
| 34 | ಕೇಸು ಫೋಗೊ ಮರಾಠಿ | 35 | ಮೊರ್ಸೆ, ಪೊ: ಸೊಪ್ಪಿನಹೊಸಳ್ಳಿ , ಜಿ–ಉತ್ತರ ಕನ್ನಡ |
| 35 | ವಿಷ್ಣು ಗಿಡ್ಡು ಮರಾಠಿ | 32 | ಕಬಗಾಲ, ಪೋ: ಬ್ರಹ್ಮೂರು, ತಾಲೂಕು ಕುಮಟಾ, ಉತ್ತರ ಕನ್ನಡ ಜಿಲ್ಲೆ. |
| 36 | ಗೋಮ ಜಾಯು ಮರಾಠಿ | 75 | ಕಬಗಾಲ, ಪೋ: ಬ್ರಹ್ಮೂರು, ತಾಲೂಕು ಕುಮಟಾ, ಉತ್ತರ ಕನ್ನಡ ಜಿಲ್ಲೆ. |

| | | | |
|---|---|---|---|
| 37 | ದಿವಾಕರ ದಾನು ಮರಾಠಿ | 45 | ಕಬಗಾಲ, ಪೋ: ಬ್ರಹ್ಮೂರು, ತಾಲೂಕು ಕುಮಟಾ, ಉತ್ತರ ಕನ್ನಡ ಜಿಲ್ಲೆ. |
| 38 | ಮಾಬ್ಲೇಶ್ವರ ಗೋಮು ಮರಾಠಿ | 38 | ಬ್ರಹ್ಮೂರು, ತಾಲೂಕು ಕುಮಟಾ, ಉತ್ತರ ಕನ್ನಡ ಜಿಲ್ಲೆ. |
| 39 | ರಾಮಾ ಚಂದು ಮರಾಠಿ | 50 | ಬ್ರಹ್ಮೂರು, ತಾಲೂಕು ಕುಮಟಾ, ಉತ್ತರ ಕನ್ನಡ ಜಿಲ್ಲೆ. |
| 40 | ನಾರಾಯಣ ಧಾನು ಮರಾಠಿ | 45 | ಮೇಲುಕೊಪ್ಪಲು, ಪೋ: ಮಂಜಗುಣಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 41 | ಜಾಯು ಚೇನು ಮರಾಠಿ | 51 | ಮೇಲುಕೊಪ್ಪಲು, ಪೋ: ಮಂಜಗುಣಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 42 | ಸುರೇಶ್ ರಾಮಚಂದ್ರ ಮರಾಠಿ | 38 | ಬರಸಗುಣಿ, ಪೋ: ಮಂಜಗುಣಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 43 | ನಾರಾಯಣ ಧಾಕು ಮರಾಠಿ | 52 | ಬರಸಗುಣಿ, ಪೋ: ಮಂಜಗುಣಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 44 | ಕಿಕ್ರು ಜಾಯು ಮರಾಠಿ | 38 | ಕಳುಗಾರು, ಪೋ: ಮಂಜಗುಣಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 45 | ಗಣಪತಿ ಈಸ್ರು ಮರಾಠಿ | 42 | ಕಳುಗಾರು, ಪೋ: ಮಂಜಗುಣಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 46 | ದೇವರಾಜ ಡಿ ಮರಾಠಿ | 45 | ಬಂಡಲ ಪೋ: ಬಂಡಲ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |

| | | | |
|---|---|---|---|
| 47 | ಬಾಬು ಪಾಯು ಮರಾಠಿ | 48 | ಬಂಡಲ ಪೋ: ಬಂಡಲ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 48 | ರಾಮಾ ಶಿವು ಮರಾಠಿ | 34 | ಎಟಿಗಾರ, ಪೋ: ರಾಗಿಹೋಸಳ್ಳಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 49 | ವಾಸು ಪುಟ್ಟು ಮರಾಠಿ | 43 | ಎಟಿಗಾರ, ಪೋ: ರಾಗಿಹೋಸಳ್ಳಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 50 | ತಿಮ್ಮಾ ಬೂದು ಮರಾಠಿ | 42 | ದೇವಿಮನೆ, ಪೋ: ದೇವಿಮನೆ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 51 | ನಾಗು ಎಸ್ ಮರಾಠಿ | 55 | ದೇವಿಮನೆ, ಪೋ: ದೇವಿಮನೆ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 52 | ಓಮು ಶಿವು ಮರಾಠಿ | 50 | ಹಳ್ಳಿಬೈಲ್, ಪೋ: ಬಂಡಲ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 53 | ಸೀತಾರಾಮ ರಾಮಚಂದ್ರ ಮರಾಠಿ | 30 | ಹಳ್ಳಿಬೈಲ್, ಪೋ: ಬಂಡಲ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 54 | ಪ್ರಶಾಂತ ಶಿವು ಮರಾಠಿ | 32 | ಸವಲೆ, ಪೋ: ದೇವನಹಳ್ಳಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 55 | ಭೈರವೇಶ್ವರ ವೆಂಕಟು ಮರಾಠಿ | 38 | ಸವಲೆ, ಪೋ: ದೇವನಹಳ್ಳಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 56 | ವೆಂಕಟಾಚಲ ಜಾಯು ಮರಾಠಿ | 29 | ಬೆಣಗಾಂ, ಪೋ: ದೇವನಹಳ್ಳಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |

| | | | |
|---|---|---|---|
| 57 | ಬೂದು ದುಗ್ಗು ಮರಾಠಿ | 54 | ಬೆಣಗಾಂ, ಪೋ: ದೇವನಹಳ್ಳಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 58 | ಶೇಖರ ಸುಬ್ಬು ಮರಾಠಿ | 43 | ಮತ್ತಿಘಟ್ಟಾ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 59 | ಬಾಬು ಮರಾಠಿ | 39 | ಮತ್ತಿಘಟ್ಟಾ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 60 | ನಾರಾಯಣ ನಾಗೇಶ ಮರಾಠಿ | 55 | ದೇವನಹಳ್ಳಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 61 | ರಮೇಶ ಗೋವಿಂದ ಮರಾಠಿ | 28 | ದೇವನಹಳ್ಳಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 62 | ದೇವರು ಶಿವು ಮರಾಠಿ | 45 | ಹೊಸ್ಕೆರೆ, ಪೋ: ಬಂಡಲ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 63 | ನರಸಿಂಹ ಗಿಡ್ಡು ಮರಾಠಿ | 40 | ಹೊಸ್ಕೆರೆ, ಪೋ: ಬಂಡಲ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 64 | ರಾಮೂ ಕೆರಿಯ ಮರಾಠಿ | 38 | ಹಕ್ಕಿಗದ್ದೆ, ಪೋ: ಹೆಗಡೆಕಟ್ಟಾ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 65 | ಚಂದು ರಾಮಾ ಮರಾಠಿ | 51 | ಹಕ್ಕಿಗದ್ದೆ, ಪೋ: ಹೆಗಡೆಕಟ್ಟಾ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 66 | ಮಾದೇವಿ ಕೆರಿಯಾ ಮರಾಠಿ | 50 | ಬಿಲ್ಲುಗದ್ದೆ, ಪೋ: ವಾನಳ್ಳಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |
| 67 | ಉಮೇಶ ರಾಮಾ ಮರಾಠಿ | 48 | ಬಿಲ್ಲುಗದ್ದೆ, ಪೋ: ವಾನಳ್ಳಿ, ತಾಲೂಕು ಶಿರಸಿ, ಉತ್ತರ ಕನ್ನಡ ಜಿಲ್ಲೆ |

| | | | |
|---|---|---|---|
| 68 | ಮಹೇಶ ಪುಟ್ಟು ಮರಾಠಿ | 45 | ಕವಂಚೂರ್, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 69 | ವಾಸು ಗಿಡ್ಡು ಮರಾಠಿ | 35 | ಕವಂಚೂರ್, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 70 | ಹರೀಶ ಕೆರಿಯಾ ಮರಾಠಿ | 29 | ಬಿರಲಮಕ್ಕಿ, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 71 | ಸತೀಶ ಶೇಶಾ ಮರಾಠಿ | 35 | ಬಿರಲಮಕ್ಕಿ, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 72 | ವೆಂಕಟಾಚಲ ಗಿಡ್ಡು ಮರಾಠಿ | 32 | ಸೂರಗಾಲ, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 73 | ಧಾಕು ತುಕ್ಕು ಮರಾಠಿ | 52 | ಸೂರಗಾಲ, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 74 | ಲಕ್ಷ್ಮಣ ಕೆರಿಯಾ ಮರಾಠಿ | 36 | ಕೋಡಿಗದ್ದೆ, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 75 | ರಾಮಾ ಕೆರಿಯಾ ಮರಾಠಿ | 42 | ಕೋಡಿಗದ್ದೆ, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 76 | ಮಾದೇವ ವಿಠ್ಠಲ ಮರಾಠಿ | 39 | ದೊಡ್ಮನೆ, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 77 | ಶಿವು ಧರ್ಮ ಮರಾಠಿ | 42 | ದೊಡ್ಮನೆ, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 78 | ಗೋವವಿಂದ ಲುಮ್ಮಾ ಮರಾಠಿ | 42 | ದೊಡ್ಮನೆ, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 79 | ಗೌರಿ ರಮೇಶ ಮರಾಠಿ | 28 | ಗವಿನಗುಡ್ಡ, ಪೋ ಕಾನಸೂರು, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 80 | ವಿಮಲಾ ಗಣೇಶ ಮರಾಠಿ | 32 | ಗವಿನಗುಡ್ಡ, ಪೋ ಕಾನಸೂರು, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |

| | | | |
|---|---|---|---|
| 81 | ಕವಿತಾ ರಾಮು ಮರಾಠಿ | 29 | ಗವಿನಗುಡ್ಡ, ಪೋ ಕಾನಸೂರು, ಸಿದ್ದಾಪುರ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 82 | ಅಶೋಕ ಸುಬ್ರಾಯ ಮರಾಠಿ | 28 | ತೋಳಗೋಡು, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 83 | ಮಹೇಶ ಪುಟ್ಟು ಮರಾಠಿ | 36 | ತೋಳಗೋಡು, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 84 | ವಾಸು ಗಿಡ್ಡು ಮರಾಠಿ | 52 | ತೋಳಗೋಡು, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 85 | ಉಮೇಶ ರಾಮಚಂದ್ರ ಮರಾಠಿ | 42 | ಕೆಳಾಸೆ, ತಾ: ಯಲ್ಲಾಪುರ, ಜಿ: ಉತ್ತರ ಕನ್ನಡ |
| 86 | ನಾರಾಯಣ ಜನಾರ್ಧನ ಮರಾಠಿ | 35 | ಕೆಳಾಸೆ, ತಾ: ಯಲ್ಲಾಪುರ, ಜಿ: ಉತ್ತರ ಕನ್ನಡ |
| 87 | ಹರೀಶ ಕೆರಿಯಾ ಮರಾಠಿ | 25 | ಹೆಮ್ಮಾಡಿ,ತಾ: ಯಲ್ಲಾಪುರ, ಜಿ: ಉತ್ತರ ಕನ್ನಡ |
| 88 | ಸತೀಶ ಶೇಶಾ ಮರಾಠಿ | 28 | ಹೆಮ್ಮಾಡಿ,ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 89 | ವೆಂಕಟಾಚಲ ಗಿಡ್ಡು ಮರಾಠಿ | 56 | ಹೆಮ್ಮಾಡಿ,ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 90 | ಧಾಕು ತುಕ್ಕು ಮರಾಠಿ | 62 | ಇಳೆಹಳ್ಳ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 91 | ಲಕ್ಷ್ಮಣ ಕೆರಿಯಾ ಮರಾಠಿ | 38 | ಇಳೆಹಳ್ಳ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 92 | ರಾಮಾ ಕೆರಿಯಾ ಮರಾಠಿ | 35 | ಕರಿಯವ್ವನಗುಡಿ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 93 | ಮಾದೇವ ವಿಠ್ಠಲ ಮರಾಠಿ | 36 | ಕರಿಯವ್ವನಗುಡಿ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |

| | | | |
|---|---|---|---|
| 94 | ಶಿವು ಧರ್ಮ ಮರಾಠಿ | 42 | ಕೊಡಸೆ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 95 | ಗೋವವಿಂದ ಲುಮ್ಮಾ ಮರಾಠಿ | 35 | ಕೊಡಸೆ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 96 | ಗೌರಿ ರಮೇಶ ಮರಾಠಿ | 34 | ಕೊಡಸೆ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 97 | ವಿಮಲಾ ಗಣೇಶ ಮರಾಠಿ | 33 | ತೆಂಗಿನಗೇರಿ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 98 | ಭಾಸ್ಕರ ಗಜಾನನ ಮರಾಠಿ | 30 | ತೆಂಗಿನಗೇರಿ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 99 | ವೆಂಕಟೇಶ ತಿಮ್ಮ ಮರಾಠಿ | 53 | ಒಡೆಹುಕ್ಕಳಿ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 100 | ಶಿವು ದುಗ್ಗು ಮರಾಠಿ | 52 | ಒಡೆಹುಕ್ಕಳಿ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 101 | ಯಂಕು ವಿಠ್ಠು ಮರಾಠಿ | 63 | ಒಡೆಹುಕ್ಕಳಿ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 102 | ದೇವು ಇಟ್ಟು ಮರಾಠಿ | 35 | ತಡಗುಣಿ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 103 | ರಾಜೇಶ ಓಮು ಮರಾಠಿ | 30 | ತಡಗುಣಿ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 104 | ಮಹೇಶ ಕೇಮು ಮರಾಠಿ | 56 | ತಡಗುಣಿ, ತಾ:ಯಲ್ಲಾಪುರ, ಜಿ:ಉತ್ತರ ಕನ್ನಡ |
| 105 | ನಾಗರಾಜ ಮಾಯು ಮರಾಠಿ | 25 | ಉತ್ತರಕೊಪ್ಪ, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 106 | ಲಾವಣ್ಯ ಲುಮ್ಮಾ ಮರಾಠಿ | 31 | ಉತ್ತರಕೊಪ್ಪ, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 107 | ಲತಾ ವಾಮಣ್ಣ ಮರಾಠಿ | 30 | ಶ್ಯಾನವಳ್ಳಿ, ತಾ:ಭಟ್ಕಳ, ಜಿ:ಉತ್ತರ ಕನ್ನಡ |

| | | | |
|---|---|---|---|
| 108 | ದಿವಾಕರ ಧಾನು ಮರಾಠಿ | 28 | ಶ್ಯಾನವಳ್ಳಿ, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 109 | ಭೈರಾ ಓಮು ಮರಾಠಿ | 54 | ಮುಗಳಿ, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 110 | ಸುಧೀರ ಕೃಷ್ಣಾ ಮರಾಠಿ | 53 | ಮುಗಳಿ, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 111 | ಸುರೇಂದ್ರ ರಾಮು ಮರಾಠಿ | 42 | ಕಕ್ಕೆ, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 112 | ಗಜು ರಮೇಶ ಮರಾಠಿ | 48 | ಕಕ್ಕೆ, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 113 | ರಾರಾಕ್ಷೀ ಜಯರಾಮ ಮರಾಠಿ | 42 | ಕೆಕ್ಕೋಡ ,ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 114 | ಸಂದೀಪ ಶೇಖರ ಮರಾಠಿ | 28 | ಕೆಕ್ಕೋಡ ,ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 115 | ಸಂದೇಶ ಬಡ್ಡು ಮರಾಠಿ | 31 | ಕೆಕ್ಕೋಡ ,ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 116 | ಮಹೇಶ ರುಕ್ಮಾ ಮರಾಠಿ | 30 | ಹೊಸೂರು, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 117 | ಪಲ್ಲವಿ ಗೋಪಾಲ ಮರಾಠಿ | 28 | ಹೊಸೂರು, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 118 | ಜಾನು ಈರಪ್ಪ ಮರಾಠಿ | 32 | ಹೇರಬುಡಕಿ, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 119 | ರಾಮಾ ರಾಘು ಮರಾಠಿ | 27 | ಹೇರಬುಡಕಿ, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 120 | ಓಮು ನಾಗು ಮರಾಠಿ | 53 | ಬೀಳೂರು, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 121 | ಶಿವರಾಮ ತುಕಾರಾಮ ಮರಾಠಿ | 35 | ಬೀಳೂರು, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 122 | ಗಿರಿಜಾ ದೇವು ಮರಾಠಿ | 25 | ಶಿರಾಣಿ, ತಾ:ಭಟ್ಕಳ, ಜಿ:ಉತ್ತರ ಕನ್ನಡ |

| | | | |
|---|---|---|---|
| 123 | ಶಿವಾನಂದ ಅನಂತ ಮರಾಠಿ | 28 | ಶಿರಾಣಿ, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 124 | ದೀಪಾ ನಾರಾಯಣ ಮರಾಠಿ | 31 | ಗುಜಮಾಂವ, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 125 | ಕೇಶವ ರಾಮಚಂದ್ರ ಮರಾಠಿ | 35 | ಗುಜಮಾಂವ, ತಾ:ಭಟ್ಕಳ, ಜಿ:ಉತ್ತರ ಕನ್ನಡ |
| 126 | ದೇವಿ ಕೃಷ್ಣ ಮರಾಠಿ | 42 | ತಲಗೋಡು, ತಾ :ಹೊನ್ನಾವರ, ಜಿ:ಉತ್ತರ ಕನ್ನಡ |
| 127 | ಗುಂಡು ರವೀಂದ್ರ ಮರಾಠಿ | 42 | ತಲಗೋಡು, ತಾ :ಹೊನ್ನಾವರ, ಜಿ:ಉತ್ತರ ಕನ್ನಡ |
| 128 | ಧರ್ಮು ನಾಗು ಮರಾಠಿ | 37 | ತಲಗೋಡು, ತಾ :ಹೊನ್ನಾವರ, ಜಿ:ಉತ್ತರ ಕನ್ನಡ |
| 129 | ನಾಗರತ್ನ ಮಹಾಭಲೇಶ್ವರ ಮರಾಠಿ | 35 | ಬಳಕೂರು, ತಾ :ಹೊನ್ನಾವರ, ಜಿ:ಉತ್ತರ ಕನ್ನಡ |
| 130 | ಭಾಗೀರಥಿ ಪಾಂಡು ಮರಾಠಿ | 32 | ಬಳಕೂರು, ತಾ :ಹೊನ್ನಾವರ, ಜಿ:ಉತ್ತರ ಕನ್ನಡ |
| 131 | ಈಶ್ವರ ಗೋಪಾಲ ಮರಾಠಿ | 30 | ಕಾಸಗೇರಿ, ತಾ :ಹೊನ್ನಾವರ, ಜಿ:ಉತ್ತರ ಕನ್ನಡ |
| 132 | ರಾಘವೇಂದ್ರ ಪುಟ್ಟ ಮರಾಠಿ | 45 | ಕಾಸಗೇರಿ, ತಾ :ಹೊನ್ನಾವರ, ಜಿ:ಉತ್ತರ ಕನ್ನಡ |
| 133 | ರವಿ ಸುಬ್ರಾಯ ಮರಾಠಿ | 43 | ಅಡ್ಡಕೊಳಿ, ತಾ :ಹೊನ್ನಾವರ, ಜಿ:ಉತ್ತರ ಕನ್ನಡ |
| 134 | ಸುಬ್ರಾಯ ಗೋಪಾಲ ಮರಾಠಿ | 48 | ಅಡ್ಡಕೊಳಿ, ತಾ :ಹೊನ್ನಾವರ, ಜಿ:ಉತ್ತರ ಕನ್ನಡ |
| 135 | ಹನುಮಂತ ಕೇಶವ ಮರಾಠಿ | 58 | ಸಂಪೊಳ್ಳಿ,ತಾ :ಹೊನ್ನಾವರ, ಜಿ:ಉತ್ತರ ಕನ್ನಡ |
| 136 | ಕವಿತಾ ಸೀತಾರಾಮ ಮರಾಠಿ | 35 | ಸಂಪೊಳ್ಳಿ,ತಾ :ಹೊನ್ನಾವರ, ಜಿ:ಉತ್ತರ ಕನ್ನಡ |

| | | | |
|---|---|---|---|
| 137 | ಸುಬ್ರಾಯ ಗಜಾನನ ಮರಾಠಿ | 42 | ಹೊಸ್ತೋಟ, ಬಿಸ್ಲಕೊಪ್ಪ ಪೋ, ಮುಂಡಗೋಡ ತಾಲೂಕು, ಉತ್ತರ |
| 138 | ಪರಮೇಶ್ವರ ಯಂಕು ಮರಾಠಿ | 41 | ಕನ್ನಡ ಜಿಲ್ಲೆ. ಹೊಸ್ತೋಟ, ಬಿಸ್ಲಕೊಪ್ಪ ಪೋ, |
| | | | ಮುಂಡಗೋಡ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 139 | ಹೇಮಾವತಿ ದೇವರು ಮರಾಠಿ | 40 | ಹೊಸ್ತೋಟ, ಬಿಸ್ಲಕೊಪ್ಪ ಪೋ, ಮುಂಡಗೋಡ ತಾಲೂಕು, ಉತ್ತರ |
| 140 | ತಿರುಮಲ ಸುಬ್ರಹ್ಮಣ್ಯ ಮರಾಠಿ | 35 | ಕನ್ನಡ ಜಿಲ್ಲೆ. ಹೊಸ್ತೋಟ, ಬಿಸ್ಲಕೊಪ್ಪ ಪೋ, |
| | | | ಮುಂಡಗೋಡ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 141 | ಮೂರ್ತಿ ಸುರೇಶ ಮರಾಠಿ | 42 | ಹೊಸ್ತೋಟ, ಬಿಸ್ಲಕೊಪ್ಪ ಪೋ, ಮುಂಡಗೋಡ ತಾಲೂಕು, ಉತ್ತರ |
| 142 | ರವಿ ಶ್ರೀಪಾದ ಮರಾಠಿ | 47 | ಕನ್ನಡ ಜಿಲ್ಲೆ. ಟೆಂಕಾಲ್, ಬಿಸ್ಲಕೊಪ್ಪ ಪೋ, |
| | | | ಮುಂಡಗೋಡ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 143 | ಶ್ರೀಧರ ಶಂಕರ ಮರಾಠಿ | 35 | ಟೆಂಕಾಲ್, ಬಿಸ್ಲಕೊಪ್ಪ ಪೋ, ಮುಂಡಗೋಡ ತಾಲೂಕು, ಉತ್ತರ |
| 144 | ವಾಸುದೇವ ಗೋಪಾಲ ಮರಾಠಿ | 29 | ಕನ್ನಡ ಜಿಲ್ಲೆ. ಟೆಂಕಾಲ್, ಬಿಸ್ಲಕೊಪ್ಪ ಪೋ, |
| | | | ಮುಂಡಗೋಡ ತಾಲೂಕು, ಉತ್ತರ ಕನ್ನಡ ಜಿಲ್ಲೆ. |
| 145 | ಮಾಬ್ಲಾ ಮಂಜುನಾಥ ಮರಾಠಿ | 35 | ಟೆಂಕಾಲ್, ಬಿಸ್ಲಕೊಪ್ಪ ಪೋ, ಮುಂಡಗೋಡ ತಾಲೂಕು, ಉತ್ತರ ಕನ್ನಡ ಜಿಲ್ಲೆ. |

# 2. ಛಾಯಾಚಿತ್ರಗಳು

## ಕುಂಬ್ರಿ ಮರಾಠಿ ಸಮುದಾಯ



ಕುಂಬ್ರಿ ಮರಾಠಿ ಸಮುದಾಯದ ದಂಪತಿ ಉತ್ತರ ಕನ್ನಡ ಜಿಲ್ಲೆ



ಕುಂಬ್ರಿ ಮರಾಠಿ ಸಮುದಾಯದ ಮಹಿಳೆ



ಕುಂಬ್ರಿ ಮರಾಠಿ
ಸಮುದಾಯದ ಮಹಿಳೆ



ಕುಂಬ್ರಿ ಮರಾಠಿಗರ
ಕೊಪ್ಪ



ಕುಂಬ್ರಿ ಮರಾಠಿಗರ
ಬಿದಿರು ಗಣೆ ವಾದ್ಯ

ಕುಂಬ್ರಿ ಮರಾಠಿ
ಸಮುದಾಯದ
ಪಾರಂಪರಿಕ ವೈದ್ಯ
(ಶಮನ್)





ಕಾಡುತ್ಪನ್ನ ಸಂಗ್ರಹಣೆ

ಕುಂಬ್ರಿ ಮರಾಠಿಗರ
ಕೃಷಿ ಭೂಮಿ




ಕುಂಬ್ರಿ ಮರಾಠಿಗರ ದೈವ


ಕುಂಬ್ರಿ ಮರಾಠಿಗರ ಪೆಟ್ಟಿಗೆ ದೇವರು


ಮಂಜುಗುಣಿ ದೇವಾಲಯ



ಕುಂಬ್ರಿ ಮರಾಠಿಗರ
ದೇವಳ



ಕುಂಬ್ರಿ ಮರಾಠಿಗರ
ದೈವ ಸೋಮೇಶ್ವರ



ಪಶುಪಾಲಕ
ಕುಂಬ್ರಿ
ಮರಾಠಿಗರು

ಕುಂಬ್ರಿ ಮರಾಠಿಗರ
ಕಣಿವೆ ಕೃಷಿ





ಕಾಡುತ್ಪನ್ನ ಸಂಗ್ರಹಣೆ
ಮತ್ತು ಸಂಸ್ಕರಣೆ

ಕುಂಬ್ರಿ ಮರಾಠಿಗರ
ಪಾರಂಪರಿಕ ಕೃಷಿ





ಕುಂಬ್ರಿ ಮರಾಠಿಗರ ಗುಮ್ಮೆ ಪಾಂಗ್ ವಾದ್ಯ



ಕುಂಬ್ರಿ ಮರಾಠಿಗರ ಗುಮ್ಮೆ ಪಾಂಗ್ ನೃತ್ಯ

# ಕುಣಬಿ ಸಮುದಾಯ



ಕುಣಬಿ
ಸಮುದಾಯದ ಕೃಷಿಕ



ಕುಣಬಿಯರ ಮನೆ
ಉತ್ತರ ಕನ್ನಡ ಜಿಲ್ಲೆ



ಕುಣಬಿಯರ
ಗುಮ್ಟೆಪಾಂಗ್
ನೃತ್ಯ



ಕುಣಬಿ ಸಮುದಾಯದ ಮಹಿಳೆ



ಕುಣಬಿ ಸಮುದಾಯದ ದೇವಳ



ಕುಣಬಿ ಸಮುದಾಯದ ಕೃಷಿ ಭೂಮಿ

# ಕುಡುಬಿ ಸಮುದಾಯ



ಕುಡುಬಿಯರ ಕೊಪ್ಪ, ಉಡುಪಿ ಜಿಲ್ಲೆ



ಕುಡುಬಿಯರ ಕೃಷಿ ಭೂಮಿ



ಕುಡುಬಿ ಸಮುದಾಯದ ಕೃಷಿಕ

ಕುಡುಬಿ
ಸಮುದಾಯದ
ಮಹಿಳೆ





ಗುಮುಟೆ ಪಾಂಗ್ ವಾದ್ಯ

ಕುಡುಬಿಯರ
ಪಾರಂಪರಿಕ ಕೃಷಿ



## ಮರಾಠಿ ನಾಯ್ಕ ಸಮುದಾಯ



ಮರಾಠಿ ನಾಯ್ಕ ಸಮುದಾಯದ ಕೃಷಿಕ ದಕ್ಷಿಣ ಕನ್ನಡ ಜಿಲ್ಲೆ



ಮರಾಠಿ ನಾಯ್ಕರ ಕೊಪ್ಪ



ಮರಾಠಿ ನಾಯ್ಕ ಸಮುದಾಯದ ಮಹಿಳೆ

